# ಹೊಸ ಮೇನೇಜರು

ಕೊ. ಸು. ಸೀತಾರಾಮ್

ರಸಿಕ ರಂಜಿನಿ ಪ್ರಕಾಶನ

ಪೋಸ್ಟ್ ಬಾಕ್ಸ್ ೩೫ ಅರಸೀಕೆರೆ.

ಮೊದಲ ಮುದ್ರಣ
೨೩ ಜೂನ್, ೧೯೫೫

ಮುಖಚಿತ್ರ ಕಲಾವಿದ
ಎಂ. ಟಿ. ವಿ. ಆಚಾರ್ಯ.

ಮುಖಚಿತ್ರ ಮುದ್ರಣ
ಚಿತ್ರಾ ಪ್ರಿಂಟರಿ ಬೆಂಗಳೂರು

ಮುದ್ರಣ
ಶಾಂತಿ ಮುದ್ರಣಾಲಯ,
ಸಜ್ಜನರಾವ್ ರಸ್ತೆ, ಬೆಂಗಳೂರು-೪

ಪ್ರಕಾಶಕರು
ಎಲ್. ಶೇಷಾದ್ರಿ
ಕೆ. ಎಸ್. ಸೀತಾರಾಮ್, ಬಿ. ಎಸ್‌ಸಿ.

ಬೆಲೆ; ೧-೮-೦ ರೂಪಾಯಿ.

# ಮುನ್ನುಡಿ

ನಾಟಕ ನೋಡಲು ಜನ ನೆರೆದಿರುವಾಗ ಅಂಕದ ಪರದೆಯ ಮುಂದೆ ನಿಂತು ದೀರ್ಘ ಭಾಷಣ ಕೊಡುವುದು ಸರಿಯಲ್ಲ. ಮಾತು ಆ ನಾಟಕಕ್ಕೆ ಸಂಬಂಧಿಸಿದಂತೆ ಸಂದರ್ಭೋಚಿತ ವಾಗಿದ್ದರೆ ಸಹಿಸಿಕೊಳ್ಳಬಹುದು. ಬದಲು ಅದು ಬರಿಯ ಕೊರೆತವಾದರೆ ಪ್ರೇಕ್ಷಕರು ಸೈರಣೆ ತಪ್ಪಿ ಮುಂದಿನ ಕ್ರಮ ಕೈಗೊಳ್ಳುವುದು ಖಂಡಿತ !

ಮುನ್ನುಡಿಯ ವಿಷಯವೂ ಅಷ್ಟೆ. ಪರಿಚಯದ ಮೊದಲು ಮಾತಿನ ಮೇರೆಯನ್ನು ಅದು ಮೀರದೆ ಇದ್ದರೆ ಸಹ್ಯವೆನಿಸುತ್ತದೆ. ಉಪಯುಕ್ತವಾಗುತ್ತದೆ. ಬದಲು ಓದುಗ ಓದದೆ ಇರುವ ಕೃತಿಯ ಸವಿಸ್ತಾರ ವಿಮರ್ಶೆಯನ್ನು ಮುನ್ನುಡಿ ಮಾಡಿದರೆ ಅದರಿಂದ ರಸಾನುಭವಕ್ಕೆ ಅಡ್ಡಿಯಾಗುತ್ತದೆ. ಈ ಅಂಶವನ್ನು ಗಮನದಲ್ಲಿಟ್ಟುಕೊಂಡೇ ಈ ಸಾಲು ಗಳನ್ನು ಬರೆಯುತ್ತಿದ್ದೇನೆ. ಇಲ್ಲಿರುವುದು ಕೊ. ಸು. ಸೀತಾರಾಮ್ ಮತ್ತು ಅವರ ಕಾದಂಬರಿಯನ್ನು ಕುರಿತು ಪರಿಚಯದ ಎರಡು ಮಾತು.

ಯುವಕ ಬರೆಹಗಾರರಾದ ಸೀತಾರಾಮ್ ಕನ್ನಡ ಓದುಗರಿಗೆ ಹೊಸಬರೇನೂ ಅಲ್ಲ, ಕನ್ನಡದ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾಗಿರುವ ಮೇಲುಮಟ್ಟದ ಸಣ್ಣಕತೆಗಳ ಮೂಲಕ ಕನ್ನಡದ ಒಳ್ಳೆಯ ಸಣ್ಣ ಕತೆಗಾರರಾಗಿ ಅವರು ಪರಿಚಿತರಾಗಿದ್ದಾರೆ. ವಿಮರ್ಶೆಯ ಕ್ಷೇತ್ರ ದಲ್ಲಿ ಅವರ ಸಾಧನೆ ಗಮನಾರ್ಹವಾಗಿದೆ. 'ಉಷಾರವಿ' ಎಂಬ ಅವರ ಕಾದಂಬರಿಯೊಂದು ಐದು ವರ್ಷಗಳಿಗೆ ಹಿಂದೆಯೇ 'ಚಿತ್ರಗುಪ್ತ' ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟ ವಾಯಿತು. ಪ್ರಸ್ತುತ ಕೃತಿಯಾದ 'ಹೊಸ ಮೇನೇಜರು' ಪುಸ್ತಕ ರೂಪದಲ್ಲಿ ಪ್ರಕಟವಾಗು ತ್ತಿರುವ ಅವರ ಮೊದಲ ಕಾದಂಬರಿ.

ಕೊ. ಸು. ಸೀತಾರಾಮ್‌ರ ಬರವಣಿಗೆಯಲ್ಲಿ ಓದುಗರು ಕಾಣುವ ಒಳ್ಳೆಯ ಗುಣಗಳು—ತಿಳಿಯಾದ ಕನ್ನಡ, ಸರಳವಾದ ಶೈಲಿ, ಮೋಹಕವಾದ ಪದಲಾಲಿತ್ಯ; ಇಂತಹ ಸಾಮಗ್ರಿಗಳನ್ನು ಉಪಯೋಗಿಸಿ ಕಥಾವಸ್ತುವನ್ನು ಅರಳಿಸುವ ಜಾಣ್ಮೆ. ಆದರೆ, ಸಾಹಿತ್ಯದಲ್ಲಿ ಇನ್ನೂ ಒಂದಂಶವಿದೆ ಎಂದು ಈ ದಿನ ನಾವೆಲ್ಲ ಬಲ್ಲೆವು. ಅದು ಕಲೆಯೊಡನೆ ಬೆರೆತಿರುವ ವಿಚಾರ; ಬದುಕನ್ನು ಬರೆಹಗಾರ ನೋಡುವ ದೃಷ್ಟಿ. ಈ ಅಂಶದಲ್ಲೂ ಸೀತಾರಾಮರಿಗೆ ವಿಶಿಷ್ಟ ಸ್ಥಾನವಿದೆ. ಮೂಲಭೂತವಾಗಿ ಅವರು ಧ್ಯೇಯವಾದಿ. ಭಾವುಕತೆಗೇ ಅವರಲ್ಲಿ ಪ್ರಾಧಾನ್ಯ. ಹೀಗಿದ್ದರೂ ವಾಸ್ತವ ಜಗತ್ತನ್ನು ತಿಳಿದುಕೊಳ್ಳುವ ಅಪೇಕ್ಷೆ ಅವರಿಗಿದೆ. ಪರಿಣಾಮ ವಾಸ್ತವತೆಯ ಸಭಾಂಗಣದಲ್ಲಿ ಧ್ಯೇಯವಾದದ ರಾಜಸಭೆ.

ಅಂತಹದೊಂದು ಕೃತಿ 'ಹೊಸ ಮೇನೇಜರು'. ವಿಶ್ವವಿದ್ಯಾಲಯದಿಂದ ಹೊರಬಂದ ಯುವಕ ಪದವೀಧರ ಬದುಕಿನ ವಿವಿಧ ಸಮಸ್ಯೆಗಳನ್ನು ಇದಿರಿಸಿ ಪ್ರಗತಿಪರವಾದ ಹೆದ್ದಾರಿಯನ್ನು ಕಂಡುಕೊಳ್ಳುವುದೇ ಇಲ್ಲಿನ ಮುಖ್ಯ ಕಥೆ. ಈ ಕಥೆಗೆ ಹಿನ್ನೆಲೆ, ನಮ್ಮ ನಾಡಿನ ನಾನಾ ಭಾಗಗಳಲ್ಲಿ ಈಗ ಇರುವ ಕಬ್ಬಿಣ–ಮ್ಯಾಂಗನೀಸ್ ಗಣಿಗಳು. ಇಂತಹ ಗಣಿಗಳಲ್ಲಿ ಭೂಗರ್ಭಶಾಸ್ತ್ರಜ್ಞರಾಗಿ ಸ್ವತಃ ದುಡಿದು ಅನುಭವಿಯಾಗಿರುವ ಸೀತಾರಾಮರು ಈ ಕಾದಂಬರಿಯ ವಸ್ತುವಿನ ಆವರಣವನ್ನು ವಾಸ್ತವಪೂರ್ಣವಾಗಿ ಮಾಡಿದ್ದಾರೆ. ಆ ಕೆಲಸವನ್ನು ಸಮರ್ಥ ರೀತಿಯಲ್ಲಿ ನೆರವೇರಿಸಿ ಪ್ರಶಂಸೆಗೆ ಅರ್ಹರಾಗಿದ್ದಾರೆ. ಕಥಾನಾಯಕ ಶಾಂತಪ್ಪನ ಎಲ್ಲ ವಿಚಾರಗಳನ್ನು ಎಲ್ಲರೂ ಒಪ್ಪಿಕೊಳ್ಳುವುದು ಸಾಧ್ಯವಾಗದೇ ಇದ್ದರೂ ಆಶಾವಾದದ ಧ್ವನಿಯೊಡನೆ ಕಥೆ ಮುಕ್ತಾಯವಾದಾಗ, ತಂಗಾಳಿ ಬೀಸಿದ ಹಾಗಾಗುತ್ತದೆ.

ಹೊಸ ಪೀಳಿಗೆಯ ಯುವಕ ಬರೆಹಗಾರರಾದ ಕೊ. ಸು. ಸೀತಾರಾಮರು ತಮ್ಮ ಈ ಕೃತಿಯ ಮೂಲಕ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ನಿರ್ದಿಷ್ಟ ನಿಲುವನ್ನು ಕಂಡುಕೊಂಡಿದ್ದಾರೆ. ಅವರ ಈ ಕಾದಂಬರಿಯ ಬಗೆಗೆ ಸಹೃದಯ ಓದುಗರು ತೋರುವ ಆದರದ ಫಲವಾಗಿ ಇನ್ನೂ ಹೆಚ್ಚಿನ ಒಳ್ಳೆಯ ಸಾಹಿತ್ಯ ಸೃಷ್ಟಿ ಅವರಿಂದ ಸಾಧ್ಯವಾಗಲೆಂಬುದೇ ನನ್ನ ಹಾರೈಕೆ.

೧೦ ಮೇ, ೧೯೫೫
ಮೈಸೂರು

—ನಿರಂಜನ.

★ ಈ ಕಾದಂಬರಿಯ ಕಥೆ ಕೇವಲ ಕಾಲ್ಪನಿಕವಾದುದು. ಇಲ್ಲಿ ಬರುವ ಸನ್ನಿವೇಶಗಳಾಗಲಿ, ಪಾತ್ರಗಳಾಗಲಿ ನಿಜ ಜೀವನದಲ್ಲಿ ಯಾರಿಗೂ ಅನ್ವಯಿಸುವುದಿಲ್ಲ. ಕಂಡೂ ಬರಬಹುದಾದ ಹೋಲಿಕೆ ಆಕಸ್ಮಿಕ ಮಾತ್ರ.

# ಅರ್ಪಣೆ

ಅನುದಿನವೂ
ಅಮಾನುಷ ಕಷ್ಟಗಳನ್ನು
ಅನುಭವಿಸುತ್ತಾ ನಾನಾ ಅಪಘಾತಗಳಲ್ಲಿ ಸತ್ತು,
ಜನರ ನೆನಪಿನಿಂದ ಮರೆಯಾಗಿ ಹೋಗುತ್ತಿರುವ
ಯಾರಿಗೂ ಬೇಡವಾದ ಲಕ್ಷಾಂತರ ಮಂದಿ
ಗಣಿಯ ಕಾರ್ಮಿಕರಿಗೆ.

೧

# ಹೊಸ ಉತ್ಸಾಹ-ಹಳೆಯ ನೆನಪು

"ಹುಷಾರಾಗಿರಪ್ಪ ! ಹೊನ್ನೂರು ಮಲೆನಾಡಿನ ಮೂಲೆ. ಇದರ ಜೊತೇಗೆ ಅದು ಬರೀ ಲಂಬಾಣಿ ತಾಂಡ. ನಿನ್ನಂಥ ಕೆಂಪಗಿರೋರನ್ನ ಕಂಡರೆ ಅವರು ಹಾರಿಸಿಕೊಂಡು ಹೋಗಿ ಬಿಟ್ಟಾರು!" ಗೋಪಾಲಯ್ಯ ಹೇಳುತ್ತಿದ್ದ.

ಬೆಂಗಳೂರಿನ ರೈಲ್ವೆ ನಿಲ್ದಾಣದಲ್ಲಿ ಪೂನಾಕ್ಕೆ ಹೋಗುವ ಮೈಲ್ ಗಾಡಿಯು ನಿಂತಿದ್ದಿತು. ರಾತ್ರೆ ಬಂಡಿಯಾದರೂ ಅದರಲ್ಲಿ ಜಾಗ ದೊರಕುವುದು ದುಸ್ತರವೇ ಆಗಿದ್ದಿತು. ಮಧ್ಯಮ ದರ್ಜೆಯ ಗಾಡಿಯೊಂದರಲ್ಲಿ ಪ್ರಯಾಸಪಟ್ಟು ಶಾಂತಪ್ಪ ಸ್ಥಳ ದೊರಕಿಸಿಕೊಂಡಿದ್ದ. ಅವನು ಶಿವಮೊಗ್ಗಾವಿಗೆ ಹೋಗಿ, ಅಲ್ಲಿನ ನಿಲ್ದಾಣದಲ್ಲಿಳಿದು ಬಸ್ಸು ಹಿಡಿದು ಹೊನ್ನೂರಿಗೆ ಹೋಗಬೇಕಿತ್ತು.

"ಏನು ಗೋಪಾಲಯ್ಯ ಹೀಗೆ ಹೇಳುತ್ತಿದೀಯೆ. ಲಂಬಾಣಿಗಳು ನನ್ನನ್ನೇನು ಮಾಡಿಯಾರು ? ನನ್ನ ಕೆಲಸ ನಾನು ನೋಡಿ ಕೊಂಡಿದ್ದರೆ ಸಾಕಾಗಿದೆ........," ಶಾಂತಪ್ಪ ಉತ್ತರವಿತ್ತ.

"ಈಗ ಹೀಗೆ ಹೇಳ್ತೀಯಪ್ಪ. ಆದರೆ ಹೊನ್ನೂರಿನ ಗಣೀಲಿ ನೀನು ಕಾಲಿಟ್ಟೆಯೆಂದರೆ ಸಾಕು, ಸಾಲುಸಾಲಾಗಿ ಕಲ್ಲೊಡೀತಾ ಕುಳಿತಿರೋ ಲಂಬಾಣಿಗಳನ್ನ ನೋಡಿದ್ರೆ ನೀನು ಪ್ರಪಂಚಾನೇ ಮರೆತುಬಿಡ್ತಿ!........ಲಂಬಾಣಿಗಳು ಕಾಡು ಜನ ಇರಬಹುದು. ಆದರೆ ಅವರು ನಮ್ಮ ಪಟ್ಟಣದ ಹುಡುಗೀರ್ನ ಮೀರಿಸ್ತಾರಪ್ಪ!" ಗೋಪಾಲಯ್ಯ ನಗುತ್ತಾ ನುಡಿದ.

"ನೀನು ರಸಿಕನಪ್ಪಾ....ಆದರೆ ನಾನು ಅಲ್ಲಿ ರಸಿಕತನ ತೋರಿಸೋಕೆ ಹೋದ್ರೆ ನನ್ನ ಬೆಲೆ ಮೂರು ಕಾಸಾಗಿ ಬಿಡುತ್ತೆ...."

"ನೀನು ಶುದ್ಧ ಮಗು, ಶಾಂತಪ್ಪ. ನೀನು ಮೇನೇಜರಾಗಿರುವಾಗ ಎಷ್ಟೊಂದು ಸಂಪಾದಿಸಬಹುದು. ಎಷ್ಟೊಂದು ಸುಖಪಡಬಹುದು. ಆದ್ರೆ ಬರೀ ತತ್ವ. ತತ್ವಾಂತ ಕೂತಿರ್ತಿ. ತತ್ವ ಹೇಳ್ತಿದ್ರೆ ಸಾಯೋವರೆಗೂ ಹೀಗೆ ಹೇಳ್ತಾನೇ ಇರಬೇಕಾಗುತ್ತೆ. ಕೈಗೆ ಸಿಕ್ಕಿದ ಸುಖ ಬಿಡಬಾರ್ದು ಶಾಂತಪ್ಪ!"

"ನಾನು ಬರೀ ತತ್ವ ತತ್ವಾಂತ ಇದ್ರೇನೆ ನನ್ನ ಮೇಲೆ ಇಷ್ಟು ಕಥೆ ಕಟ್ಟಿ ಬಿಟ್ರು. ಇನ್ನು ಕಾರ್ಯರಂಗಕ್ಕೇ ಇಳಿದಿದ್ರೆ ನನ್ನ ಹೆಸರು ಪ್ರತಿಯೊಂದು ಗಣಿಲ್ಲೂ ಟಾಂ ಟಾಂ ಆಗಿ ಬಿಡ್ತಿತ್ತು...."

"ಅದಕ್ಕೇ ಹೇಳೋದು ನಿಂಗೆ ಅನುಭವ ಸಾಲದೂಂತ. ನೀನು ಅಂಥ ಕೆಲಸಕ್ಕೆ ಕೈ ಹಾಕಿದ್ರೆ ನಿನ್ನ ಮೇಲೆ ಇಂತಹ ಕಥೇನೆ ಬರ್ತಿರಲಿಲ್ಲ...."

"ಹಾಗಾದ್ರೆ ನಾನು ಪ್ರಾಮಾಣಿಕನಾಗಿದ್ದದ್ದು ತಪ್ಪು ಅನ್ನಪ್ಪ! "

"ನಿನ್ನ ಹತ್ತಿರ ಮಾತಾಡೋಕ್ಕೆ ನನಗೆ ಬಾಯೇ ಬರೋಲ್ಲಾ ಶಾಂತಣ್ಣ. ನೀನು ಅಮೃತದಂತೆ ಶುದ್ಧನಾದ ಮನುಷ್ಯ. ನಿನ್ನಂಥ ವಿದ್ಯಾವಂತ, ಪ್ರಾಮಾಣಿಕನನ್ನ ಕೆಲಸಕ್ಕಿಟ್ಟು ಕೋಳ್ದೆ. ಆಸೂಳೇ ಮಗ ಓಡಿಸಿಬಿಟ್ಟನಲ್ಲ. ಅದಕ್ಕೇ ನಂಗೆ ಸಂಕಟವಾಗ್ತಿದೆ."

"ಹಾಗಾದರೆ ಇದಕ್ಕೆ ಬೇರೆ ಮಾರ್ಗವೇ ಇಲ್ಲ ಗೋಪಾಲಯ್ಯ, ನಮಗೆ ಸರಿ ತೋರಿದ ಹಾಗೆ ನಾವಿರೋದು. ನಮ್ಮ ಆತ್ಮ ಸಂತೋಷವಾದರೆ ಸಾಕು. ಬೇರೆಯವರ ಅಭಿಪ್ರಾಯ ಕಟ್ಟಿ ಕೊಂಡು ನಮಗೇನು?"

"ಹಾಗಂತ ಇದ್ರೆ ಜೀವನ ನಡೆಯೋದು ಹೇಗಪ್ಪ? ನೀನು ಇನ್ನೂ ಹುಡುಗ, ವಿದ್ಯಾವಂತ, ನಿನ್ನಂಥವರು ಹೀಗೆ ಮೂರು ಮೂರು ದಿನಕ್ಕೆ ಒಂದೊಂದು ಕೆಲಸಾಂತ ಬದಲಾಯಿಸ್ತಿದ್ರೆ ನಿಮ್ಮ ಮುಂದಿನ ಜೀವನ ಹೇಗಪ್ಪ? ನೀವು ನಂಬಿದವರು ನಿಮ್ಮ ತಲೇ ಮೇಲೆ ಕಲ್ಲು ಹಾಕ್ತಾರೆ."

"ನಮ್ಮ ಅದೃಷ್ಟವಿದ್ದ ಹಾಗೆ ಆಯ್ತೂಂತ ತಿಳಿಯೋದು, ಒಳ್ಳೆಯ ದಿನ ಬರುತ್ತೇನೋಂತ ಕಾದಿರೋದು, ಅಷ್ಟೆ!"

"ನಿನ್ನಂಥ ಯುವಕರು ಹೀಗೆ ಹೇಳೋದು ನಂಗೆ ಸಂಕಟವಾಗ್ತಿದೆ ಶಾಂತಣ್ಣ!"

"ಅದಕ್ಕೆ ಏನು ಮಾಡೋದಕಾಗ್ತದೆ ಗೋಪಾಲಯ್ಯ?"

"ನಾನು ಹೇಳೋದು ನೀನು ಒಪ್ಪೋಲ್ಲ ನೋಡಪ್ಪ. ನಮ್ಮ ಕೈಗೆ ಅವಕಾಶ ದೊರಕಿರೋವಾಗ, ಅದರ ಉಪಯೋಗಪಡೆಯಬೇಕು. ನಮಗೆ ಅನ್ಯಾಯ ಮಾಡ್ತಿರೋಸಮಾಜದ ಮೇಲೆ ಸೇಡು ತೀರಿಸಿಕೊಂಡು ಅದಕೂ ಅನ್ಯಾಯ ಮಾಡಿದರೇ ನಮಗೆ ಸುಖ ದೊರಕುತ್ತೆ. ಸುಳ್ಳು ಹೇಳಬೇಕು, ಮೋಸ ಮಾಡಬೇಕು, ಸಿಕ್ಕಿದ ಸುಖ ಕೈ ಬಿಡಬಾರದು, ಇವೆಲ್ಲ ನೀನು ಯಾವಾಗ ಕಲೀತೀಯೋಪ್ಪ!"

ಗೋಪಾಲಯ್ಯನ ಚಿಂತೆ ನೋಡಿ ಶಾಂತಪ್ಪನಿಗೆ ನಗು ಬಂದಿತು.

"ಒಟ್ಟಿನಲ್ಲಿ ಅರವತ್ತು ವರ್ಷವಾದರೂ ನಿನ್ನ ಸತ್ವಕ್ಕೆ ಮುಪ್ಪಾಗಿಲ್ಲ ಗೋಪಾಲಯ್ಯ!" ಎಂದ ಶಾಂತಪ್ಪ ನಗುತ್ತಾ.

"ಇನ್ನೇನಪ್ಪ ಮಾಡೋದು. ಇಪ್ಪತ್ತೈದು ವರ್ಷದ ಪಟ್ಟಾ ಹುಡುಗರು ನೀವು ಹೆದರಿಕೊಂಡು ಕೂರೋವಾಗ ನಾವಾದರೂ ಸುಮ್ಮನಿರೋಕಾಗ್ತದೇನು?"

"ಒಟ್ಟಿನಲ್ಲಿ ನೀನು ನನ್ನ ವಿಷಯದಲ್ಲಿ ಇಷ್ಟು ಮುತುವರ್ಜಿವಹಿಸುತ್ತಿರೋದಕ್ಕೆ ನಾನು ನಿಂಗೆ ಚಿರಋಣಿ, ಗೋಪಾಲಯ್ಯ."

"ಸುಮ್ಮನಿರಪ್ಪ ಸಾಕು. ನೀನು ನಂಗೆ ಮಾಡಿರೋ ಉಪಕಾರದಲ್ಲಿ ಮೂರು ಕಾಸಿನ ಭಾಗ ಸಹ ನಾನು ಹಿಂತಿರುಗಿಸಿಲ್ಲ. ನಾನೇನು ಮಹಾ ಮುತುವರ್ಜಿ ವಹಿಸಿರೋದು."

"ಆದರೂ ನಿನ್ನಿಂದ ಕಲಿಯೋದು ಬಹಳ ಇದೆಯಪ್ಪಾ."

"ನಾನು ಏನು ತಿಳಿದಿದ್ದೀನಿ ಶಾಂತಣ್ಣ. ನಿನ್ನಂಥ ವಿದ್ಯಾವಂತನ ಮುಂದೆ ನನ್ನದೇನು? ನಾನು ಸಹ ಮಹಾ ತಿಳಿದೋನ ಹಾಗೆ ಎಲ್ಲಾ ಗಣಿ ಮಾಲೀಕರೆದುರಿನಲ್ಲೂ ಲಾಗ ಹಾಕ್ತಾ ಇದೀನಿ. ಅವರೂ ನಂಬ್ತಿದಾರೆ. ನಡೆದಷ್ಟು ದಿನಾನಾಣ್ಯ."

ಶಾಂತಪ್ಪ ತನ್ನ ಕೈ ಗಡಿಯಾರ ನೋಡಿಕೊಂಡ.

"ಇನ್ನು ಗಾಡಿ ಹೊರಡೋಹೊತ್ತಾಯ್ತು ಗೋಪಾಲಯ್ಯ."

"ನೀನು ಊರು ಸೇರಿದ ಮೇಲೆ ಕಾಗದ ಬರಿಯಪ್ಪಾ. ಮಲೆನಾಡು, ಮಲೇರಿಯಾ ಮಾತ್ರೇನ ವಾರ ವಾರವೂ ಕಣ್ಣು ಮುಚ್ಚಿಕೊಂಡು ನುಂಗಿ ಬಿಡಪ್ಪ........ನಿನ್ನ ಆರೋಗ್ಯಕ್ಕೆ ಖಂಡಿತಾ ಬರಿಯಬೇಕಪ್ಪ. ಏನು?"

"ಆಗಲಿ ಗೋಪಾಲಯ್ಯ. ನೀನೂ ಬರೆಯುತ್ತಿರಬೇಕು."

"ಓ. ಖಂಡಿತವಾಗಿಯೂ ಬರೀತೇನೆ........ನಿನ್ನ ಆರೋಗ್ಯ ಕಾಪಾಡಿ ಕೋಪ್ಪ."

ಗಾರ್ಡು ಶಿಲ್ಪಿಯೂದಿದ, ಎಂಜಿನ್ ಕೂಗಿತು. ನಿಧಾನವಾಗಿ ಬಂಡಿ ಹೊರಟಿತು.

"ನಮಸ್ಕಾರ........"

"ನಮಸ್ಕಾರ........" ಎಂದು ಗೋಪಾಲಯ್ಯ ಕಣ್ಣೊರೆಸಿ ಕೊಂಡ.

ಇದನ್ನು ನೋಡಿದ ಶಾಂತಪ್ಪನ ಅಂತಃಕರಣ ಕಲಕಿ ಹೋಯಿತು.

ನಿಲ್ದಾಣದಲ್ಲಿ ಬೆಳಗುತ್ತಿದ್ದ ಸಾಲು ದೀಪಗಳು ನಿಧಾನವಾಗಿ ಮರೆಯಾದವು. ಗೋಪಾಲಯ್ಯನೂ ನಿಧಾನವಾಗಿ ಮರೆಯಾದಂತೆ ಶಾಂತಪ್ಪನಿಗೆ ತನ್ನ ಆತ್ಮೀಯ ಬಂಧುವೊಬ್ಬನನ್ನು ಬಿಟ್ಟು ಬಂದಂತಾಯ್ತು.

ತನ್ನ, ಗೋಪಾಲಯ್ಯನ ಸ್ನೇಹವೆಷ್ಟು ಸ್ವಲ್ಪ ದಿನಗಳದ್ದು. ಆದರೆ ಅದರಲ್ಲಿ ಹೇಗೋ ಅಪಾರ ಆತ್ಮೀಯತೆ ಬೆಳೆದು ಬಿಟ್ಟಿದ್ದಿತು. ಜೀವನದಲ್ಲಿ ಸ್ವಲ್ಪವೇ ದಿನದ್ದಾದರೂ ಎಂತಹ ಭದ್ರವಾದ ಬೆಸುಗೆಯುಳ್ಳ ಸ್ನೇಹ ಬೆಳೆದು ಬಿಡುತ್ತದೆ ಅನೇಕವೇಳೆ? ತನಗೂ ಗೋಪಾಲಯ್ಯನಿಗೂ ವಿದ್ಯೆಯಲ್ಲಿ, ವಯಸ್ಸಿನಲ್ಲಿ, ಅನುಭವದಲ್ಲಿ ಯಾವುದರಲ್ಲಿಯೂ ಸಾಟಿಯಿಲ್ಲ. ತಾನು ಪದವೀಧರ, ಅವನು ನಾಲ್ಕಕ್ಷರ ತಿಳಿದವನಷ್ಟೇ; ತಾನು ಇಪ್ಪತ್ತೈದು ಇಪ್ಪತಾರರ ಯುವಕ, ಅವನು ಅರವತ್ತು ಮೀರಿದ ಮುದುಕ; ಕಬ್ಬಿಣ, ಮ್ಯಾಂಗನಿಸ್ ಗಣಿಗಳಲ್ಲಿ ಅವನದು ಹಲವು ವರ್ಷಗಳ ಅನುಭವ ತನ್ನದು ಕೇವಲ ಒಂದು ಒಂದು ವರ್ಷದ ಅನುಭವ.

ಆದರೆ ಸ್ನೇಹವೆಷ್ಟು ಬಂಧುರ?

ಶಾಂತಪ್ಪನಿಗೆ ನಿದ್ರೆಯೇ ಬರಲಿಲ್ಲ. ರೈಲಿನ ಚಕ್ರಗಳು ವೇಗವಾಗಿ ಸುತ್ತುತ್ತಿದ್ದಂತೆಯೇ ಅವನ ಚಿತ್ತದಲ್ಲಿ ಕಾಲದ ಗಾಲಿ ಹಿಂದು ಹಿಂದಕ್ಕೆ ತಿರುಗಿಕೊಂಡು ಹೋಯ್ತು.

## ೨

## ನಿರುದ್ಯೋಗದಿಂದ ಮ್ಯಾನೇಜರ್ ಗಿರಿಗೆ

ಶಾಂತಪ್ಪ ಭೂಗರ್ಭ ಶಾಸ್ತ್ರದಲ್ಲಿ ಪದವೀಧರನಾಗಿ ಒಂದು ವರ್ಷ ಕಳೆದರೂ ಇನ್ನೂ ನಿರುದ್ಯೋಗಿಯಾಗಿಯೇ ಇದ್ದ. ಉದ್ಯೋಗಾನ್ವೇಷಣೆಯಲ್ಲಿದ್ದ

ಅವನಿಗೆ ವಿದ್ಯಾವಂತ ನಿರುದ್ಯೋಗಿಗಳ ಸಮಸ್ಯೆ, ರಾಷ್ಟ್ರೋನ್ನತಿ, ಮೊದಲಾದ ವಿಷಯಗಳ ಬಗ್ಗೆ ಬರೆದುದು, ಭಾಷಣ ಮಾಡಿದುದು ಓದಿ, ಕೇಳಿ ಬೇಸರ ಬಂದಿದ್ದಿತು. ತನ್ನ ಪ್ರಥಮ ತರಗತಿಯ ತೇರ್ಗಡೆಗೇನು ಬೆಲೆ ಬಂದಿತು, ತನ್ನ ತತ್ವ ಜೀವನಕ್ಕೇನು ಪುರಸ್ಕಾರ ದೊರೆಯಿತು ಎಂದು ಚಿಂತಿಸಿ ಚಿಂತಿಸಿ ಬೇಸರಗೊಳ್ಳುತ್ತಿದ್ದ. ಯಾರಾದರೊಬ್ಬ 'ಗಣ್ಯ'ವ್ಯಕ್ತಿಯ ಪ್ರಭಾವವಿದ್ದ ಮೂರ್ಖನಿಗಾದರೆ ಸಾಕು, ಸುಲಭವಾಗಿ ಉದ್ಯೋಗ ದೊರೆಯುತ್ತಿತ್ತು. ಆದರೆ ತನಗೆ?

ಇಂತಹ ಬೇಸರದ ದಿನಗಳಲ್ಲಿ ಒಂದು ದಿನ ಅವನು ಯಾವುದೋ ಒಂದು ಅರ್ಜಿ ಹಾಕಿದ್ದೆಡೆಯಲ್ಲಿನಿಂದ ಭೇಟಿಗಾಗಿ ಕರೆ ಬಂದಿತ್ತು. ಮ್ಯಾಂಗನೀಸ್ ಮತ್ತು ಕಬ್ಬಿಣದ ಗಣಿಗಳಲ್ಲಿ ಭೂಗರ್ಭ ಶಾಸ್ತ್ರಜ್ಞ ಮತ್ತು ಮೇನೇಜರ ಹುದ್ದೆಗಾಗಿ ಅರ್ಜಿ ಹಾಕಿದ್ದುದು ಈ ರೂಪ ತಾಳಿತ್ತು.

ಗಣಿಯ ಮಾಲೀಕರು, 'ಸಾಹುಕಾರ'ರೊಡನೆ ಭೇಟಿಯಾಯ್ತು.

ಶಾಂತಪ್ಪನಿಗೆ ಉದ್ಯೋಗ ದೊರೆಯಿತು! ಇನ್ನೂ ಗಣಿ ಕೆಲಸಕ್ಕೆ ಹೊಸಬನಾದ್ದರಿಂದ ಅನುಭವಿಗಳಿಗೆ ಪ್ರಾರಂಭದಲ್ಲಿ ದೊರೆಯುವ ಸಂಬಳವೇ ಅವನಿಗೂ ದೊರೆತಿದ್ದಿತು,

ಎಲ್ಲವೂ ಎಷ್ಟೊಂದು ನಾಟಕೀಯವಾಗಿ ನಡೆದು ಹೋಯ್ತು; ಅಲೆದಲೆದು ಬೇಸತ್ತು ಜೀವನದಲ್ಲಿ ತನಗೆ ಉದ್ಯೋಗವೇ ದೊರೆಯುವುದಿಲ್ಲವೇನೋ ಎಂದು ಕೊಳ್ಳುವ ಸ್ಥಿತಿಗೆ ಬಂದಿದ್ದ ಆ ಯುವಕನಿಗೆ ಒಂದು ಕ್ಷಣದಲ್ಲಿ ದೊರೆತಿದ್ದಿತು ಉದ್ಯೋಗ. ಅದೂ ನಹ ತಿಂಗಳಿಗೆ ಎಂಬತ್ತು ರೂಪಾಯಿನ ಮೇರೆಗೆ.

"ಕೆಲಸಕ್ಕೆ ತೆಗೆದು ಕೊಂಡದ್ದಕ್ಕೆ ಒಂದು ಪತ್ರ ಬರೆಸಿ ಕೊಡಿಸಿ ಬಿಡಿ ಸಾರ್," ಎಂದ ಶಾಂತಪ್ಪ.

"ಅದೆಲ್ಲ ಏಕೆ ಮಿಸ್ಟರ್ ಶಾಂತಪ್ಪ. ನಿಮಗೆ ನನ್ನಲ್ಲಿ ನಂಬಿಕೆಯಿಲ್ಲದಿದ್ರೆ, ಅಗತ್ಯವಾಗಿ ಅಪಾಯಿಟ್ಮೆಂಟ್ ಆರ್ಡರ್ ಬರೆಸಿಕೊಡ್ತೇನೆ." ಎಂದರು ಸಾಹುಕಾರರು.

"ಛೆ! ಛೆ! ನಂಬಿಕೆಯಿಲ್ಲದೆ ಉಂಟೆ ಸಾರ್........ಕೆಲಸಕ್ಕೆ ತೆಗೆದು ಕೊಂಡದ್ದ ಹಾಗೆ ಬರೆದು ಕೊಡೋದು ಪದ್ಧತಿ ಅದರಿಂದ ಕೇಳ್ದೆ ಅಷ್ಟೆ. ಕ್ಷಮಿಸಿ."

"ಸರಿ, ನೀವು ಯಾವ ದಿನ ಕೆಲಸದ ಮೇಲೆ ಹೋಗ್ತೀರಿ?"

" ನಾಳೆಯಿಂದಲೇನೆ "

"ಒಳ್ಳೆ ದಿನ ನೋಡಿಕೊಂಡು ಬನ್ನಿ ಮಿಸ್ಟರ್ ಶಾಂತಪ್ಪ. ನಾಳೆ ಮಂಗಳವಾರ ಬೇಡ. ನಾಡಿದ್ದು ಬುಧವಾರ, ಹೊರಟು ಬಿಡಿ........ರಾಮುನಾಯ್ಕನ ಹಳ್ಳಿಯಿಂದ ಮೂರು ಮೈಲಿ ದೂರದಲ್ಲಿ ಒಂದು ಗಣಿಯಿದೆ, ನಾಲ್ಕುವರೆ ಮೈಲಿ ದೂರದಲ್ಲಿ ಒಂದು ಗಣಿಯಿದೆ ಇವೆರಡೂ ಮ್ಯಾಂಗನೀಸ್ ಗಣಿಗಳು. ಆರು ಮೈಲಿ ದೂರದಲ್ಲಿ ಒಂದು ಕಬ್ಬಿಣದ ಗಣಿಯಿದೆ. ಸಧ್ಯಕ್ಕೆ ನೀವು ಒಂದೊಂದು ದಿನ ಒಂದೊಂದು ಗಣಿಗೆ ಹೋಗಿ ಬರಬೇಕು. ಒಂದೆರಡು ತಿಂಗಳು ಕಳೆದ ನಂತರ ಒಂದು ಕಾರು ಕೊಡ್ತೇನೆ ನಿಮಗೆ, ದಿನಾ ಮೂರು ಗಣೀನೂ ಸುತ್ತೋಕೆ. ಸಧ್ಯಕ್ಕೆ ನೀವೇ ಒಂದು ಮನೆ ನೋಡಿ ಕೊಂಡಿರಿ ಹಳ್ಳೀಲಿ. ಆ ಮೇಲೆ ನಾನು ಅಲ್ಲೇ ಒಂದು ಮನೆ ಕಟ್ಟಿಸ್ತೀನಿ."

"ಆಗ ಬಹುದು ಸಾರ್," ಎಂದ ಶಾಂತಪ್ಪನಿಗೆ ಸಂತೋಷವಾಗಿತ್ತು. ಕಾರು........ಸ್ವಂತ ಮನೆ.........ಮೂರು ಗಣಿಗಳ ಮೇನೇಜರು...........! ಮನಸ್ಸಿನಲ್ಲಿಯೇ ಸಕ್ಕರೆಯನ್ನು ಮೆಲ್ಲುತ್ತಿದ್ದ.

"ನೀವು ಮಾತ್ರ ಶ್ರದ್ಧೆಯಿಂದ ಕೆಲಸ ಮಾಡಬೇಕು. ನಿಮ್ಮಿಂದ ಉಪಯೋಗ ಕಂಡು ಬಂದರೆ ನಿಮ್ಮ ಸಂಬಳ ಹೆಚ್ಚು ಮಾಡಿ ಹೆಚ್ಚು ದಿನ ಇಟ್ಟು ಕೊಂಡಿರ್ತೇವೆ........ಇಲ್ಲದಿದ್ರೆ ಸ್ವಲ್ಪವೇ ದಿನ!........"

ಶಾಂತಪ್ಪ ತಲೆಯಾಡಿಸಿದ.

"ನೀವು ಬುಧವಾರ ಇಲ್ಲಿಂದ ಹೊರಡೋದಾದರೆ, ನಾನೇ ಕಾರಿನಲ್ಲಿ ಹೊರಡ್ತೇನೆ, ನೀವೂ ಸಹ ಬಂದು ಬಿಡಿ. ನಿಮ್ಮ ಹಾಸಿಗೆ, ಟ್ರಂಕು ಎಲ್ಲಾ ತಂದ್ಬಿಡಿ. ಬೆಳಿಗ್ಗೆ ಎಂಟು ಗಂಟೇಗೆ ಹೊರಟು ಬಿಡೋಣ."

"ಆಗಲಿ ಸಾರ್."

"ಸರಿ."

ಶಾಂತಪ್ಪ ಸಾಹುಕಾರರಿಗೆ ವಂದಿಸಿ ಹೊರಟ. ಹೊರಡುವ ಮುನ್ನ ಸಾಹುಕಾರರು ಅವನಿಗೆ ಹಸ್ತಲಾಘವವಿತ್ತರು. ಆ ಭವ್ಯವಾದ ಭವನದಿಂದೀಚೆ ಬರುವಾಗ ಶಾಂತಪ್ಪನಿಗೆ ಹರುಷವುಕ್ಕಿ ಬರುತ್ತಿತು. ಸಾಹುಕಾರರು ಎಷ್ಟು ಒಳ್ಳೆಯವರು........ತಮ್ಮ ಕಾರಿನಲ್ಲಿಯೇ ನನ್ನನ್ನು ಕರೆದುಕೊಂಡು ಹೋಗುತ್ತಾರೆ........ಎಷ್ಟೊಂದು ಆತ್ಮೀಯತೆಯಿದೆ ಅವರ ಮಾತಿನಲ್ಲಿ....ಬರುವಾಗ ಎಷ್ಟು ಗೌರವದಿಂದ ಆ ಹಸ್ತಲಾಘವವಿತ್ತರು........

ಅವನು ರಸ್ತೆಯ ಪಕ್ಕದಲ್ಲಿ ಬಸ್ಸು ನಿಲ್ಲುವ ಕಾಲಕ್ಕೆ ಬಂದಿದ್ದ. ಮಲ್ಲೇಶ್ವರದಲ್ಲಿದ್ದು ಸಾಹುಕಾರರ ಆ ಭವನದಿಂದ ಅವನು ದೂರದ ತನ್ನ ಮನೆಗೆ ಹೋಗ ಬೇಕಾಗಿದ್ದಿತು. ಸಿಟಿ ಬಸ್ಸು ತನ್ನ ನಿತ್ಯ ಅಭ್ಯಾಸದಂತೆ ಐವತ್ತು ನಿಮಿಷ ತಡವಾಗಿ ಬಂದಿತು. ಬಂದ ಬಸ್ಸಿನಲ್ಲಿ ಶಾಂತಪ್ಪ ಕುಳಿತುಕೊಂಡು, ಸವಿಗನಸು ಕಾಣುತ್ತಾ ಮುಂದೆ ಹೊರಟ.

× × ×

ಬುಧವಾರ ಶಾಂತಪ್ಪ ಎಂಟು ಗಂಟೆಗೇ ಸಾಹುಕಾರರ ಭವನಕ್ಕೆ ಹೋದ. ಅವನದೆನಿಸಿದ್ದ ಹಾಸಿಗೆ, ಪೆಟ್ಟಿಗೆಗಳನ್ನು ಬಾಗಿಲಿನಲ್ಲಿಟ್ಟು ಕುರ್ಚಿಯ ಮೇಲೆ ಕುಳಿತು ಕೊಂಡ. ಅರ್ಧ ಗಂಟೆ ಕಳೆದ ನಂತರ ಆಳು ಒಮ್ಮೆ ಬಂದು ಶಾಂತಪ್ಪನ ಕುಲಗೋತ್ರವನ್ನೆಲ್ಲ ವಿಚಾರಿಸಿಕೊಂಡು ಒಳಗೆ ಹೋಗಿ ಐದು ನಿಮಿಷಗಳ ನಂತರ ಹೊರ ಬಂದ.

"ಯಜಮಾನ್ರು ಬರ್ತಾರೆ. ಸ್ನಾನ ಮಾಡ್ತಾ ಅವ್ರೆ.........ಕುಂತಿರಿ," ಎಂದು ಅಭಯವಿತ್ತ. ಪುನಃ ಹತ್ತಾರು ನಿಮಿಷಗಳು ಕಳೆದ ನಂತರ ಒಬ್ಬಾತ ಒಳಗಿನಿಂದ ಬಂದು ಶಾಂತಪ್ಪನ ಮುಖವನ್ನು ಪ್ರಶ್ನಾರ್ಥಕವಾಗಿ ನೋಡಿದ.

"ತಾವು ಯಾರೋ ತಿಳಿಯಲಿಲ್ಲವಲ್ಲ! " ಎಂದ ಆತ.

ಶಾಂತಪ್ಪ ಅವನನ್ನು ಕೂಲಂಕುಷವಾಗಿ ನೋಡಿದ, ಅರ್ಧ ಶತಮಾನ ದಾಟಿದ್ದ ವಯಸ್ಸು, ಬಿಳಿ ಮೀಸೆ, ಬಿಳಿ ಪಂಚೆ ಷರಟುಗಳು, ನರಗಳು ಉಬ್ಬಿ ಕೊಂಡಿದ್ದ ಮೂಳೆ ತುಂಬಿದ ಕೈಕಾಲುಗಳು, ನೋಡಿದವರಿಗೆ ಕೋಪ ತರಿಸುವಂತಹ ಮುಖ ಮತ್ತು ದೃಷ್ಟಿ. ಆತನನ್ನು ಹಾಗೆ ನೋಡಿದ ನಂತರ ಶಾಂತಪ್ಪನೆಂದ,

"ನಾನು ಸಾಹುಕಾರ್ರನ್ನ ನೋಡೋಕೆ ಬಂದಿದ್ದೀನಿ"

"ಸಾಹುಕಾರ್ರನ್ನೇ ?........ಏನು ಕೆಲಸವಿತ್ತು? "

ಶಾಂತಪ್ಪನಿಗೆ ಬೇಸರವಾಯ್ತಾದರೂ, ಅದನ್ನು ತೋರ್ಗೊಡಲಿಲ್ಲ,

"ನಾನು ಗಣೀಗೆ ಹೋಗಬೇಕು...." ಶಾಂತಪ್ಪನೆಂದ. ಸಧ್ಯ, ಈ ಪ್ರಾಣಿಯ ಕೈನಿಂದ ಬಿಡುಗಡೆಯಾದರೆ ಸಾಕು, ಎನಿಸಿದ್ದಿ ತವನಿಗೆ.

"ಗಣೀಗೆ........ಎಂದರೆ ರಾಮನಾಯ್ಕನ ಹಳ್ಳೀಗೇನು? ಸಾವಕಾರ್ರು ನಿಮ್ಮನ್ನ ಬರೋದಕ್ಕೆ ಹೇಳಿದ್ರೇನು?"

"ಹೌದು"

"ಅಯ್ಯೋ.........ಕಾರಿನಲ್ಲಿ ಜಾಗವೆಲ್ಲಿ ಸಿಕ್ಕುತ್ತೇರಿ.........ಸಾವಕಾರ್ರು ಎಲ್ಲಾರಿಗೂ 'ಕಾರಿನಲ್ಲಿ ಕರ್ಕೊಂಡು ಹೋಗ್ತೀನಿ ಬನ್ನೀಂತ' ಹೇಳಿ ಬಿಡ್ತಾರೆ.... ಕೊನೇಗೆ ಅವರಿಗೇ ಜಾಗ ಇರೋಲ್ಲ....ಅವರು ತಾನೇ ಏನು ಮಾಡ್ತಾರೆ.... ಕಾರಿನಲ್ಲಿ ನಾನೂ ಬರ್ತೀನೀಂತ ಎಲ್ಲಾರೂ ಗಂಟು ಬಿದ್ರೆ, ದಾಕ್ಷಿಣ್ಯ ಇರುತ್ತಲ್ಲ........"

ಶಾಂತಪ್ಪ ಸುಮ್ಮನಿದ್ದ. ಆ ವ್ಯಕ್ತಿ ಅಲ್ಲಿಯೇ ನಿಂತಿದ್ದ. ಶಾಂತಪ್ಪನನ್ನು ನೋಡುತ್ತಿದ್ದಂತೆಯೇ ಆತನ ಆಸಕ್ತಿ ಹೆಚ್ಚುತ್ತಿದ್ದಂತಿತ್ತು,

"ತಾವು ರಾಮನಾಯ್ಕನ ಹಳ್ಳಿಯವರೇನು?" ಆತನು ಕೇಳಿದ.

"ಅಲ್ಲ ಈ ಊರಿನವನೆ?"

"ಹಾಗಾದ್ರೆ ರಾಮನಾಯ್ಕನ ಹಳ್ಳೀಲೇನು ಕೆಲಸ?"

"ನಾನು ಗಣೀಲಿ ಕೆಲಸದಲ್ಲಿದ್ದೇನೆ."

"ಯಾರ ಗಣೀಲಿ?"

"ನಿಮ್ಮ ಸಾಹುಕಾರರ ಗಣೀಲಿ"

"ಓ!....ಹಾಗೇನು.....ತಮ್ಮನ್ನ ನಾನು ಇದುವರೆಗೂ ನೋಡೇ ಇರ್ಲಿಲ್ಲ ವಲ್ಲ ಸಾರ್........ತಮ್ಮ ಹೆಸರು?"

"ನನ್ನ ಹೆಸರು ಶಾಂತಪ್ಪ....ಹೊಸದಾಗಿ ಬಂದಿದೀನಿ."

"ಓ ಹೊಸದಾಗಿ ಬಂದಿದ್ದೀರೇನು............ಹೊಸಬರನ್ನು ತೆಗೆದ್ಕೊಂಡೆ ಅಂತ ಹೇಳ್ತಿದ್ರು ನಿನ್ನೆ, ನಿಮ್ಮನ್ನೇ ಇರ್ಬೇಕು ಅವರು ಹೇಳಿದ್ದು

"ತಾವು ಏನು ಓದಿದ್ದೀರಿ ಸಾರ್"

"ಬಿ.ಎಸ್ಸಿ. ಆನರ್ಸ್ ಪಾಸು ಮಾಡಿದೀನಿ...." ಶಾಂತಪ್ಪ ನೆಂದ.

"ಓ.....ಭೂಗರ್ಭ ಶಾಸ್ತ್ರವನ್ನ ಓದಿದೀರೇನು....ಸರಿ ಸಾರ್...." ಎಂದ ವನೇ ಆತ ಒಳಗೆ ಹೊರಟ.

ಶಾಂತಪ್ಪ ಬಿಡುಗಡೆಯ ನಿಟ್ಟುಸಿರೊಂದನ್ನು ಬಿಟ್ಟು, ಸಧ್ಯ ಬದುಕಿದೆ ನೆಂದು ಕೊಂಡು ಕುಳಿತ.

ಆದರೆ ಅಷ್ಟರಲ್ಲಿ ಆತ ಪುನಃ ಒಳಗಿನಿಂದ ಬಂದ. ಕೈನಲ್ಲಿ ಕಬ್ಬಿಣ ಮ್ಯಾಂಗನೀಸ್ ಅದಿರುಗಳನ್ನು ತೆಗೆದು ಕೊಂಡು ಬಂದಿದ್ದ.

"ಈ ಕಲ್ಲು ಯಾವುದು ಸಾರ್?" ಎಂದು ಒಂದು ಅದಿರನ್ನು ಶಾಂತಪ್ಪನ ಮುಂದೆ ಹಿಡಿದ.

"ಇದು ಮ್ಯಾಂಗನೀಸ್ ಇರಬೇಕು...."

"ಇದು ಎಷ್ಟು ಬರಬಹುದು ?"

ಶಾಂತಪ್ಪ, ತಾನು ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಒಂದೆರಡು ಬಾರಿ ಗಣಿಗಳಿಗೆ ಹೋಗಿ ಬಂದಿದ್ದ. ಕಬ್ಬಿಣ ಮ್ಯಾಂಗನೀಸ್ ಅದಿರುಗಳ ಗಣಿಗಳಲ್ಲಿ ಬಳಕೆಯಲ್ಲಿದ್ದ ಕೆಲವು ಮಾತುಗಳು ಅವನಿಗೆ ತಿಳಿದಿದ್ದುವು. ತಕ್ಷಣ ಉತ್ತರವಿತ್ತ.

"ಸುಮಾರು, ಶೇಕಡ ನಲವತ್ತನಾಲ್ಕು, ನಲವತ್ತೈದು ಬರಬಹುದು...."

"ಇದು ಯಾವ ಕಲ್ಲು ಸಾರ್?" ಆತ ಶಾಂತಪ್ಪನನ್ನು ಬಿಡುವಂತೆಯೆ ಕಾಣಲಿಲ್ಲ.

"ಇದು ಕಬ್ಬಿಣದ ಅದಿರು. ಇದು ಸುಮಾರು ಶೇಕಡ ಎಂಬತ್ತು ಬರಬಹುದು!" ಎಂದು ಶಾಂತಪ್ಪ ಉತ್ತರವಿತ್ತ.

ಆತ ಪುನಃ ಏನು ಕೇಳುತ್ತಿದ್ದನೋ, ಆದರೆ ಅಷ್ಟರಲ್ಲಿಶಾಂತಪ್ಪನೇ ಕೇಳಿದ,

"ತಾವು ಯಾರೋ ತಿಳಿಯಲಿಲ್ಲವಲ್ಲ...."

"ನಾನು ಸಾವಕಾರ್ರ ಸೋದರ ಮಾವ...."

"ಓ!...." ಎಂದ ಶಾಂತಪ್ಪ. ಪರಾವಲಂಬಿ ಜೀವ, ಎಂಬ ಪದ ಅವನ ಮನಸ್ಸಿನಲ್ಲಿ ಸುಳಿದು ಹೋಗಿ, ನಗೆ ಬಂದಿತು.

ಆತ ಅದಿರನ್ನು ಒಳಗಿಡಲು ಹೊರಟ.

ಅಷ್ಟರಲ್ಲಿಯೇ ಯಾರು ಯಾರೋ ಬಂದು ಕುಳಿತಿದ್ದರು. ಎಲ್ಲರೂ ಗಣಿಯ, ಅದಿರಿನ ಮಾತನ್ನೇ ಆಡುತ್ತಿದ್ದರು, ಆಗಲೇ ಹತ್ತು ಕಳೆದಿದ್ದಿತು. ಬೆಳಗ್ಗೆ ಎಂಟು ಗಂಟೆಗೇ ಸಾಹುಕಾರರು ಅವನನ್ನು ಬರಹೇಳಿದ್ದರಿಂದ ಶಾಂತಪ್ಪ ಆತುರಾತುರವಾಗಿ ಹೊರಟು ಬಂದಿದ್ದ. ಉಪಹಾರವನ್ನು ತೆಗೆದು ಕೊಂಡಿರಲಿಲ್ಲ. ಈಗ ಹೊಟ್ಟೆ ತಾಳಹಾಕಲು ಪ್ರಾರಂಭವಾಗಿದ್ದಿತು. ಆದರೆ ಎದ್ದು ಹೋಟೇಲಿಗೆ ಹೋಗೋಣವೆಂದರೆ ಯಾವ ನಿಮಿಷದಲ್ಲಿ ಒಳಗಿನಿಂದ ಸಾಹುಕಾರರು ಬಂದುಬಿಡುತ್ತಾರೆಯೋ, ತಾನು ಬಂದಿಲ್ಲವೇ ಎಂದು ಕೇಳಿ ಬಿಡುತ್ತಾರೆಯೋ, ಎಂಬ ಭಯ ಬೇರೆ ಬಾಧಿಸುತ್ತಿತ್ತು. ಈ ಕುತೂಹಲ ದಲ್ಲಿಯೇ ಹನ್ನೊಂದು ಗಂಟೆ ಕಳೆದಾಗ, ಒಳಗಿನಿಂದ ಸಾಹುಕಾರರು ಬಂದರು. ಶಾಂತಪ್ಪ, ಕುರ್ಚಿಯಿಂದೆದ್ದು ವಂದಿಸಿದ. ಸಾಹುಕಾರರು ಅವನನ್ನು ನೋಡಿ, ಕೇಳಿದರು,

"ಓಹೋ....ಬಂದಿದ್ದೀರಾ....ನಿಮ್ಮ ಹಾಸಿಗೆ ಟ್ರಂಕು ಎಲ್ಲ ತಂದಿದೀರಾ ?"

"ತಂದಿದೀನಿ ಸಾರ್...."

"ಸರಿ....ಕೂತ್ಕೊಳ್ಳಿ...."

ಶಾಂತಪ್ಪ ಕುಳಿತುಕೊಂಡನಂತರ, ಅಲ್ಲಿ ಕಾದು ಕುಳಿತಿದ್ದ ಇತರರನ್ನೆಲ್ಲ ಸಾಹುಕಾರರು ಮಾತನಾಡಿಸಿದರು. ಕೆಲವರು ವ್ಯವಹಾರಾಸಕ್ತರಾಗಿ ಬಂದಿದ್ದರು. ಮತ್ತೆ ಕೆಲವರು ರಾಮನಾಯ್ಕನ ಹಳ್ಳಿಗೆ ಹೋಗಲು ಬಂದಿದ್ದರು. ಕಾರಿನಲ್ಲಿ ಅಷ್ಟು ಜನರ ಮಧ್ಯೆ ತನಗೆ ಸ್ಥಳ ದೊರೆಯುವುದೇ ಎಂದು ...." ಎಂದೊಬ್ಬ ಸಾಹುಚಿಂತಿಸಿದ ಶಾಂತಪ್ಪ.

"ಮೊನ್ನೆ ತೆಗೆದ ಸ್ಯಾಂಪಲ್ (Silica or Quartz) ಸಾರ್ ಇದು ಕಾರರ ಮುಂದೆ ಸಣ್ಣ ಡಬ್ಬವೊಂದನ್ನಿಟ್ಟ.

ಸಾಹುಕಾರರು ಆ ಡಬ್ಬದ ಬಾಯನ್ನು ತೆರೆದು, ಒಳಗಿದ್ದ ಕಪ್ಪು ಪುಡಿಯನ್ನು ಬೆರಳಿನಲ್ಲಿ ಅದ್ದಿ ತೆಗೆದುಕೊಂಡು ನೋಡಿದರು. ಆ ಪುಡಿಯ ಬಣ್ಣವನ್ನು ನೋಡು ನೋಡುತ್ತ ಅವರ ಮುಖದಲ್ಲಿ ಪ್ರಸನ್ನ ಕಳೆ ಮೂಡಿತು.

"ನೋಡ್ರಿ ಮಿಸ್ಟರ್ ಶಾಂತಪ್ಪ....ಇದು ಎಷ್ಟು ಬರಬಹುದು....." ಸಾಹುಕಾರರೆಂದರು. ಶಾಂತಪ್ಪನು ಎದ್ದು ಹೋಗಿ ನೋಡಿದ.

ಅದು ಮ್ಯಾಂಗನೀಸ್ ಅದಿರಿನ ಪುಡಿಯಿರಬಹುದು. ಅದರ ಬಣ್ಣವನ್ನು ನೋಡಿ ಕೆಲವರು ಅದಿರಿನಲ್ಲಿರುವ ಮ್ಯಾಂಗನೀಸಿನ ಭಾಗವನ್ನು ನಿರ್ಧರಿಸುತ್ತಿದ್ದರು. ಶಾಂತಪ್ಪನೂ ಆ ಪುಡಿಯನ್ನು ಬೆರಳಿನಲ್ಲಿ ತೆಗೆದುಕೊಂಡು ಮುಂಗೈ ಮೇಲೆ ಸ್ವಲ್ಪ ಸವರಿ ಬಣ್ಣವನ್ನು ನೋಡಿದ ನಂತರ ಹೇಳಿದ,

"ಸುಮಾರು ಶೇಕಡ ನಲವತ್ತೆರಡು ಭಾಗ ಮ್ಯಾಂಗನೀಸ್ ಬರಬಹುದು."

"ನಲವತ್ತೆರಡು !....ನಾವು ಇದು ಐವತ್ತು ಬರಬೇಕು ಅಂತ ನಿರೀಕ್ಷಿಸಿದ್ದೀವಿ ಕಣ್ರೀ....ನಿಮಗೆ ಇನ್ನ ಮ್ಯಾಂಗನೀಸಿನ ಅನುಭವ ಸಾಲದು........ ಎಷ್ಟು ಓದಿದರೇನು....ಒಟ್ಟಿನಲ್ಲಿ ಅನುಭವ ಮುಖ್ಯ...."

"ಏನೋ ಸಾರ್....ಈ ರೀತಿ ಬಣ್ಣ ನೋಡಿ ಇಷ್ಟೇ ಇದರ ಯೋಗ್ಯತೇಂತ ನಿರ್ಧರಿಸುವುದು ವೈಜ್ಞಾನಿಕವಲ್ಲ" ಎಂದ ಶಾಂತಪ್ಪ.

"ವೈಜ್ಞಾನಿಕವೋ, ಅಲ್ಲವೋ, ನಮಗೆ ಅದೆಲ್ಲಾ ಮುಖ್ಯವಲ್ಲಾರೀ...... ನಮಗೆ ಮುಖ್ಯವಾಗಿ ಬೇಕಾದುದು ಕೆಲಸ....ನಮಗೆ ವಿಜ್ಞಾನಿಗಳು ಬೇಕಿಲ್ಲ

....ಮುಖ್ಯವಾಗಿ ಕೆಲಸ ತಿಳಿದವರು ಬೇಕು....ಈಗ ನೋಡಿ ನಮ್ಮ ಗೋಪಾಲಯ್ಯ ಇದಾನೆ....ಅವನಿಗೆ ಇಂಗ್ಲೀಷು ಒಂದಕ್ಷರ ಬರೆಯೋಕೆ ಬರೋಲ್ಲ....ಆದರೆ ಗಣಿ ಕೆಲಸದ ವಿಷಯದಲ್ಲಿ ಅವನದು ಎತ್ತಿದ ಕೈ...."

ಶಾಂತಪ್ಪ ಮಾತನಾಡಲಿಲ್ಲ, ಅವನಿಗೆ ಗೋಪಾಲಯ್ಯ ಯಾರು ಎಂದು ತಿಳಿದಿರಲಿಲ್ಲ.

"ನಮ್ಮ ಹಣೇ ಬರಹವೆಲ್ಲಾ ಈ ಡಬ್ಬದಲ್ಲಿ ತುಂಬಿದೇ ನೋಡಿ....ನಿಮಗೂ ಅದು ಅನುಭವ ಆಗುತ್ತೆ...." ಎಂದರು ಪುನಃ ಸಾಹುಕಾರರು.

ಅಷ್ಟರಲ್ಲಿ ಮಧ್ಯ ವಯಸ್ಕನೊಬ್ಬನು ಒಳಬಂದ. ಅವನನ್ನು : ನೋಡಿದ ಸಾಹುಕಾರರು. "ಓಹೋ....ಗೋಪಾಲಯ್ಯ....ಬಾರಪ್ಪ....ಬಾ....ನಿನ್ನ ವಿಷಯಾನೇ ನಾನು ಈಗ ಮಾತನಾಡ್ತಿದ್ದೆ....,"

—ಎಂದು ಅವರೆಂದಾಗ ಕುತೂಹಲದಿಂದ ಆ ವ್ಯಕ್ತಿಯನ್ನು ನೋಡಿದ ಶಾಂತಪ್ಪ. ಗೋಪಾಲಯ್ಯ, ಶುಭ್ರವಾದೊಂದು ಪಂಚೆಯುಟ್ಟು, ಜೋಲು ಕೋಟೊಂದನ್ನು ಧರಿಸಿದ್ದ. ಅವನ ತಲೆಯ ಮೇಲೊಂದು ಕಿಮುಟು ಹಿಡಿದ ಟೋಪಿಯಿತ್ತು. ಅವನ ಕೈಕಾಲುಗಳೆಲ್ಲ ಕಪ್ಪುಬಣ್ಣ ಹಿಡಿದಿದ್ದುವು, ಹಿಮ್ಮಡಿಯೆಲ್ಲ ಒಡೆದು ಬಿರುಕು ಬಿಟ್ಟಿದ್ದುವು. ಮ್ಯಾಂಗನೀಸ್ ಕೆಲಸಗಾರನಿವನು, ಎಂದು ಆ ಸ್ವರೂಪವೇ ಹೇಳುತ್ತಿತ್ತು.

"ತಾವು ಸದಾ ನನ್ನ ವಿಷಯ ಮಾತನಾಡೋದು ನನ್ನ ಪುಣ್ಯ ಸಾರ್" ಎಂದ, ಗೋಪಾಲಯ್ಯ.

"ನೀನು ಗೋಪಾಲ ಕಣಪ್ಪ....ನಿನ್ನ ನಾಮ ಸ್ಮರಣೆಯಿಂದ ಜನರಿಗೆ ಪುಣ್ಯ ಬರುತ್ತೆ" ಎಂದು ಸಾಹುಕಾರರು ಎಲ್ಲರನ್ನೂ ಹಸನ್ಮುಖಿಗಳನ್ನಾಗಿ ಮಾಡಿದರು.

"....ಮೊನ್ನೆ ದಿನದ ಸ್ಯಾಂಪ್ಲಿಂಗ್‌ನ ಡಬ್ಬ ಕಳಿಸಿದ್ದೆ ನೋಡಿದ್ರಾ....ಸಾರ್..." ಎಂದ ಗೋಪಾಲಯ್ಯ, ಒಂದೆರಡು ಕ್ಷಣಗಳ ನಂತರ.

"ಅದೇ ಈಗ ನೋಡ್ತಿದ್ದೆ....ನಮ್ಮ ಜೀಯಾಲಜಿಸ್ಟು ನಲವತ್ತೆರಡು ಬರುತ್ತೆ ಅನ್ನಾತರಪ್ಪ..." ಎಂದು ಸಾಹುಕಾರರು ಹೇಳಿದಾಗ ಗೋಪಾಲಯ್ಯನ ಮುಖ ವಿವರ್ಣವಾಯಿತು.

ಶಾಂತಪ್ಪನ ಎದೆಯಲ್ಲೂ ಒಮ್ಮೆ ಶಾಖವುಂಟಾಗಿ, ಹೋಯ್ತು.

"ಯಾರು ಸಾರ್ ನಿಮ್ಮ ಜೀಯಾಲಜಿಸ್ಟು ?"

"ಇವರೇ" ಎಂದು ಶಾಂತಪ್ಪನನ್ನು ತೋರಿಸಿದರು ಸಾಹುಕಾರರು.

"ಓ...ತಾವೇನೋ...ಹೊಸಬರೂಂತ ಕಾಣುತ್ತೆ!"

ಶಾಂತಪ್ಪ ಗೋಪಾಲಯ್ಯನನ್ನು ನೋಡಿದ.

"ತಮ್ಮ ಹೆಸರೇನು ಸಾರ್?" ಗೋಪಾಲಯ್ಯ ಕೇಳಿದ.

"ಶಾಂತಪ್ಪ ಅಂತ"

"ಇವರಿಗೆ ಇನ್ನು ತರಬೇತು ಮಾಡಬೇಕಪ್ಪ ನಾನು....ಇನ್ನೂ ಅನುಭವ ವಿಲ್ಲ....ಕಾಲೇಜಿನಿಂದ ಬಂದಿದ್ದಾರೆ...." ಎಂದರು ಸಾಹುಕಾರರು.

"ನನ್ನ ಕೈಕೆಳಗೆ ಹಾಕಿಬಿಡಿ ಸಾರ್....ನಾನು ತರಬೇತು ಮಾಡ್ತೀನಿ." ಎ ದ ಗೋಪಾಲಯ್ಯ, ಜೇಬಿನಿಂದ ಒಂದು ಬೀಡಿ ಕಟ್ಟನ್ನು ತೆಗೆಯುತ್ತಾ.

ಟೆಲಿಫೋನಿನ ಗಂಟೆ ಬಾರಿಸಿತು, ಟೇಬಲಿನ ಮೇಲಿನ ಫೋನನ್ನು ಕೈಗೆ ತೆಗೆದುಕೊಂಡು ಸಾಹುಕಾರರು ಮಾತನಾಡತೊಡಗಿದ್ದರಿಂದ ಅವರೇನೂ ಉತ್ತರ ಹೇಳಲಿಲ್ಲ.

ಗೋಪಾಲಯ್ಯ ಬೀಡಿಯ ತುದಿಯನ್ನು ಒಮ್ಮೆ ಎಂಜಲಿನಿಂದ ತೇವ ಗೊಳಿಸಿ, ಕಡ್ಡಿಗೀರಿ ಬೆಂಕಿ ಮುಟ್ಟಿಸಿದ.

"ಅದು ನಲವತ್ತೆರಡು ಬರುಲ್ಲಾ ಸಾರ್....ಐವತ್ತಕ್ಕೆ ಕಡಿಮೆಯಿಲ್ಲ," ಎಂದು ಹೇಳಿದ ಗೋಪಾಲಯ್ಯ, ಶಾಂತಪ್ಪನತ್ತ ತಿರುಗಿ ಹೊಗೆಬಿಡುತ್ತಾ.

"ಏನೋ....ನನಗೆ ಹಾಗನ್ನಿಸ್ತು...." ಎಂದು ಶಾಂತಪ್ಪನೆಂದ. ಅವನಿಗೆ ಅಷ್ಟರಲ್ಲಿಯೇ ಗೋಪಾಲಯ್ಯನ ಬಗ್ಗೆ ಕೋಪವುಂಟಾಗಿದ್ದಿತು....ಗಣಿ ಕೆಲಸ ದಲ್ಲಿ ಸ್ವಲ್ಪ ಅನುಭವವಿದ್ದ ಮಾತ್ರಕ್ಕೆ ಈ ನಿರಕ್ಷರ ಕುಕ್ಷಿ ಪದವೀಧರನಾದ ತನ್ನನ್ನು ಕೈಕೆಳಗೆ ಕೊಡಿ, ಎಂದು ಕೇಳುತ್ತಾನಲ್ಲ....ಈ ಬೀಡಿ ಸೇದುವವ ನಿಗೆ ಎಷ್ಟು ಅಹಂಕಾರ....!

"ಹನ್ನೆರಡಾಯ್ತು....ಹೊರಡೋಣ?.." ಎನ್ನುತ್ತಾ ಸಾಹುಕಾರರೆದ್ದರು ಶಾಂತಪ್ಪನಿಗೆ ಹಸಿದ ಹೊಟ್ಟೆಯ ನೆನಪು ಹಿಂದಿರುಗಿ ಬಂದಿತು.

ಅವರೆಲ್ಲರೂ ಕಾರಿನಲ್ಲಿ ಕುಳಿತರು. ಸಾಹುಕಾರರು ಮತ್ತು ಅವರ ಹಿಂಬಾಲಕರ ಗುಂಪಿನಲ್ಲಿ ಶಾಂತಪ್ಪನಿಗೆ ಒಂದು ಕಾಲಿಡುವಷ್ಟು ಸ್ಥಳ ಕೂಡ ದೊರೆಯುವುದು ಕಾರಿನಲ್ಲಿ ದುಸ್ತರವಾಯಿತು.

ಅಂತೂ ಕಾರು ಹೊರಟಿತು. ಬೆಂಗಳೂರಿನ ರಸ್ತೆಗಳನ್ನೆಲ್ಲ ಸುತ್ತಿಕೊಂಡು ವಿಸ್ತರಣಗಳನ್ನು ದಾಟಿಕೊಂಡು ಮುಂದುವರೆಯಿತು.

ರಸ್ತೆಯಲ್ಲಿ ಕಾರು ಹೋಗುತ್ತಿರುವಾಗ, ಸಾಹುಕಾರರು ಮತ್ತಿತರರು ೨ ಂತಪ್ಪನ ಕುಲ ಗೋತ್ರಗಳನ್ನೆಲ್ಲ ಕೇಳಿದರು!

"ಮೊದಲು ಕೋಣಸಂದ್ರಕ್ಕೆ ಹೋಗಿ ಆಮೇಲೆ ಗಣಿಗೆ ಹೋಗೋಣ ಸಾರ್" ಎಂದ ಗೋಪಾಲಯ್ಯ.

"ಹೂ....ಹಾಗೇ ಆಗಲಿ. ಮೊನ್ನೆ ಸ್ಯಾಂಪಲ್ ಎತ್ತಿದ ಲಾಟುಗಳ ನ್ನೆಲ್ಲ ನೋಡಿಕೊಂಡು ಬಂದ ಹಾಗೂ ಆಗುತ್ತೆ" ಎಂದರು ಸಾಹುಕಾರರು.

ಕರಿ ರಸ್ತೆಯಲ್ಲಿ ತೇಲಿ ಹೋಗುತ್ತಿದ್ದಿತು, ಆ ಬ್ಯೂಕ್ ಕಾರು. ಅದರ ಶಬ್ದ ಕೇಳಿದ ದನಕರುಗಳು ರಸ್ತೆಯಿಂದ ಹೆದರಿ ಓಡಿಹೋಗುತ್ತಿದ್ದುವು. ಹೊಸದಾಗಿ ಮೂಕಿಯ ಬದಿಗೆ ಕತ್ತನ್ನಿತ್ತ ಎತ್ತುಗಳು ಬೆದರಿ ರಸ್ತೆಯಿಂದ ಹಳ್ಳದ ಕಡೆಗೆ ಹಾರುತ್ತಿದ್ದುವು. ಕಷ್ಟಪಟ್ಟು ಹಗ್ಗವನ್ನೆಳೆದು ಹಿಡಿದು ಕೊಂಡಿದ್ದ ಗಾಡಿಯವನು ರೇಗುತ್ತಿದ್ದ.

"ಲೌಡಿ ಮಗ ಎಷ್ಟು ಜೋರಾಗಿ ಓಗ್ತಾನೆ. ವಸಿ ಮೆತ್ಕೆ ಓದ್ರೆ ಇವನ ಸಮ್ರಾಜ ಏನು ಓಡಿ ಓಗ್ತೈತೆ" ಎಂದು. ಇದನ್ನು ಕೇಳಿದ ಕಾರಿನೊಳಗಿದ ವರೆಲ್ಲ ಖೊಳ್ಳನೆ ನಗುತ್ತಿದ್ದರು.

ಕೊನೆಗೆ, ಅದಿರು ಹೊತ್ತ ಲಾರಿಗಳು ಎದುರು ಬಂದು ಹಾದು ಹೋಗ ತೊಡಗಿದುವು. ಅವುಗಳಿಂದ ಬಂದ ಕಪ್ಪು ಧೂಳು ಕಾರಿನ ಒಳಕ್ಕೆ ಭರ್ರನೆ ಬೀಸಿ ಬರುತ್ತಿದ್ದಿತು. ರಸ್ತೆಯುದ್ದಕ್ಕೂ ಲಾರಿಯಿಂದ ಉದುರಿದ್ದ ಅದಿರಿನ ಚೂರುಗಳು ಬಿದ್ದಿದ್ದುವು. ಭಾರವಾದ ಲಾರಿಗಳು ಓಡಾಡಿ ಸವೆದಿದ್ದ ಆ ರಸ್ತೆಯು, ತನ್ನ ಮೇಲೆ ವಾಹನ ಸಂಚಾರವೆಷ್ಟಿದೆಯೆಂದೂ, ತಾನು ಇಷ್ಟೊಂದು ಸವೆದಿದ್ದರೂ ತನ್ನ ಕಡೆ ಅನೇಕ ವರ್ಷಗಳಿಂದ ಸರ್ಕಾರದ ಗಮನ ಬಿದ್ದಿಲ್ಲವೆಂದೂ ಹೇಳುತ್ತಿದ್ದಿತು. ರಸ್ತೆಯ ರಿಪೇರಿಗಾಗಿ ಎಂದು ತಂದು ಹಾಕಲಾಗಿದ್ದ ಬೆಣಚು ಕಲ್ಲಿನ ರಾಶಿಗಳು ರಸ್ತೆಯ ಇಕ್ಕೆಲದಲ್ಲೂ ಇದ್ದುವು. ಹಲವಾರು ತಿಂಗಳಿಂದ ಅವು ಅದೇ ರಸ್ತೆಯಲ್ಲಿಯೇ ಇದ್ದುಕೊಂಡು ಆಗಾಗ್ಗೆ ಸ್ಥಳ ಬದಲಾಯಿಸುತ್ತಾ ಹೊಸ ರಾಶಿಯಾಗಿ ಕಾಣಿಸಿಕೊಳ್ಳುತ್ತಿದ್ದುವಷ್ಟೆ!

ಕೆಲವು ಲಾರಿಗಳ ಡ್ರೈವರುಗಳು ಸಾಹುಕಾರರಿಗೆ ವಂದಿಸಿ ಮುಂದೆ ಹೋಗುತ್ತಿದ್ದರು. ಒಂದೆರಡು ಲಾರಿಗಳು ಸಾಹುಕಾರರ ಕಾರನ್ನು ನೋಡಿ ನಿಂತುವು.

"ಏನಯ್ಯ....ಎಲ್ಲಿಂದ ತಂದೆ ಕಲ್ಲು?" ಎಂದು ಸಾಹುಕಾರರು ಕೇಳುತ್ತಿದ್ದರು.

"ಏಳುಹೆಡೆ ಗುಡ್ಡದಿಂದ ಸಾರ್" ಎಂದೋ, "ಲಕ್ಷ್ಮೀ ಗುಡ್ಡದಿಂದ ಸಾರ್" ಎಂದೋಲಾರಿಯಿಂದಿಳಿದು ಬಂದ ಡ್ರೈವರುಗಳು ಹೇಳುತ್ತಿದ್ದರು.

"ಎಲ್ಲಿ ಒಂದೆರಡು ಕಲ್ಲು ಕೊಡು ನೋಡೋಣ," ಸಾಹುಕಾರರೆಂದಾಗ ಡ್ರೈವರನು ಹಿಂಭಾಗದ 'ತೊಟ್ಟಿ'ಯೊಳಕ್ಕೆ ಕೈಹಾಕಿ ಮ್ಯಾಂಗನೀಸ್ ಅಥವ ಕಬ್ಬಿಣದ ಅದಿರಿನ ಒಂದೆರಡು ಚೂರುಗಳನ್ನು ಕೊಡುತ್ತಿದ್ದ. ಅದನ್ನು ಕೈಗೆ ತೆಗೆದುಕೊಂಡು ನೋಡಿ ಪುನಃ ಡ್ರೈವರನ ಕೈಗೆ ಕೊಡುತ್ತಿದ್ದರು.

ಒಂದು ಬಾರಿ ಸಾಹುಕಾರರು ಶಾಂತಪ್ಪನ ಕೈಗೆ ಒಂದು ಅದಿರಿನ ಚೂರನ್ನು ಕೊಟ್ಟು "ನೋಡ್ರಿ ಶಾಂತಪ್ಪ ಇದು ಹೇಗಿದೆ" ಎಂದರು.

ಶಾಂತಪ್ಪ ಅದನ್ನು ಕೈಗೆ ತೆಗೆದುಕೊಂಡು ನೋಡಿದ ನಂತರ, ತನಗೆ ಸ್ಪಷ್ಟವಾಗಿ ತಿಳಿಯದಿದ್ದರೂ ಸಹ ಹೇಳಿದ,

"ಪರವಾಗಿಲ್ಲ ಸಾರ್....ಸುಮಾರು ಶೇಕಡ ನಲವತ್ತುನಾಲ್ಕು ಬರ ಬಹುದು."

"ಸಧ್ಯ !....ಅಷ್ಟು ಬಂದರೆ ಸಾಕು."

ಕಾರು ಕೋಣಸಂದ್ರದ ಹತ್ತಿರ ಹತ್ತಿರ ಬಂದಂತೆ, ರಸ್ತೆಯ ಮಣ್ಣೆಲ್ಲವೂ ಕಪ್ಪು ಬಣ್ಣವಾಗಿದ್ದುದು, ಲಾರಿಗಳು ಕರಿ ಧೂಳನ್ನೆಬ್ಬಿಸುತ್ತಾ ಹಾದು ಹೋಗುತ್ತಿದ್ದುದು ಶಾಂತಪ್ಪನ ದೃಷ್ಟಿಗೆ ಬೀಳುತ್ತಿದ್ದುವು. ರಸ್ತೆಯ ಇಕ್ಕೆಲಗಳಲ್ಲಿದ್ದ ನೀರು ನಿಂತ ಹಳ್ಳಗಳಲ್ಲಿಯೂ, ಕೆರೆಗಳಲ್ಲಿಯೂ ಕೆಲಸಗಾರರು ಮ್ಯಾಂಗನೀಸ್ ಅದಿರನ್ನು ತೊಳೆಯುತ್ತಿದ್ದರು. ಲಾರಿಗಳು ತುಂಬಿಕೊಂಡು ತಂದು ಚೆಲ್ಲಿಹೋದ ಅದಿರನ್ನು ಕುಕ್ಕೆಗಳಲ್ಲಿ ತುಂಬಿ, ಸುತ್ತಮುತ್ತಲಿನ ಹಳ್ಳ, ಕೆರೆಗಳ ನೀರಿನಲ್ಲಿ ಅದ್ದಿ ತೊಳೆದು ಪುನಃ ನೆಲದ ಮೇಲೆ ಚೆಲ್ಲುತಿದ್ದರು. ಹಾಗೆ ಶುಭ್ರಗೊಳಿಸಿದ ಅದಿರಿನ ರಾಶಿಯನ್ನು ಪುನಃ ಲಾರಿಗಳಲ್ಲಿ ತುಂಬಿ ರೈಲ್ವೆ ನಿಲ್ದಾಣದ ಬಳಿಗೆ ಕಳುಹಿಸುತಿದ್ದರು.

"ಏನ್ರೀ ಮಿಸ್ಟರ್ ಶಾಂತಪ್ಪ. ಅದಿರನ್ನ ಹೀಗೆ ತೊಳೆಸೋದರಿಂದ ಮಣ್ಣು, ಸಿಲಿಕಾ (Silica or Quartz) ಏನಾದ್ರೂ ಕಮ್ಮಿ ಆಗುತ್ತೇನ್ರಿ?" ಎಂದು ಸಾಹುಕಾರರು ಕೇಳಿದರು.

"ಮಣ್ಣು, ಬೆಣಚುಕಲ್ಲು ಮರಳು ಕಡಿಮೆಯೇನೋ ಆಗುತ್ತೆ ಸಾರ್ ಆದ್ರೆ ಅದರ ಜೊತೇಲೇನೆ ಮ್ಯಾಂಗನೀಸೂ ಸಹ ಹೋಗಿಬಿಡುತ್ತೆ" ಎಂದು ಶಾಂತಪ್ಪನೆಂದ.

"ಏನು ಸಾರ್ ನೀವು ಹೀಗೆ ಹೇಳ್ತೀರಿ ?....ಸಿಲಿಕಾ, ಮಣ್ಣು ಮಾತ್ರ ಕಮ್ಮಿಯಾಗುತ್ಯೇ ಹೊರ್ತು ಮ್ಯಾಂಗನೀಸ್ ಎಲ್ಲಿ ಕಮ್ಮಿಯಾಗುತ್ತೆ?" ಎಂದು ತಕ್ಷಣ ಗೋಪಾಲಯ್ಯ ಕೇಳಿದ.

"ಹೌದ್ರೀ....ನಾನು ಹೇಳಿದ್ದು ನಿಜ. ಇಲ್ಲಿ ತೋಳೀತಿರೋ ಮ್ಯಾಂಗನೀಸ್ ಅದಿರು ಮರಳಿನ ಹಾಗೇನೇ ಸಡಿಲವಾಗಿರುತ್ತೆ. ನೀರಿನಲ್ಲಿ ಆಡಿಸೋವಾಗ ಅದೂ ಬಿದ್ದುಹೋಗುತ್ತೆ" ಎಂದು ಖಡಾ ಖಂಡಿತವಾಗಿ ಶಾಂತಪ್ಪ ಹೇಳಿದ ಮಾತು ಕೇಳಿ ಗೋಪಾಲಯ್ಯ,

"ನಿಮಗೆ ಇನ್ನೂ ಅನುಭವ ಸಾಲ್ದು ಸಾರ್...." ಎಂದ.

ಸಾಹುಕಾರರು ನಗುತ್ತಾ ಸುಮ್ಮನಿದ್ದರು.

ಕೋಣಸಂದ್ರದ ರೈಲ್ವೆ ನಿಲ್ದಾಣದ ಬಳಿ ಅವರು ಬಂದಾಗ ಮಧ್ಯಾಹ್ನ ಮೂರುವರೆ ಗಂಟೆಯಾಗಿತ್ತು. ಶಾಂತಪ್ಪನಿಗೆ ಹಸಿವು ಬಾಧಿಸುತಿತ್ತು.

"ಮೊದಲು ಏನಾದ್ರೂ ಸ್ವಲ್ಪ ತಿಂಡಿ ಬಿಡೋಣೇನ್ರಿ ?" ಎಂದು ಸಾಹುಕಾರರೆಂದಾಗ ಶಾಂತಪ್ಪನಿಗೆ ಮನಸ್ಸಿನಲ್ಲಿ ಸಂತೋಷವಾಯ್ತು.

"ಬೇಡಿ ಸಾರ್!....ಮೊದಲು ಮ್ಯಾಂಗನೀಸ್ ಲಾಟು ನೋಡಿಕೊಂಡು ಬಂದುಬಿಡೋಣ. ಆಮೇಲೆ ಒಂದೇ ಸಲ ಊಟಮಾಡಿಬಿಡೋಣ," ಎಂದ ಗೋಪಾಲಯ್ಯ.

"ಹೂ....ಅದೂ ಸರೀನೆ"

ಶಾಂತಪ್ಪ ಗೋಪಾಲಯ್ಯನನ್ನು ಮನಸ್ಸಿನಲ್ಲಿಯೇ ಶಪಿಸಿಕೊಂಡು ಮುಂದೆ ನಡೆದ. ನಿಲ್ದಾಣದ ಪಕ್ಕದ ಬಯಲಿನಲ್ಲಿ ಮ್ಯಾಂಗನೀಸ್ ಅದಿರಿನ ನೂರಾರು ರಾಶಿಗಳಿದ್ದುವು. ಹಲವಾರು ಮಾಲೀಕರ ಮತ್ತು ಕಂಪೆನಿಗಳ ಹೆಸರಿನ ಬೋರ್ಡುಗಳನ್ನು ಅಲ್ಲಲ್ಲಿ ನೆಟ್ಟಿದ್ದರು. ಸಹಸ್ರಾರು ಮಂದಿ ಕೂಲಿಯಾಳುಗಳು ಅಶುದ್ಧವಾದ ಅದಿರಿನ ರಾಶಿಯನ್ನು ಜರಡಿಯಾಡಿಸುತ್ತ, ಮಣ್ಣಿನ ಹೆಂಟೆಗಳು, ಬೆಣಚು ಕಲ್ಲು ಚೂರುಗಳನ್ನು ಆರಿಸುತ್ತಲೂ ಕುಳಿತಿದ್ದರು. ಕೆಲವರು ಆಗಲೇ ಕಟ್ಟಲ್ಪಟ್ಟಿದ್ದ ರಾಶಿಗಳ ಮೇಲೆ ಹೊಸಹೊಸದಾಗಿ ಲಾರಿಯಿಂದ ಅದಿರನ್ನು ಬಾಣಲೆಗಳಲ್ಲಿ ತುಂಬಿಕೊಂಡು ತಂದು ಬಾಣಲೆಗಳನ್ನು ಜರ್ರನೆ ತಿರುಗಿಸಿ ಒಗೆಯುತ್ತಿದ್ದರು. ಹಾಗೆ ಮಾಡುವುದರಿಂದ ಅದಿರಿನಲ್ಲಿದ್ದ ಮಣ್ಣು, ಧೂಳುಗಳು ತುಯ್ದುಕೊಂಡು ಹೋಗುತ್ತಿದ್ದುವು. ರೈಲ್ವೆ ಕಂಬಿಗಳ ಮೇಲೆ ಬಾಯ್ದೆರೆದುಕೊಂಡು ನಿಂತಿದ್ದ ವಾಗೀನುಗಳಿಗೆ, ಹಲವರು ಅದಿರನ್ನು ತುಂಬುತ್ತಿದ್ದರು,

ಶಾಂತಪ್ಪ ತನ್ನ ಸಾಹುಕಾರರ ಅದಿರು ಸುರಿಯಲ್ಪಟ್ಟಿದ್ದ ಸ್ಥಳಕ್ಕೆ ಹೋಗಿ ನಿಂತುಕೊಂಡ. ವಿಸ್ತಾರವಾದ ಸ್ಥಳದಲ್ಲಿ ದೊಡ್ಡದಾದೊಂದು [illegible]ವಾದ ರಾಶಿಯನ್ನು ನಿರ್ಮಿಸಿದ್ದರು. ಅದರ ಉದ್ದಗಲ ಎತ್ತರ [illegible]ನೋಡಿ ಸುಮಾರು ಐದು ನೂರು ಟನ್ನುಗಳಿರಬೇಕೆಂದುಕೊಂಡ [illegible]ಾಂತಪ್ಪ! ಆ ರಾಶಿಯಲ್ಲಿ ಮಧ್ಯೆ ಉದ್ದಕ್ಕೂ ಹಳ್ಳಗಳನ್ನು ತೋಡಿ ಅದರೊಳಗೆ, ಮಧ್ಯದಲ್ಲಿ ಮ್ಯಾಂಗನೀಸ್ ಅದಿರಿನ ಕೆಲವು ತುಣುಕುಗಳನ್ನು ತೆಗೆದುಕೊಂಡು, ಅವುಗಳನ್ನು ಪುಡಿಮಾಡಿ ಡಬ್ಬಗಳಲ್ಲಿ ತುಂಬಿ, ಮ್ಯಾಂಗನೀಸಿನ ಅಂಶವನ್ನು ತಿಳಿಯಲು ಪ್ರಯೋಗಶಾಲೆಗೆ ಕಳುಹಿಸುತಿದ್ದರು. ಇದರಿಂದ ಅಲ್ಲಿದ್ದ ಸರಾಸರಿ ಮ್ಯಾಂಗನೀಸಿನ ಅಂಶ ತಿಳಿಯುತಿದ್ದಿತು. ಇದರ ಮೇಲೆಯೇ ಆ ಅದಿರಿನ ಬೆಲೆಯೂ ನಿರ್ಧರಿಸಲ್ಪಡುತಿದ್ದಿತು. ಅದಕ್ಕೇ 'ಸ್ಯಾಂಪ್ಲಿಂಗ್' ಎನ್ನುತಿದ್ದರು.

"ಇದು ಎಷ್ಟು ಟನ್ ಇದೆ?" ಸಾಹುಕಾರರು ಕೇಳಿದರು.

"ಆರು ನೂರು ಟನ್ ಇದೆ" ಎಂದರು ಅಲ್ಲಿಯೇ ನಿಂತಿದ್ದವರೊಬ್ಬರು.

"ಏನ್ರೀ ಗೋಪಾಲಯ್ಯ....ಇದನ್ನ ವ್ಯಾಗೀನಿಗೆ ತುಂಬಿಸಿಬಿಡೋಣವೋ ಅಥವ ಇದರ ಯೋಗ್ಯತೆ ತಿಳಿದ ಮೇಲೇ ಕಳಿಸೋಣವೋ?" ಸಾಹುಕಾರರೆಂದರು.

"ಪರವಾಗಿಲ್ಲ ಸಾರ್.....ಕಳಿಸಿಬಿಡಬೌದು. ಹೇಗಿದ್ದರೂ ಐವತ್ತು ಪರ್ಸೆಂಟು ಬರುತ್ತೆ." ಎಂದ ಗೋಪಾಲಯ್ಯನ ಮಾತು ಕೇಳಿ ಸಾಹುಕಾರರು ಹಸನ್ಮುಖಿಯಾದರು.

"ನಮ್ಮ ಜೀಯಾಜಲಿಸ್ಟು ನಲವತ್ತೆರಡು ಬರುತ್ತೇಂತಾರಲ್ರಿ?" ಸಾಹುಕಾರರ ಮಾತು ಕೇಳಿ ಗೋಪಾಲಯ್ಯ ತಾತ್ಸಾರದಿಂದ ಹೇಳಿದ,

"ಅವರಿಗಿನ್ನೂ ಅನುಭವ ಸಾಲ್ದು ಸಾರ್....ಇನ್ನೊಂದು ಆರು ತಿಂಗಳ ನನ್ನ ಕೈಕೆಳಗೆ ಅನುಭವವಾಗ್ಲೀ ನನ್ನೇ ಮೀರಿಸಿಬಿಡ್ತಾರೆ."

"ಯಾರು ಸಾರ್ ಜಿಯಾಜಲಿಸ್ಟು?" ಅಲ್ಲಿ ನಿಂತಿದ್ದವರೊಬ್ಬರು ಕೇಳಿದರು. ಅವರು ಕೋಣಸಂದ್ರದಲ್ಲೇ ಮೊದಲು ಕಾಣಿಸಿದ್ದುದು ಶಾಂತಪ್ಪನಿಗೆ.

"ಓ!....ಮರೆತೇಬಿಟ್ಟೆ ಪರಿಚಯ ಮಾಡಿಸೋಕೆ....ಇವರೇ ನಮ್ಮ ಕಂಪೆನಿಗೆ ಹೊಸ ಜೀಯಾಲಜಿಸ್ಟು. ಶಾಂತಪ್ಪ ಇವರ ಹೆಸರು. ಬಿ.ಎಸ್ಸಿ ಆನರ್ಸ್ಸು ಪಾಸು ಮಾಡಿದಾರೆ....ನಮ್ಮ ಮೂರು ಗಣೀಗೂ ಇವರೇ ಮೇನೇ-

ಜರೂ ಸಹ. ನೋಡ್ರೀ ಮಿಸ್ಟರ್ ಶಾಂತಪ್ಪ. ಇವರು ಸುಬ್ಬಣ್ಣನವರೂಂತ.... ನಮ್ಮ ಕೋಣಸಂದ್ರ ಆಫೀಸಿಗೆ ಮೇನೇಜರು....ಮೊದಲು ರಾಮನಾಯ್ಕನ ಹಳ್ಳಿ ಗಣೀಗೂ ಇವರೇ ಮೇನೇಜರಾಗಿದ್ರು...ಇವರನ್ನ ಕೇಳಿ ಏನು ಬೇಕಾ ದ್ರೂ ತಿಳಿಸುತ್ತಾರೆ," ಸಾಹುಕಾರರೆಂದಾಗ ಶಾಂತಪ್ಪ ಸುಬ್ಬಣ್ಣನವರು ಪರಸ್ಪರ ವಂದಿಸಿದರು.

ಶಾಂತಪ್ಪನಿಗೆ ಅಲ್ಲಿಯೇ ಹಲವಾರು ಗಣಿ ಮಾಲೀಕರ ಪರಿಚಯ ವಾಯಿತು. ಸಾಹುಕಾರರು ಅಲ್ಲಿ ಎಲ್ಲರಿಂದಲೂ ಗೌರವ ಪಡೆಯುತ್ತಿದ್ದ ವ್ಯಕ್ತಿಯಾಗಿದ್ದರೆಂದು, ಅಲ್ಲಿನವರ ಮಾತುಕತೆಗಳಿಂದ ಶಾಂತಪ್ಪ ತಿಳಿದು ಕೊಂಡ.

ಆದರೆ ಅದೇಕೋ, ತನ್ನ ಕಂಪೆನಿಯ ಜನರು, ಯಾವುದೋ ಒಂದು ತಾತ್ಸಾರ, ಕುಹಕದ ದೃಷ್ಟಿಯಲ್ಲಿ ತನ್ನನ್ನು ನೋಡುತ್ತಿದ್ದರೆಂಬುದನ್ನು ಶಾಂತಪ್ಪ ಗಮನಿಸದಿರಲಿಲ್ಲ.

ಒಂದು ಗಂಟೆಯ ಕಾಲ ಎಲ್ಲವನ್ನೂ ಪರಿಶೀಲಿಸಿದ ನಂತರ ಸಾಹುಕಾರರು ಹೋಟೇಲಿನಿಂದ ಊಟ ತರಲು ಹೇಳಿ ಕಳುಹಿಸಿ, ಅಲ್ಲಿದ್ದ ತಮ್ಮ ಕಂಪೆನಿಯ ಆಫೀಸಿಗೆ ಎಲ್ಲರನ್ನೂ ಕರೆದೊಯ್ದರು.

"ನಾಲ್ಕು ಗಂಟೆ ಆಗಿಹೋಗಿದೆ ಸಾರ್.. ಈಗ ಊಟವಿಲ್ಲ....ಬಿಸಿಬಿಸಿ ಇಡ್ಲಿ ಮಾಡಿದೆ ಅಷ್ಟೆ ಈಗ...." ಎಂದು ಹೋಟೇಲು ಮಾಣಿ ಬಂದು ತಿಳಿಸಿದ.

"ಊಟ ಇಲ್ವ....ಹೋಗ್ಲಿ ಇಡ್ಲೀನೇ ತೆಗೆದ್ಕೊಂಡು ಬಾ..." ಎಂದರು ಸಾಹುಕಾರರು.

ಎಲ್ಲರೂ ಇಡ್ಲಿಗಳನ್ನು ತೆಗೆದುಕೊಂಡರು. ಅದೇ ಅಂದಿನ ಊಟ ವಾಯ್ತು. ಬೆಳಗಿನಿಂದಲೂ, ಸಾಹುಕಾರರು ಅವರ ಹಿಂಬಾಲಕರು ಇವರ ನಡೆನುಡಿಗಳಲ್ಲಿಯೇ ಮುಳುಗಿ ಬೇಸರಗೊಂಡಿದ್ದ ಶಾಂತಪ್ಪನಿಗೆ ಒಮ್ಮೆ ಹೊರಗೆ ಹೋಗಿ ಒಬ್ಬನೇ ಒಂದೆಡೆ ಕುಳಿತುಕೊಳ್ಳಬೇಕೆನಿಸಿತ್ತು. ಅದಕ್ಕೆ ತಕ್ಕಂತೆ ಸಾಹುಕಾರರು ಆಫೀಸಿನ ಒಳಕೋಣೆಯಲ್ಲಿ ತಮ್ಮ ಹಾಸಿಗೆಯನ್ನು ಹಾಕುವಂತೆ ಆಳೊಬ್ಬನಿಗೆ ಅಪ್ಪಣೆ ಮಾಡಿದರು.

ಆಳು ಹಾಸಿಗೆ ಹಾಸಲು ಕೋಣೆಗೆ ಹೋದ. ಶಾಂತಪ್ಪನೆದ್ದು ಹೊರ ಹೊರಟ. ಉಳಿದವರೆಲ್ಲರೂ ಅಲ್ಲಿಯೇ ಕುಳಿತಿದ್ದರು. ಗಣಿ, ಅದಿರು, ಸಾಹುಕಾರರ ಗುಣಗಾನದಲ್ಲಿಯೇ ತಲ್ಲೀನವಾಗಿದ್ದ ಆ ಬಳಗವನ್ನು ಕಂಡು

ಶಾಂತಪ್ಪನಿಗೆ ಮನದಲ್ಲಿಯೇ ನಗು ಬಂದಿತು. ಅವನು ಹಾಗೆಯೇ ಹೊರ ಹೊರಟ. ಹೊರಗೆ ಅದರಿನ ರಾಶಿಯ ಬಳಿ ಕೆಲಸ ಮಾಡುತ್ತಿದ್ದ ಆಳು ಗಳನ್ನು ನೋಡಿದ; ಕಪ್ಪು ಬಣ್ಣವನ್ನು ಪೈಕೈಗೆಲ್ಲಾ ತುಂಬಿಕೊಂಡು, ತಲೆ ಮೇಲೆಲ್ಲಾ ಧೂಳು ತುಂಬಿಕೊಂಡು ನಿಂತಿದ್ದ ಆ ಹೆಣ್ಣಾಳು ಗಂಡಾಳ್ಳು ಗಳು ಕೆಲವರು ಕಲ್ಲು ಮಣ್ಣು ಆರಿಸುತ್ತಿದ್ದರು, ಕೆಲವರು ಗುದ್ದಲಿಗಳಲ್ಲಿ, ಅದಿರನ್ನೆಳೆದು ಬಾಣಲೆಗಳಿಗೆ ತುಂಬಿ ಕೊಡುತ್ತಿದ್ದರು. ಹಾಗೆ ತುಂಬಿದ ಬಾಣಲೆಗಳು ನಾಟ್ಕ್ಯವನ್ನು ಕರಗದಂತೆ, ಒಂದರ ಮೇಲೊಂದನ್ನು ತಲೆಯ ಮೇಲಿಟ್ಟುಕೊಂಡು ಹೋಗಿ ಕಂಬಿಯ ಮೇಲೆ ನಿಂತಿದ್ದ ವಾಗೀನುಗಳಿಗೆ ತುಂಬುತ್ತಿದ್ದರು. ಯವ್ವನಸ್ತರಾದ ಹೆಣ್ಣು ಗಂಡಾಳುಗಳು ತಮ್ಮಲ್ಲೇ ಸರಸಸಲ್ಲಾಪವಾಡಿಕೊಂಡು ನಗುತ್ತಿದ್ದವರು ಶಾಂತಪ್ಪ ಬಂದುದನ್ನು ಗಮನಿಸಿ ಗಂಭೀರರಾದರು. ಶಾಂತಪ್ಪ ಒಂದು ರಾಶಿಯ ಬಳಿಗೆ ಹೋಗುತ್ತಲೇ ಅಲ್ಲಿದ್ದ ಮೇಸ್ತ್ರಿಯು ಮುಂದೆ ಬಂದು,

"ನಮಸ್ಕಾರ್ ಸಾರ್...."ಎಂದು ವಂದಿಸಿದ.

"ನಮಸ್ಕಾರ....ನೀನು ಯಾರಪ್ಪ ?"

"ನಾನು ಇಲ್ಲಿ ಮೇಸ್ತ್ರಿ ಸಾರ್, ನನ್ನ ಎಸ್ರು ತಿಮ್ಮಯ್ಯ....ಇವೇ ನಮ್ಮ ಲಾಟುಗಳು, ಇದು ಮೊನ್ನೆ ಸಾಂಪಲ್ ಎತ್ತಿದ ಲಾಟು..." ಎಂದ ತಿಮ್ಮಯ್ಯ.

"ಸರಿ... ಎಲ್ಲ ನೋಡಿದೆ ಮಧ್ಯಾಹ್ನವೇ...."

"....ತಾವು ನಾಳೆ ಓಗ್ತೀರಾ ಸಾರ್ ಗಣೀಗೆ ?"

"ಯಾಕಪ್ಪ ?" ಶಾಂತಪ್ಪ ಅಚ್ಚರಿಯಿಂದ ಕೇಳಿದ.

"ತಾವು ನಮ್ಮ ಕಂಪೆನಿಗೆ ಜೀಲಾಜಿಯೋರಂತೆ....ಗಣಿ ಮ್ಯಾನೇಜ್ರಂತೆ ?"

ಆಗಲೇ ಶಾಂತಪ್ಪನ ವಿಷಯ ಕೆಲಸಗಾರರಲ್ಲಿ ಹರಡಿಹೋಗಿತ್ತು.

"ಹೌದಪ್ಪ...ಸಾಹುಕಾರರು ಯಾವಾಗ ಹೇಳಿದರೆ ಆಗ ಹೋಗ್ತೀನೆ," ಎಂದು ಶಾಂತಪ್ಪ ಅಲ್ಲೀ ಸುರಿದಿದ್ದ ರಾಶಿಗಳನ್ನು ನೋಡುತ್ತಾ ಮುಂದೆ ಹೋದ.

ಅಲ್ಲಿ ಅವನು ಕಂಡ ಗಣಿ ಮಾಲೀಕರೆಲ್ಲರೂ ತಮಿಳು, ತೆಲುಗು, ಹಿಂದಿ, ಮಾತನಾಡುವವರೇ ಆಗಿದ್ದರು. ಒಬ್ಬಿಬ್ಬರು ಮಾತ್ರ ಅಲ್ಲಿ ಕನ್ನಡ ಮಾತನಾಡುವವರಿದ್ದರಷ್ಟೆ. ಓಡಾಡುತ್ತಿದ್ದ ಶಾಂತಪ್ಪನಿಗೆ ಗಣಿಗಳ ವಿಷಯದ

ನೆನಪಾಯ್ತು. ಬ್ರೆಸಿಲ್ ದೇಶದಲ್ಲಿದ್ದ ಮ್ಯಾಂಗನೀಸ್ ಗಣಿಗಳ ವಿಷಯ ವನ್ನೋದಿದ್ದ. ರಷ್ಯಾದಲ್ಲಿದ್ದ ಚಿಯಾತು ಮ್ಯಾಂಗನೀಸ್ ಗಣಿಗಳ ವಿಷಯವ ನ್ನೋದಿದ್ದ. ಅಲ್ಲಿನ ಯಾಂತ್ರೀಕೃತ ಗಣಿಗಳ ಚಿತ್ರಗಳನ್ನು ನೋಡಿದ್ದ. ಗಣಿಗಳೆಂದರೆ ಸುರಂಗಗಳನ್ನು ಕೊರೆದು, ಯಂತ್ರದ ಮೂಲಕ ಅದಿರನ್ನು ಸಾಗಿಸುವ ಯಾಂತ್ರಿಕೃತ ಕೈಗಾರಿಕೆಯದು; ಅಂತಹ ಕೈಗಾರಿಕೆಯೊಂದಕ್ಕೆ ತಾನು ಮೇನೇಜರು ಎಂದು ಶಾಂತಪ್ಪನಿಗೆ ಹರುಷವಾಗಿತ್ತು.

"ನಮಸ್ಕಾರ ಸಾರ್...."

ಶಾಂತಪ್ಪ ತಲೆಯೆತ್ತಿ ನೋಡಿದ್ದ. ಎದುರಿಗೆ ಸಿಂಪಂತನೆನ್ನಬಹು ದಾದಂತಹವನೊಬ್ಬನು ನಿಂತಿದ್ದ. ಆದರವನು ಶಾಂತಪ್ಪನಿಗೆ ಅಪರಿಚಿತ.

"ನಮಸ್ಕಾರ...ತಾವು ಯಾರು ತಿಳಿಯಲಿಲ್ಲ!" ಶಾಂತಪ್ಪ ಉತ್ತರವಿತ್ತ.

"ನಾನು ಇಲ್ಲಿಯೇ ಒಬ್ಬ ಗಣಿ ಮಾಲೀಕ ಸ್ವಾಮಿ.....ತಾವು ನಮ್ಮ ಸಾಹುಕಾರರ ಹತ್ತಿರ ಹೊಸದಾಗಿ ಸೇರಿದ್ದೀರಂತೆ..."

ವಿಷಯಗಳು ಎಷ್ಟುಬೇಗ ಹರಡಿಬಿಡುತ್ತೆ ಈ ಕೋಣಸಂದ್ರದಲ್ಲಿ!

"ಹೌದು...ಹೌದು...ತಮ್ಮ ಪರಿಚಯವಾದದ್ದು ಸಂತೋಷ....ತಮ್ಮ ಹೆಸರು?"

"ನನ್ನ ಹೆಸರು ಭೋಜರಾವ್ ಅಂತ.... ...ನಿಮ್ಮ ಹತ್ತಿರ ಮಾತನಾಡ ಬೇಕಾಗಿತ್ತು........ಬನ್ನಿ ಒಂದು ನಿಮಿಷ ಇಲ್ಲೇ ಕಾಫಿ ತೆಗೆದುಕೊಂಡು ಮಾತನಾಡೋಣ...." ಭೋಜರಾವ್ ಹೇಳಿದ ಈ ಮಾತುಗಳನ್ನು ಕೇಳಿ ಶಾಂತಪ್ಪನಿಗೆ ಕುತೂಹಲವಾಯ್ತು.

ಅವರಿಬ್ಬರೂ ಹೋಟೆಲಿಗೆ ಹೋಗಿ ಕುಳಿತರು. ಕಾಫಿಗೆ ಹೇಳಿಯೂ ಆಯ್ತು.

"ನೋಡಿ....ನನಗೂ ಒಬ್ಬರು ಜೀಯಲಜಿಸ್ಟು ಬೇಕಾಗಿದ್ದರು.... ನಾನೂ ಸಹ ನಿಮ್ಮಂತಹ ಸಭ್ಯರೊಬ್ಬರನ್ನು ಹುಡುಕ್ತಾ ಇದ್ದೆ....."

"ಓ!....ಹಾಗೇನು?"

ತನಗೆ ಮೊದಲೇ ಈ ಗಣಿಗಳ ವಿಷಯ ತಿಳಿದಿದ್ದರೆ ಈ ಒಂದು ವರ್ಷವೂ ನಿರುದ್ಯೋಗಿಯಾಗಿರುವುದು ತಪ್ಪುತ್ತಿತ್ತು. ಆದರೆ ಒಂದು ವರ್ಷ ತನ್ನನ್ನು ದುರದೃಷ್ಟ ಕಾಡಿಸಿತ್ತು; ಎಲ್ಲವೂ ವಿಸ್ಮಯಕರವಾಗಿದೆ.

"ನೋಡಿ ಈಗಲೂ....ನೀವು ಬರೋದಾದ್ರೆ....ನಿಮಗೆ ಈಗ ಎಷ್ಟು

ಸಂಬಳ ಕೊಡ್ತಾರೋ ಅಷ್ಟೇ ನಾನೂ ಕೊಡ್ತೀನಿ....ಇಲ್ದಿದ್ರೆ ಇನ್ನು ಹತ್ತು ರೂಪಾಯಿ ಹೆಚ್ಚಾಗಿ ಕೊಡ್ತೀನಿ....ಬರೋದಾದ್ರೆ ಹೇಳಿ...."

ಭೋಜರಾವ್ ನುಡಿದ ಈ ಮಾತುಗಳನ್ನು ಕೇಳಿ ಶಾಂತಪ್ಪನಿಗೆ ಮುಳ್ಳು ಚುಚ್ಚಿದಂತಾಯಿತು. ಇದೆಂತಹ ಪ್ರೈಸ್ಪೋಟ....ತಾನು ಒಬ್ಬರ ಬಳಿ ಉದ್ಯೋಗಕ್ಕೆ ಸೇರಿರುವನೆಂಬುದು ತಿಳಿದಿದೆ, ಅದೂ ಸಹ ಒಂದೇ ಒಂದು ದಿನವಾಗಿದೆ ಬಂದು....ತನ್ನನ್ನು ಹೀಗೆ ನೌಕರಿಗೆ ಕರೆಯುತ್ತಿರುವನಲ್ಲ ಈ ಮಾಲೀಕ....ಇದೆಂತಹ ನಡತೆ? ಈ ರೀತಿ ಬೇರೊಬ್ಬರ ನೌಕರನನ್ನು ರಹಸ್ಯವಾಗಿ ಕೇಳುವುದು ಕೇವಲ ಕ್ಷುದ್ರ ನೀತಿಯಲ್ಲವೆ?.... ಈ ಗಣಿ ಮಾಲಿಕರ ನಡೆವಳಿಕೆಗಳೇ ವಿಚಿತ್ರವಾಗಿ ತೋರುತ್ತಿದೆ...."

"ಏನು ಹೇಳ್ತೀರಿ?" ಭೋಜರಾವ್ ಕೇಳಿದ ಪುನಃ.

"ಕ್ಷಮಿಸಿ....ತಾವು ನನಗೆ ನೌಕರಿ ಕೊಡೋದಕ್ಕೆ ಮುಂದೆ ಬಂದಿದ್ದಕ್ಕೆ ನಾನು ನಿಮಗೆ ಕೃತಜ್ಞ. ಆದ್ರೆ ನಾನಿನ್ನು ಹೊಸದಾಗಿ ಒಂದು ಕಡೆ ಸೇರಿದ್ದೀನಿ....ಈಗಲೇ ಅಲ್ಲಿ ಬಿಟ್ಟು ಬಿಡೋದು ನನ್ನ ಗೌರವಕ್ಕೆ ಕಡಮೆ....ದಯವಿಟ್ಟು ಅನ್ಯಥಾ ಭಾವಿಸಬೇಡಿ ..." ಶಾಂತಪ್ಪ ನಮ್ರತೆಯಿಂದ ಹೇಳಿದ.

ಭೋಜರಾವ್ ಹಣಕೊಟ್ಟು ಮೇಲೆದ್ದ. ಹೋಟೇಲಿನಿಂದ ಹೊರ ಬಂದಾಗ "ಬರ್ತೀನಿ...ನಮಸ್ಕಾರ" ಎಂದು ಹೇಳಿ ಹೊರಟುಬಿಟ್ಟ.

ಶಾಂತಪ್ಪ ಪ್ರತಿಯಾಗಿ ವಂದಿಸಿದ. ಅವನು ಒಂದೆರಡು ಹೆಜ್ಜೆ ಮುಂದೆ ಬಂದಾಗ ಎದುರಿಗೆ ಸುಬ್ಬಣ್ಣ ಮತ್ತು ಗೋಪಾಲಯ್ಯ ಬರುತ್ತಿದ್ದುದನ್ನು ಕಂಡು ಅಲ್ಲಿಯೇ ನಿಂತ.

"ಓ!....ಏನ್ಸಾರ್....ಭೋಜರಾಯರು ನಿಮಗೆ ಪರಿಚಯವೇನು?" ಸುಬ್ಬಣ್ಣ ಕೇಳಿದ.

"ಇಲ್ಲ ಸಾರ್....ಇಲ್ಲೇ ಅವರೂ ಯಾರೊಡನೆಯೋ ಮಾತನಾಡುತ್ತ ನಿಂತಿದ್ದರು, ನನ್ನನ್ನು ಕಂಡು ಪರಿಚಯ ಮಾಡಿಕೊಂಡ್ರು...ಇಬ್ಬರೂ ಹಾಗೇ ಕಾಫೀ ಕುಡಿದೆವು ಅಷ್ಟೆ...."

"ನಿಮಗೆ ತಿಳೀದು ಸಾರ್....ಹಾಗೆಲ್ಲ ಇಲ್ಲಿ ಬೇರೆ ಗಣಿಯೋರ ಹತ್ತಿರ ಮಾತನಾಡ ಬಾರ್ದು...ಇಲ್ಲಿ ಬಹಳ ಕಷ್ಟ!" ಗೋಪಾಲಯ್ಯನೆಂದ.

"ಹೌದು ಸಾರ್ ಸ್ವಲ್ಪ ಹುಷಾರಾಗಿರಬೇಕು." ಸುಬ್ಬಣ್ಣ ಧ್ವನಿಗೂಡಿಸಿದ. ಇದೆಂತಹ ನಿರ್ಬಂಧ....ತಾನು ಒಂದೆಡೆ ನೌಕರಿಗೆ ಸೇರಿದ ಮಾತ್ರಕ್ಕೆ

ಯಾರೊಡನೆಯೂ ಮಾತನಾಡುವ ಸ್ವಾತಂತ್ರ್ಯವನ್ನು ಕಳೆದು ಕೊಂಡಂತಾಯಿತೆ...ಇದೊಂದು ವಿಚಿತ್ರ ವಾತಾವರಣವೇ ಸರಿ.

"ನೋಡಿ ಸಾರ್....ಸಾಹುಕಾರ್ರು ನಿಮ್ಮ ವಿಷಯದಲ್ಲಿ ತುಂಬಾ ಅಸಮಾಧಾನ ಪಟ್ಟುಕೊಂಡ್ರು"....ಸುಬ್ಬಣ್ಣ ಪುನಃ ಮಾತೆತ್ತಿದ.

"ಯಾಕೆ ಸುಬ್ಬಣ್ಣೋರೆ?...ನಾನೇನು ಅಂಥ ತಪ್ಪು ಮಾಡ್ದೆ ?" ಶಾಂತಪ್ಪ ಘಾಬರಿಯಿಂದ ಕೇಳಿದ.

"ಏನಿಲ್ಲ...ನೀವು ಶೇಕಡ ಐವತ್ತು ಬರೋ ಆದಿರಸ್ನ ನಲವತ್ತೆರಡೂಂದ್ರಲ್ಲ ಅದಕ್ಕೇ ಅವರು ನಿಮ್ಮ ವಿಷಯದಲ್ಲಿ ಒಂದು ಥರಾ"....ಸುಬ್ಬಣ್ಣ ನೆಂದ.

ಶಾಂತಪ್ಪನಿಗೆ ಈ ಮಾತಿನಲ್ಲಿ ನಂಬಿಕೆಯುಳಿಯಲಿಲ್ಲ. ಸಾಹುಕಾರರು ತನ್ನ ವಿಷಯದಲ್ಲಿ ಹೀಗೆ ಯೋಚಿಸುವರೆ ? ಇಷ್ಟು ಬೇಗ ಅಭಿಪ್ರಾಯ ಬದಲಾವಣೆ ಮಾಡುವರೆ ?

"ನೀವು ಇನ್ನ ಅನುಭವ ಹೊಂದಬೇಕು ಸಾರ್..."

ಅವರಿಬ್ಬರೂ ಶಾಂತಪ್ಪನೆದುರಿನಲ್ಲಿ ನಿಪುಣರಂತೆ ನಿಂತು ನುಡಿದರು. ಶಾಂತಪ್ಪ ಸುಮ್ಮನಿದ್ದ. ಅವರ ಮಾತಿನಲ್ಲಿ ಸತ್ಯಾಂಶವೂ ಇರಬಹುದು ಎನ್ನಿಸಿತ್ತವನಿಗೆ.

* * *

ಶಾಂತಪ್ಪ ಹಿಂತಿರುಗಿದಾಗ, ಸಾಹುಕಾರರು ರೇಗಾಡುತ್ತಿದ್ದುದು ಕೇಳಿಸಿತು. ಬಾಗಿಲಿನಲ್ಲಿ ಆಳುಗಳು ತಲೆ ತಗ್ಗಿಸಿ ನಿಂತುಕೊಂಡು ಒಳಗೆ ನಡೆಯುತ್ತಿರುವ ಕೂಗಾಟಗಳನ್ನು ಕೇಳುತ್ತಿದ್ದವರು, ಶಾಂತಪ್ಪನನ್ನು ನೋಡಿ ದಾರಿ ಬಿಟ್ಟರು.

"ಅಯೋಗ್ಯ! ನಮ್ಮ ಜಾತಿಯವನು ಬದುಕಿಕೊಳ್ಳಲೀಂತ ಒಂದು ಕೆಲಸ ಕೊಟ್ರೆ ನೀನು ಇಂಥ ಕೆಲಸಕ್ಕೆ ಕೈಹಾಕಿದೆಯ ? "

"ಇಲ್ಲ ಸಾರ್....ನಾನು...." ಬೇರೊಬ್ಬನು ಗೊಣಗಾಡಿದ.

"ಬಾಯಿ ಮುಚ್ಚು. ನಿನ್ನ ಮೂಳೇನೆಲ್ಲಾ ಪುಡಿ ಪುಡಿ ಮಾಡಿಬಿಡ್ತೀನಿ ಈಗ. ಇಂಥ ಒಳ್ಳೇ ಜಾತೀಲಿ ಹುಟ್ಟಿ, ಆ ಹೊಲೆಯರ ಹುಡುಗೀನ ಗಂಟು ಹಾಕ್ಕೊಳ್ಳೋಕೆ ಹೋಗಿದ್ಯೇನೋ....ನಾಗಿ ನಾಗಿ ಅಂತ ಅವಳ ಹೆಸರು ಬೇರೆ ಕೂಗ್ತೀಯಾ ನೀನು ?....ಏನು ಸುಬ್ಬಣ್ಣೋರೆ....ಇವನು ಏನಂತ ಕೂಗಾಡ್ತಿದ್ದದ್ದು ?" ಸಾಹುಕಾರರು ಕೇಳಿದರು.

"ಆ ಹೊಲೇರ ಹುಡುಗಿ ನಾಗಿ, ಗಣೀಗೆ ಕೂಲಿಗೆ ಬರ್‍ತಾಳೆ ಸಾರ್. ಇವನು ಮೇಸ್ತ್ರಿ ತಾನೆ. ಅವಳು ಮೊನ್ನೆ ಬಂದಾಗ ಅವಳ ಸೆರಗು ಹಿಡಿದೆಳೆದ್ನಂತೆ. ಅವಳು ಈಗ ಬೇಡ ಇನ್ನೂ ಸ್ವಲ್ಪ ದಿನ ತಾಳು ಅಂತ ಅಂದಳಂತೆ. ಅಷ್ಟಕ್ಕೇ ಇವನು ನಾಗಿ, ನಾಗೀಂತ ಅವಳ ಹೆಸರು ಹೇಳಿಕೊಂಡು ಭಜನೆ ಮಾಡೋಕೆ ಶುರು ಮಾಡಿಬಿಟ್ನಂತೆ. ದಿನಾನೂ ಹೀಗೇನೆ ಭಜನೆ ಮಾಡ್ತಿದನಂತೆ."

ಸುಬ್ಬಣ್ಣನ ಮಾತು ಕೇಳಿ ಹೊರಗೆ ನಿಂತಿದ್ದ ಆಳುಗಳೆಲ್ಲ ಬಾಯಿ ಮುಚ್ಚಿಕೊಂಡು ನಗತೊಡಗಿದರು.

"ಭಜನೆ ಮಾಡ್ತೀಯೇನೋ....ಭಜನೇನ? ನಿನ್ನ ಇಲ್ಲೇ ಹೂಳಿಬಿಡ್ತೀನಿ", ಎಂದು ಕೊಂಡಾಮುಂಡಲವಾದ ಸಾಹುಕಾರರು ಎದುರು ನಿಂತಿದ್ದವನ ಕೆನ್ನೆಗೆ ಫಳೀರ್ ಫಳೀರನೆ ಬಾರಿಸತೊಡಗಿದರು. ಅವನು ಏಟು ತಿನ್ನುತ್ತ ಸುಮ್ಮನೆ ನಿಂತಿದ್ದ. ಆ ದೃಶ್ಯವನ್ನು ನೋಡಿ ಶಾಂತಪ್ಪನ ಕರುಳು ಹಿಂಡಿದಂತಾಯ್ತು. ಕೊನೆಗೆ ಸಾಹುಕಾರರೇ ಅವನನ್ನು ದೂರ ತಳ್ಳಿ "ಹಾಳಾಗಿ ಹೋಗು, ನನ್ನ ಮುಂದೆ ಒಂದು ನಿಮಿಷಾನೂ ನಿಂತುಕೋಬೇಡ. ನಿಂತರೆ ನಿನ್ನ ಭೂಗತ ಮಾಡಿಬಿಡ್ತೀನಿ" ಎಂದರು.

ಅವನು ಹೊರಟುಹೋದ.

"ಪಾಪ! ಎಷ್ಟು ಚೆನ್ನಾಗಿ ಕಷ್ಟಪಟ್ಟು ಕೆಲ್ಸ ಮಾಡ್ತಿದ್ದ. ಅವನಿಗೆ ಈ ಗತಿ ಬಂತಲ್ಲ. ಎಲ್ಲಾ ಪ್ರಾರಬ್ಧ ಕರ್ಮ. ಅಷ್ಟೆ" ಎಂದು ಗೋಪಾಲಯ್ಯ ಮೆಲ್ಲನೆ ಸುಬ್ಬಣ್ಣನೊಡನೆಂದ. ಕೂಲಿಗಾರರ ಮೇಸ್ತ್ರಿ ತಿಮ್ಮಯ್ಯ ಶಾಂತಪ್ಪನೊಡನೆ ಪಿಸುಗುಟ್ಟಿದ, "ಇವನು ತುಂಬ ಬುದ್ಧಿವಂತನಾಗಿದ್ದ ಸಾರ್. ಆ ಹುಡುಗಿ ನಾಗಿ ಈ ಗಣೀಗೆ ಬಂದು ಎಂಟು ತಿಂಗಳಾಯ್ತು. ಅವಳನ್ನ ನೋಡಿದಾಗಿನಿಂದ ಇವನು ಹೀಗೇ ಆಡೋಕೆ ಶುರು ಮಾಡಿದ. ಅವಳನ್ನ ಮದ್ವೆ ಮಾಡಿಕೋ ಅಂತ ಕೇಳುತ್ತಿದ್ದನಂತೆ. ಆದ್ರೆ ಅವಳು ಒಪ್ಪಿರಲಿಲ್ಲವಂತೆ. ಈಚೀಚೆಗೆ ಹೀಗೆ ಹುಚ್ಚನಾಗಿ ಕುಣಿಯೋಕೆ ಶುರುಮಾಡಿಬಿಟ್ಟ."

ಶಾಂತಪ್ಪ ನಿಶ್ಚಲ ಮನಸ್ಕನಾಗಿ ಕೇಳುತ್ತಿದ್ದವನು, ಕೊನೆಗೊಮ್ಮೆ ನಿಟ್ಟುಸಿರುಬಿಟ್ಟು ಸುಮ್ಮನಾದ; ಹೊಸದಾಗಿ ನೌಕರಿಗೆ ಸೇರಿದ ದಿನವೇ ತನ್ನ ಮುಂದೆ ನಡೆದ ಅನೇಕ ಘಟನೆಗಳು ಕುತೂಹಲಜನ್ಯವಾಗಿದ್ದುವು. ಗಣಿಯ ಜೀವನವು ಇನ್ನೂ ಎಷ್ಟು ವಿಚಿತ್ರವಾಗಿರುತ್ತದೆಯೋ ಏನೋ!

ಸುಬ್ಬಣ್ಣ ಗೋಪಾಲಯ್ಯ ಕೋಣಸಂದ್ರದಲ್ಲೇ ಉಳಿದರು.

ಮಾರನೆಯ ದಿನ ಶಾಂತಪ್ಪ ಸಾಹುಕಾರರ ಕಾರಿನಲ್ಲಿ ರಾಮನಾಯ್ಕನ ಹಳ್ಳಿಗೆ ಪ್ರಯಾಣ ಮಾಡಿದ. ಸುಬ್ಬಣ್ಣ ಗೋಪಾಲಯ್ಯ ಕೋಣಸಂದ್ರ ದಲ್ಲೇ ಉಳಿದರು. ಪ್ರಯಾಣ ಮಾಡುವಾಗ ರಸ್ತೆಯಲ್ಲಿಯೇ ತನ್ನ ಮುಂದಿನ ದಿನಗಳಲ್ಲಿನ ಜೀವನವನ್ನು ರೂಪಿಸಿಕೊಳ್ಳುತ್ತಿದ್ದ. ಸಾಹುಕಾರನಲ್ಲಿ ತಾನು ಹೇಗೆ ವರ್ತಿಸಬೇಕು, ಕೈಕೆಳಗಿನವರ ಭಕ್ತಿವಿಶ್ವಾಸವನ್ನು ಸಂಪಾದಿಸಲು ಹೇಗೆ ನಡೆದುಕೊಳ್ಳಬೇಕು ಎಂದು ಚಿಂತಿಸುತ್ತಿದ್ದ.

"ನೀವು ದಿನಾ ಗಣೀಗೆ ಹೋಗಿ, ಅಲ್ಲಿನ ವಿಷಯವನ್ನೆಲ್ಲಾ ತಿಳಿದು ನಂಗೆ ಬೆಂಗಳೂರಿಗೆ ಬರೀ ಬೇಕ್ರಿ...ಗಣೀ ದೂರವಾಯ್ತೂಂತ ಹೋಗದೇ ಇದ್ದರೆ ಆಗೋದಿಲ್ಲಾ..." ಸಾಹುಕಾರರೆಂದರು,

"ಆಗ್಩ ಸಾರ್...ದಿನಾ ಹೋಗ್ತೀನಿ...ಬರೀತೀನಿ..."

"ಸ್ವಲ್ಪ ದಿನಾ ನೀವು ನಡೀಬೇಕಾಗುತ್ತೆ. ಅಷ್ಟೆ. ಆಮೇಲೆ ಒಂದು ಜೀಪು ಕಾರು ಇಲ್ಲವೇ ಯಾವುದಾದರೊಂದು ಲಾರೀನೇ ಇಲ್ಲಿಟ್ಟುಬಿಡ್ತೀನಿ, ನೀವು ಗಣೀಗೆ ಹೋಗೋದಕ್ಕೆ ಆಮೇಲೆ ಸುಲಭ..."

"ಆಗ್ಲಿ ಸಾರ್..."

"ನೀವು ಮೊದಲು ಇಲ್ಲಿ ಒಂದು ಮನೆ ಮಾಡಿಕೊಂಡಿರಿ..."

"ಆಗ್ಲಿ ಸಾರ್........ಇಲ್ಲಿ ಊಟದ ಹೋಟೆಲಿಗೆ ಹತ್ತಿರದಲ್ಲಿ ಮನೆ ಸಿಕ್ಕಿದರೆ ಅನುಕೂಲ..."

"ಈ ಊರಿನಲ್ಲಿ ಊಟದ ಹೋಟಲಿಲ್ಲಾರೀ...ಇರೋನು ಒಬ್ಬ ಹೋಟೇಲಿನ ಭಟ್ಟ. ಅವನಿಗೆ ತಲೆಯೆಲ್ಲಾ ಜಂಭ...ಬೇಕಾದ್ರೆ ಒಬ್ಬ ಅಡಿಗೆ ಯೋನ್ನ ಗೊತ್ತು ಮಾಡಿಕೊಳ್ಳಿ ಹದಿನೈದು ಇಪ್ಪತ್ತು ರೂಪಾಯಿಗಳಾದರೆ ನಾನು ಅವನ ಸಂಬಳ ಕೊಡ್ತೀನಿ..."

ಶಾಂತಪ್ಪನಿಗೆ ಬಹಳ ಸಂತೋಷವಾಯಿತು, ಸಾಹುಕಾರರೆಂದರೆ ಕರುಣಾನಿಧಿಯೆನಿಸಿತವನಿಗೆ.

"ಆಗ್ಲಿ ಸಾರ್..."

"ನಿಮಗೆ ಯಾವುದಕ್ಕೂ ತೊಂದರೆಯಿಲ್ಲದಂತೆ ನೋಡಿಕೊಳ್ತೀನಪ್ಪ... ಆದರೆ ನೀವು ಮಾತ್ರ ಗಣಿ ಕೆಲಸದಲ್ಲಿ ಮುತುವರ್ಜಿ ವಹಿಸಬೇಕು...ನಿಮ್ಮದು ಈ ಗಣೀಂತ ತಿಳಿದುಕೊಂಡು ದುಡೀಬೇಕು...ನೀವು ನನ್ನ ತಮ್ಮನೆಂತ ನನ್ನ ಭಾವನೆ..."

ಶಾಂತಪ್ಪನಿಗೆ ಸಾಹುಕಾರರಲ್ಲಿ ಅಪಾರ ಗೌರವ ಪ್ರೀತಿಗಳು ಉಕ್ಕಿ ಬಂದುವು. ಅವನ ಕಣ್ಣುಗಳು ತುಂಬಿಬರುವಷ್ಟು ಸಂತಸವಾಯಿತವನಿಗೆ. ಇಷ್ಟು ದೊಡ್ಡವರು ತನ್ನನ್ನು ತಮ್ಮವನೆಂದು ಭಾವಿಸಿರುವರು...ಎಂತಹ ಸಹೃದಯಿ...ನಂಬಿ ಬಂದವರಿಗೆ ಎಷ್ಟು ಸಹಾಯ ಮಾಡುವ ಬುದ್ಧಿ... ಇಂತಹ ಸಾಹುಕಾರರನ್ನು ನಂಬಿ ಅವರ ಜೀತದಲ್ಲಿಯೇ ಜೀವವನ್ನು ಸವೆಸಿ ಬಿಡಬಹುದು...ತಾನು ಬೇಗ ಬೇಗ ಕೆಲಸಗಳನ್ನೆಲ್ಲ ಕಲಿಯಬೇಕು... ಎಲ್ಲವನ್ನೂ ಶ್ರದ್ಧೆಯಿಂದ ತಿಳಿದು ಅಭ್ಯಾಸ ಮಾಡಿಕೊಳ್ಳಬೇಕು...ಬೇಗ ಈ ವೃತ್ತಿಯ ಜ್ಞಾನವನ್ನರಿತು ಸ್ವತಂತ್ರವಾಗಿ ವ್ಯವಹರಿಸುವುದು ಕಲಿಯಬೇಕು. ಕಾಲೇಜಿನಲ್ಲಿ ಮೂರು ವರ್ಷ ವ್ಯಾಸಂಗಮಾಡಿ, ಭೂಗರ್ಭ ಶಾಸ್ತ್ರದಲ್ಲಿ ಉತ್ತಮ ದರ್ಜೆಯಲ್ಲಿ ತೇರ್ಗಡೆಯಾದರೆ ತಾನೇ ಏನಾಯ್ತು?—ಇನ್ನೂ ಸರಿಯಾಗಿ ಯಾವ ಅದಿರಿನ ಪರಿಚಯವೂ ಇಲ್ಲ ವೃತ್ತಿಯಲ್ಲಿ ಪ್ರಯೋಜನಕ್ಕೆ ಬಾರದ ಓದು ಇದು...

ಭೂಗರ್ಭಶಾಸ್ತ್ರದ ಪದವೀಧರನೆಂದು, ಅದಿರಿನ ವಿಷಯವೆಲ್ಲವನ್ನೂ ಅರಿತವನೆಂದು ಎಲ್ಲರೂ ತನ್ನನ್ನು ಏನಾದರೊಂದು ಕೇಳಿದ್ದರು. ಈ ಅದಿರಿನಲ್ಲಿ ಮ್ಯಾಂಗನೀಸಿನ ಅಂಶವೆಷ್ಟು?.....ಇದು ಒಳ್ಳೆಯದೇ......ಎಂದು ಮೊದಲಾಗಿ ಪ್ರಶ್ನಿಸಿದ್ದರು. ಸಾಹುಕಾರರು ಗಣಿಯ ಜವಾಬ್ದಾರಿಯನ್ನೆಲ್ಲ ತನ್ನ ಮೇಲೆ ಹೊರಿಸಿದ್ದಾರೆ, ತನ್ನಿಂದ ಹೆಚ್ಚು ಪ್ರಯೋಜನವನ್ನು ನಿರೀಕ್ಷಿಸುತ್ತಿದ್ದಾರೆ. ಆದರೆ ತನ್ನಿಂದ ಏನು ತಾನೇ ಪ್ರಯೋಜನವಾದೀತು? ತಾನೇ ಮೊದಲು ಅನುಭವ ಪಡೆಯಬೇಕು....ಕಾಲೇಜಿನಲ್ಲಿ ಇದೊಂದನ್ನೂ ಹೇಳಿಕೊಟ್ಟಿಲ್ಲ.... ಅಲ್ಲಿ ಕಲಿತ ಭೂಗರ್ಭ ಶಾಸ್ತ್ರವೆಂದರೆ ಕೇವಲ ಶಬ್ದಾಡಂಬರ ಮತ್ತು ಕಲ್ಪನಾ ಪ್ರಪಂಚದ ಚಿತ್ರಣ....ಭೂಮಿಯು ಜನಿಸಿದುದೆಂತೆಂಬ ವಿಷಯದಲ್ಲಿ ನಿರ್ಣಯವಿಲ್ಲ, ಭೂಮಿಯ ಗರ್ಭದಲ್ಲಿರುವುದು ದ್ರವವಸ್ತುವೋ ಘನ ವಸ್ತುವೋ ನಿರ್ಧಾರವಿಲ್ಲ...ಜ್ವಾಲಾಮುಖಿಗಳ ಮೂಲವೆಂತೆಂಬುದು ಚರ್ಚಾಸ್ಪದ..ದಖ್ಖಣ ಪ್ರಸ್ಥಭೂಮಿಯ ಶಿಲಾಸಮುದಾಯವು ಮಧ್ಯಮ ಯುಗದ್ದೊ (Mesozoic Era), ನೂತನ ಯುಗದ್ದೊ (Cainozoic Era) ಎಂಬ ವಿಷಯದಲ್ಲಿ ಬಡಿದಾಟವಿದೆ....ಭೂಮಿಯ ಮೇಲೆ ಉಷ್ಣಾಧಿಕ್ಯಗಳ ಮಧ್ಯೆ ಕವಿದು ನಿಂತಿರುವ ಹಿಮಾಲಯ, ಉತ್ತರ ಧ್ರುವಗಳ ಮಂಜಿನ ಟೋಪಿ (Ice Caps) ಗಳು ಉಂಟಾದುದೆಂತೆಂಬುದು ಹಲವಾರು ಅಭಿಪ್ರಾಯಗಳಿವೆ. ಇನ್ನೂ ನಿರ್ದಿಷ್ಟಾಭಿ

ಪ್ರಾಯಕ್ಕೆ ಬಂದಿಲ್ಲ....ಇನ್ನು 'ಪ್ಯಾಂಜಿಯಾ' ಎಂಬ ಏಕ ಭೂಖಂಡವೊಂದಿದ್ದರೆ, ಟಿಥಿಸ್ ಎಂಬ ಸಮುದ್ರವು ಇಂದಿನ ಹಿಮಾಲಯದ ಸ್ಥಳದಲ್ಲಿ ಪೂರ್ವದಲ್ಲಿದ್ದರೆ ನಮಗೇನು ?....ಶಂಖದ ಹುಳುಗಳ, ಕಪ್ಪೆಚಿಪ್ಪಿನ ಹುಳುಗಳು ಡೈನೊಸಾರ್ ಮೊದಲಾದ ಉರಗಗಮುಸಿಗಳ (Dinosaurs, Reptiles) ದೇಹರಚನೆಯಿಂದ ನಮಗೆ ಹೆಚ್ಚಿನ ಪ್ರಯೋಜನವೇನಿದೆ?....ನಮಗೆ ಕಾಲೇಜಿನಲ್ಲಿ ತಿಳಿದಿರುವುದು ಪೈರೊ ಲುಸ್ಯಟ್, ಸೀಲೊಮಿಲೇನ್, ಗ್ರಾನೈಟ್ ಎಂಬುವು ಮ್ಯಾಂಗನೀಸ್ ಅದಿರುಗಳೆಂದು ; ಆದರೆ ಇಲ್ಲಿನ ಹತ್ತಾರು ವಿವಿಧ ಅದಿರುಗಳ ರಾಶಿಗಳನ್ನು ನೋಡಿದರೆ ದಿಗ್ಭ್ರಮೆಯಾಗುವುದು, ಯಾವುದು ಪೈರೋಲೂಸೈಟ್, ಯಾವುದು ಸೀಲೋಮಿಲೇನ್ ಎಂದು ಶಂಕೆಯಾಗುವುದು. ಅಲ್ಲಿ ನೋಡಿರುವುದು ಒಂದು ಇಲ್ಲಿ ನೋಡುತ್ತಿರುವುದು ಬೇರೆ ಬೇರೆ! ಈ ಕಾಲೇಜಿನ ವಿದ್ಯೆಯಿಂದ ಏನು ಪ್ರಯೋಜನ?....ಏಕಾದರೂ ಬೇಕು ಈ ವಿದ್ಯೆ? ತನಗಿಂತ ಒಬ್ಬ ಮೇಸ್ತ್ರಿ ಉತ್ತಮ ಈ ಗಣಿಯಲ್ಲಿ!....ವಿದ್ಯೆಯು ಕೇವಲ ಜ್ಞಾನಾರ್ಜನೆಗಾಗಿ, ಹೊಟ್ಟೆಯಪಾಡಿಗಾಗಲ್ಲವೆಂದೆನ್ನುತ್ತಾರೆ. ಇದು ಕೇವಲ ಮೂರ್ಖತನ, ಜ್ಞಾನಾರ್ಜನೆಗಾದರೆ ಕಾಲೇಜಿನಲ್ಲಿ ಇಷ್ಟು ವರ್ಷಗಳೇಕೆ ಓದಬೇಕು—ಹಣ ಖರ್ಚು ಮಾಡಿಕೊಂಡು ? ಅದರ ಬದಲು ಪುಸ್ತಕಭಂಡಾರದಲ್ಲಿ ಪುಕ್ಕಟೆ ಓದಿ ಜ್ಞಾನವನ್ನು ಗಳಿಸಬಹುದಲ್ಲ! ಮನುಷ್ಯ ಓದುವುದು ಹೊಟ್ಟೆಯಪಾಡಿಗೇ, ತಪ್ಪ ಹೇಳುವುದೆಲ್ಲ ಬರೀ ಮೋಸ...ಸೋಗು! ವಾಸ್ತವ ಪ್ರಪಂಚದಲ್ಲಿ, ನಮಗೆ ಬೇಕಾದುದು ಅನ್ನ, ಉಪವಾಸವಿರಿಸುವ ಜ್ಞಾನವಲ್ಲ!

ಶಾಂತಪ್ಪನ ವಿಚಾರಲಹರಿ ಹರಿಯುತ್ತಿತ್ತು. ತಾನೀಗ ಹೇಗೆ ಕೆಲಸ ಮಾಡುವುದು ?......ತಾನು ಭೂಗರ್ಭ ಶಾಸ್ತ್ರದಲ್ಲಿ ಪದವೀಧರನೆಂದು ತನ್ನನ್ನು ನೌಕರಿಗೆ ನಿಯಮಿಸಿಕೊಂಡಿರುವರು, ಭೂಗರ್ಭದ ವಿಷಯವನ್ನು ತಿಳಿದಿರುವೆನೆಂದುಕೊಂಡಿರುವರು, ಆದರೆ ತನಗೆ ತಿಳಿದಿರುವುದೆಷ್ಟು ?

ಬೃಹದಾಕಾರವನ್ನು ತಾಳಿತ್ತು ಆ ಪ್ರಶ್ನಾರ್ಥಕ ಚಿಹ್ನೆ, ದೈತ್ಯ ಭೂತಕನ್ನಡಿಯೊಳಗಿನಿಂದ ನೋಡಿದಾಗಿನಂತೆ ದೊಡ್ಡದಾಗಿ ಕಾಣಿಸಿತದು, ಶಾಂತಪ್ಪನಿಗೆ.

ಆದರೂ ತಿಳಿದವನಂತೆ ಮೊದಲು ನಟಿಸಿ, ನಂತರ ನಿಧಾನವಾಗಿ ತಿಳಿದುಕೊಳ್ಳಬೇಕು. ಇಲ್ಲದಾದರೆ ತನ್ನ ವಿದ್ಯೆಗೆ ತಾನು ಗಳಿಸಿರುವಪದವಿಗೆ ಅಪಮಾನ!

"ಇಗೋ ರಾಮನಾಯ್ಕನಹಳ್ಳಿ ಬಂತು....ಮೊದಲು ಲಾರಿಯಲ್ಲಿ ಸ್ಫಟಿಕ ಮಣಿ ಗುಡ್ಡಕ್ಕೆ ಹೋಗಿ ಬರೋಣ....ನಿಮಗೆ ಅಲ್ಲಿ ಪರಿಚಯ ಮಾಡಿ ಕೊಡ್ತೀನಿ. ನಂತರ ಬೇರೆ ಗಣಿಗಳಿಗೆ ನೀವೇ ಹೋಗಿ ಬನ್ನಿ," ಎಂದರು ಸಾಹುಕಾರರು.

ಕಾರು ನಿಂತಿತು; ಆ ಮನೆಯ ಮುಂದೆ ನಿಂತಿದ್ದ ಕೆಲವರು ಸಾಹುಕಾರರಿಗೆ ವಂದಿಸಿದರು.

ಶಾಂತಪ್ಪ ಕಾರಿನಿಂದಿಳಿದ. ಸಾಹುಕಾರರೂ ಇಳಿದರು, ಎದುರು ನಿಂತಿದ್ದವರಿಗೆ ವಂದಿಸುತ್ತಾ, ಅಲ್ಲಿಯೇ ನಿಂತಿದ್ದ ಕಪ್ಪು ಬಣ್ಣದ ವ್ಯಕ್ತಿಯೊಬ್ಬನನ್ನು ಉದ್ದೇಶಿಸಿ ಸಾಹುಕಾರರೆಂದರು,

"ಏನು ಮಾಣಿಕ್ಯಂ....ಲಾರಿ ಬಂದಿದೆಯೇನು?...."

"ಬಂದಿದೆ ಸಾರ್."

ಸಾಹುಕಾರರು ಮನೆಯ ಒಳಗೆ ಹೋಗುತ್ತಾ ಎಲ್ಲರನ್ನ ಒಳಕ್ಕೆ ಆಹ್ವಾನಿಸಿದರು. ಒಳಗೆ ಹೋಗಿ ಮೇಜಿನ ಮೇಲಿದ್ದ ಕುರ್ಚಿಯಲ್ಲಿ ಕುಳಿತು ಎಲ್ಲರಿಗೂ ಕುಳಿತುಕೊಳ್ಳುವಂತೆ ತಿಳಿಸಿದರು. ಶಾಂತಪ್ಪನೂ ಒಂದು ಕುರ್ಚಿಯ ಮೇಲೆ ಕುಳಿತ.

"ನೋಡಿ ಮಿಸ್ಟರ್ ಶಾಂತಪ್ಪ, ಇವರು ನಮ್ಮ ಮೇಸ್ತ್ರಿ ಮಾಣಿಕ್ಯಂ.... ಇವರೆಲ್ಲಾ ನಮ್ಮ ಕಂಟ್ರಾಕ್ಟರುಗಳು...ಇವನು ಚನ್ನಯ್ಯ. .ಇವನು ಗಂಗಯ್ಯ ...." ಎಲ್ಲರನ್ನ ಪರಿಚಯ ಮಾಡಿಸಿಕೊಟ್ಟರು. ಶಾಂತಪ್ಪ ಅವರೆಲ್ಲರನ್ನು ಹಸನ್ಮುಖದಿಂದ ನೋಡಿ ವಂದಿಸಿದ.

"ಇವರು ನಮ್ಮ ಗಣಿಗಳಿಗೆ ಮೇನೇಜರು.....ನಮ್ಮ ಕಂಪನಿಗೆ ಇವರೇ ಜೀಯಾಲಜಿಸ್ಟು. .ಇವರು ಹೇಗೆ ಹೇಳಿದರೆ ಹಾಗೆ ನೀವು ಕೆಲಸ ಮಾಡಬೇಕು ...ಗಣಿಯಲ್ಲಿ ಹೇಗೆ ಕೆಲಸ ಮಾಡಬೇಕು ..ಕಲ್ಲು ಚೆನ್ನಾಗಿದ್ಯೆ ಇಲ್ಲವೇ ಎಲ್ಲಾ ಇವರು ಹೇಳ್ತಾರೆ.. ನೀವೂ ಅವರನ್ನೇ ಕೇಳಬೇಕು...ಗೊತ್ತಾಯ್ತೆ ? "

"ಆಗ್ಲಿ ಸಾರ್...ನಮಗೂ ದಾರಿ ತೋರಿಸಿಕೊಡೋದಕ್ಕೆ ಒಬ್ಬರಿದ್ದರೆ ಸಂತೋಷ..." ಎಂದು ಕಂಟ್ರಾಕ್ಟರ್ ಚನ್ನಯ್ಯನೆಂದ.

ಊರಿಗೊಂದೇ ಆದ ಭಟ್ಟರ ಹೋಟೇಲಿನಿಂದ ಎಲ್ಲರಿಗೂ ಕಾಫಿ ಬಂದಿತು. ಸಾಹುಕಾರರು ಕಾಫಿ ಸ್ವೀಕರಿಸುತ್ತಾ ಶಾಂತಪ್ಪನಿಗೆ ಹೇಳಿದರು-

"ನೀವು ಮೊದಲು ಒಂದು ಮನೆ ಮಾಡಿಕೊಂಡುಬಿಡಿ ಮಿಸ್ಟರ್ ಶಾಂತಪ್ಪ. ಇದು ನಮ್ಮ ಮೇಸ್ತ್ರಿ ಮಾಣಿಕ್ಯಂ ಇರುವ ಮನೆ, ನಿಮಗೆ ಸರಿ

ಹೋಗುತ್ತೋ ಇಲ್ಲೋ....ಮಾಣಿಕ್ಯಂ ಇವರಿಗೆ ಒಂದು ಮನೆ ನೋಡಿ ಬಿಡ್ರಿ!...."

"ಆಗಲಿ ಸಾರ್" ಮಾಣಿಕ್ಯಂ ಉತ್ತರವಿತ್ತ.

"ನೀವು ಎಲ್ಲಾ ನೋಡಿಕೊಳ್ಳಬೇಕು ಶಾಂತಪ್ಪ....ಮಾಣಿಕ್ಯಂ ಪ್ರತಿ ವಾರವೂ ಕಂಟ್ರಾಕ್ಟರುಗಳು ತೆಗೆದ 'ಕಲ್ಲಿ'ನ ಅಳತೆ ತೊಗೋತಾರೆ, ನೀವು ಮಾತ್ರ ಒಳ್ಳೇ ಗ್ರೇಡಿಂದು ಬರೋಹಾಗೆ ನೋಡಿಕೋಬೇಕು...."

"ಹ್ಞೂ!...."

ಸಾಹುಕಾರರು ಕೈಗಡಿಯಾರ ನೋಡಿಕೊಂಡು ಮೇಲೆದ್ದರು, "ಹೊತ್ತಾಯ್ತು....ಗಣೀಗೆ ಹೋಗೋಣ" ಎನ್ನುತ್ತಾ.

ಲಾರಿಯಲ್ಲಿ ಕುಳಿತುಕೊಂಡು ಎಲ್ಲರೂ ಗಣಿಗೆ ಹೊರಟರು. ಡ್ರೈವರ್ ಪಕ್ಕದಲ್ಲಿ ಸಾಹುಕಾರರು ಶಾಂತಪ್ಪ ಕುಳಿತರು. ಹಿಂದುಗಡೆಯ 'ತೊಟ್ಟಿ' ಯಲ್ಲಿ ಉಳಿದವರೆಲ್ಲರೂ ತುಂಬಿಕೊಂಡಿದ್ದರು. ಲಾರಿಯು ಗುಡ್ಡ ಹತ್ತುವಾಗ ತೊಟ್ಟಿಯಲ್ಲಿದ್ದವರೆಲ್ಲರೂ ಬೀಡಿ ಸೇದುತ್ತಾ ಹರಟೆ ಹೊಡೆಯುತ್ತಿದ್ದರು. ಅವರ ಮಾತೂ ಮೆಲ್ಲನೆ ಸಾಹುಕಾರರಿಗೆ ಕೇಳಿಸದಂತೆ ಸಾಗಿತ್ತು.

"ಹೊಸ ಮೇನೇಜರು ಇನ್ನು ಹುಡುಗ...." ಚನ್ನಯ್ಯನೆಂದ.

"ಹುಡುಗರಾದರೇನು ತುಂಬಾ ಓದಿದಾರಂತೆ", ಗಂಗಯ್ಯನೆಂದ.

"ಯಾರು ಹೇಳಿದರು?" ಮಾಣಿಕ್ಯಂ ಕೇಳಿದ.

"ಡ್ರೈವರ್ ಹೇಳಿದ."

"ಮದುವೆಯಾಗಿದೆಯೋ ಇಲ್ಲೋ ತಿಳೀದು!"

"ಯಾವ ಜಾತಿಯವರೋ!"

"ಸಂಬಳ ಎಷ್ಟೋ....!"

"ಏನಾದರಾಗಲೀ ನೀನು ನಮ್ಮ ಕೈಬಿಡಬೇಡಪ್ಪೋ ಮಾರಾಯ.... ನೀನು ಹುಷಾರಾಗಿರು!" ಚನ್ನಯ್ಯ ಮಾಣಿಕ್ಯಂಗೆ ಹೇಳಿದ.

"ನನ್ನ ಯಾವೋನೂ ಏನೂ ಮಾಡಲಿಕ್ಕಾಗಲ್ಲೆ...." ತಮಿಳು ಬೆರೆತ ಕನ್ನಡದಲ್ಲಿ ಮಾಣಿಕ್ಯಂ ಉತ್ತರವಿತ್ತ. ಎಲ್ಲರೂ ಜೊಳ್ಳನೆ ನಕ್ಕರು.

ಒಳಗೆ ಸಾಹುಕಾರರು, ಗಣಿಯಲ್ಲಿ ಹೇಗೆ ನಡೆದುಕೊಳ್ಳಬೇಕೆಂದು ಶಾಂತಪ್ಪನಿಗೆ ಹೇಳುತ್ತಿದ್ದರು. ಇದ್ದಕ್ಕಿದ್ದಂತೆ ಮಾತು ನಿಲ್ಲಿಸಿ ಡ್ರೈವರನನ್ನು ಕೇಳಿದರು,

"ಮರೆತೇಬಿಟ್ಟೆ....ಕಾರು ತೊಳೆಸೋದಿಕ್ಕೆ ನಮ್ಮ ಕಾರು ಡ್ರೈವರಿಗೆ ಹೇಳಬೇಕಾಗಿತ್ತು."

"ಅವನು ಕಾರು ತೊಳೆಸೋದಿಕ್ಕೆ ಕೆರೆ ಹತ್ತಿರ ತೆಗೆದ್ಕೊಂಡು ಹೋಗಿದ್ದ ಸಾರ್...."

"ಓ, ಹಾಗಾದರೆ ಸರಿ!"

ಶಾಂತಪ್ಪ ಹೊರಗೆ ತಲೆಯಿಟ್ಟು ನೋಡುತ್ತಿದ್ದ. ಲಾರಿಯು ಗುಡ್ಡವನ್ನೇರುತ್ತಿದ್ದಂತೆ ಸುತ್ತಲಿನ ತೆಂಗಿನ ತೋಟದ ಗರಿವಲೆಗಳು ದೃಷ್ಟಿ ಹೋಗುವಷ್ಟು ದೂರವೂ ಹರಡಿಕೊಂಡಿದ್ದುದು ಕಾಣುತ್ತಿದ್ದುವು. ಕಾರ್ತೀಕ ಮಾಸದ ಕೊನೆಯ ದಿನಗಳಾದ್ದರಿಂದ ಎಲ್ಲೆಲ್ಲಿಯೂ ಹಸುರೇ ಹರಡಿಕೊಂಡಿದ್ದಿತು. ಅಲ್ಲಲ್ಲಿ ಸಣ್ಣ ಝರಿಗಳು ಗುಡ್ಡಗಲ್ಲುಗಳನ್ನು ಕೊರೆದುಕೊಂಡು ಹಾದಿ ಮಾಡಿಕೊಂಡಿದ್ದುವು. ಕಾಡುಹೂವುಗಳು ಹಲವು ಅಂಗೈಯಗಲ ಅರಳಿ ನಿಂತಿದ್ದವು. ಲಾರಿಯ ಶಬ್ದ ಕೇಳಿ ಕಾಡುಕೋಳಿಗಳು ಸರ್ರನೆ ಪೊದೆಯ ಸಂದಿಗೆ ಓಡಿ ಹೋಗುತ್ತಿದ್ದುವು. ದೂರದ ಕೆಲವು ಗಿಡಗಳ ಮೇಲೆ ಕುಳಿತಿದ್ದ ನೀಲ ನವಿಲುಗಳು ಸರ್ರನೆ ಹಾರಿ ಮತ್ತೊಂದು ಗಿಡದ ಮೇಲೆ ಕೂರುತ್ತಿದ್ದುವು. ಮೇಲೆ ಸ್ವಚ್ಛ ನೀಲಿಯಂಬರದ ಮಧ್ಯೆ ಒಂದೊಂದು ಬೆಳ್ಮುಗಿಲ ತುಣುಕುಗಳು ಹಾದುಬಂದು ಹೋಗುತ್ತಿದ್ದುವು. ಎದುರಿನಲ್ಲಿ ಡೊಂಕುಡೊಂಕಾದ ಏರುತಗ್ಗಿನ ಕಾಡುರಸ್ತೆ ಗಣಿಯತ್ತ ಸಾಗಿತ್ತು.

ಬಿಳಿ ಧೂಳಿನ ರಸ್ತೆಯು ಕೆಂಪಾಗುತ್ತಾ, ಕಪ್ಪಾಗುತ್ತಾ ಬಂದಿತು. ಕೊನೆಗೆ ಎದುರಿಗೆ ಕಂಡ ಭೂಮಿಯೆಲ್ಲವೂ ಕರಿನೆಲವೇ ಆಯಿತು. ಅದು ಮ್ಯಾಂಗನೀಸ್ ಅದಿರು ದೊರೆಯುವ ಭೂಮಿಯ ಒಳ್ಳೆಯ ಕುರುಹು.

ಲಾರಿಯು ಇದ್ದಕ್ಕಿದ್ದಂತೆ ನಿಂತಿತು. ಅದರ ಗುರಿಯಾದ ಗುಡ್ಡವೊಂದು ಸುಮಾರು ಅರ್ಧ ಮೈಲಿಯ ದೂರದಲ್ಲಿ ಎತ್ತರವಾಗಿ ಕಾಣುತ್ತಿದ್ದಿತು.

"ಯಾಕಪ್ಪಾ?" ಸಾಹುಕಾರರು ಕೇಳಿದರು.

"ಗಾಡಿ ಸ್ವಲ್ಪ ಟ್ರಬಲ್ ಇದೆ ಸಾರ್...." ಎಂದು ಡ್ರೈವರು ತನ್ನ ಜಾಗದಿಂದಿಳಿದು ಹೋಗಿ ಲಾರಿಯ ಯಂತ್ರದ ಬಾಯಿ ತೆರೆದು ಒಳಗೆ ತಲೆ ಇಟ್ಟು ನೋಡತೊಡಗಿದ. ಅವನ ಹಿಂಬಾಲಕನಾದ ಆಳೂ ಬಂದು ಯಂತ್ರದೆದುರು ನಿಂತು ಅದನ್ನು ಪರಾಮರ್ಶಿಸತೊಡಗಿದ.

"ಸರಿ ಬನ್ನಿ ನಾವು ನಡೆದುಕೊಂಡೇ ಹೋಗೋಣ...." ಎಂದು ಸಾಹುಕಾರರು ಮುಂದೆ ಹೊರಟರು. ಕಂಟ್ರಾಕ್ಟರುಗಳು, ಅವರ ಕೆಲವು ಕೆಲಸಗಾ

ರನು, ಕಂಪೆನಿಯ ಮೇಸ್ತ್ರಿ ಮಾಣಿಕ್ಯಂ ಎಲ್ಲರೂ ಅವರ ಹಿಂದೆ ಸಾಗಿದರು. ಮಾಣಿಕ್ಯಂ ತನ್ನ ಬಳಿಯಿದ್ದ ಛತ್ರಿಯನ್ನು ಬಿಚ್ಚಿ ಸಾಹುಕಾರರ ಕೈಲಿ ಕೊಟ್ಟ. ಸಾಹುಕಾರರದನ್ನು ತೆಗೆದುಕೊಂಡರು.

ಶಾಂತಪ್ಪನಿಗೆ ಆ ಬಿಸಿಲಿನಲ್ಲಿಯೇ ನಡೆಯುವುದು ಹಿತವೆನಿಸಿದ್ದಿತು.

ಎದುರಿಗೆ ದೊಡ್ಡದೆರಡು ಗುಡ್ಡಗಳಿದ್ದುವು. ಅವುಗಳ ಮಧ್ಯೆಯಿದ್ದ ಮಟ್ಟಸವಾದೊಂದು ದಿಣ್ಣೆಯಲ್ಲಿ ದೊಡ್ಡದಾದೊಂದು ಮಣ್ಣಿನ ರಾಶಿ ಕಾಣುತ್ತಿದ್ದಿತು. ಹಿಂದೆ ಅವರು ಏರಿ ಬಂದಿದ್ದ ದೊಡ್ಡ ಗುಡ್ಡ, ಅದರ ಮರಿಗಳೇನೋ ಎಂಬಂತೆ ಸಣ್ಣಸಣ್ಣ ಗುಡ್ಡಗಳೂ ಹಲವು; ದೂರದಲ್ಲಿ ಸಹಸ್ರ ಸಹಸ್ರ ತೆಂಗಿನ ಗರಿಗಳ ಸಮುದಾಯ, ಬದಿಯಲ್ಲಿ ಅಲ್ಲಲ್ಲಿ ಗಾಜಿನಂತೆ ಹೊಳೆಯುತ್ತಿದ್ದ ಕೆರೆಗಳ ನೀರು ಕಾಣುತ್ತಿದ್ದುವು.

"ಇದೇ ಸಾರ್ ನನ್ನ ಪಿಟ್ಟು (Pit)!" ಎಂದ ಚನ್ನಯ್ಯ, ಶಾಂತಪ್ಪನ ಬಳಿ ಬಂದು.

"ಓ ನೀನು ಇಲ್ಲಿ ಕಂಟ್ರಾಕ್ಟು ತೆಗೆದುಕೊಂಡಿರೋ ಪಿಟ್ ಇದೇಯೋ?" ಶಾಂತಪ್ಪ ಕೇಳಿದ.

"ಈ ಗಣಿ ಪೂರಾ ಕಂಟ್ರಾಕ್ಟು ನನ್ನದು ಸಾರ್....ಸಾಹ್ಕಾರ್ರು ಈ ಘಟಿಕಮಣಿ ಗುಡ್ಡ, ಹಬ್ಬುಗೆ ಗುಡ್ಡದ ಕಂಟ್ರಾಕ್ಟು ಪೂರಾ ನಂಗೇ ಕೊಟ್ಟಿದಾರೆ...." ಚನ್ನಯ್ಯ ಠೀವಿಯಿಂದ ಹೇಳಿದ.

"ಸಂತೋಷಾನಪ್ಪಾ..." ಎಂದು ಶಾಂತಪ್ಪ ಮುಂದೆ ಮುಂದೆ ನಡೆದು ಸಾಹುಕಾರರ ಜೊತೆ ಸೇರಿದ. ಅವರು ದೊಡ್ಡದಾದೊಂದು ಕುಳಿಯ ಸಮೀಪಕ್ಕೆ ಬಂದರು. ಅದರ ಸುತ್ತಲೂ ಅಲ್ಲಿಂದಲೇ ಅಗೆದು ತೆಗೆದ ಮಣ್ಣಿನ ರಾಶಿಯಿದ್ದಿತು. ಅದು ಬಹಳ ದೂರಕ್ಕೆ ಕಾಣುತ್ತಿದ್ದಿತು. ಕುಳಿ (Pit) ಸುಮಾರು ನಲವತ್ತು ಅಡಿ ಆಳವಿದ್ದಿತು. ಅರವತ್ತು-ಎಪ್ಪತ್ತು ಅಡಿ ಉದ್ದವಿದ್ದಿತು, ಅಷ್ಟೇ ಅಗಲವೂ ಇದ್ದಿತು. ಡೊಂಕುಡೊಂಕಾದ ಅಂಚಿನ ಮೇಲೆಲ್ಲಾ ಗಿಡಗಳ ಒಣಗಿದ ಬೇರುಗಳು ಹಲವು ಹಾವುಗಳಂತೆ ಸುತ್ತಿಕೊಂಡು ಕಾಣುತ್ತಿದ್ದುವು. ಆ ಗುಂಡಿಯ (Pit) ಸುತ್ತಲೂ ಬಿಸುಟ ಮ್ಯಾಂಗನೀಸ್ ಅದಿರಿನ ಗುಂಡುಗಳು ಹರಡಿಕೊಂಡಿದ್ದುವು. ಗುಂಡಿಯೊಳಗೆ ಇಳಿಯಲು ಮೆಟ್ಟಿಲು ಕತ್ತರಿಸಲ್ಪಟ್ಟಿದ್ದರೂ ಸಹ, ಅವು ನೆಲದ ಮಣ್ಣಿನಲ್ಲಿಯೇ ಆದುದರಿಂದ ನಡೆದು ನಡೆದು ಸವೆದುಹೋಗಿದ್ದಿತು.

ಶಾಂತಪ್ಪ ಒಳಗಿಳಿದ. ಅವನ ಹಿಂದೆ ಸಾಹುಕಾರರು ಇಳಿದರು.

ಆ ಗುಂಡಿಯ ಗೋಡೆಯಲ್ಲಿ, ನೆಲದಲ್ಲಿ ಮ್ಯಾಂಗನೀಸ್ ಅದಿರಿನ ಸೆಲೆಗಳು (Reef or Lode) ಹಾದುಹೋಗಿದ್ದುವು. ಒಂದೊಂದೆಡೆ ದೊಡ್ಡ ದೊಡ್ಡ ಗುಂಡುಗಳು ಅರೆ ಹೊರಬಂದಿದ್ದುವು.

"ನೋಡ್ರಿ ಈ ಪಿಟ್ಟು ಹೇಗಿದೆ ?...." ಸಾಹುಕಾರರೆಂದರು.

ಶಾಂತಪ್ಪ ನೋಡಿದ. ಸುತ್ತಲೂ ಗೋಡೆಗಳಲ್ಲಿ ಅದಿರು, (Ore body) ನೆಲದಲ್ಲಿ ಅದಿರು, ಸುಮಾರು ನಲವತ್ತು ಅಡಿಯ ಮೇಲೆ, ಇದೋ ಬೀಳುವೆನೆಂದು ಹೆದರಿಸುವಂತಿದ್ದ ದೊಡ್ಡ ದೊಡ್ಡ ಮಣ್ಣಿನ ರಾಶಿಗಳು, ಒಂದು ಮೂಲೆಯಲ್ಲಿ, ಗೋಡೆಯ ಮೇಲೆ ಸರಿಯಾಗಿ ನಿಂತು, ಬೇರುಗಳೂ ಹೊರಗೆ ಬಂದಿದ್ದು, ಯಾವಾಗಲಾದರೂ ಉರುಳಿಯೇನೆಂದು ಹೇಳುವಂತೆ ನಿಂತಿದ್ದ ಒಣಮರವೊಂದು. ಇದೇ ಶಾಂತಪ್ಪನು ನೋಡಿದ ಗುಂಡಿ, 'ಪಿಟ್ಟು'. ಇದೇ ಗಣಿ !

"ತುಂಬಾ ಅಪಾಯಕರವಾಗಿದೆ ಸಾರ್ !...." ಶಾಂತಪ್ಪನೆಂದ.

"ಅದು ಸರಿ ಕಣ್ರೀ....ಕಲ್ಲು ಹೇಗಿದೇಂತ ಕೇಳಿದ್ದು ನಿಮ್ಮನ್ನ. ಇಲ್ಲಿ ತುಂಬಾ ಸಿಲಿಕಾ ಬರುತ್ತೇಂತ ಈ ಪಿಟ್ಟಿನ ಕೆಲಸ ನಿಲ್ಲಿಸಿಬಿಟ್ಟಿದ್ದೀವಿ.... ಇದನ್ನ ಸ್ವಲ್ಪ ಉತ್ತಮಪಡಿಸಬಹುದೂಂತ ನಿಮಗೆ ತೋರಿದರೆ ನಾಳೆಯಿಂದಲೇ ಇಪ್ಪತ್ತು ಜನರನ್ನ ಕೆಲಸಕ್ಕೆ ಬಿಡಿ...."

ಶಾಂತಪ್ಪ ಒಂದೆರಡು ಅದಿರಿನ ತುಣುಕುಗಳನ್ನು ತೆಗೆದುಕೊಂಡು ನೋಡಿದ. ಅದರಲ್ಲಿ ಮ್ಯಾಂಗನೀಸಿನ ಸಂಗಡವೇ, ಬೆಣಚುಕಲ್ಲಿನ ಮರಳೂ (ಸಿಲಿಕಾ) ಬೆರೆತುಕೊಂಡಿದ್ದಿತು. ಅವನೂ ಸಹ ಕಾಲೇಜಿನಲ್ಲಿ ಯಾವುದೇ ಪುಸ್ತಕದಲ್ಲಿ ಓದಿದ್ದ, ಅಧ್ಯಾಪಕರೂ ಹೇಳಿದ್ದರು. ಆಳವಾಗಿ ಇಳಿದಂತೆಲ್ಲಾ ಅದಿರು ಶುದ್ಧವಾಗುವುದು, ಅದರಲ್ಲಿ ಸೇರಿರುವ ಕಲ್ಮಶಗಳು ಕಡಿಮೆಯಾಗುವುವು ಎಂದು.

"ಆಳ ಇಳಿಸಿದಷ್ಟೂ ಸಿಲಿಕಾ ಕಡಿಮೆಯಾಗುತ್ತೆ ಸಾರ್...." ಎಂದು ಸ್ಪಷ್ಟವಾಗಿ ಅವನು ಹಾಗೆ ಹೇಳಿದರೂ ಒಳಗೆ ತನ್ನ ನುಡಿ ಸರಿಯೇ, ಎಂದು ಮನಸ್ಸು ಅಳುಕಿದ್ದಿತು. ಅವನಿಗೆ ಏನೂ ಅರಿಯದ ವಿಷಯವದು !

"ಸರಿ ಹಾಗಾದ್ರೆ....ನಾಳೇನೇ ಇಲ್ಲಿ ಪುನಃ ಕೆಲಸ ಮಾಡಿಸಪ್ಪ ಚನ್ನಯ್ಯ!...." ಸಾಹುಕಾರರೆಂದರು.

"ಆಗಲಿ ಸಾರ್" ಅಲ್ಲಿಯೇ ನಿಂತಿದ್ದ ಚನ್ನಯ್ಯ ತಲೆಯಾಡಿಸಿದ.

ಮೇಲೆ ಸಾಲಾಗಿ ನಿಂತಿದ್ದವರೆಲ್ಲರೂ, ಕೆಳಗೆ ನಿಂತಿದ್ದ ಸಾಹುಕಾರರು, ಶಾಂತಪ್ಪ, ಚನ್ನಯ್ಯರನ್ನ ನೋಡುತ್ತಾ ಮಾತನಾಡುತ್ತಿದ್ದರು.

"ನೀವು ದಿನಾ ಇಲ್ಲಿ ಬಂದು ಸ್ವಲ್ಪ ಹೇಳಿ ಕೊಡಿ ಮಿಸ್ಟರ್ ಶಾಂತಪ್ಪ ...." ಸಾಹುಕಾರರೆಂದರು

"ಆಗಲಿ ಸಾರ್....," ಶಾಂತಪ್ಪನೆಂದ. ಹಾಗೆಂದನಷ್ಟೇ. ಒಳಗೆ ಭಯ ಕುದಿಯುತ್ತಿತ್ತು. ನಿಮಿಷ ನಿಮಿಷಕ್ಕೆ ತನ್ನ ಜವಾಬ್ದಾರಿ ಹೆಚ್ಚುತ್ತಿದೆ. ತನ್ನ ಕೈಲಾಗದ ಕೆಲಸವನ್ನೇ ಒಪ್ಪಿಕೊಂಡಿದ್ದೇನೆ, ಒಪ್ಪಿ ಕೊಳ್ಳುತ್ತಿದ್ದೇನೆ, ಎಂತಹ ಪರೀಕ್ಷಾ ಸಮಯ ಒದಗಿ ಬರುತ್ತಿದೆ. ಸಾಹುಕಾರರು ಇಂದು ಹೊರಟು ಹೋದರೆ ತಾನು ಒಬ್ಬನೇ ಉಳಿಯುವವನು, ಈ ಅಪರಿಚಿತರ ಮುಂದೆ ತನ್ನ ಪರೀಕ್ಷೆ!.... ಮಾನ ಪರೀಕ್ಷೆ. ..ಒಳಭಯವಿದ್ದರೂ, ವಿದ್ಯಾವಂತನ ಠೀವಿ ಯಿಂದ, ಆಗಲಿ ಸಾರ್, ಎಂದು ಒಪ್ಪಿಕೊಂಡನಷ್ಟೆ!

ಆ ಕುಳಿಯಿಂದ ಅವರು ಒಂದೆರಡು ಫರ್ಲಾಂಗು ಮುಂದೆ ನಡೆದರು. ಅಲ್ಲಿ ಒಂದು ದಿಣ್ಣೆಯ ಮೇಲೆ ಅದೇ ತೆರನಾದ ಮಣ್ಣಿನ ರಾಶಿ ಕಂಡಿತು.

"ಇದು ಸುರಂಗ ಹೊಡೆದಿರೋ ಗಣಿ, ಶಾಂತಪ್ಪ. ಈ ಸುತ್ತಲಿನ ಗಣಿ ಲ್ಲೆಲ್ಲೂ ಇಷ್ಟು ಆಳವಾದ ಸುರಂಗ ಹೊಡೆದಿಲ್ಲಾರೀ....ಇಲ್ಲಿನ ಕಲ್ಲಿನಲ್ಲಿ ಶೇಕಡಾ ಅರವತ್ತು ಮ್ಯಾಂಗನೀಸ್ ಇದೆ. ಇದಕ್ಕೆ ಮಹಾಲಕ್ಷ್ಮಿ ಗಣೀಂತ ಹೆಸರು..."

ಸಾಹುಕಾರರ ಮಾತನ್ನು ಕೇಳುತ್ತಾ ಹೂಗುಟ್ಟುತ್ತಿದ್ದ ಶಾಂತಪ್ಪ.

ಅಲ್ಲೇ ಸಣ್ಣ ಸಣ್ಣ ಒಂದೆರಡು ರಾಶಿಯಿದ್ದುವು; ಅವು ಸುರಂಗದಿಂದ ತೆಗೆದ ಅದಿರಿನ ರಾಶಿಗಳು. ಅವು ಬೆಳ್ಳಿಯಂತೆ ಹೊಳೆಯುತ್ತಿದ್ದು ಅತ್ಯುತ್ತಮ ದರ್ಜೆಯ ಅದಿರೆಂದು ಹೇಳಿಕೊಳ್ಳುವಂತಿದ್ದುವು.

ಸುರಂಗದೊಳಕ್ಕೆ ಇಳಿದು ಹೋಗುವಂತೆ ಮೆಟ್ಟಲಿದ್ದುವಾದರೂ ಅವು ಬಹಳ ಕಡಿದಾಗಿದ್ದು ಒಳಗಿಳಿಯಲು ಭಯವೇ ಆಗಿದ್ದಿತು. ಆದರೂ ಶಾಂತಪ್ಪ ಒಳಗಿಳಿದು ನೋಡಿದ. ಸುರಂಗವನ್ನು ಕೊರೆದು, ಮೇಲಿನ ಭಾರ ವಾದ ಮಣ್ಣಿನ ಹೊದಿಕೆಗೆ ಆಸರೆಯಾಗಿ ಮರದ ರೆಂಬೆಗಳನ್ನು ಕೊಡಲಾಗಿ ದ್ದಿತು. ನಿಮಿಷ ನಿಮಿಷಕ್ಕೂ ಮಣ್ಣು ಉದುರುತ್ತಿದ್ದಿತು. ಆದರೂ ಸಹ ಸಮಾರು ಇನ್ನೂರು ಅಡಿ ಆಳ ಇಳಿದು ಹೋದರೆ ಎದುರಿನಲ್ಲಿ, ನೆಲದಿಂದ ಮೇಲಿದ್ದ, ಬೆಳ್ಳಿಯಂತಹ ಮ್ಯಾಂಗನೀಸ್ ಅದಿರು ಕಾಣುತ್ತಿದ್ದಿತು.

ಶಾಂತಪ್ಪ, ಚನ್ನಯ್ಯ ಒಳಗಿಳಿದು ನೋಡುತ್ತಿದ್ದಾಗ, ಚನ್ನಯ್ಯನೆಂದ, "ತುಂಬಾ ಕಷ್ಟ ಸಾರ್. ಈ ಕಲ್ಲು ಕೀಳಬೇಕಾದ್ರೆ....ಇವಕ್ಕೆ ಡೈನಾಮೆಟ್ ಇಟ್ಟು ಉಡಾಯಿಸೋ ಹಾಗಿಲ್ಲ....ಹಾಗೆ ಮಾಡಿದ್ರೆ ಮೇಲಿಂದ ಮಣ್ಣು ಕಳಚಿ ಕೊಂಡು ಒಳಗಿರೋರೆಲ್ಲ ಮಣ್ಣಿನಲ್ಲಿ ಮುಚ್ಚಿ ಹೋಗ್ತಾರೆ. ಏನಿದ್ದರೂ ಉಳಿ ಯಲ್ಲಿ ಹೊಡೆದು ತೆಗೀಬೇಕು....ಅಷ್ಟೆ."

"ಟನ್ನಿಗೆ ಎಷ್ಟು ಕೊಡ್ತಾರೆ?" ಶಾಂತಪ್ಪನೆಂದ.

"ಮೂವತ್ತು ರೂಪಾಯಿ...."

"ಉಳಿದುದಕ್ಕೆ ?...."

"ಇಪ್ಪತ್ತು ರೂಪಾಯಿ...."

ಮೇಲೆ ನಿಂತಿದ್ದ ಸಾಹುಕಾರರ ಧೂಳು ತುಂಬಿದ್ದ ಬೂಟು ಮಾತ್ರ ಕಾಣಿಸುತ್ತಿದ್ದಿತು, ಸುರಂಗದೊಳಗಿಳಿದಿದ್ದ ಶಾಂತಪ್ಪನಿಗೆ. ಕೊಳವಿಯೊಂದ ರೊಳಗಿನಿಂದ ಊದಿದಂತೆ, ಸುರಂಗದ ಮೇಲಿನ ಬಾಯಿಂದ ಗಾಳಿ ಒಮ್ಮೊಮ್ಮೆ ಒಳಕ್ಕೆ ಬೀಸಿ ಬರುತ್ತಿದ್ದಿತು. ಹಾಗೆ ಗಾಳಿ ಬೀಸಿದಾಗ ಸುತ್ತಲಿನ ಗೋಡೆ ಗಳ ಹಸಿ ಮಣ್ಣಿನ ವಾಸನೆ ಮೂಗಿಗೆ ಬಡಿಯುತ್ತಿದ್ದಿತು. ಹೆಚ್ಚು ಬೆಳಕಿಲ್ಲದ್ದ ರಿಂದ ಸುತ್ತಲಿನ ಗೋಡೆಗಳು, ಮ್ಯಾಂಗನೀಸ್ ಅದಿರಿನ ಬಳ್ಳಿ (Veins of the ore) ಗಳು ಕಲ್ಲು ಮಣ್ಣಿನಲ್ಲಿ ಹಾದು ಹೋದುದು ಮಂಕಾಗಿ ಕಾಣುತ್ತಿದ್ದುವು. ಆ ಬಳ್ಳಿಯನ್ನೇ ಅನುಸರಿಸಿಕೊಂಡು ಹೋಗಿ ಸುರಂಗ ವನ್ನು ಕೊರೆದಿದ್ದರು. ಗಾಳಿ ಹೆಚ್ಚು ಬೀಸದಿದ್ದುದರಿಂದ ಶಾಂತಪ್ಪನಿಗೆ ಸೆಖೆಯಾಗಿ ಮೈ ಮುಖವೆಲ್ಲ ಬೆವತಿದ್ದುವು.

"ಈ ಸುರಂಗ ಕೊರೆಸಿದುದು ಯಾರು ಚನ್ನಯ್ಯ?" ಶಾಂತಪ್ಪ ಕೇಳಿದ.

"ನಾನೇ ಸಾರ್! ನನ್ನ ಜೊತೆಗೆ ಇಲ್ಲಿ ಮೊದಲು ಸುಬ್ಬಣ್ಣೋರೂಂತ ಮೇನೇಜರಿದ್ರು, ಅವರೂ ಸ್ವಲ್ಪ ನಮಗೆ ತಿಳಿವಳಿಕೆ ಕೊಡ್ತಿದ್ದರು....ಆಗಾಗ್ಗೆ ಮೈನಿಂಗ್ ಇಂಜಿನೀರು ಬಂದು ಹೇಳಿಕೊಡ್ತಿದ್ರು."

"ಮೈನಿಂಗ್ ಇಂಜಿನಿಯರ್ ಯಾರು?"

"ಗೋಪಾಲಯ್ಯನೋರೂಂತ ಇದಾರೆ...ಅವರೇ ಮೈನಿಂಗ್ ಇಂಜಿ ನಿಯರ್ರು."

ಚನ್ನಯ್ಯನ ಉತ್ತರ ಕೇಳಿ ಶಾಂತಪ್ಪನಿಗೆ ಆಶ್ಚರ್ಯವಾಯಿತು. ಗೋಪಾಲಯ್ಯ!...ಆ ಜೋಲು ಕೋಟಿನ ಕಿಮುಟು ಹಿಡಿದ ಟೋಪಿಯುವನು

ಗಣಿ ಕೆಲಸದಲ್ಲಿ ನಿಪುಣನೆ ?...ಇದ್ದರೂ ಇರಬಹುದು. ಕೇವಲ ಬಹಿರಂಗ ಪ್ರದರ್ಶನದಿಂದ ಅಂತರಂಗದ ಶಕ್ತಿ ತಿಳಿಯುವುದಿಲ್ಲ...ತನ್ನನ್ನು ನೋಡಿದರೆ ದೊಡ್ಡ ವಿದ್ಯಾವಂತ, ತಿಳಿದವನೆನ್ನುತ್ತಾರೆ; ಆದರೆ ತನಗೆ ನಿಜವಾಗಿಯೂ ಏನು ತಿಳಿದಿದೆಯೆಂದು ಒಳಹೊಕ್ಕು ನೋಡಿದವರಾರು ?

"ನಾನು ಈ ಗಣೀಗೆ ಬಹಳ ದುಡಿದಿದೀನಿ ಸಾರ್...ನನ್ನಿಂದಲೇ ಸಾವ ಕಾರ್ರಿಗೆ ಸಾವಿರಾರು ಟನ್ ಕಲ್ಲು ಹೋಗಿದೆ." ಮೇಲಕ್ಕೆ ಕೇಳಿಸೀತೆಂಬ ಭಯದಿಂದ ಮೆಲ್ಲನೆ ನುಡಿದ ಚನ್ನಯ್ಯ. ಅವನು ಗಟ್ಟಿಯಾಗಿ ಮಾತನಾಡಿದ್ದರೂ ಸಹ ಮೇಲೆ ನಿಂತಿದ್ದ ಸಾಹುಕಾರರಿಗೆ ಕೇಳುತ್ತಿರಲಿಲ್ಲ.

"ಹಾಗೇನು !"

"ಹೌದು ಸಾರ್...ನನ್ನಿಂದಲೇ ಸಾವಕಾರ್ರು ಇಷ್ಟು ಮುಂದೆ ಬಂದಿದ್ದು. ಈ ಚನ್ನಯ್ಯ ಕಂಟ್ರಾಟು ಮಾಡ್ದೇ ಇದ್ದಿದ್ರೆ ಈ ಗಣಿ ಇಷ್ಟು ಚೆನ್ನಾಗಿ ಆಗ್ತಿತ್ತ ?"

"ಹಾಗಾದ್ರೆ ನೀನು ಈ ಕೆಲಸದಲ್ಲಿ ಒಳ್ಳೆ ಪರಿಶ್ರಮ ಹೊಂದಿರಬೇಕೂಂತ ಕಾಣುತ್ತೆ" ಶಾಂತಪ್ಪನೆಂದ. ಅವನಿಗೆ ಚನ್ನಯ್ಯನ ಮಾತಿನಿಂದ ಒಂದು ಕುತೂಹಲ ಉದಯವಾಗಿತ್ತು.

"ನಾನು ಕುಂಸಿ ಗಣೀಲಿ ಹತ್ತು ವರ್ಷ ಕೆಲಸಮಾಡಿದೀನಿ ಸಾರ್... ಕೆಮ್ಮಣ್ಣುಗುಂಡಿ ಗಣೀಲಿ ಆರು ವರ್ಷ ದುಡಿದಿದ್ದೀನಿ...ನಾನು ಇಷ್ಟುದ್ದ ಹುಡುಗನಾದಾಗ್ನಿಂದ ಗಣೀಲೇ ಬೆಳ್ದಿದೀನಿ..."

ನಿರಕ್ಷರಸ್ಥನಾದರೂ ಅನುಭವ ದೈತ್ಯನೊಬ್ಬ ತನ್ನೆದುರು ನಿಂತಿರುವನೆನ್ನಿಸಿತು ಶಾಂತಪ್ಪನಿಗೆ.

"ಬನ್ನಿ ಬೇಗ...ಇನ್ನು ಬಟವಾಡೆಗೆ ಹೊತ್ತಾಗಿ ಬಿಡುತ್ತೆ", ಮೇಲಿನಿಂದ ಸಾಹುಕಾರರು ಕೂಗಿದರು.

ಕೂಗು ಕೇಳಿದ ಶಾಂತಪ್ಪ ಚನ್ನಯ್ಯ ಇಬ್ಬರೂ ನಿಧಾನವಾಗಿ ಮಣ್ಣಿನ ಮೆಟ್ಟಲುಗಳನ್ನೇರಿ ಮೇಲೆ ಬಂದರು. ಅವರು ಮೇಲೆ ಬರುವಷ್ಟರಲ್ಲಿ ಸಾಹುಕಾರರ ಮುಖದಲ್ಲಿ ಮೊದಲಿದ್ದ ಮುಗುಳುನಗೆ ಮಾಯವಾಗಿತ್ತು.

"ಚನ್ನಯ್ಯ!....ನೀನು ಪುನಃ ಷುರುಮಾಡಿಬಿಟ್ಟೆ....ನೋಡು ಆ ಲಾಟನಲ್ಲಿ ಕಮ್ಮಿ ಗ್ರೇಡಿನ ಕಲ್ಲು ಸೇರಿಸಿಬಿಟ್ಟಿದ್ದಿ," ಎಂದು ಅವರು ಎದುರಿನಲ್ಲಿ ರಾಶಿ ಹಾಕಿದ್ದ ಅದಿರನ್ನು ತೋರಿಸಿದರು. ಶಾಂತಪ್ಪ, ಚನ್ನಯ್ಯ ಇಬ್ಬರೂ

ಒಳಗೆ ಇಳಿದಿದ್ದಾಗ, ಸಾಹುಕಾರರು, ಆ ವಾರದಲ್ಲಿ ಚನ್ನಯ್ಯ ತೆಗೆಸಿ, ಒಡೆಸಿ ಕಟ್ಟಿಸಿದ್ದ ಮ್ಯಾಂಗನೀಸು ಅದಿರಿನ ರಾಶಿಯನ್ನು ಅಗೆಯಿಸಿ ಒಳಗಿದ್ದ ಅದಿರನ್ನು ಹೊರಹಾಕಿಸಿದ್ದರು. ಶಾಂತಪ್ಪನೂ ಆ ರಾಶಿಯನ್ನು ನೋಡಿದ ಮೇಲೆ ಬೆಳ್ಳಿಯಂತೆ ಹೊಳೆಯುತ್ತಿದ್ದ ಅದಿರಿನ ತುಣುಕುಗಳಿದ್ದುವು. ಒಳಗೆ ಕೊಂಚ ಕಡಿಮೆ ದರ್ಜೆಯ ಅದಿರನ್ನು ಬೆರೆಸಿ ರಾಶಿಯನ್ನು ನಿರ್ಮಿಸಿದ್ದ ಚನ್ನಯ್ಯ; ಮೇಲೆ ತುಂಬಿದ್ದ ಉತ್ತಮ ದರ್ಜೆಯ ಅದಿರನ್ನು ನೋಡಿ, ಆ ರಾಶಿಯಲ್ಲಿರುವುದೆಲ್ಲವೂ ಅದೇ ಅದಿರೆಂದು ಭಾವಿಸಿ ಆ ಬೆಲೆಯನ್ನು ಕೊಡುವರೆಂದು ಭಾವಿಸಿದ್ದನವನು.

ಮೋಸ!....ಚನ್ನಯ್ಯ ಸಾಹುಕಾರರಿಗೆ ಮೋಸ ಮಾಡಿದ! ಒಂದೆರಡು ನಿಮಿಷಗಳ ಮುನ್ನ ತನ್ನಿಂದಲೇ ಸಾಹುಕಾರರು ಸಾಹುಕಾರರಾದುದೆಂದು ಹೇಳುತ್ತಿದ್ದವನು, ತಾನು ಈ ಗಣಿಗಾಗಿ ಜೀವ ಸವೆಸಿರುವೆನೆಂದು ನುಡಿದಿದ್ದವನಿಂದ ಇಂತಹ ಮೋಸ! ಶಾಂತಪ್ಪ ಆಶ್ಚರ್ಯಗೊಂಡಿದ್ದ.

"ಇಲ್ಲ ಸಾರ್....ಎಲ್ಲೋ ಒಂದೆರ್ಡು ಚೂರು...ಕಾಣ್ದೇ ಹೆಣ್ಣು ಮಕ್ಕಳು ಹಾಕಿಬಿಟ್ಟಿರಬೇಕು," ಚನ್ನಯ್ಯನೆಂದ ಕೃತಕ ನಗುವನ್ನು ಸೂಚಿಸುತ್ತಾ.

ಆ ದಿನ ಬಟವಾಡೆಯ ದಿನ. ರಜವಾದ್ದರಿಂದ ಹೆಚ್ಚು ಜನ ಯಾವ ಕೂಲಿಯಾಳುಗಳೂ ಬಂದಿರಲಿಲ್ಲವಾದ್ದರಿಂದ ಚನ್ನಯ್ಯನ ಬಣ್ಣ ಬಯಲಾದ ಅವಮಾನವನ್ನು ಬೇರೆ ಯಾರೂ ನೋಡಲಿಲ್ಲ!

"ನೋಡು ಚನ್ನಯ್ಯ!....ನೀನು ಇನ್ನೊಂದಿನಾ ಹೀಗೇ ಮಾಡಿದ್ರೆ ನಿನ್ನ ಕಂಟ್ರಾಕ್ಟು ವಜಾ ಮಾಡಿಬಿಡ್ತೀನಿ....ಹುಷಾರಾಗಿರು." ಸಾಹುಕಾರರು ಕೋಪದಿಂದ ನುಡಿದರು.

ಆ ಕೋಪದ ಮಾತು ಕೇಳಿ ಶಾಂತಪ್ಪನಿಗೆ ಭಯವಾಯ್ತು. ಅಂತಹ ವಿನಯದ ಮಾತನ್ನಾಡುವವರಲ್ಲಿ ಇಂತಹ ಕಠಿಣ ನುಡಿಗಳು ಬರುತ್ತವೆಯೇ?

"ಇಲ್ಲ ಸಾರ್...ಇನ್ನೊಂದು ವಾರ ಸರಿಯಾಗಿ ನೋಡ್ಕೊಳ್ತೀನಿ...." ಚನ್ನಯ್ಯ ಹಲ್ಲು ಬಿಡುತ್ತಾ ಹೇಳಿದ.

"ಹೋಗ್ಲಿ ಎಷ್ಟು ಟನ್ನು ಮಾಡಿದಿ ಈ ವಾರ?" ಸಾಹುಕಾರರು ಕೇಳಿದರು. ಅವರ ಕೋಪವಾರಿರಲಿಲ್ಲ.

"ಎಂಭತ್ತಾರು ಟನ್ನಿದೆ ಸಾರ್."

ಸಾಹುಕಾರರು ಅಡಿಕಡ್ಡಿಯನ್ನು ತೆಗೆದುಕೊಂಡು ತಾವೇ ಆ ರಾಶಿಯನ್ನಳೆದರು. ಉದ್ದ, ಅಗಲ, ಎತ್ತರವನ್ನಳೆದು ಅವರೇ ಗುಣಿಸಿದನಂತರವೆಂದರು,

"ಎಂಭತ್ತಾರು ಯಾವ ಲೆಕ್ಕದಲ್ಲಿ ಬರುತ್ತಯ್ಯ ?"

"ಹೌದು ಸಾರ್, ಎಂಬತ್ತಾರು ಟನ್ನು....ನಾನೂ ಅಳೆದು ಲೆಕ್ಕ ಹಾಕಿದೀನಿ....ನಿಮ್ಮ ಸೂಪರ್ವೈಸರೂ ಲೆಕ್ಕಮಾಡಿದ್ದಾರೆ....ಅವರ್ನೇ ಕೇಳಿ ಬೇಕಾದ್ರೆ" ಚನ್ನಯ್ಯನೆಂದ,

"ಏನು ಮಾಣಿಕ್ಯಂ ನೀವು ಅಳತೆ ತೆಗೆದ್ಕೊಂಡ್ರ ?....ನೀವೂ ಹೀಗೆ ಅಳತೆ ತೆಗೆದ್ಕೊಂಡ್ರ ?"

ಮಾಣಿಕ್ಯಂ ಮುಖ ಜೋಲು ಹಾಕಿಕೊಂಡು ಸುಮ್ಮನಿದ್ದ.

"ನೋಡು ಚನ್ನಯ್ಯ...ನಿನ್ನ ಲಾಟು ಎತ್ತರ ಕಮ್ಮಿ ಇದೆ...ಈ ಸಾರ ಕಲ್ಲೂ ಚೆನ್ನಾಗಿಲ್ಲ... ಆದ್ರಿಂದ ಒಳ್ಳೇ ಕಲ್ಲಿನ ಬೆಲೆ ಕೊಡೋದಿಲ್ಲ..." ಎಂದು ಹೇಳಿ ಸಾಹುಕಾರರು ಲಾರಿಯ ಬಳಿ ನಡೆದರು. ರಿಪೇರಿಯಾದ ಲಾರಿ ಬಂದು ಆಗಲೇ ಅಲ್ಲಿ ನಿಂತಿದ್ದಿತು.

ಚನ್ನಯ್ಯ ಸಾಹುಕಾರರ ಹಿಂದೆಯೇ ತಲೆ ಕೆರೆಯುತ್ತಾ ನಡೆದ, "ಹಾಗೆ ಮಾಡ್ಬೇಡಿ ಸಾರ್....ಈ ಸಾರ ಕೂಲಿಯೋರ್ಗೆ ಕೊಡೋಕೇ ಸಾಲೋದಿಲ್ಲ," ಎಂದ ಗೋಗರೆಯುತ್ತಾ.

"ಅವೆಲ್ಲಾ ಸಾಧ್ಯವಿಲ್ಲ....ನಿನ್ನ ಯಾರು ಹಾಗೆ ಮಾಡೂಂದೋರು ?" ಲಾರಿಯೊಳಗೆ ಕೂರುತ್ತಾ ಸಾಹುಕಾರರೆಂದರು.

"ಇಲ್ಲಾ ಸಾರ್....ಕಲ್ಲು ಚೆನ್ನಾಗಿದೆ....ಎಲ್ಲೋ ಒಂದು ಕಡೆ ಎತ್ತರ ಒಂದರ್ಧ ಅಂಗುಲ ಕಮ್ಮಿ ಇದೆ ಅಷ್ಟೇನೆ." ಪುನಃ ಅದೇ ತಲೆ ಕೆರೆತ.

ಎಂತಹ ಭಂಡ ಮನುಷ್ಯನಿದ್ದಾನೆ ಈ ಚನ್ನಯ್ಯ! ತಪ್ಪುಮಾಡಿದುದಕ್ಕೆ ಸಾಹುಕಾರರು ಇವನನ್ನು ವಜಾ ಮಾಡದೆ ಸುಮ್ಮನೆ ಇರುವುದೇ ಹೆಚ್ಚೆನಿಸಿರುವಾಗ, ಇವನು ಪುನಃ ತಾನು ಸರಿಯಾಗಿರುವೆನೆಂದು ಅಂಗಲಾಚುತ್ತಿರುವನಲ್ಲ,

"ಬನ್ನಿ ಮಿಸ್ಟರ್ ಶಾಂತಪ್ಪ—ಹೋಗೋಣ, ಹೊತ್ತಾಗುತ್ತೆ," ಸಾಹುಕಾರರು ಕೂಗಿದರು. ಶಾಂತಪ್ಪ ತಕ್ಷಣ ಲಾರಿಯ ಬಳಿಗೆ ನಡೆದ.

"ಸ್ವಲ್ಪ....ಸಾರ್....ಎಳನೀರು ಒಡೀತಿದಾನೆ," ಚನ್ನಯ್ಯ ಸಾಹುಕಾರರಿಗೆ ಹೇಳಿದ

"ಇದೆಲ್ಲ ಯಾಕೆ ತರಿಸಿದ್ದೆ ಈಗ...." ಎನ್ನುತ್ತಾ ಸಾಹುಕಾರರು ಕೆಳಗಿಳಿದರು.

ದೂರದಲ್ಲಿ ಆಳೊಬ್ಬನು ಕುಡುಗೋಲಿನಿಂದ ಎಳನೀರನ್ನು ಕೊಚ್ಚುತ್ತಿದ್ದುದು ಕಾಣಿಸಿತು. ಚನ್ನಯ್ಯ ಹೋಗಿ ಎರಡು ಎಳನೀರು ತಂದು ಸಾಹುಕಾರರು, ಶಾಂತಪ್ಪನಿಗೆ ಕೊಟ್ಟ.

ಸಾಹುಕಾರರು ಎಳನೀರನ್ನು ಕುಡಿದನಂತರ ಆ ಕಾಯನ್ನು ಬಿಸುಟರು. ಕೂಲಿಯ ಬಾಲಕನೊಬ್ಬ ಓಡಿಬಂದು ಅದನ್ನೆತ್ತಿಕೊಂಡ. ಶಾಂತಪ್ಪನೂ ಕುಡಿದುಳಿದ ಕಾಯನ್ನು ಆ ಬಾಲಕನಿಗಿತ್ತ.

ಲಾರಿಯು ಹೊರಟಿತು. ಒಂದೆರಡು ನಿಮಿಷ ಮೌನವಾಗಿ ಮುಂದುವರೆಯಿತು.

"ಕಂಟ್ರಾಕ್ಟರುಗಳ ಹತ್ತಿರ ತುಂಬಾ ಹುಷಾರಾಗಿರಬೇಕು ನೋಡಿ...." ಲಾರಿಯಲ್ಲಿದ್ದ ಸಾಹುಕಾರರು ಇದ್ದಕ್ಕಿದ್ದಂತೆ ನುಡಿದರು. ಕೋಪವಿಳಿದು ಅವರ ಮುಖ ಸೌಮ್ಯವಾಗಿದ್ದಿತು. ಅವರು ದೂರದಲ್ಲಿ ನೋಡುತ್ತಾ ಮಾತನಾಡಿದರು.

"ಹ್ಞೂ...." ಶಾಂತಪ್ಪನೆಂದ.

"ಮೇಲೆ ಒಳ್ಳೆ ಕಲ್ಲಿಟ್ಟು ಒಳಗೆ ಕೆಟ್ಟದ್ದು ಸೇರಿಸಿಬಿಡ್ತಾರೆ. ಎತ್ತರ ಒಂದು ಅಡಿ ಇದೆಯೆನ್ತಾರೆ, ಹತ್ತೇ ಅಂಗುಲ ಇಟ್ಟಿರ್ತಾರೆ......ಶುದ್ಧ ಮೋಸಗಾರರು" ಸಾಹುಕಾರರೆಂದರು ಪುನಃ.

"ಇವರ್ನೆಲ್ಲ ಕಳಿಸಿ ಬೇರೆಯವರನ್ನ ತರೋದು ತಾನೇ ಸಾರ್?"

"ಹಾಗಾಗೋದಿಲ್ಲ ಮಿಸ್ಟರ್ ಶಾಂತಪ್ಪ!....ಅವರನ್ನ ಬಿಟ್ರೆ ನಮಗೆ ಬೇರೆಯವರು ಸಿಗೋದು ಕಷ್ಟ. ನೋಡಿ, ಈ ಚನ್ನಯ್ಯ ನಮಗೆ ವಾರಕ್ಕೆ ನೂರು ಟನ್ ಕಲ್ಲು ತೆಗೆದುಕೊಡ್ತಾನೆ, ಅದೂ ಒಳ್ಳೇದು. ಬೇರೆಯೋರ್ಯಾರೂ ಹೀಗೆ ಕೆಲ್ಸ ಮಾಡಿಸೋದಿಲ್ಲ. ಸರಿಯಾದ ಕಂಟ್ರಾಕ್ಟರು ಸಿಗೋದು ಕಷ್ಟ."

"ಹೂ...."

"ಅವರನ್ನೇ ಒಂದು ವಾರ ಹೊಗಳಬೇಕು,....ಒಂದು ವಾರ ಬಯ್ಯಬೇಕು....ಒಂದೊಂದು ವಾರ ಹೆದರಿಸಬೇಕು....ಹೀಗೇ ಮಾಡಿ ಕೆಲಸ ತೆಗೀಬೇಕು! ಅವರನ್ನ ಬೇಜಾರು ಮಾಡಿಸಿ ನಮ್ಮ ಹತ್ತಿರ ಕಂಟ್ರಾಕು

ಸಾಕು ಅನ್ನಿಸಲೂಬಾರದು....ನಾವು ಸಡಿಲವಾಗಿದೀವಿ ಏನು ಆಟ ಬೇಕಾದ್ರು ಆಡಬಹುದು ಅಂತ ತಿಳಿಯೋ ಹಾಗೆ ನಾವು ವರ್ತಿಸಲೂಬಾರದು....ಅವರನ್ನ ಹೊಗಳಿ ಉಬ್ಬಿಸಬೇಕು....ಹೀಗೆ ಕೆಲಸ ತೆಗೀಬೇಕು."

ಶಾಂತಪ್ಪ, ಸಾಹುಕಾರರ ವ್ಯವಹಾರದ ಚಾತುರ್ಯದ ಮಾತು ಕೇಳಿ ಆಶ್ಚರಿಗೊಂಡ.

"ಒಟ್ಟಿನಲ್ಲಿ ನಮಗೆ ಒಳ್ಳೆ ಆದಿರು ಬೇಕು, ಹೆಚ್ಚಾಗಿ ಬರಬೇಕು... ಎಂದು ಸಾಹುಕಾರರು ಸುಮ್ಮನಾದರು.

ಲಾರಿಯು ಗುಡ್ಡವಿಳಿದು ಬಂದಿದ್ದಿತು. ಎದುರಿನಲ್ಲಿ ತೆಂಗಿನ ಮರದ ಮಧ್ಯೆ ರಾಮನಾಯ್ಕನ ಹಳ್ಳಿಯ ಮನೆಗಳ ಹೆಂಚುಗಳು ಕಾಣಿಸುತ್ತಿದ್ದುವು. ಸುತ್ತಲಿನ ಹೊಲಗಳಲ್ಲಿ, ಅದೂ ಕುಯಿಲುಗಾಲವಾದ್ದರಿಂದ, ರೈತವರ್ಗದವರು ಪೈರನ್ನು ಕೊಯ್ಯುತ್ತಲೂ, ರಾಶಿ ಹಾಕುತ್ತಲೂ, ಒಂದೊಂದೆಡೆ ನೆಲದ ಮೇಲೆ ಬಡಿಯುತ್ತಲೂ, ಎತ್ತುಗಳಿಂದ ತುಳಿಸುತ್ತಲೂ ಇದ್ದರು. ಅವರೆಲ್ಲ ಲಾರಿಯ ಶಬ್ದ ಕೇಳಿ, ಲಾರಿಯತ್ತ ತಿರುಗಿನೋಡುತ್ತ ಮಾತನಾಡಿಕೊಂಡರು. ಲಾರಿಯು ಹತ್ತಿರ ಬಂದಂತೆ ಹಳ್ಳಿಯ ಮನೆಗಳ ಬಾಗಿಲಿನಲ್ಲಿ, ಕಿಟಕಿಗಳಲ್ಲಿ ಜನ ನಿಂತು ಲಾರಿಯನ್ನು ನೋಡುತ್ತಿದ್ದರು. ಕೆಲವು ವರ್ಷಗಳಿಂದ ಲಾರಿ ಕಾರುಗಳು ಹೀಗೆಯೇ ಅವರ ಮನೆಯ ಮುಂದೆ ತಿರುಗುತಿದ್ದರೂ, ಈ ತೆರನಾಗಿ ನಿಂತು ನೋಡುವುದವರ ನಿತ್ಯಪಾಠವಾಗಿತ್ತು.

ಲಾರಿಯು ರಾಮನಾಯ್ಕನ ಹಳ್ಳಿಯ ಮನೆಯ ಬಾಗಿಲಿನಲ್ಲಿ ನಿಂತಾಗ ಕೆರೆಯಲ್ಲಿ ತೊಳೆಯಲ್ಪಟ್ಟು ಸ್ವಚ್ಛವಾದ 'ಬ್ಯೂಕು' ಬಂದು ಹೊಳೆಯುತ್ತ ನಿಂತಿದ್ದಿತು. ಸಾಹುಕಾರರು ಲಾರಿಯಿಂದಿಳಿದು ಕಾರು ತೊಳೆದವರಿಗೆ ಕೊಡಲು ಎಂಟಾಣೆಯ ನಾಣ್ಯವೊಂದನ್ನು ಕೊಟ್ಟರು.

ಅವರೆಲ್ಲ ಒಳಗೆ ಹೋಗಿ ಕುಳಿತನಂತರ, ತಾವು ತಂದ ಚೀಲದಿಂದ ಚಿಲ್ಲರೆ ನಾಣ್ಯಗಳನ್ನು ಮೇಜಿನ ಮೇಲೆ ಚೆಲ್ಲಿ ಎಣಿಸಲು ಶಾಂತಪ್ಪನಿಗೆ ಹೇಳಿದರು. ಶಾಂತಪ್ಪನು ನಾಲ್ಕಾಣೆ ಎಂಟಾಣೆಗಳ ನಾಣ್ಯಗಳನ್ನು ಹತ್ತು ರೂಪಾಯಿಗಳಂತೆ ಎಣಿಸತೊಡಗಿದ. ಸಾಹುಕಾರರು ತಮ್ಮ ಮೂರು ಗಣಿಗಳ ಕಂಟ್ರಾಕ್ಟರುಗಳಿಗೂ ಹಣವನ್ನೆಣಿಸಿಕೊಡತೊಡಗಿದರು. ಚನ್ನಯ್ಯನ ಸರದಿ ಬಂದಾಗ ಸಾಹುಕಾರರೆಂದರು,

"ನಿನ್ನ ಹಣದಲ್ಲಿ ನೂರು ರೂಪಾಯಿ ಹಿಡೀತೀನಿ!"

"ಹಾಗೆ ಮಾಡಬೇಡಿ ಸಾರ್....ಈ ವಾರ ಕೂಲಿ ಜಾಸ್ತಿಯಾಗಿದೆ...... ನನ್ನ ಕೈನಿಂದಲೇ ಇನ್ನೂರು ರೂಪಾಯಿ ಹಾಕಿಕೊಳ್ಳಬೇಕಾಗಿದೆ....." ಚನ್ನಯ್ಯನೆಂದ.

"ನಿಂದು ಪ್ರತಿವಾರವೂ ಇದೇ ಗೋಳಾಗಿಹೋಯ್ತು...." ಸಾಹುಕಾರರು ಸಿಡಿಲಿನಂತೆ ನುಡಿದರು. ಕುಳಿತಿದ್ದವರೆಲ್ಲ ಬೆಚ್ಚಿಬಿದ್ದಂತೆ ಸ್ತಬ್ಧರಾದರು.

"ಹಾಳಾಗಿ ಹೋಗಲಿ.....ಈ ವಾರಕ್ಕೆ ತೆಗೆದುಕೋ.....ಮುಂದಿನ ವಾರ ಹೀಗೇ ಆದರೆ ಇನ್ನೂರು ರೂಪಾಯಿ ಹಿಡೀತೀನಿ...." ಎಂದು ಎಂಭತ್ತಾರು ಟನ್ನು ಅದಿರಿಗೆ ಸರಿಯಾಗಿ ಹಣವನ್ನೆಣಿಸಿಕೊಟ್ಟರು.

ಎರಡು ಮೂರು ಸಹಸ್ರದಷ್ಟು ಹಣವನ್ನು ತೆಗೆದುಕೊಂಡು ಕಂಟ್ರಾಕ್ಟರುಗಳೆಲ್ಲಾ ತಮ್ಮ ಕಡೆಯವರಿಗೆ ಕೂಲಿ ಹಣವನ್ನು ಹಂಚಲು ಹೊರಟು ಹೋದನಂತರ, ಅಲ್ಲಿ ಶಾಂತಪ್ಪ, ಮಾಣಿಕ್ಯಂ, ಸಾಹುಕಾರರು ಮಾತ್ರ ಉಳಿದರು. ಹೊರಬಾಗಿಲಿನಲ್ಲಿ, ರಾಮನಾಯ್ಕನ ಹಳ್ಳಿಯ ಬಿಡಾರವನ್ನು ಕಾಯಲು ಹೊಸದಾಗಿ ಬಂದಿದ್ದ ಪಠಾಣ ಕಾವಲುಗಾರ ನಿಂತಿದ್ದ.

"ಎಲ್ಲಾ ಮುಗಿದಹಾಗಾಯ್ತು....ಮಿಸ್ಟರ್ ಶಾಂತಪ್ಪ, ಇನ್ನು ಮೇಲೆ ನೀವು ಎಲ್ಲಾ ನೋಡಿಕೋಬೇಕು. ನಾನು ಪ್ರತಿ ಬುಧವಾರ ಇಲ್ಲಿಗೆ ಬಂದು ಬಿಡ್ತೀನಿ, ಬಟವಾಡೆಗೆ...." ಸಾಹುಕಾರರೆಂದರು.

"ಆಗಲಿ ಸಾರ್."

"ಇನ್ನೇನು ?"

"ಏನು ಇಲ್ಲ....ನಾನು ಬೇರೆ ಮನೆ ಮಾಡಿಕೊಳ್ಳೋ ಬದಲು ಈ ಬಿಡಾರದಲ್ಲೇ ಇದ್ದುಬಿಡ್ತೀನಿ. ಒಬ್ಬ ಅಡಿಗೆಯವನ್ನ ಕರಕೊಂಡು ಬಂದ್ರೆ ಬಿಟ್ಟರೆ, ಮಾಣಿಕ್ಯಂಗೂ ಸಹ ಅಡಿಗೆ ಮಾಡ್ತಾನೆ....ಈಗ ಅವರೇ ಅವರ ಊಟ ತಯಾರು ಮಾಡಿ ಕೊಳ್ತಿರಬೇಕೂಂತ ಕಾಣುತ್ತೆ...." ಶಾಂತಪ್ಪನೆಂದ.

"ಓಹೋ....ಸಂತೋಷವಾಗಿ ಆಗಬಹುದು....ಒಂದೇ ಕಂಪೆನಿಯವರ ನೀವಿಬ್ಬರೂ ಹೊಂದಿಕೊಂಡಿರೋದಾದರೆ ನನಗೆ ತುಂಬಾ ಸಂತೋಷ... ತುಂಬಾ ಸಂತೋಷ...."ಸಾಹುಕಾರರು ಸಂತೋಷಚಿತ್ತರಾಗಿಯೇ ಇದ್ದುದನ್ನು ಶಾಂತಪ್ಪನು ಗಮನಿಸದಿರಲಿಲ್ಲ.

"ಏನು ಮಾಣಿಕ್ಯಂ....ನಿಮ್ಮ ಅಭಿಪ್ರಾಯವೇನು ?" ಸಾಹುಕಾರರು ಕೇಳಿದರು.

"ಆಗಲಿ ಸಾರ್!" ಮಾಣಿಕ್ಯಂ ಉತ್ತರವಿತ್ತ.

"ಸರಿ ಹಾಗಾದ್ರೆ....ನಾನು ಹೊರಡ್ತೇನೆ. ನೀವು ಯಾವಾಗ ಬೇಕಾದರೂ ಅಡಿಗೆಯವನನ್ನು ಕರಕೊಂಡು ಬನ್ನಿ, ಅವನ ಸಂಬಳ ಕೊಡೋ ಭಾರ ನನ್ನದು...." ಎನ್ನುತ್ತಾ ಸಾಹುಕಾರರೆದ್ದರು.

ಮಾಣಿಕ್ಯಂ ಸಾಹುಕಾರರ ಮುಖವನ್ನೇ ನೋಡುತ್ತಾ ಎದ್ದು ನಿಂತ.

"ಏನು ಮಾಣಿಕ್ಯಂ?" ಎಂದರು ಸಾಹುಕಾರರು.

"ನನಗೆ ಹತ್ತು ರೂಪಾಯಿ ಬೇಕಾಗಿತ್ತು....ಸಾರ್.....ಖರ್ಚಿಗೆ ಒಂದು ಕಾಸೂ ಇಲ್ಲೆ!" ತಮಿಳ್ಗನ್ನಡದಲ್ಲಿ ಹೇಳಿದ ಮಾಣಿಕ್ಯಂ.

"ಹತ್ತು ರೂಪಾಯಿ ಬೇಕೆ?....ಖಾ....ಸಿಂಗೇನಾದ್ರೂ ಬೇಕೇನಯ್ಯ?" ಸಾಹುಕಾರರು ಕೇಳಿದರು.

ಹೊರಗೆ ಬೀಡಿ ಸೇದುತ್ತಾ ನಿಂತಿದ್ದ ಪಠಾಣ ಖಾನ್, ಬೀಡಿಯನ್ನು ಬಿಸುಟು, ಹೊಗೆಯನ್ನು ಬುಸ್ಸನೆ ಬಾಯಿಂದ ಒಂದೇ ಬಾರಿಗೆ ಖಾಲಿ ಮಾಡಿ ಒಳಗೆ ಓಡಿಬಂದು,

"ಪಾಂಚ್ ರುಪ್ಯಾ ಹೋನ ಸಾಬ್...." ಎಂದ.

ಸಾಹುಕಾರರು ಅವರಿಬ್ಬರಿಗೂ ನೋಟುಗಳನ್ನು ತೆಗೆದುಕೊಟ್ಟು ತಮ್ಮ ಪುಸ್ತಕದಲ್ಲಿ ಬರೆದುಕೊಂಡನಂತರ ಹೇಳಿದರು,

"ನಿಮಗೆ ನಿಮ್ಮ ಖರ್ಚಿಗೆ ಏನಾದರೂ ಬೇಕಿದ್ದರೆ ತೆಗೆದ್ಕೊಳ್ಳಿ ಮಿಸ್ಟರ್ ಶಾಂತಪ್ಪ!"

"ಬೇಡ ಸಾರ್....ನನ್ನ ಬಳಿಯೇ ಸ್ವಲ್ಪ ಹಣವಿದೆ....' ಶಾಂತಪ್ಪ ನಮ್ರತೆಯಿಂದ ನುಡಿದ.

"ಸರಿ ಹಾಗಾದ್ರೆ....ನಾನು ಹೊರಡ್ತೀನಿ....ಇನ್ನು ಮಠಕ್ಕೆ ಬೇರೆ ಹೋಗಬೇಕು...." ಎನ್ನುತ್ತಾ ಹೊರಟರು. ಬಾಗಿಲಿನಲ್ಲಿ ಕಾರು ಬಂದು ನಿಂತಿದ್ದಿತು. ಸಾಹುಕಾರರು ಅದರ ಬಳಿ ಹೋಗುವಷ್ಟರಲ್ಲಿ ಮಾಣಿಕ್ಯಂ ಬಾಗಿಲು ತೆರೆದು ಒಳಗೆ ಕೆಲವು ಲೆಕ್ಕದ ಪುಸ್ತಕಗಳನ್ನಿಟ್ಟು ಸಾಹುಕಾರರು ಕುಳಿತನಂತರ ಬಾಗಿಲು ಮುಚ್ಚಿದ್ದ.

ಡ್ರೈವರು ಯಂತ್ರಚಾಲನೆ ಮಾಡಿದಂತೆ ಸಾಹುಕಾರರು 'ಹೊರಡುತ್ತೇನೆ', ಎಂದು ಹೇಳುವಂತೆ ತಲೆಯಾಡಿಸಿದರು. ಶಾಂತಪ್ಪ, ಮಾಣಿಕ್ಯಂ ಇಬ್ಬರೂ ವಂದಿಸಿದರು. ಕಾರು ಮುಂದೆ ಹೊರಟಿತು. ಅದು ಬಹುದೂರ

ಹೋಗಿ ರಸ್ತೆಯಲ್ಲಿ ತಿರುಗಿ ಮರೆಯಾಗುವವರೆಗೂ ಶಾಂತಪ್ಪ ನೋಡುತ್ತಾ ನಿಂತಿದ್ದ.

"ಒಳಗೆ ಬನ್ನಿ ಸಾರ್...."ಎಂದು ಮಾಣಿಕ್ಯಂ ಹೇಳಿದಾಗಲೇ ಶಾಂತಪ್ಪ ತಿರುಗಿ ನೋಡಿದುದು.

೩

# ಗಣಿಯಲ್ಲ — ನರಕ !

ರಾಮನಾಯ್ಕನ ಹಳ್ಳಿಯಲ್ಲಿ ಹೆಚ್ಚೆಂದರೆ ಮೂರು ಸಾವಿರಕ್ಕೆ ಮೀರದ ಜನಸಂಖ್ಯೆಯಿದ್ದಿತು ; ಅದೊಂದು ಗ್ರಾಮ. ಊರಿನ ಮಧ್ಯೆ ಹಾದುಹೋಗಿದ್ದುದೊಂದೇ ಮುಖ್ಯ ರಸ್ತೆ. ಅದರ ಇಕ್ಕೆಲಗಳಲ್ಲಿಯೂ ಮನೆಗಳಿದ್ದುವು. ರಸ್ತೆಯ ಮಧ್ಯೆ ಒಂದೆಡೆ ಈಶ್ವರನ ದೇವಾಲಯವೊಂದಿದ್ದಿತು. ಸುತ್ತಲಿನ ಹಳ್ಳಿಯ ಜನರೆಲ್ಲ ಈ ದೇವರ ಭಕ್ತರಾಗಿ ನಡೆದುಕೊಳ್ಳುತ್ತಿದ್ದರು. ವರ್ಷಕ್ಕೊಮ್ಮೆ ನಡೆಯುವ ಜಾತ್ರೆಯಲ್ಲಿ ತಾವೂ ಬಂದು ತಮ್ಮ ಸೇವೆ ಸಲ್ಲಿಸಿ ಹೋಗುತ್ತಿದ್ದರು. ದೇವಾಲಯದ ಎದುರಿನಲ್ಲೊಂದು ಮಂಟಪವಿದ್ದಿತು. ಅದರ ಕಲ್ಲುಗೋಪುರವು ಸುತ್ತಲೂ ಐದಾರು ಮೈಲುಗಳಿಗೆ ಕಾಣುತ್ತಿದ್ದಿತು. ಅದೇ ಊರಿನಲ್ಲಿ ಗಣ್ಯರೆನಿಸಿಕೊಂಡ ವ್ಯಕ್ತಿಗಳು ಸಂಜೆ ಹರಟೆಗೆ ಸೇರುವ ಸ್ಥಳವಾಗಿದ್ದಿತು. ಆ ಮಂಟಪದ ಒಂದು ಪಕ್ಕದಲ್ಲಿ ಊರಿಗೊಂದಾದ ಭಟ್ಟರ ಹೋಟೇಲು, ಮತ್ತೊಂದು ಭಾಗದಲ್ಲಿ ಗ್ರಾಮ ಪಂಚಾಯ್ತಿಯ ಕಟ್ಟಡವಿದ್ದುವು. ಊರಿನಲ್ಲಿನ ಸಮಾಚಾರವೆಲ್ಲವೂ ಪ್ರಚಾರವಾಗುತ್ತಿದ್ದ ಧ್ವನಿವರ್ಧಕಗಳೆಂದರೆ ಈ ಎರಡು ಕಟ್ಟಡಗಳೇ ಆಗಿದ್ದುವು. ಈ ಹಳ್ಳಿಯಲ್ಲಿ ಮತ್ತೊಂದು ಧ್ವನಿವರ್ಧಕವೂ ಇದ್ದಿತು. ಅದು ಶಿವಪ್ಪನ ಹೋಟೆಲು ; 'ವೀರಶೈವರ ಕಾಫಿ ಕ್ಲಬ್ ಮತ್ತು ಭೋಜನ ಶಾಲ' ಎಂಬ ಮಾಸಿದ ಬೋರ್ಡೊಂದು ಬಾಗಿಲಿನಲ್ಲಿ ತೂಗಾಡುತ್ತಿದ್ದರೂ ಈ ಹೋಟೇಲಿನಲ್ಲಿ ಭೋಜನ ಮಾಡುತ್ತಿದ್ದವರು ಅತಿ ವಿರಳ. ಭೋಜನ ಮಾಡಿದ್ದರೂ ಅದರ ಕುರಿತಾದ ವ್ಯಾಖ್ಯಾನವನ್ನು ಮಾಡದೆ ಇರುತ್ತಿದ್ದವರು ಅತಿ ವಿರಳ.

ಊರಿನ ಮತ್ತೊಂದು ಭಾಗದಲ್ಲಿ ಭಾವಿಯ ಕಟ್ಟೆಯಿದ್ದಿತು, ಕೆರೆಯ ಪಕ್ಕದಲ್ಲಿಯೇ ತೋಡಿದ್ದರಿಂದ ಸಾಧಾರಣವಾಗಿ ನೀರು ಬತ್ತುತ್ತಿರಲಿಲ್ಲ ಅಲ್ಲಿ.

ಊರಿನ ಹೆಂಗಸರ ಹರಟೆಯ ಕೇಂದ್ರವಾಗಿದ್ದಿತದು. ಊರಿನ ಸಮಾಚಾರವು ಹೋಟೆಲಿನಲ್ಲಿ ಪಂಚಾಯ್ತಿ ಕಟ್ಟೆಯಲ್ಲಿ ಮೊದಲು ಗಂಡಸರಿಗೆ ತಿಳಿಯುತ್ತಿದ್ದಂತೆ ಹೆಂಗಸರಿಗೆ ಮೊದಲು ತಿಳಿಯುತ್ತಿದ್ದುದು ಈ ಭಾವಿ ಕಟ್ಟೆಯಲ್ಲಿ.

ಆದ್ದರಿಂದಲೇ ಶಾಂತಪ್ಪ ಆ ಊರಿಗೆ ಬಂದ ದಿನ ಸಂಜೆಯೇ ಗಂಡಸರು ಮನೆಗೆ ಕಾಲಿಡುತ್ತಿದ್ದಂತೆಯೇ, "ಗಣಿಗೆ ಹೊಸ ಮ್ಯಾನೇಜರ್ರು ಬಂದವ್ರಂತೆ?" ಎಂದು ಮನೆಯ ಹೆಂಗಸರು ಹೇಳಿದ್ದರು. ಅದಕ್ಕೆ ಉತ್ತರವಾಗಿ ಗಂಡಸರೂ, "ಹೌದು, ನಂಗೂ ತಿಳೀತು. ನಾನೂ ಅದ್ನೇ ಏಳ್ಬೇಕೂಂತಿದ್ದೆ" ಎಂದು ಉತ್ತರವಿತ್ತಿದ್ದರು.

"ಈ ಉಡ್ಗ ಎಷ್ಟು ದಿವ್ಸ ಬಾಳ್ತಾನೋ ಇಲ್ಲಿ ನೋಡ್ಬೇಕು!" ಹೆಂಗುಸೆಂದಿದ್ದಳು.

"ಅದ್ಯಾಕೆ ಅಂಗೇಳ್ತಿ?" ಅದೇ ಅವನು ಆ ದಿನ ಹೊಡೆದ ಹರಟೆಯ ವಿಷಯವಾಗಿದ್ದಿತು.

"ಆ ಹುಲಿಯಂಥ ಮನ್ಸ ಸುಬ್ಬಣ್ಣ, ಆ ಕರಡಿಯಂಥವ ಕೊಂಗ ಮಾಣಿಕ್ಯಂ ಇವರ ಕೈಲಿ ಬಾಳೋದು ಸುಮ್ನೇನಾ?"

"ಅದೆಲ್ಲ ಈಯಪ್ಪಂತಾವ ನಡೆಯೋಕಿಲ್ಲ. ಯಾಕೆ ಗೊತ್ತ?....ಈತ ಓದವ್ನೆ. ಇವ್ನಷ್ಟು ಈ ಗಣೀ ಸಾವ್ಕಾರ್ರೂ ಓದಿಲ್ಲವಂತೆ....ಇವ್ನಷ್ಟು ಈ ಸುತ್ತಲಿನ ಗಣೀಲೇ ಯಾರೂ ಓದಿಲ್ವಂತೆ!"

"ಓ! ಅಂಗಾ....ಸಂಬಳ ಎಷ್ಟೊ?"

"ಏನೋ ಗೊತ್ತಿಲ್ಲ. ಅದು ಇನ್ನೂ ಯಾರ್ಗೂ ಗೊತ್ತಾಗಿಲ್ಲ. ಯಿಚಾರಿಸ್ಬೇಕು. ನಾಳೆ ನಾಡಿದ್ರಲ್ಲಿ ಗೊತ್ತಾಗ್ತದೆ."

"ಮದ್ವೆ ಆಗೈತಾ?"

"ಇಲ್ಲಾಂತಾ ಕಾಣ್ತದೆ....ಇಲ್ದಿದ್ರೆ ಅದೇ ಮನೇಲಿ, ಆ ಕೊಂಗನ ಜತೇಲೇ ಇರ್ತೀನೀಂತ ಏಳ್ತಿದ್ನ?"

"ಅಲ್ಲೇ ಇದ್ರೆ ಊಟ ತಿಂಡಿ ಸ್ನಾನಕ್ಕೆ?"

"ಒಬ್ಬ ಅಡಿಗೆಯವನೂ ಬರ್ತಾನಂತೆ...."

"ಅದು ಸರೀ....ಅಲ್ಲಿದ್ರೆ ಆ ಕೊಂಗನ್ಜತೇ ಹೆಂಗೇಂತ! ಅದೂ ಅಲಿಆ....!" ಹೆಂಗಸು ಅಷ್ಟಕ್ಕೇ ಮಾತು ನಿಲ್ಲಿಸಿದಳು.

"ಅದೇ ನೋಡಬೇಕು...."

"ಅಂದ್ಹಂಗೇನೆ....ಯಾವ ಜಾತಿಯಂತೇ ಆಯಪ್ಪ ?"

"ಓ! ಮುಕ್ಯವಾದ್ದೇ ಇಚಾರಿಸ್ಲಿಲ್ವಲ್ಲಾ ನಾನೆಂಥ ಪೆದ್ದ. ನಾಳೆ ಕೇಳ್ತೀನಿ."

"ಇನ್ನೇನು ಬ್ರಾಂಬ್ರೇ ಇರ್ಬೇಕು !" ಹೆಂಗಸೆಂದಿದ್ದಳು.

ಇದು ಆ ದಿನ ಸಂಜೆ ರಾಮನಾಯ್ಕನ ಹಳ್ಳಿಯಲ್ಲಿ ದೀಪ ಹೊತ್ತಿಸಿದ ನಂತರ, ಸಾಮಾನ್ಯವಾಗಿ ಎಲ್ಲರ ಮನೆಗಳಲ್ಲೂ ನಡೆದ ಮಾತುಕತೆ.

ಶಾಂತಪ್ಪ ಮಾಣಿಕ್ಯಂ ಸಂಗಡ ಸ್ನೇಹ ಬೆಳೆಸಿಕೊಂಡು ಮಾತನಾಡಿದರೂ ಸಹ ಅವನಲ್ಲಿ ಯಾವುದೋ ಒಂದು ತೆರನಾದ ವಿಚಿತ್ರ ವರ್ತನೆಯನ್ನು ಗಮನಿಸಿದ್ದ. ಕಪ್ಪು ಬಣ್ಣದ ಅವನ ಮೈ ನೋಡಿದವರಾರಾದರೂ ಅವನನ್ನು ತಮಿಳರವನೆಂದು ಹೇಳಿಬಿಡುತ್ತಿದ್ದರು. ದಪ್ಪಪುಷ್ಟವಾಗಿ ಬೆಳೆದಿದ್ದ ಆ ದೇಹವು ಸುಖಜೀವಿಯಿವನೆಂದು ಸ್ಪಷ್ಟಪಡಿಸುತ್ತಿದ್ದಿತು. ಕೇವಲ ದಟ್ಟಿ ಸುತ್ತಿದ್ದ ಪಂಚೆಯೊಂದು, ಮೇಲಕ್ಕೆ ಮಡಿಸಲ್ಪಟ್ಟಿದ್ದ ತೋಳಿನ ಷರಟು, ಇವೇ ಅವನ ಉಡುಪಾದ್ದರಿಂದ ಉಡುಪಿನ 'ಷೋಕಿ' ಹೆಚ್ಚಿಲ್ಲವೆಂದು ಹೇಳಿಬಿಡಬಹುದಾಗಿದ್ದಿತು. ಯಾವಾಗಲೂ ಅಡಿಕೆಲೆಯನ್ನು ಜಗಿಯುತ್ತ, ಸಿಗರೇಟು ಸೇದುತ್ತಾ ಮಾತನಾಡುತ್ತಿದ್ದ. ಅವನ ಮಾತೂ ಸಹ ಸಿಡಿಲಿನಂತೆ ಕಠಿಣವೆಂಬುದು ಅವನೊಡನೆ ಮಾತನಾಡಿದವರಿಗೆ ಅರಿವಾಗಿದ್ದಿತು.

ಶಾಂತಪ್ಪನೊಂದಿಗೆ ಅವನು ತನ್ನ ವಿಷಯವನ್ನು ಹೇಳಿಕೊಂಡಿದ್ದ ಅವನ ಜನ್ಮಸ್ಥಳ ಕಾಂಜೀವರಂ. ಕನ್ನಡಿಗರು ಕರೆವಂತೆ 'ಕಂಚಿ'. ಅಲ್ಲಿನ ಕಾಮಾಕ್ಷಮ್ಮನವರ ದೇವಸ್ಥಾನದಲ್ಲಿ ಅವನ ತಂದೆಯವರು 'ಕಣಕ ಪುಳ್ಳೆ' ಅಥವ ಗುಮಾಸ್ತರು. ಮೂವತ್ತು ವರ್ಷವಾದರೂ ಮಾಣಿಕ್ಯಂಗೆ ಮದುವೆಯಾಗದಿರಲು ಕಾರಣವೆಂದರೆ, ಅವನು ಇಚ್ಛಿಸಿದ ಹುಡುಗಿಯೊಂದನ್ನು ಅವನು ವಿವಾಹವಾಗಲು ತಂದೆ ಅಡ್ಡಿ ಬಂದುದು. ಆ ಭಗ್ನ ಹೃದಯದಿಂದ ಕಂಚಿಯನ್ನು ತೊರೆದು ಬೆಂಗಳೂರಿಗೆ ಬಂದು ಸಾಹುಕಾರರ ಪರಿಚಯ ಮಾಡಿಕೊಂಡು ರಾಮನಾಯ್ಕನ ಹಳ್ಳಿಯ ಗಣಿಗೆ ಬಂದ. ಇಲ್ಲಿನ ಕಾಡುಮೇಡುಗಳಲ್ಲಿನ ರಮಣೀಯತೆಯಲ್ಲಿ ಜೀವನ ಸಾಗಿಸುವುದೊಂದು ಸಂತೋಷವೇ.,

"ಇಲ್ಲಿಂದ ಗಣಿಗೆ ಎಷ್ಟು ದೂರ ?" ಶಾಂತಪ್ಪ ಕೇಳಿದ.

"ಸ್ಫಟಿಕದ ಮಣಿ ಗುಡ್ಡ, ಮಹಾಲಕ್ಷ್ಮಿ ಗುಡ್ಡ, ಹಬ್ಬಿಗೆ ಗುಡ್ಡಗಳಿಗೆ ಇಲ್ಲಿಗೆ ಮೂರು ನಾಲ್ಕು ಮೈಲಿ ; ಇವು ಮೂರೂ ಒಂದು ಗಣಿ," ಮಾಣಿಕಂ ಉತ್ತರವಿತ್ತ.

"ಇನ್ನು ಉಳಿದ ಎರಡು ಗಣಿಗಳಿಗೆ?"

"ರತ್ನ ಬೆಟ್ಟ, ಏಳು ಹೆಡೆ ಗುಡ್ಡ, ಹಕ್ಕಿ ಗುಡ್ಡ, ಅಡ್ಡ ಬೆಟ್ಟ ಇವೆಲ್ಲ ಒಂದು ಗಣಿ. ಇಲ್ಲಿಂದ ಸುಮಾರು ಏಳೆಂಟು ಮೈಲಿಯಾಗುತ್ತೆ. ಇವೆಲ್ಲ ರತ್ನ ಬೆಟ್ಟವನ್ನು ಬಿಟ್ಟು, ಹೊಸದಾಗಿ ಕೆಲಸ ಪ್ರಾರಂಭಿಸಿದ ಗಣಿಗಳು. ಇಲ್ಲಿಗೆ ಸರಿಯಾದ ರಸ್ತೆಗಳೇ ಇಲ್ಲ, ನಡೆದು ಹೋಗಬೇಕು, ಅದೂ ಸಹ ಬರೀ ಕಲ್ಲು ಮುಳ್ಳು ಹಾದಿ," ಮಾಣಿಕ್ಯಂ ಒಂದೇ ಉಸಿರಿನಲ್ಲಿ ತನ್ನ ಅರೆ ತಮಿಳು, ಅರೆ ಕನ್ನಡ ಭಾಷೆಯಲ್ಲಿ ವರ್ಣಿಸಿದ.

ಅವನ ಮಾತು ಕೇಳಿ ಶಾಂತಪ್ಪ, ಆ ಮಾತಿನಷ್ಟೇ ಕಲ್ಲುಮುಳ್ಳಿನ ಹಾದಿಯಲ್ಲಿ ನಡೆವ ತನ್ನ ಭಾವೀ ಜೀವನವನ್ನು ಕಲ್ಪಿಸುತ್ತಿದ್ದ. ಮಾಣಿಕ್ಯಂ ಪುನಃ ಹೇಳಿದ,

"ಇನ್ನೊಂದು ಈಶ್ವರ ಗುಡ್ಡ, ರಾಕ್ಷಸ ಬೆಟ್ಟ ಇರುವ ಮೂರನೇ ಗಣಿ. ಇಲ್ಲಿಂದ ದೂರ ಸುಮಾರು ಹನ್ನೆರಡು ಮೈಲಿಗಳಾಗುತ್ತೆ. ಅದರ ಹತ್ತಿರ ಇರುವ ರಸ್ತೆಯಲ್ಲಿ ಕರಡಿ ಮಠನಿದೆ. ಅಲ್ಲಿಯೇ ನಮ್ಮ ಸಾಹುಕಾರ್ರು ಹೋಗಿ ನೋಡಿಕೊಂಡು ಬರುವ ಸ್ವಾಮಿಗಳಿರೋದು."

"ಅದು ಯಾವ ಮಠ?....ಆ ಸ್ವಾಮಿಗಳು ಯಾರು?"

"ಅಲ್ಲಿ ಹತ್ತಿರವಲ್ಲೇ ಕರಡಿ ಗುಡ್ಡನಿದೆ. ಆ ಗುಡ್ಡದಲ್ಲಿ ಕರಡಿಗಳು ಹೆಚ್ಚಾಗಿ ವಾಸವಾಗಿವೆ. ಅವು ಒಂದೊಂದು ದಿನ ಮಠದೊಳಕ್ಕೇ ಬಂದು ಬಿಡುತ್ವೆ. ಅದಕ್ಕೇ ಅದಕ್ಕೆ ಕರಡಿ ಮಠವೆನ್ನೋ ಹೆಸರಿರೋದು. ಅಲ್ಲಿನ ಸ್ವಾಮಿಗಳು ಲಿಂಗಾಯಿತರ ಗುರುಗಳು. ಸುತ್ತಮುತ್ತಲಿನ ಲಿಂಗಾಯಿತರೆಲ್ಲ ಅವರಿಗೆ ಭಕ್ತರು. ಆ ಮಠಕ್ಕೆ ಸಾವಿರ ತೆಂಗಿನ ಗಿಡಗಳು, ಸುಮಾರು ಐವತ್ತೆಕರೆ ಹೊಲವಿದೆ."

"ಆ ಸ್ವಾಮಿಗಳು ಒಬ್ಬರೇ ಇದ್ದಾರೆಯೇ?" ಶಾಂತಪ್ಪ ಕುತೂಹಲಿಯಾಗಿದ್ದ.

"ಸ್ವಾಮಿಗಳು ಅವರ ಪರಿವಾರದವರು, ಎಲ್ಲಾ ಇದ್ದಾರೆ." ಮಾಣಿಕ್ಯಂ ನುಡಿದು ಒಂದು ಕ್ಷಣ ಸುಮ್ಮನಾದ.

"ಪರಿವಾರದವರೆಂದರೆ?"

ಮಾಣಿಕ್ಯಂ ಎದ್ದು ಹೊರಗೆ ಹೋಗಿ ತನ್ನ ಬಾಯಲ್ಲಿ ತುಂಬಿದ್ದ ಅಡಿಕೆಲೆಯ ತಾಂಬೂಲವನ್ನುಗುಳಿ, ಒಂದು ಸಿಗರೇಟು ಹಚ್ಚಿಕೊಂಡು ಅಲ್ಲಿಯೇ

ಒಂದೆರಡು ನಿಮಿಷ ಏನನ್ನೋ, ಯಾರನ್ನೋ ನಿರೀಕ್ಷಿಸುತ್ತಲಿದ್ದವನಂತೆ ನಿಂತಿದ್ದು, ಪುನಃ ಒಳಗೆ ಬಂದು,

"ಸಿಗರೇಟು ತಕೊಳ್ಳಿ ಸಾರ್...." ಎಂದ.

"ಇಲ್ಲ ಇಲ್ಲ, ನಾನು ಸೇದೋಲ್ಲ....ನೀವು ಸೇದಿ ಪರವಾಗಿಲ್ಲ."

"ಓ!....ಕಾಲೇಜಿನಲ್ಲಿ ಓದಿದೋರು ಸಿಗರೇಟು ಸೇದೋದಿಲ್ಲವೆನ್ನುವವರನ್ನು ನಾನು ಕಂಡುದು ಇದೇ ಮೊದಲು....ಹೋಗಲಿ ಅಡಿಕೆ ಎಲೆ?"

"ಅದೂ ಹಾಕೋಲ್ಲ...." ನಗುತ್ತಾ ಉತ್ತರವಿತ್ತ ಶಾಂತಪ್ಪ.

"ಹಾಗಾದರೆ ಸರಿ....ನೀವು ತುಂಬಾ ಹಣ ಕೂಡಾಹಾಕುತೀರಿ...." ಸಿಗರೇಟು ಹೊಗೆಯೆಳೆದು ಬಿಡುತ್ತಾ ಮಾಣಿಕ್ಯಂ ಹೇಳಿದ; ಅವನು ಪುನಃ ಪುನಃ ಬೀದಿಯ ಬಾಗಿಲಿನತ್ತ ಅದೇ ನಿರೀಕ್ಷಣಾ ದೃಷ್ಟಿಯನ್ನು ಬೀರುತ್ತಿದ್ದ. ಒಂದೆರಡು ನಿಮಿಷ ಮೌನವಾಗಿ ಕಳೆಯಿತು, ಮನೆಯಲ್ಲಿ ತುಂಬಿಕೊಂಡಿದ್ದ ಸಿಗರೇಟಿನ ಹೊಗೆಯಿಂದ ಉಸಿರು ಕಟ್ಟಿ ಕೊಂಡಂತಾಗಿ ಶಾಂತಪ್ಪ ಒಂದೆರಡು ಬಾರಿ ಹೊರಗೆ ಹೋಗಿ ನಿಂತು ಕೊಂಡು ಪುನಃ ಹಿಂದಿರುಗಿದ್ದ.

"ಸ್ವಾಮಿಗಳ ವಿಷಯವೇನು ಹೇಳಲೇ ಇಲ್ಲವಲ್ಲ!" ಶಾಂತಪ್ಪ ಪುನಃ ಪ್ರಶ್ನಿಸಿದ್ದ.

"ಅಲ್ಲಿಗೆ ನಮ್ಮ ಸಾವಕಾರ್ರು ಹೋಗಿ ಆಗಾಗ್ಗೆ ಸ್ವಾಮಿಗಳ ದರ್ಶನ ಪಡೆದು ಬರುತ್ತಾರೆ!" ಮಾಣಿಕ್ಯಂ ನುಡಿದ. ಅವನ ಮಾತಿನಲ್ಲಿ ಯಾವುದೋ ವಿಷಯವನ್ನು ಮರೆ ಮಾಡಲೆತ್ನಿಸಿದುದು ಕಾಣಿಸುತ್ತಿತ್ತು.

ಹೆಚ್ಚಾಗಿ ಕೆದಕಿ ಕೇಳಲಿಷ್ಟವಾಗದೇ ಶಾಂತಪ್ಪ ಸುಮ್ಮನಾದ. ಅವನಿಗೆ ಸಾಹುಕಾರರ ಬಗ್ಗೆ ಏನೇನೋ ಸಂಶಯಗಳು ಬರತೊಡಗಿದುವು....ಇದ್ದರೂ ಇರಬಹುದು!....ಛೆ ಇರಲಾರದು. ಎಂತಹ ದೊಡ್ಡ ಮನುಷ್ಯರು ಅವರು ಹೀಗೆ?.... ಏಕಿರಬಾರದು, ವಾರ ವಾರವೂ ಒಂದು ಎರಡು ಮೂರು ದಿನ ಗಣಿಯಲ್ಲಿ ತಂಗುತ್ತಾರೆ, ಒಂದೆರೆಡು ದಿನ ಕೋಣಸಂದ್ರದಲ್ಲಿರುತ್ತಾರೆ, ವಾರದಲ್ಲಿ ಐದು ದಿನ ಮನೆಯಿಂದ ದೂರವಿದ್ದರೆ ಶ್ರೀಮಂತ ದೇಹ ಬಯಸದೇ ಇರುತ್ತದೆಯೆ?....ಥು, ಎಂತಹ ಗಣ ವ್ಯಕ್ತಿಯ ವಿಷಯದಲ್ಲಿ ಎಂತಹ ಅನುಮಾನ?....ವ್ಯಕ್ತಿ ಗಣ್ಯನಾದರೇನು ಬಯಕೆ ಯಾವಾಗಲೂ ಈ ಗಣ್ಯತೆಯ ಬಂಧನಕ್ಕೆ ಅತೀತವಾದುದು! ಇದ್ದರೂ ಇರಬಹುದು....

ಬಾಗಿಲಿನೆದುರು ಹಳ್ಳಿಯ ಹೆಣ್ಣುಗಳು, ಹೊಳೆಯುವ ಕೊಂಡಗಳಲ್ಲಿ ಭಾವಿಯಿಂದ ನೀರು ತುಂಬಿಕೊಂಡು ಹೋಗುತ್ತಿದ್ದರು. ಹಾಗೆ ಹೋಗುತ್ತಾ ತಲೆಯನ್ನೇ ತಿರುಗಿಸಿಯೋ ಓರೆ ಗಣ್ಣಿನಿಂದಲೋ ಒಮ್ಮೆ ಗಣಿಯವರ ಬಿಡಾರದ ಕಡೆ ನೋಡದೆ ಹೋಗುತ್ತಿರಲಿಲ್ಲ. ಬೆಳ್ಳಿಯ ಪಟ್ಟಿಯಿಂದ ಬಗಿಯಲಟ್ಟಿದ್ದ ಅವರ ಸಣ್ಣ ಸೊಂಟಗಳ ಮೇಲೆ, ನಿಂತಿದ್ದ ನೀರು ತುಂಬಿದ್ದ ಕೊಡಗಳು ಸೊಂಟವು ತೂಗಾಡಿದಂತೆ, ನೀರನ್ನು ಕುಳುಕಿಸುತ್ತಿದ್ದುವು. ಸೀರೆಯನ್ನು ತೇವಗೊಳಿಸುತ್ತಿದ್ದುವು. ತಲೆಯ ಮೇಲಿನ ಕೊಡದಿಂದಲೂ ಒಮ್ಮೊಮ್ಮೆ ಒಂದು ಹನಿ ನೀರು ಸಿಡಿದು ಮುಖದ ಮೇಲೆ ಬೀಳುತ್ತಿದ್ದಿತು. ನೀರು ತರುವ ನಾರಿಯರ ಆ ಸೌಂದರ್ಯ ಶಾಂತಪ್ಪನಿಗೆ ಮನ ಮೋಹಕವಾಗಿದ್ದಿತು. ಮನೆಯೊಳಗಿನ ನೆರಳಿನಲ್ಲಿ ಕುಳಿತಿದ್ದುದರಿಂದ, ಬೀದಿಯ ಬಿಸಿಲಿನಲ್ಲಿನ ಆ ಸೌಂದರ್ಯ ಅವನಿಗೆ ಸ್ಪಷ್ಟವಾಗಿ ಕಾಣುತ್ತಿದ್ದಿತು.

"ವಸಿ ನಿಮ್ಮ ಕೊಡ ಕೊಡಿ...." ಯಾರೋ ಕೇಳಿದಂತಾಯ್ತು.

ಶಾಂತಪ್ಪ ತಿರುಗಿ ನೋಡಿದ. ಹೆಂಗುಸೊಬ್ಬಳು ನಿಂತಿದ್ದಳು ಎದುರಿನಲ್ಲಿ. ಸುಮಾರು ಇಪ್ಪತ್ತೈದು ವರ್ಷಗಳಿಗೆ ಮೀರದ ಆ ದೇಹ ಹೆಚ್ಚು ಕಪ್ಪಾಗಿರದಿದ್ದರೂ ಬೆಳ್ಳಗೇನಿರಲಿಲ್ಲ. ಅವಳ ಆ ಬಯಕೆ-ಗಣ್ಣುಗಳು, ಮಾಣಿಕ್ಯಂನ ಆ ನಗುಮುಖ ಶಾಂತಪ್ಪನಿಗೆ ಯಾವುದೋ ಅರ್ಥವನ್ನೂ ಕೊಟ್ಟುವು. ಮಾಣಿಕ್ಯಂ ಒಳಗೆದ್ದು ಹೋಗಿ ಕೊಡವನ್ನು ತಂದು ಅವಳ ಕೈಗಿತ್ತ. ಕೊಡವನ್ನು ತೆಗೆದುಕೊಂಡು ಅವಳು ಒಂದು ಬಾರಿ ಶಾಂತಪ್ಪನನ್ನು ನೋಡಿ ಹೊರಟು ಹೋದಳು!

"ರತ್ನಮ್ಮಾ, ಇಲ್ಲಿ ಬಾ...." ಮಾಣಿಕ್ಯಂ, ಅವಳು ಬಾಗಿಲು ದಾಟಿ ಹೋದ ನಂತರ ಏನನ್ನೊ ಜ್ಞಾಪಿಸಿಕೊಂಡವನಂತೆ ಕರೆದ.

ಸೊಂಟದ ಮೇಲೆ ಕೊಡವಿಟ್ಟುಕೊಂಟು ಹೊರಟಿದ್ದ ಅವಳು ಹಾಗೆಯೇ ಪುನಃ ಬಂದಳು, "ಏನು ?" ಎನ್ನುತ್ತಾ. ಶಾಂತಪ್ಪನನ್ನು ಅವಳು ನೋಡಿದಾಗ ಅವಳ ಮುಖದಲ್ಲಿ ಅಪರಿಚಿತನನ್ನು ಪರಿಚಯ ಮಾಡಿಕೊಳ್ಳುವ ಒಂದು ನಗೆಯಿದ್ದಿತು.

"ನಮಗೂ ಒಂದು ಕೊಡ ನೀರು ತಂದುಕೊಡು," ಮಾಣಿಕ್ಯಂ ಹೇಳಿದ.

"ಆಗ್ಲಿ ತರ್ತೀನಿ.... ಆದ್ರೆ ಅವ್ರು ನಮ್ಮ ಕೈನಲ್ಲಿ ತಂದ ನೀರು ಕುಡೀತಾರ?" ರತ್ನಮ್ಮ ಶಾಂತಪ್ಪನತ್ತ ದೃಷ್ಟಿ ಹರಿಸುತ್ತಾ ಕೇಳಿದಳು.

"ಓ!....ಮರೆತೇ ಬಿಟ್ಟಿದ್ದೆ ಸಾರ್....ನೀವು ಬ್ರಾಹ್ಮಣರೇನು?.... ಮಾಣಿಕ್ಯಂ ಅಳುಕುತ್ತಲೇ ಕೇಳಿದ.

ಶಾಂತಪ್ಪನಿಗೆ ಸಂದಿಗ್ಧ ಸಮಯವೊದಗಿತು. ತನ್ನ ಜಾತಿಯನ್ನು ತಿಳಿಸುವುದು ಸಾಧುವೇ ಎಂದು ಚಿಂತಿಸಬೇಕಾಯ್ತು. ವೀರಶೈವನಾಗಿ ಜನಿಸಿದರೂ ಆ ಮತದಲ್ಲಿನ ದುರಭಿಮಾನವನ್ನು ತೊರೆತಿದ್ದನವ. ಜಾತಿ ಮತವೆಂಬ ಪಂಗಡ ಕಟ್ಟುವುದು, ಬೇಧ ಕಲ್ಪಿಸಿ ಪರಸ್ಪರ ದ್ವೇಷಿಸುವುದೆಂದರೆ ಅವನಿಗಾಗದು. ಯಾವ ಕುಲದಲ್ಲಿ ಹುಟ್ಟಿದರೇನು ನೀಚೋತ್ತಮತೆಗಳು ಮೂಡುವುದು ಅವನ ಮನೋಭಾವದಿಂದಲೇ ಹೊರತು ಹುಟ್ಟಿದ ಜಾತಿಯಿಂದಲ್ಲವೆಂದು ಅವನ ಅಭಿಮತ. ಆದ್ದರಿಂದಲೇ ಯಾರಾದರೂ ತನ್ನ ಜಾತಿಯನ್ನು ತಿಳಿಸಲು ಕೇಳಿದರೆ ಅವನು ಉತ್ತರ ಕೊಡದೇ ಇದ್ದು ಬಿಡುತ್ತಿದ್ದ; ಇದು ಹಲವರ ಅನುಮಾನ ಕೋಪಗಳಿಗೂ ಕಾರಣವಾಗಿತ್ತು. ಆದರೆ ಈಗ ಹಾಗೆ ಹೇಳುವುದು ಸರಿಯಲ್ಲ. ಇದು ಹೊಸ ಜಾಗ, ಹಳ್ಳಿ. ಜಾತೀಯತೆಯ ಶೃಂಖಲೆಗಳಿಂದ ಸಮಾಜವನ್ನು ಇನ್ನೂ ಬಂಧಿಸಿದ್ದರು ಇಲ್ಲಿ. ಮನುಷ್ಯನೆಂದರೆ ಅವನ ನೆರಳಿನಂತೆ ಜಾತಿಯು ಹಿಂಬಾಲಿಸಿ ಬರುತ್ತಿದ್ದಿತು; ವ್ಯಕ್ತಿಯನ್ನು ಪರಿಗಣಿಸುವುದೂ ಈ ನೆರಳನ್ನು ನೋಡಿದ ನಂತರ, ವ್ಯಕ್ತಿಯನ್ನು ನೋಡಿದ ನಂತರವಲ್ಲ! ಈ ಹಳ್ಳಿಯಲ್ಲಿ ಹೆಚ್ಚಾಗಿ ವೀರಶೈವರೇ ಇದ್ದಾರೆ. ಆದ್ದರಿಂದ ತಾನೂ ವೀರಶೈವನೆಂದರೆ?....ಛೆ, ಹಾಗೆ ಹೇಳಿದರೆ ಒಂದೇ ಜಾತಿಯೆಂದು ಸಲಿಗೆ ಬೆಳೆದೀತು....ಹಾಗೆ ಹೇಳದಿದ್ದರೆ, ಬ್ರಾಹ್ಮಣನೆಂದು ಸುಳ್ಳು ಹೇಳಿದರೆ, ಅದನ್ನೇ ನಂಬಿ ತನ್ನನ್ನು ದೂರವಿಟ ರೆ?....ತಾನು ಸರಿಯಾಗಿದ್ದು ಈ ಜನರ ವಿಶ್ವಾಸವನ್ನು ಸಂಪಾದಿಸಿದರೆ ದೂರವೇಕೆ ಇಡುತ್ತಾರೆ? ಸ್ವಜಾತೀಯನೆಂದು ಹೇಳಿದರೆ ಸಲುಗೆ ಬೆಳೆದು ಪ್ರತಿಯೊಬ್ಬ ಶೈವನ ಮನೆಗೂ ಹೋಗುವ ಪ್ರಸಂಗವೊದಗೀತು!....

"ಹೌದು...." ಎಂದ ಶಾಂತಪ್ಪ.

"ನೀವು ಬ್ರಾಹ್ಮಣರಾದರೆ....ನೀರು?" ಮಾಣಿಕ್ಯಂ ಕೇಳಿದ.

"ಪರವಾಗಿಲ್ಲ....ತರಿಸಿ. ನಾನು ಆ ರೀತಿ ಭೇದವನ್ನಿಟ್ಟಿಲ್ಲ" ಶಾಂತಪ್ಪ ನಗುತ್ತಾ ನುಡಿದ.

ಅವನ ಮಾತು ಕೇಳಿ ರತ್ನಮ್ಮ ಹೊರಟುಹೋದಳು.

"ಗಣಿಗೆ ಸೇರಿದ ಮೇಲೆ ಜಾತಿ ಮತವನ್ನೆಲ್ಲಾ ಬಿಟ್ಟುಬಿಡಬೇಕಾಗುತೆ ಸಾರ್...." ಮಾಣಿಕ್ಯ ಸಿಗರೇಟು ಹಚ್ಚುತ್ತಾ ಹೇಳಿದ.

"ಅದು ಸರೀನ್ನಿ....ಈಕೆ ಯಾರು?"

"ಇವಳು ಈ ಪಕ್ಕದ ಮನೆಯವನ ತಂಗಿ....ನಮ್ಮ ಗಣೀಗೆ ಕೆಲಸಕ್ಕೆ ಬರುತ್ತಾಳೆ....ಲಿಂಗಾಯಿತರು....ತುಂಬಾ ಒಳ್ಳೇ ಜನ....ತುಂಬಾ ಒಳ್ಳೇ ಜನ...." ಮಾಣಿಕ್ಯಂ ಹೊಗೆಯುರುಬಿದ.

"ಓ!....ಹಾಗೇನು?" ಶಾಂತಪ್ಪನೆಂದ. ಸ್ವಜನ....ಅದು ತಿಳಿದಿದ್ದರೆ ಎಂತಹ ತೊಂದರೆಯಾಗುತ್ತಿದ್ದಿತು....ಇನ್ನು ಈ ಸುಳ್ಳನ್ನು ಕಾಪಾಡಿಕೊಳ್ಳ ಬೇಕು....ರತ್ನಮ್ಮ ಒಳಬಂದಾಗ ತಾನು ಬೀದಿಯಲ್ಲಿ ನೀರನ್ನು ತೆಗೆದು ಕೊಂಡು ಹೋಗುತ್ತಿದ್ದ ಹೆಣ್ಣುಗಳನ್ನು ನೋಡುತ್ತಿದ್ದ....ಅವಳು ನೋಡಿರ ಬಹುದೇನೊ....ತನ್ನನ್ನು ಎಂತಹ ಮನುಷ್ಯನೆಂದುಕೊಂಡಳೋ....ಥು! ತಾನು ಹಾಗೆ ಬೀದಿಯಲ್ಲಿ ನೋಡಬಾರದಿತ್ತು....ಶಾಂತಪ್ಪ ಯೋಚಿಸಿ ಕೊಳ್ಳುತ್ತಿದ್ದಾಗ,

ರತ್ನಮ್ಮ ನೀರು ತುಂಬಿದ ಕೊಡವನ್ನು ತಂದು ಒಳಗಿಟ್ಟು ಒಮ್ಮೆ ಮಾಣಿಕ್ಯಂನನ್ನು ಓರೆಗಣ್ಣಿನಿಂದ ನೋಡಿ ಹೊರಟು ಹೋದಳು. ಅವಳ ಬಾಗಿಲಿಗೆ ಹೋಗಿ ತನ್ನ ಮನೆಯ ಕಡೆ ಬಲಭಾಗಕ್ಕೆ ತಿರುಗಿದಾಗ ಶಾಂತಪ್ಪ ನನ್ನು ನೋಡಿ ಸೆರಗನ್ನು ಸರಿಯಾಗಿ ಹೊದ್ದುಕೊಳ್ಳುವ ನೆಪದಿಂದ ತನ್ನ ತುಂಬು ಕುಚಗಳನ್ನು ಒಮ್ಮೆ ತೋರಿ ಮರೆಯಾದಳು.

ಪುಷ್ಟವಾಗಿ ಬೆಳೆದು ನಿಂತಿದ್ದ ಅವಳನ್ನು ನೋಡಿ ಶಾಂತಪ್ಪನಿಗೆ ಮೈ ಜುಮ್ಮೆನ್ನುವಂತಾಯಿತು. ಅವನ ತಲೆಗೂದಲು ತಂತಿಗಳಂತೆ ಎದ್ದು ನಿಂತಂ ತಾಯ್ತು, ಅವನ ಎದೆ ಡವಡವನೆ ಹೊಡೆದುಕೊಳ್ಳುತ್ತಿದ್ದಿತು. ನಾಲ್ಕಾರು ನಿಮಿ ಷಗಳು ಅವನು ಮಾತನಾಡದೇ ಮೈಮರೆತು ಕುಳಿತಿದ್ದ. ಮಾಣಿಕ್ಯಂ ತಾಂಬೂ ಲವನ್ನುಗುಳಲು ಹೊರಹೊರಟಾಗಲೇ ಅವನಿಗೆ ಪ್ರಜ್ಞೆ ಬಂದಂತಾದುದು.

ಅವನು ತಾಂಬೂಲವುಗುಳಿ ಒಳಬಂದ ನಂತರ ಶಾಂತಪ್ಪ ಕೇಳಿದ,

"ಈಕೆಯ ಗಂಡ ಏನು ಕೆಲಸ ಮಾಡ್ತಾನೆ?"

"ಈಕೆಯ ಗಂಡ ಇಲ್ಲಿಲ್ಲ. ಬೇರೆ ಯಾವುದೋ ಊರಿನಲ್ಲಿದ್ದಾನೆ. ಸುಮ್ಮನೆ ತೌರುಮನೆಗೆ ಬಂದಿದ್ದಾಳೆ ಅಷ್ಟೆ....ತುಂಬಾ ಗೌರವಸ್ಥ ಹೆಣ್ಣು...." ಮಾಣಿಕ್ಯಂ ರತ್ನಮ್ಮನನ್ನು ಬಾಯಿತುಂಬಾ ಹೊಗಳಿದ!

ಮಾರ್ನೆಯ ದಿನ ಬೆಳಗ್ಗೆ ಏಳು ಗಂಟೆಗೇ ಶಾಂತಪ್ಪ ಗಣಿಗೆ ಹೊರಡಲು ಸಿದ್ಧನಾದ. ಅವನಿದ್ದ ಬಿಡಾರದಲ್ಲಿ ಸ್ನಾನದ ಮನೆಯಿರಲಿಲ್ಲವಾಗಿ, ಪಕ್ಕದ ಮನೆಯಲ್ಲಿಯೇ ಸ್ನಾನ ಮಾಡಬೇಕಾಯಿತು. ರತ್ನಮ್ಮ ನೀರು ಕಾಯಿಸಿದ್ದಳು. ಭಟ್ಟರ ಹೋಟೇಲಿನಿಂದ ಪಠಾಣ ಖಾನ್ ಉಪಹಾರ ತಂದಿದ್ದ. ಎಲ್ಲವೂ ಆದನಂತರ ಶಾಂತಪ್ಪ ಬಾಗಿಲಿಗೆ ಬಂದು ನಿಂತುಕೊಂಡ. ಗಣಿಯಲ್ಲಿ ಕೆಲಸ ಮಾಡುವ ಕೂಲಿಗಾರರು ಒಬ್ಬೊಬ್ಬರಾಗಿ, ಶಾಂತಪ್ಪನ ಬಿಡಾರದ ಮುಂದೆ ಹಾದುಹೋಗುತ್ತಿದ್ದರು. ಗಂಡಾಳುಗಳು ಹಾರೆ, ಗಡಾರಿ, ಗುದ್ದಲಿ, ಪಿಕಾಸಿಗಳನ್ನೂ, ಹೆಣ್ಣಾಳುಗಳು ಬಾಣಲೆ, ಸುತ್ತಿಗೆ, ನೀರಿನ ಮಡಿಕೆ ಊಟದ ಬುತ್ತಿಗಳನ್ನೂ ಹೊತ್ತುಕೊಂಡು ಹೊರಟಿದ್ದರು. ಕಾರ್ಮಿಕರು ಗುಡ್ಡದೆಡೆ ಮುಖಮಾಡಿಕೊಂಡು ಸಾಲುಗಟ್ಟಿ ಹಾಗೆ ಹೋಗುವುದನ್ನು ನೋಡುವುದೇ ಅವನಿಗೊಂದು ರಮ್ಯ ದೃಶ್ಯವಾಗಿದ್ದಿತು. ಅವರು ಹಾಗೆ ಹೋಗುವಾಗ, ಶಾಂತಪ್ಪನನ್ನು ಒಮ್ಮೆ ತಿರುಗಿ ನೋಡಿ ಮುಂದೆ ನಡೆಯುತ್ತಿದ್ದರು. ಹೆಣ್ಣಾಳುಗಳು ದೂರದಿಂದಲೇ, ಇಲ್ಲವಾದರೆ ಶಾಂತಪ್ಪನ ಮುಂದೆ ಹಾದು ನಾಲ್ಕಾರು ಹೆಜ್ಜೆ ಮುಂದೆ ಹೋದ ನಂತರ ತಿರುಗಿ, ನೋಡುತ್ತಿದ್ದರು. ನೋಡಿ ಮಾತನಾಡಿ ಕೊಳ್ಳುತ್ತಿದ್ದರು. ದೂರ ಹೋದನಂತರ ಗಂಡಾಳುಗಳು ಬೀಡಿ ವಿನಿಮಯ ಮಾಡಿಕೊಂಡು, ಬೆಂಕಿ ಕಡ್ಡಿಯನ್ನು ಗೀರಿ ಪರಸ್ಪರ ಬೀಡಿಗಳನ್ನು ಹಚ್ಚಿಕೊಳ್ಳುತ್ತಿದ್ದರು.

ಶಾಂತಪ್ಪನು ಹಾಗೆಯೇ ನಾಲ್ಕಾರು ನಿಮಿಷಗಳು ನಿಂತಿದ್ದ. ಮೂರ ನಾಲ್ಕುಮೈಲು ದೂರದಲ್ಲಿದ್ದ ಗಣಿಗೆ ನಡೆದೇ ಹೋಗೋಣವೆನಿಸಿತು. ತನ್ನನ್ನು ಗಣಿಗೆ ಕರೆದೊಯ್ಯಲು ತನಗಾಗಿ ಕೋಣಸಂದ್ರ ರೈಲ್ವೆ ನಿಲ್ದಾಣದಿಂದ ಬರುವ ಕಂಪೆನಿಯ ಲಾರಿಯು ತಡವಾಗಿ ಬರಬಹುದು. ಆದ್ದರಿಂದ ನಡೆದೇ ಹೋಗುವುದುಚಿತ. ಅಲ್ಲದೇ ನಡೆದುಕೊಂಡು ಹೋದರೆ ಹಾದಿಯ ಪರಿಚಯವಾಗುವುದು.

"ಹೋಗೋಣೇನು ಸಾರ್?" ಚನ್ನಯ್ಯ ಕೇಳಿದ.

ಚನ್ನಯ್ಯ ಆಗಲೇ ಬಂದು ಅಲ್ಲಿ ನಿಂತಿದ್ದ. ಅವನು ಒಂದು ಖಾಕಿ ನಿಕ್ಕರು ಧರಿಸಿದ್ದ. ಅದೇ ಬಣ್ಣದ ಷರಟು ಟೋಪಿಗಳನ್ನೂ ಧರಿಸಿ ಕೈಯಲ್ಲಿ ಒಂದು ಕೊಡೆಯನ್ನು ಹಿಡಿದಿದ್ದ. ಅವನ ದೇಹವೆಲ್ಲ ಕಪ್ಪನೆಯ ಬಣ್ಣದಿಂದ ಮಿರುಗುತ್ತಿದ್ದಿತು. ಅವನ ಪಾದಗಳೂ ಸಹ ಧೂಳಿನಮಯವಾಗಿ

ಹಿಮ್ಮಡಿಗಳು ಒಡೆದು ಬಿರುಕು ಬಿಟ್ಟಿದ್ದುವು. ಮೆಟ್ಟಿಕೊಂಡಿದ್ದ ಜೋಡುಗಳು ದಪ್ಪವಾಗಿದ್ದರೂ ಸಹ ಗಣಿಗೆ ನಡೆದು ಅಲ್ಲಿ ಓಡಾಡಿದ್ದರಿಂದ 'ಅಟ್ಟೆ'ಗಳು ಹರಿದು ನಾಲಿಗೆಗಳು ಹೊರಚಾಚಿದ್ದುವು. ಅವನ ಕೈನಲ್ಲಿ ಚಿನ್ನದ ಪಟ್ಟಿಯಿದ್ದ ಗಡಿಯಾರವೊಂದಿದ್ದಿತು; ಬೆರಳುಗಳಲ್ಲಿ ಎರಡು ಹರಳಿನ ಉಂಗುರಗಳು ಹೊಳೆಯುತ್ತಿದ್ದುವು.

"ತಿಂಡಿ ಆಯ್ತಾಸಾರ್?...ಆಗ್ದಿದ್ರೆ ಇಲ್ಲಿಗೇ ತರಸ್ತೀನಿ" ಚನ್ನಯ್ಯನೆಂದ ಪುನಃ, ಬೀಡಿ ಹಚ್ಚುತ್ತಾ.

"ಬೇಡಿ...ನಾನು ತಿಂಡಿ ತಿಂದಾಯ್ತು...ತರಿಸೋದು ಬೇಡ," ಎಂದ ಶಾಂತಪ್ಪ. ತನ್ನೆದುರಿಗೇ ಚನ್ನಯ್ಯ ಬೀಡಿ ಹಚ್ಚುವುದು ದುರ್ನಡತೆಯಲ್ಲವೆ?

"ಲಾರಿ ಬರೋವರ್ಗೆ ಒಳಗೇ ಕೂತಿರೋಣ ಸಾರ್?" ಚನ್ನಯ್ಯ ಹೊಗೆ ಬಿಡುತ್ತಾ ಕೇಳಿದ.

ಇಂತಹ ನಡತೆ ಹೀನ ಮನುಷ್ಯನ ಸಂಗಡ ನಡೆದುಕೊಂಡು ಹೋಗುವುದಕ್ಕೆ ಮನಸ್ಸು ಒಪ್ಪದಿದ್ದರೂ, ನಡೆದೇ ಹೋಗಬೇಕೆಂಬ ನಿರ್ಧಾರವನ್ನು ಅವನು ಬದಲಿಸಲಾಗಲಿಲ್ಲ. ಆದ್ದರಿಂದ ಉತ್ತರವಿತ್ತ.

"ಇಲ್ಲ...ಇಲ್ಲ..ನಡೆದುಕೊಂಡೇ ಹೋಗೋಣ..ಲಾರಿಗಾಗಿ ಕಾಯೋದು ಬೇಡ"

"ಮೂರು ನಾಲ್ಕು ಮೈಲಿ ನಡೀಬೇಕಾಗುತ್ತೆ ಸಾರ್..."

"ಪರವಾಗಿಲ್ಲಪ್ಪ ನನಗೆ ನಡೆಯೋದಕ್ಕೆ ಆಗುತ್ತೆ" ಶಾಂತಪ್ಪನೆಂದ, ನಗುತ್ತಾ.

ಅಷ್ಟರಲ್ಲಿ ಒಳಗಿನಿಂದ ಮಾಣಿಕ್ಯಂ ಬಂದ. ಅವನು ಗಣಿಗೆ ಹೊರಡುವ ಸಿದ್ಧತೆಯಲ್ಲಿದ್ದಂತೆ ಕಾಣಲಿಲ್ಲ.

"ನೀವು ಒಂದು ದಿನಾ ನಡೆದರೆ ಆಮೇಲೆ ಗೊತ್ತಾಗಿ ಬಿಡುತ್ತೆ, ಎಷ್ಟು ತೊಂದರೆ ಅಂತ....!" ಮಾಣಿಕ್ಯಂ ತನ್ನ ತಮಿಳ್ಗನ್ನಡದಲ್ಲಿ ನುಡಿದ.

ಅವನ ಮಾತು ಕೇಳಿ ಚನ್ನಯ್ಯ ನಗುತ್ತಾ ಹೇಳಿದ,

"ಅದಕ್ಕೇ ಸಾರ್....ಅವರು ಯಾವಾಗಲೂ ಲಾರೀಲೇ ಬರ್ತಾರೆ.... ನಡೆದುಕೊಂಡು ಬರಬೇಕಾದ್ರೆ ಕಾಲಿಗೆ ಕಲ್ಲು ಮುಳ್ಳು ಚುಚ್ಚುತ್ತೇಂತ."

ಆ ಮಾತಿನಿಂದ ಮಾಣಿಕ್ಯಂ ಮುಖ ಇನ್ನೂ ಕಪ್ಪಿಟ್ಟಿತು! ಹಾಗೆ ಹೇಳಬೇಡವೆನ್ನುವಂತೆ ಚನ್ನಯ್ಯನಿಗೆ ಸಂಜ್ಞೆ ಮಾಡಿದ. ಶಾಂತಪ್ಪ ಇದನ್ನು

ನೋಡಿದರೂ ನೋಡದಂತೆ ಸುಮ್ಮನಿದ್ದ. ಚನ್ನಯ್ಯನೂ ಮಾತು ಮುಂದು ವರೆಸಲಿಲ್ಲ.

"ಸರಿ !....ಹೋಗೋಣ ನಡೆಯಪ್ಪ" ಎಂದು ಶಾಂತಪ್ಪ ಹೊರಟ.

ಅಷ್ಟು ಹೊತ್ತಿಗೆ ಅಲ್ಲಿಗೆ ಬಂದಿದ್ದ ಖಾನ್, ಶಾಂತಪ್ಪನಿಗೆ ಸಲಾಮು ಹಾಕಿದ. ಶಾಂತಪ್ಪನೂ ಉತ್ತರವಾಗಿ ವಂದಿಸಿದ ನಂತರ ಹಸನ್ಮುಖಿಯಾಗಿ ಅವನನ್ನೊಮ್ಮೆ ವಿಶ್ವಾಸದಿಂದ ನೋಡಿದ. ಸುಸ್ಪಷ್ಟವಾಗಿ ಬೆಳೆದಿದ್ದ ಅವನ ದೇಹಕ್ಕೆ ಅಂಟಿಕೊಂಡಂತೆ ಅವನು ಧರಿಸಿದ್ದ ಸೈನಿಕ ಉಡುಪು ನೋಡಿದವ ರಿಗೆ ಭಯವನ್ನು ಹುಟ್ಟಿಸುತ್ತಿತ್ತು. ತನಗೆ ಸಾಹುಕಾರರು ಕೊಡುತ್ತಿದ್ದ ನಲವತ್ತು ರೂಪಾಯಿ ಸಂಬಳದಲ್ಲಿ ತನ್ನ ಈ ದೇಹವನ್ನು ಹೇಗೆ ಕಾಪಾಡಿ ಕೊಂಡಿದ್ದಾನೋ !

"ಕಾಫಿ ಆಯ್ತು ಖಾನ್ ?" ಶಾಂತಪ್ಪ ಕೇಳಿದ.

"ಅಯ್ದು ಗಂಟೇಗೆ ಆಗೋಯ್ತು ಸಾರ್."

"ಸರಿ ನಡೀರಿ ಹೊರಡೋಣ....ನೀವು ಇಲ್ಲೇ ಇರ್ತೀರ ಮಾಣಿಕ್ಯಂ?" ಶಾಂತಪ್ಪ ಮುಂದೆ ಹೊರಟ.

"ನಾನು ಇರುತೀನಿ ಸಾರ್....ಲಾರಿ ಬಂದರೆ ಸ್ವಲ್ಪ ನೋಡಿಕೊಳ್ಳ ಬೇಕು," ಮಾಣಿಕ್ಯಂ ನೆಪ ಹೇಳಿದ.

ಆಗಲಿ, ಎನ್ನುವಂತೆ ತಲೆಯಾಡಿಸಿ ಶಾಂತಪ್ಪ ಮುಂದೆ ನಡೆದ. ಅವನು ಒಂದೆರಡು ಹೆಜ್ಜೆ ಮುಂದೆ ನಡೆವಾಗ ಅವರ ಮನೆಯ ಬಾಗಿಲಿನ ಹಿಂದೆ ನಿಂತು ಬಾಗಿಲಿನ ಸಂದಿಯಿಂದ ನೋಡುತ್ತಿದ್ದ ರತ್ನಮ್ಮನ ಸೀರೆಯಂಚು, ಬಾಗಿಲಿನ ತಳದಲ್ಲಿ ಹೊರಬಂದುದು ಕಾಣಿಸಿತು. ಶಾಂತಪ್ಪ ಅದನ್ನು ನೋಡಿಯೂ ಗಮನಿಸದವನಂತೆ ಬೇರೆಡೆಗೆ ಮುಖ ತಿರುಗಿಸಿದ. ಹಿಂದಿನ ದಿನ ಅವಳು ವರ್ತಿಸಿದ ರೀತಿಯ ನೆನಪಾಗಿತ್ತು. ಆ ನೋಟ....ಆ ಸೆರಗು....ಆ ಸುಪುಷ್ಟ ಕುಚದ್ವಯ....ಅಬ್ಬ ಎಂತಹ ಮಿಂಚಿನಂತಹ ಘಟನೆ? ಶಾಂತಪ್ಪನಿಗೆ ಮೈ ಬೆವತಂತಾಯ್ತು ಒಂದು ಕ್ಷಣ.

ಹತ್ತಾರು ಗಜಗಳ ದೂರ ಹೋಗಿದ್ದಾಗ ಚನ್ನಯ್ಯ, ಖಾನ್‌ರತ್ತ ಅವನು ತಿರುಗಿ ನೋಡಿದಾಗ, ಅರ್ಥಪೂರ್ಣವಾದ ಹುಸಿನಗೆಯಿಂದ ಒಬ್ಬರ ಮುಖವನ್ನೊಬ್ಬರು ನೋಡಿಕೊಳ್ಳುತ್ತಿದ್ದ ಅವರು ತಲೆತಗ್ಗಿಸಿದರು. ಮೌನ ವಾಗಿ ಅರ್ಧ ಮೈಲು ನಡೆದು ಬಂದು ಸಣ್ಣದೊಂದು ನೀರಿನ ಕಟ್ಟೆಯನ್ನು

ದಾಟದ ನಂತರ, ಬೆಳೆ ಕುಯ್ದು, ಕೂಳೆಗಳನ್ನು ಮಾತ್ರ ಬಿಡಲ್ಪಟ್ಟಿದ್ದ ಬರಿ ಹೊಲವನ್ನು ಹೊಕ್ಕರು. ಹೊಲದ ಬೇರೊಂದು ಪಾರ್ಶ್ವದಲ್ಲಿ ಸುಮಾರು ಅರ್ಧ ವ್ಮೈಲಿ ದೂರದಲ್ಲಿ ತೆಂಗಿನ ತೋಟಗಳು ಕಾಣುತ್ತಿದ್ದವು. ಆಗ ಚನ್ನಯ್ಯನೆಂದ,

"ಎಳೆನೀರು ಕುಡಿಯೋಣವೆ ಸಾರ್?"

"ಬೇಡಪ್ಪ....ಮೊದಲು ಗಣೀಗೆ ಹೋಗಿ ಸಾಹುಕಾರರು ಹೇಳಿದ ಜಾಗ ದಲ್ಲಿ ಹೊಸದಾಗಿ ಕೆಲಸ ಪ್ರಾರಂಭಿಸೋಣ." ಮತ್ತೆ ಅರ್ಧಮ್ಮೈಲು ಕಳೆಯಿತು.

"ಮಾಣಿಕ್ಯಂ ಯಾಕೋ ಬರಲೇ ಇಲ್ಲ!" ಚನ್ನಯ್ಯನೆಂದ.

"ಅವರ್ಗೆ ಅಲ್ಲಿ ಲಾರಿ ನೋಡೋ ಕೆಲ್ಸ ಐತೆ!" ಖಾನ್ ನುಡಿದ, ನಗುತ್ತಾ.

ಶಾಂತಪ್ಪನಿಗೂ ಕುತೂಹಲವೊಂದು ಬಾಧಿಸುತ್ತಿತ್ತು. ಚನ್ನಯ್ಯನಿಗೆ ಮಾತನ್ನು ಮುಂದುವರಿಸಲು ಉತ್ತೇಜನವಿತ್ತರೆ. ಸತ್ಯಾಂಶ ಹೊರಬೀಳುವುದು ಇಲ್ಲದಿದ್ದರೆ ತಾನೇ ಕೇಳಬಹುದು. ಆದರೆ ತನಗಿಂತಲೂ ಕಡಿಮೆ ದರ್ಜೆ ಯವನೊಬ್ಬನ ಅಂತರಂಗ ಜೀವನದ ವಿಷಯದಲ್ಲಿ ತಾನು ಇಷ್ಟೊಂದು ಕುತೂ ಹಲವನ್ನು ವ್ಯಕ್ತಪಡಿಸುವುದು ನ್ಯಾಯವಲ್ಲ, ಇಂತಹ ವಿಷಯದಲ್ಲಿ ತಾನು ಆದಷ್ಟು ತಾತ್ಸಾರವನ್ನು ತೋರಿಸಿಕೊಳ್ಳಬೇಕು. ಆದರೆ ಕಂಪೆನಿಯ ಒಬ್ಬ ಕೆಲಸಗಾರನು ಹೀನ ನಡವಳಿಕೆಯವನಾದರೆ, ಎಲ್ಲರಿಗೂ ಅಗೌರವವೇ ಸರಿ, ಆದ್ದರಿಂದ ತನ್ನ ಅನುಮಾನ ಸತ್ಯವೋ ಸಟೆಯೋ ಎಂದು ತಿಳಿಯಬೇಕು. ಆದರೆ....ತನಗಿಂತ ಕಡಿಮೆ ದರ್ಜೆಯವನ ವಿಷಯದಲ್ಲಿ ಈ ಆಕಾಂಕ್ಷೆಯಿರ ಬಾರದು, ತನ್ನ ಘನತೆಗದು ಕುಂದು.....ಶಾಂತಪ್ಪ ಗಂಭೀರವಾಗಿ ಮೌನ ತಾಳಿದನು. ಎದುರಿನಲ್ಲಿ, ಸುಮಾರು ಒಂದು ಮೈಲು ದೂರದಲ್ಲಿ ತಾನು ಏರಿ ಹೋಗಬೇಕಾಗಿದ್ದ ಗುಡ್ಡವು ಕಾಣುತ್ತಿದ್ದಿತು. ಅದನ್ನು ನೋಡುತ್ತಾ ಮುನ್ನಡೆದ.

ಮೇನೇಜರರ ಗಂಭೀರ ಮೌನ, ಚನ್ನಯ್ಯ ಮತ್ತು ಖಾನ್‌ರಲ್ಲಿನ ಉತ್ಸಾಹಕ್ಕೆ ತಣ್ಣೀರನ್ನೆರೆಚಿದಂತಾಯ್ತು. ಮೇನೇಜರರ ಅನಾಸಕ್ತಿಯು ಅವರಲ್ಲಿ ಕುತೂಹಲವನ್ನು ತಂದಿದ್ದಿತು; ಇವರಿನ್ನೂ ಯುವಕರು, ಇಂತಹ ಮಾತುಗಳಲ್ಲಿ ಸಹಜವಾದ ಕುತೂಹಲವಿರಬೇಕು, ಆದರೂ ನಿರಾಸಕ್ತರಾಗಿರು ವರಲ್ಲ ಎಂದು ಈ ನೂತನ ರೀತಿಯ ಯುವಕ ಮೇನೇಜರರ ವಿಷಯವಾಗಿ

ಅವರಲ್ಲಿ ಗೌರವಭಾವ ಮೂಡಿತು. ಒಂದು ತೆರನಾದ ಭಯವೂ ಉಂಟಾಯ್ತು. ಗಂಭೀರ ಸ್ವಭಾವದವರು ಮತ್ತು ಮೌನಿಗಳು ಈ ತೆರನಾದ ಪರಿಣಾಮ ವನ್ನುಂಟುಮಾಡುವುದು ಸಾಮಾನ್ಯವೇ.

ಆದರೂ ಯುವಕರನ್ನು ತನ್ನ ಕಡೆಗೆ ಸೆಳೆದುಕೊಳ್ಳುವ ಔಷಧ ತನ್ನಲ್ಲಿದೆ ಯೆಂದುಕೊಂಡು, ಮನಸ್ಸಿನಲ್ಲಿಯೇ ಹೆಮ್ಮೆಪಟ್ಟುಕೊಂಡ ಚನ್ನಯ್ಯ. ಈ ಕಂಪೆನಿಯವರು ಎಷ್ಟು ಮಂದಿಗೆ ಆ ಔಷಧ ಹಿಡಿದಿರಲಿಲ್ಲ! ಚನ್ನಯ್ಯನಲ್ಲಿ ಅದೇ ನಂಬಿಕೆಯಿದ್ದಿತು ಈಗಲೂ. ಈ ಔಷಧವು ಚನ್ನಯ್ಯನಿಗೂ ಎಷ್ಟೋ ಉಪಕಾರ ಮಾಡಿದ್ದಿತು. ಔಷಧ ಕೊಟ್ಟ ವೈದ್ಯರ ಜೇಬು ತುಂಬುವುದರ ನಾಲ್ಕರಡಿಯಾಗಿ ಚನ್ನಯ್ಯನ ಜೇಬೂ ತುಂಬಿದ್ದಿತು ಅದರಿಂದ; ಆ ಔಷಧ ದಿಂದ ಮತ್ತರಾದ ಕಂಪೆನಿಯ ಕೆಲಸಗಾರರು ಕಂಟ್ರಾಕ್ಟರುಗಳಿಗೆ ಬೇಕಾದ ಸಹಾಯ ಮಾಡಿದ್ದರು.

"ತಾವು ಯಾವ ಜಾತಿ ಸಾರ್ ?" ಚನ್ನಯ್ಯ ಕೇಳಿದ.

ಶಾಂತಪ್ಪನಿಗೆ ಗಂಟಲು ಕಟ್ಟಿದಂತಾಯ್ತು. ಪುನಃ ಜಾತಿಯ ಪ್ರಶ್ನೆ. ತಾನು ಯಾವುದಕ್ಕೆ ಪ್ರಾಮುಖ್ಯತೆ ಕೊಟ್ಟಿರಲಿಲ್ಲವೋ ಅದೇ ವಿಷಯದಲ್ಲಿ ಪುನಃ ಪುನಃ ಪ್ರಶ್ನೆಯೆ ?

"ಸುಮ್ನೆ ಕೇಳಿದೆ ಸಾರ್....ಅಷ್ಟೆ," ಎಂದ ಚನ್ನಯ್ಯ ಪುನಃ.

"ಮೇನೇಜರು ಬ್ರಾಂಬ್ರೇ ಇರ್ಬೇಕು" ಎಂದ ಖಾನ್.

"ಹ್ಞೂ...." ಶಾಂತಪ್ಪ ತಲೆಯಲ್ಲಾಡಿಸಿದ.

ದಟ್ಟವಾಗಿ ಬೆಳದಿದ್ದ ಗಿಡಗಳ ಮೇಲಿನಿಂದ ಗಾಳಿ ಬೀಸಿ ಬಂದು ಅವರಿ ಗೊಂದು ಆಹ್ಲಾದವನ್ನುಂಟುಮಾಡುತ್ತಿದ್ದಿತು. ಹಳ್ಳಿಯವರು ಕೆಲವರು ಎತ್ತಿನ ಗಾಡಿಯನ್ನು ಕಟ್ಟಿಕೊಂಡು ಬಂದು ಕಾಡಿನೊಳ ಹೊಕ್ಕು ಸೌದೆ ಯನ್ನು ಕಡಿಯುತ್ತಿದ್ದರು. ಆ ಶಬ್ದವು ಸುತ್ತಲಿನ ಗುಡ್ಡಗಳಿಂದ ಪ್ರತಿಧ್ವನಿತ ವಾಗುತ್ತಿದ್ದಿತು. ದೂರದಲ್ಲಿ ಕೂಗಿದ ಕಾಗೆ, ಡೇಗೆಗಳ ಧ್ವನಿಯೊಮ್ಮೊಮ್ಮೆ ಮಂದವಾಗಿ ಕೇಳುತ್ತಿದ್ದುವು. ಆಕಾಶದಲ್ಲಿ ತೇಲುತ್ತಿದ್ದ ಮೋಡದ ತುಣುಕು ಗಳು ಗುಡ್ಡಗಳ ಮೇಲೆ ಕೆಲವೆಡೆಗಳಲ್ಲಿ ನೆರಳು ಕವಿಸುತ್ತಿದ್ದವು. ಮೋಡಗಳು ಮೇಲೆ ತೇಲಿದಂತೆ ಕೆಳಗೆ, ಭೂಮಿಯ ಮೇಲೆ, ನೆರಳುಗಳು ಒಂದರ ಹಿಂದೊಂದು ಓಡುತ್ತಿದ್ದುದು, ನೆರಳುಗಳ ಓಟದ ಸ್ಪರ್ಧೆಯಂತೆ ಕಾಣು ತ್ತಿದ್ದಿತು.

"ಸಾರ್...ಸಾರ್...ನೋಡಿ ಇಲ್ಲಿ ಈಗಿನ್ನ ಎಷ್ಟು ದೊಡ್ಡ ಹಾವು ಹರಿದುಹೋಗಿದೆ!" ಎಂದು ಚನ್ನಯ್ಯನೆಂದ ಆಶ್ಚರ್ಯದಿಂದ.

ಹಾವೊಂದು ಹರಿದು ಹೋದ ಗುರುತು ರಸ್ತೆಯ ಮೃದುವಾದ ಮಣ್ಣಿನ ಮೇಲೆ ಡೊಂಕು ಡೊಂಕಾಗಿ ಮೂಡಿದ್ದಿತು. ಅದನ್ನು ನೋಡಿ ಶಾಂತಪ್ಪನಿಗೆ ಆ ಹಾವಿನ ಕಲ್ಪನೆಯಿಂದ ಭಯವಾಯಿತು. ಆದರೆ ತನ್ನ ಭಯವನ್ನು ತೋರಗೊಡದೆ ಕೇಳಿದ,

"ಇಷ್ಟು ದೊಡ್ಡ ಹಾವಿರುತ್ತೆಯೆ ಇಲ್ಲಿ?"

"ಇಷ್ಟು ದೊಡ್ಡದೇನು, ಇನ್ನೂ ದೊಡ್ಡದು ಇವೆ. ರಸ್ತೆಯುದ್ದಕ್ಕೂ ಈ ಗುರುತು ತುಂಬಾ ಕಾಣ್ತದೆ ಸಾರ್!" ಎಂದ ಚನ್ನಯ್ಯ.

ಅವರು ಕುಳಿಗಳನ್ನಗೆದಿದ್ದ ಗುಡ್ಡದ ಹತ್ತಿರ ಬಂದಿದ್ದರು. ಕುಳಿಯಿಂದ ಮೇಲೆ ತಂದ ಅದಿರನ್ನು ಕಬ್ಬಿಣದ ಗಾಡಿಗಳಲ್ಲಿ ತುಂಬಿ, ಗಾಡಿಗಳನ್ನೆಳೆಯುವ ಶಬ್ದ, ಆ ಅದಿರನ್ನು ಸುತ್ತಿಗೆಯಿಂದ ಬಡಿದು ಪುಡಿಮಾಡುವ ಶಬ್ದಗಳು, ಯಾವುದೋ ವಾದ್ಯವನ್ನು ನುಡಿಸಿದಂತೆ ತಾಳಬದ್ಧವಾಗಿ ಬಂದು ಕೇಳುತ್ತಿದ್ದುವು. ಗಿಡಗಳ ಸಂದಿನಿಂದ, ಕೂಲಿಗಾರರು ಓಡಾಡುತ್ತಿದ್ದುದೂ ಕಾಣಿಸಿತು.

ಶಾಂತಪ್ಪ ಕುಳಿಗಳನ್ನಗೆದಿದ್ದ ಆ ಸಣ್ಣ ಗುಡ್ಡವನ್ನು ಹತ್ತಿ, ಹಿಂದಿನ ದಿನ ಸಾಹುಕಾರರೊಡನೆ ನೋಡಿದ್ದ ಸ್ಥಳಕ್ಕೆ ಬಂದ. ಅಲ್ಲಿ ಆಗಲೇ ನಾಲ್ಕಾರು ಬೇರೆ ಬೇರೆ ಕುಳಿಗಳಲ್ಲಿ ಕಂಟ್ರಾಕ್ಟರು ಚನ್ನಯ್ಯನ ಆಳುಗಳು ಕೆಲಸಮಾಡುತ್ತಿದ್ದರು. ಸೂಚಿತವಾಗಿದ್ದ ಕುಳಿಯಲ್ಲಿಯೂ ಹೊಸದಾಗಿ ಮೂವತ್ತು, ಮೂವತ್ತೈದು ಜನರು ಕೆಲಸಕ್ಕಿಳಿದಿದ್ದರು. ಕುಳಿಯಿಂದ ಮೇಲಿದ್ದ ಮಟ್ಟಸವಾದ ನೆಲದಲ್ಲಿ, ಸುಮಾರು ಇನ್ನೂರು ಜನ ಹೆಣ್ಣಾಳುಗಳು ಅದಿರನ್ನು ಸುತ್ತಿಗೆಯಿಂದೊಡೆಯುತ್ತಾ ಬಿಸಿಲಿನಲ್ಲಿ ಕುಳಿತಿದ್ದರು. ಕುಳಿಯೊಳಗೆ ಕೆಲವರು ಪಿಕಾಸಿಯಿಂದ ನೆಲದ ಮಣ್ಣನ್ನು ಅಗೆಯುತ್ತಿದ್ದರು. ಕೆಲವರು ಗುದ್ದಲಿಗಳಿಂದ ಆ ಮಣ್ಣನ್ನು ಎಳೆದು ಕಬ್ಬಿಣದ ಬಾಣಲೆಗಳಿಗೆ ತುಂಬುತ್ತಿದ್ದರು. ಸುಮಾರು ಎಂಟು, ಹತ್ತು ವರ್ಷದ ಬಾಲಕರು ಮಣ್ಣಿನಿಂದ ತುಂಬಿದ ಆ ಬಾಣಲೆಗಳನ್ನು ಒಂದರಮೇಲೊಂದರಂತೆ ಎರಡು ಮೂರನ್ನು ತಲೆಯ ಮೇಲಿಟ್ಟುಕೊಂಡು ಮೆಟ್ಟಲಿನಿಂದ ಮೇಲೆ ಹತ್ತಿ, ಬಿಸಿಲಿನಲ್ಲಿ ದೂರ ಹೋಗಿ ಬಿಸುಡುತ್ತಿದ್ದರು. ಕೆಲವು ಸ್ಥಳಗಳಲ್ಲಿ ದೂರ ಹೋಗದೆ, ಕುಳಿಯ ಅಂಚಿನಲ್ಲಿಯೇ

ಮಣ್ಣಿನ ರಾಶಿ ಹಾಕುತ್ತಿದ್ದರು. ಹೀಗಾಗಿ ಕೆಲವೆಡೆ ಕುಳಿಗಳ ಮೇಲೆ, ಕುಳಿಯ ಆಳಕ್ಕಿಂತಲೂ ಎತ್ತರವಾದ ಮಣ್ಣಿನ ರಾಶಿಯಿರುತ್ತಿದ್ದಿತು.

ಮಣ್ಣನ್ನು ತೆಗೆದ ಸ್ಥಳದಲ್ಲಿ, ಕಬ್ಬಿಣದ ಗಡಾರಿ, ಹಾರೆಗಳಿಂದ ನೆಲದಲ್ಲಿ ಹುದುಗಿದ್ದ ಮ್ಯಾಂಗನೀಸ್ ಅದಿರಿನ ಗುಂಡು (Boulders)ಗಳನ್ನು ಎಬ್ಬಿಸಿ ತೆಗೆಯುತ್ತಿದ್ದರು. ಕೆಲವು ವೇಳೆ ದೊಡ್ಡ ಗುಂಡುಗಳಾದರೆ, ಉಳಿಯಿಂದ ಹೊಡೆದೋ, ಹಾರೆಯಿಂದ ಹೊಡೆದೋ ಚೂರುಮಾಡಿ ಮೇಲೆಬ್ಬಿಸುತ್ತಿದ್ದರು. ಆ ಗುಂಡನ್ನು ತೆಗೆದ ನಂತರ ಅದರಿಂದಾದ ಕುಳಿಗಳಲ್ಲಿ ಅದಿರಿನ ಸಣ್ಣ ಸಣ್ಣ ಚೂರುಗಳನ್ನು ತೆಗೆಯುತ್ತಿದ್ದರು. ಮೇಲೆಳೆದ ಈ ಗುಂಡುಗಳನ್ನು ಸುಮಾರು ಹದಿನೈದು ಹದಿನಾರು ಪೌಂಡು ತೂಕವಿರುವ ಚಮ್ಮಟಿಗೆಗಳಿಂದ ಹೊಡೆದು ಚೂರುಮಾಡುತ್ತಿದ್ದರು.

ಅದಿರಿನ ಈ ಚೂರುಗಳಲ್ಲಿ ಅಲ್ಲಿಯೇ ಕುಳಿತುಕೊಂಡಿದ್ದ ಮುದುಕರು ಕೆಲವರು, ಉತ್ತಮವಾದುವನ್ನು ಆರಿಸಿ ಬಾಣಲೆಗಳಿಗೆ ತುಂಬುತ್ತಿದ್ದರು. ವಯಸ್ಸಾದುದರಿಂದ, ಎದ್ದು ನಿಂತು ದುಡಿಯುವ ಶಕ್ತಿಯಿಲ್ಲದುದರಿಂದ, ಅವರು ಒಂದೆಡೆಯಲ್ಲಿಯೇ ಕುಳಿತು ಈ ಕೆಲಸಮಾಡುತ್ತಿದ್ದರು. ಅನುಭವ ಪಾಠದಿಂದ ಉತ್ತಮ ಮತ್ತು ಕೀಳುದರ್ಜೆಯ ಅದಿರನ್ನು ಸುಲಭವಾಗಿ ಆರಿಸಿ ಡುತ್ತಿದ್ದರವರು.

ಬಾಣಲೆಗಳಲ್ಲಿ ತುಂಬಿದ ಅದಿರನ್ನು ಕೆಲವು ಬಾಲಕ ಬಾಲಕಿಯರು ಹೊತ್ತುಕೊಂಡು ಮಣ್ಣಿನ ಮೆಟ್ಟಿಲೇರಿ ಹೋಗುತ್ತಿದ್ದರು. ಮೆಟ್ಟಿಲಿನ ಅಂಚಿನಲ್ಲಿ ನಿಲ್ಲಿಸಲಾಗಿದ್ದ ಒಂದು ಅಥವಾ ಮೂರು ಚಕ್ರದ ಕಬ್ಬಿಣದ ಗಾಡಿಗಳಿಗೆ ಅದಿರನ್ನು ಸುರಿಯುತ್ತಿದ್ದರವರು. ಬೇರೆ ಕೆಲವು ಬಾಲಕರು ಆ ಗಾಡಿಗಳನ್ನು ತಳ್ಳಿಕೊಂಡು ಹೋಗಿ ಬಿಸಿಲಿನಲ್ಲಿ ಸಾಲಾಗಿ ಕುಳಿತಿದ್ದ ಹೆಂಗಸರ ಮುಂದೆ ಗಾಡಿಯನ್ನು ಖಾಲಿಮಾಡುತ್ತಿದ್ದರು. ಅದಿರು ಹೆಣ್ಣಾಳುಗಳ ಮುಂದೆ ರಾಶಿ ರಾಶಿಯಾಗಿ ಬೀಳುತ್ತಿದ್ದಿತು. ಅದಿರನ್ನು ಸುತ್ತಿಗೆಯಿಂದ ಒಡೆದು, ಅದರಲ್ಲಿ ಸೇರಿಕೊಂಡಿದ್ದ ಕಬ್ಬಿಣ, ಬೆಣಚು ಕಲ್ಲುಗಳ ತುಣುಕುಗಳನ್ನು ಬೇರ್ಪಡಿಸಿ ಮ್ಯಾಂಗನೀಸ್ ಅದಿರನ್ನು ಬಾಣಲೆಗಳಿಗೆ ತುಂಬುತ್ತಿದ್ದರು

ಬಾಣಲೆಗಳಲ್ಲಿ ತುಂಬಿದ ಈ ಅದಿರನ್ನು ದೂರಕ್ಕೆ ಲಾರಿಯ ಹಾದಿಯ ಸಮೀಪಕ್ಕೆ ತೆಗೆದುಕೊಂಡು ಹೋಗಿ ರಾಶಿ (Stacks) ಕಟ್ಟುತ್ತಿದ್ದರು.

"ಏಯ್ !.... ಯಾಕೋ ಸುಮ್ಕೆ ನಿಂತಿದೀಯ. ... ನಿಂಗೆ ಕೂಲಿ ಕೊಡೋದು ಸುಮ್ಕೆ ನಿಂತಿರೋಕ ?"

"ಆ ಕಲ್ಲು ಚೆಂದಾಗಿದೆ, ವೈನಾಗಿರೋ ಕಲ್ಲು ಬಿಸಾಕಬೇಡ ಕಣೋ ಮುದ್ಕ !"

"ಲೇ ಹೈದ, ಯಾಕ್ಲ ಬಾಂಡ್ಲೆ ಅರ್ಧ ತುಂಬಿದ್ಬಿ, ಪೂರ ತುಂಬಿ ಹೊತ್ಕೊಂಡೋಗೋ..."

"ಮೊದ್ಲು ಆ ಮಣ್ಣು ಎಳ್ಕೊಂಬಿಡು ಆ ಮೇಲೆ ಆ ಗುಂಡು ಬರ್ತದೆ."

"ಇಲ್ಲ ಇದು ದೊಡ್ಡ ಗುಂಡು. ಎಳೆಯೋಕಾಗೊಲ್ಲ...ಡೈನಾಮೆಂಟಿಡ ಬೇಕು! "

"ರಾಯಿ ಬಾಗುಂದಪ್ಪೋ...ಚೂಡ್ರಾ ಇಕ್ಡ..."

ಈ ಮಾತುಗಳು ಅಲ್ಲೊಂದು ಇಲ್ಲೊಂದು, ಶಾಂತಪ್ಪನ ಕಿವಿಗೆ ಬೀಳುತ್ತಿದ್ದುವು.

"ಏ...ಅಮ್ಮಿ ಯಾಕವ್ವ ಸುಮ್ನೆ ಕುಂತಿದೀಯ ?"

"ಏ ಉಡ್ಗ...ಯಾಕೆ ? ಇಂಗೇನಾ ಕಲ್ಲು ಒಡಿಯೋದು...ಇದೇನು ವ್ಯಾಂಗ್ನೀನಾ ಏನು ?"

"ಏಟು ದಿವಸದಿಂದ ಕಲ್ಲು ಒಡೀತಿದಿ ಇಂಗೇನಾ ಕೆಲಸಾ ಮಾಡೋದು, ಏನಜ್ಜಿ ?" ಎಂಬ ಮೇಸ್ತ್ರಿಗಳ ಕೂಗೂ ಅತ್ತಲಿಂದ ಕೇಳಿ ಬರುತ್ತಿದ್ದಿತು.

"ಏನು ಸಾರ್...ಈ ಜಾಗ ಹೆಂಗಿದೆ?" ಚನ್ನಯ್ಯ ಕೇಳಿದ ಹೊಸದಾಗಿ ಕೆಲಸ ಪ್ರಾರಂಭಿಸಿದ ಆ ಕುಳಿಯನ್ನು ಸೂಚಿಸಿ.

"ಇನ್ನೂ ನಾಲ್ಕಾರು ಅಡಿ ಆಳ ಇಳಿದರೆ ಪರವಾಗಿಲ್ಲಪ್ಪ...ನೋಡಬೇಕು..." ಎಂದ ಶಾಂತಪ್ಪ. ಅವನಿಗೆ ತಿಳಿದಿದ್ದುದೇ ಅಷ್ಟು. ಅವನೂ ಈ ಹೊಸ ಕುಳಿಯನ್ನಗೆಸಿಯೇ ಪ್ರಯೋಗ ಮಾಡಬೇಕಾಗಿದ್ದಿತು, ತಾನೂ ಪಾಠ ಕಲಿಯಬೇಕು, ಇದೆಂತಹ ತೊಂದರೆ, ತನ್ನ ಪರೀಕ್ಷೆಯ ಕಾಲವಿದು....ತಾನು ಕಲಿತವನೆಂದು ಸಾಹುಕಾರರು ತನ್ನಿಂದ ಹೆಚ್ಚಿನದನ್ನು ಅಪೇಕ್ಷಿಸುತ್ತಾರೆ.... ಸಾಹುಕಾರರು ನಿಯಮಿಸಿಕೊಂಡು ಕರೆತಂದವನೆಂದು ಕೆಲಸಗಾರರೂ ತನ್ನನ್ನು ನಂಬಿ ತನ್ನ ಮಾತನ್ನೇ ಸತ್ಯವೆಂದು ನಂಬುವರು...ಆದರೆ ತನಗೆ ? ತನಗೆ ಈ ಕೂಲಿಗಾರರಷ್ಟು ತಿಳಿದಿಲ್ಲ !

ಶಾಂತಪ್ಪನಿಗೆ ಕಣ್ಣಿಗೆ ಕಟ್ಟಿದ ದೃಶ್ಯ, ಹೃದಯಕ್ಕೆ ನಾಟಿದ ಸಂಗತಿ ಯೆಂದರೆ ಗಣಿಯ ಆಡಳಿತ. ಎಂಟು ಹತ್ತು ವರ್ಷದ ಬಾಲಕರು, ಶಾಲೆಯಲ್ಲಿ ಓದಿ ವಿದ್ಯೆ ಕಲಿಯಬೇಕಾದವರು ನಾಲ್ಕಾರು ಆಣೆಗಳ ದಿನಗೂಲಿಗಾಗಿ ಬರು ತ್ತಿದ್ದರು, ತಮ್ಮಿಂದ ಸಾಧ್ಯವಾಗದ ಕಾರ್ಯ ಮಾಡುತ್ತಿದ್ದರು ಶಕ್ತಿಹೀನ ರಾದ ಮುದುಕರು ಹತ್ತು ಹನ್ನೆರಡಾಣೆಯ ದಿನಗೂಲಿಗಾಗಿ ನಾಲ್ಕಾರು ಮೈಲು ನಡೆದು ಬಂದು, ತಲೆಯನ್ನು ಸಿಡಿಸುವಂತಹ ಬಿಸಲಿನಲ್ಲಿ ಕುಳಿತು ದುಡಿಯು ತ್ತಿದ್ದರು. ಯೌವನಸ್ಥೆಯರಾದ ಹೆಣ್ಣುಗಳು, ಕೆಲವರು ಗರ್ಭಿಣಿಯರೂ ಮತ್ತು ಮುದುಕಿಯರು ಬಿಸಿಲಿನಲ್ಲಿ ಕುಳಿತು ಬೆವರುತ್ತಾ ಅದಿರನ್ನೊಡೆಯು ತ್ತಿದ್ದರು ; ತಮ್ಮ ಸೂಕ್ಷ್ಮ ದೃಷ್ಟಿಗೆ ತೋರಿದಂತೆ ಅದಿರನ್ನು ಒಡೆದು ಬೇರ್ಪ ಡಿಸಿ, ತಾವು ಉತ್ತಮವಾದ ಅದಿರನ್ನೇ ಬೇರ್ಪಡಿಸಿದ್ದೇವೆಂದು ಸಂತೋಷ ದಿಂದ ಬಾಣಲೆಯನ್ನು ತುಂಬುತ್ತಿದ್ದರು. ಆದರೆ, ಮೇಸ್ತ್ರಿಯು ಬಂದು ಆ ಬಾಣಲೆಯನ್ನು ಪರೀಕ್ಷಿಸಿ ಅದರಲ್ಲಿ, ಅವಳ ದೃಷ್ಟಿಗೆ ನಿಲುಕದೇ ಸೇರಿ ಕೊಂಡ ಅಶುದ್ಧವಾದ ಅದಿರನ್ನು ತೆಗೆದು ತೋರಿಸಿ, ಅವಳ ಕೆಲಸವನ್ನು ದೂಷಿಸುತ್ತಿದ್ದ, ಮೂದಲಿಸುತ್ತಿದ್ದ. ಬಿಸಿಲಿನಲ್ಲಿ ಕುಳಿತು ದಿನವೆಲ್ಲವೂ ಬೇಯುತ್ತಾ, ಕಣ್ಣಿನೊಳಗೆ ಕಣ್ಣಿಟ್ಟುಕೊಂಡು, ಅದಿರನ್ನೊಡೆದರೂ ಸಹ ಈ ಪ್ರಮಾದ ಸಂಭವಿಸಿದರೆ, ಅದೆಂತಹ ವೇದನೆ ! ಶಾಂತಪ್ಪನ ಅಂತಃಕರಣ ವನ್ನು ಕಲಕಿದಂತಾಗುತ್ತಿದ್ದಿತು ಈ ಬಿಸಿಲಿನಲ್ಲಿ ಬೇಯುವ ದೃಶ್ಯವನ್ನು ನೋಡಿದಾಗ. ಕೆಲವರು, ತಾವು ತಂದ ಮಡಿಕೆಯ ನೀರು ಮಧ್ಯಾಹ್ನ ದೊಳಗೇ ಮುಗಿದು ಹೋಗಿ, ಬಿಸಿಲಿನಲ್ಲಿ ದುಡಿದು ಗಂಟಲೊಣಗಿ ಬಂದರೆ, ನೀರು ಕುಡಿಯಲು ತಮ್ಮ ಮಡಿಕೆಯಲ್ಲಿ ನೋಡಿ, ನೀರಿಲ್ಲದುದರಿಂದ ನಿರಾಶ ರಾಗುತ್ತಿದ್ದರು. ಕೆಲಸಗಾರರು ಒಬ್ಬರಿಗೊಬ್ಬರು ನೀರು ಬೇಕಾದರೆ ಕೊಡುವ ಸಂಪ್ರದಾಯಕ್ಕೆ ಶರಣಾಗಿರಲಿಲ್ಲ ; ತಮಗೆ ಪುನಃ ನೀರು ಬೇಕಾದಾಗ ತಮ್ಮ ಗತಿಯೇನೆಂಬ ಯೋಚನೆ ಇರುತ್ತಿದ್ದಿತವರಲ್ಲಿ. ಬಿಸಿಲಿನಲ್ಲಿ, ಕುಡಿಯಲು ಹನಿನೀರೂ ಇಲ್ಲದೆ ಮುಖವನ್ನು ಬಾಡಿಸಿಕೊಂಡು ಕಂಗೆಟ್ಟ ಮುಖದಿಂದ ಕುಳಿತಿರುತ್ತಿದ್ದ ಬಾಲಕರು, ಹೆಣ್ಣಾಳುಗಳನ್ನು ನೋಡಿದಾಗ ಶಾಂತಪ್ಪನಿಗೆ ಸಂಕಟವಾಗುತಿತ್ತು. ಒಂದು ಲೋಟ ನೀರಿಗೆ, ನೂರು ಟನ್ ಅದಿರಿಗಿಂತಲೂ ಪ್ರಾಮುಖ್ಯತೆಯಿದ್ದಿತು ಅಲ್ಲಿ ! ಸಹಸ್ರಾರು ರೂ. ಬೆಲೆಯ ನೂರು ಟನ್ ಅದಿರು ಬೇಕಾದರೆ ಸಿಗುತ್ತಿದ್ದಿತು ; ಆದರೆ ಒಂದು ಹನಿ ನೀರೆಲ್ಲಿ ಬರಬೇಕು ಬಿಸಿಲಿನಲ್ಲಿ ಬೆಂದು ಹೋಗುವ ಆ ಗುಡ್ಡದಲ್ಲಿ ?

ಶಾಂತಪ್ಪ ಸುರಂಗದ ಬಳಿಗೆ ಹೋಗಿ, ಒಳಗಿಳಿದು ನೋಡಿದ. ಚನ್ನಯ್ಯನು ಒಳಗಿಳಿಯದೇ, ಅದಿರನ್ನು ನೋಡುವ ನೆಪದಿಂದ ಮೇಲೆಯೇ ಉಳಿದ. ಆ ಸುರಂಗದ ಒಳಗೆ ಹೋಗಬೇಕಾದರೆ ಎಂತಹವನ ಧೃತಿಯಾದರೂ ಕೆಡುತ್ತಿದ್ದಿತು.

ಸುರಂಗದೊಳಗೆ ಇಳಿದ ಶಾಂತಪ್ಪನಿಗೆ ಮೈಯೆಲ್ಲ ಬೆವತು ಬೆವರು ಧಾರೆಧಾರೆಯಾಗಿ ಹರಿಯಿತು. ಬಟ್ಟೆಯನ್ನು ಮೈಗೆ ಅಂಟಿಸಿದಂತಾಯಿತು. ಆದರೆ, ಒಳಗೆ ಬೆಳ್ಳಿಯಂತೆ ಫಳಫಳನೆ ಹೊಳೆಯುತ್ತಿದ್ದ ಅದಿರಿನ ಸೆಲೆಯನ್ನೂ ಉಳಿಯನ್ನಿಟ್ಟು ಸುತ್ತಿಗೆಯಿಂದ ಹೊಡೆಯುವಾಗ ಒಳಗೇಳುತ್ತಿದ್ದ 'ಥನ್' 'ಥನ್' ಎಂಬ ಶಬ್ದವೂ, ಶಾಂತಪ್ಪನಿಗೆ ಮೈ ಮರೆಸಿದ್ದುವು. ಒಳಗೆ ಕೆಲಸ ಮಾಡುತ್ತಿದ್ದ ಆಳಿನ ಮೈಮೇಲೆ ನೀರು ಸುರಿದಂತೆ ಬೆವರು ಹರಿದು ಹನಿಯು ತ್ತಿದ್ದಿತು. ಸುತ್ತಿಗೆಯನ್ನೆತ್ತಿ ಅವನು ಹೊಡೆದಾಗ ಸುತ್ತಲಿನ ಗೋಡೆಗಳಿಂದ ಹಸಿ ಮಣ್ಣು ಉದುರಿ ಅವನ ಮೈಮೇಲೆ ಬಿದ್ದು ಮೈಗೆ ಅಂಟಿಕೊಳ್ಳುತ್ತಿದ್ದಿತು ; ಹಾಗೆ ಸುತ್ತಿಗೆಯೆತ್ತಿದಾಗ ಅವನ ಮೈನ ಮಾಂಸಖಂಡಗಳೂ, ನರಗಳೂ ಉಬ್ಬಿಕೊಳ್ಳುತಿದ್ದುವು, ಒಳಗೇ ಅರ್ಧ ಗಂಟೆಯ ಕಾಲ ನಿಂತುದಕೆ ಶಾಂತಪ್ಪನಿಗೆ ಉಸಿರು ಕಟ್ಟಿದಂತಾಯಿತು. ಮೆಟ್ಟಲೇರಿ ಮೇಲೆ ಬಂದ. ಮೆಟ್ಟಲೇರುವಾಗ ಸುಮಾರು ಮುನ್ನೂರಡಿ ಮೇಲೆ ಗವಾಕ್ಷದಂತೆ ಬೆಳಕ ತೋರುತಿದ್ದ ಸುರಂಗದ ದ್ವಾರದಿಂದ ಚನ್ನಯ್ಯ ನಿಂತು ಬೀಡಿ ಸೇದುತಿದ್ದುದು ಕಾಣಿಸುತ್ತಿದ್ದಿತು. ಮೇಲೆ ಬಂದ ನಂತರ ಶಾಂತಪ್ಪನಿಗೆ ಚನ್ನಯ್ಯ ಹೇಳಿದ,

"ನೀವು ಸುರಂಗದೊಳಗೆ ಹೆಚ್ಚಾಗಿ ಇಳೀಬೇಡಿ ಸಾರ್....ತುಂಬಾ ಅಪಾಯ !"

"ನಾವು ಒಳಗೆ ಇಳೀದಿದ್ದರೆ ಇನ್ನು ಯಾರು ಇಳೀಬೇಕು ಚೆನ್ನಯ್ಯ ಆಳುಗಳಿಗೆ ಸರಿಯಾಗಿ ಕೆಲಸಮಾಡೋದು ತೋರಿಸಿಕೊಡಬೇಕಾದ್ರೆ ನಾವು ಒಳಗೆ ಹೋಗದಿದ್ದರೆ ಹೇಗೆ ?"

"ಹಾಗಲ್ಲ ಸಾರ್....ತಿಂಗಳಿಗೋ ಎರಡು ತಿಂಗಳಿಗೋ ಒಂದು ಸಲ ಇಣಿಕಿ ನೋಡಿದರಾಯ್ತು. ಹೇಗಿದ್ರೂ ಒಳಗೆ ಆಳು ಕೆಲಸಮಾಡ್ತಾನೇಂತ ಒಳಗ್ಗಿಂದ ಸುತ್ತಿಗೆ ಶಬ್ದ ಬಂದ್ರೆ ಗೊತ್ತಾಗ್ತೈತೆ. ಅವನು ಎಷ್ಟು ಕಲ್ಲು ತೆಗಿ ( ತಾನೇಂತ ಗೊತ್ತಿದೆ. ನಾವು ಯಾಕೆ ಒಳಕ್ಕೆ ಹೋಗ್ಬೇಕು ?" ಚನ್ನಯ್ಯ ಸುನಗುತ್ತಾ ಹೇಳಿದ, ಬೀಡಿಯನ್ನು ನೆಲದ ಮೇಲೆ ಹೊಸಗುತ್ತಾ.

"ಒಂದು ವೇಳೆ ಆಳು ಸರಿಯಾಗಿ ಅದಿರು ತೆಗೆಯದಿದ್ದರೆ ?"

"ತೆಗೆಯದಿದ್ರೆ ಗೊತ್ತೇ ಐತೆ....ಕೂಲಿ ದುಡ್ಡು ಹಿಡಿದುಬಿಡೋದು !" ಚನ್ನಯ್ಯನೆಂದ.

ಶಾಂತಪ್ಪನಿಗೇಕೋ ಕಹಿಯಾಯ್ತು, ಚನ್ನಯ್ಯನ ಈ ಮಾತು; ಆದರೂ ಸುಮ್ಮನಿದ್ದ. ಅವನು ಮಾತನಾಡದೇ ಮುಂದೆ ಹೋಗಿ ಅದಿರಿನ ರಾಶಿಯನ್ನು ನೋಡುತ್ತಾ ನಿಂತುಕೊಂಡ. ಒಂದು ತುಣುಕನ್ನು ಕೈಗೆ ತೆಗೆದು ಕೊಂಡು ನೋಡಿದಾಗ, ಅದರಲ್ಲಿ ಅಲ್ಲಲ್ಲಿ ತುಂಬಿಕೊಂಡಿದ್ದ ಬಿಳಿ ಮರಳು, ಅದರಲ್ಲಿ ಹಾದುಹೋಗಿದ್ದ ಕಬ್ಬಿಣದ ರೇಖೆ, ಒಂದೊಂದು ಸಂದಿನಲ್ಲಿ ಸೇರಿ ಕೊಂಡಿದ್ದ ಮಣ್ಣು, ಕಾಣಿಸಿದುವು. ಎಷ್ಟು ಕಷ್ಟಪಟ್ಟರೂ ಈ ಕಲ್ಮಶಗಳನ್ನು ಬೇರ್ಪಡಿಸುವುದು ಸಾಧ್ಯವೇ ಇಲ್ಲವೇ, ಎಂದುಕೊಳ್ಳುತ್ತಿದ್ದಾಗ ದೂರದಲ್ಲಿ ಸಿಳ್ಳುಹಾಕಿದ ಶಬ್ದ ಕೇಳಿಸಿತವನಿಗೆ. ಶಾಂತಪ್ಪ ತಲೆಯೆತ್ತಿ ನೋಡಿದಾಗ ಆ ಸಿಳ್ಳಿನ ಶಬ್ದಕ್ಕೆ ಪ್ರತ್ಯುತ್ತರವಾಗಿ ಚನ್ನಯ್ಯನೂ ಸಿಳ್ಳು ಹಾಕಿದ. ದೂರ ದೂರದ ಕುಳಿಗಳಿಂದ ಬರುತಿದ್ದ ಶಬ್ದ ನಿಂತು, ಕೂಲಿಗಾರರು ಮೇಲೆ ಬರ ತೊಡಗಿದರು. ಹೆಣ್ಣಾಳುಗಳೂ ಮೇಲೆದ್ದು ತಮ್ಮ ತಮ್ಮ ಬುತ್ತಿಗಳನ್ನು ತೆಗೆದುಕೊಂಡು ನೆಳಲನ್ನು ಹುಡುಕಿಕೊಂಡು ಹೋಗತೊಡಗಿದರು.

"ಊಟಕ್ಕೆ ಬಿಟ್ಟರೇನು ?" ಶಾಂತಪ್ಪ ಕೇಳಿದ ತನ್ನ ಕೈ ಗಡಿಯಾರ ನೋಡುತ್ತಾ.

"ಹೌದು ಸಾರ್...." ಚನ್ನಯ್ಯ ಉತ್ತರವಿತ್ತ.

"ಈಗ ಒಂದೂವರೆ ಗಂಟೆ....ಬೆಳಗ್ಗೆ ಎಷ್ಟು ಗಂಟೇಗೆ ಕೆಲಸ ಪ್ರಾರಂಭ ವಾಗೋದು ?"

"ಬೆಳಗ್ಗೆ ಎಂಟು ಗಂಟೇಗೆ....ಸಾರ್."

"ಹಾಗಾದ್ರೆ ಇನ್ನೂ ಮುಂದೇನೆ ಊಟಕ್ಕೆ ಬಿಟ್ಟುಬಿಟ್ಟರೆ ಆಗೋಲ್ವೆ ?

"ಅಯ್ಯೋ....ಶುದ್ಧ ಕಳ್ಳರು ಸಾರ್ ಈ ಆಳ್ಗಳು....ಬೇಗ ಊಟಕ್ಕೆ ಬಿಟ್ರೆ ಕೆಲಸಾನೇ ಸರಿಯಾಗಿ ಮಾಡೋಲ್ಲ....ಏನಿದ್ರೂ ಈಗ ಕೆಲಸವಾದ್ರೇ ಸರಿ....ಮಧ್ಯಾಹ್ನದ ಮೇಲೆ ಕೆಲಸವಾಗೋದೇ ಇಲ್ಲ."

"ಸಾಯಂಕಾಲ ಎಷ್ಟು ಗಂಟೇಗೆ ಕೆಲಸ ನಿಲ್ಲಿಸುತೀರಿ ?"

"ಈಗ ಊಟಕ್ಕೆ ಅರ್ಧ ಗಂಟೆ ಪುರಸೊತ್ತು ಕೊಟ್ಟ ಮೇಲೆ ಸಂಜೆ ಆರು-ಆರೂವರೆ ಗಂಟೇಗೆ ನಿಲ್ಲಿಸ್ತೀನಿ...."

ಶಾಂತಪ್ಪ ಸುಮ್ಮನಾದ. ಅವನು ಖಾನ್‌ನಿಗಾಗಿ ಹುಡುಕತೊಡಗಿದ್ದ. ನಿಂತಲ್ಲಿಂದಲೇ ಗಣಿಯ ಸುತ್ತಲೂ ದೃಷ್ಟಿ ಹರಿಸಿದ. ದೂರದಲ್ಲಿ ಹೆಣ್ಣಾಳುಗಳು ಕೆಲವರೊಂದಿಗೆ ಅವನು ಹರಟೆ ಹೊಡೆಯುತ್ತಿದ್ದುದು ಕಾಣಿಸಿತು. ಈ ಚೇಷ್ಟೆಯನ್ನು ನೋಡಿ ಶಾಂತಪ್ಪನಿಗೆ ಕೋಪ ಉಕ್ಕಿ ಬಂದಿತು. ಆದರೂ ಚನ್ನಯ್ಯನಿಗೆ,

"ಚನ್ನಯ್ಯ...ನಮ್ಮ ಖಾನ್ ಎಲ್ಲಿ ಹೋದನಪ್ಪಾ...ಸ್ವಲ್ಪ ಕರೀತೀಯ?" ಎಂದು ಹೇಳಿ ತಾನು ಖಾನ್‌ನನ್ನು ನೋಡದವನಂತೆ ನಟಿಸಿದ. ಚನ್ನಯ್ಯ ಖಾನ್‌ನನ್ನು ನಿಂತಲ್ಲಿಂದಲೇ ಕೂಗಿದ. ಅವನು ಎದ್ದು ಬಂದ.

"ನಡೆಯಪ್ಪ...ನಾವು ವಾಪಸ್ಸು ಹೋಗೋಣ" ಎಂದ ಶಾಂತಪ್ಪ, ಆ ದಿನ ಕೆಲಸ ಪ್ರಾರಂಭಿಸಿದ ಕುಳಿಯ ಕಡೆಗೆ ಪುನಃ ಹೊರಟ. ಚನ್ನಯ್ಯ ತನ್ನ ಮೇಸ್ತ್ರಿಯ ಬಳಿಗೆ ಹೋಗಿ ಏನನ್ನೋ ಮಾತನಾಡತೊಡಗಿದ. ಶಾಂತಪ್ಪ ಆ ಕುಳಿಯಲ್ಲಿ ಉತ್ತಮವಾದ ಅದಿರು ದೊರೆಯುತ್ತದೆಯೇ ಎಂದು ಒಮ್ಮೆ ನೋಡಿದ; ಆದರೆ ಅವನಿಗೆ ಏನೂ ತೋರಲಿಲ್ಲ. ಅದರ ವೈಚಿತ್ರ್ಯವಿನ್ನೂ ಪರಿಪೂರ್ಣವಾಗಿ ಅವನಿಗೆ ತಿಳಿದಿರಲಿಲ್ಲವಾದ್ದರಿಂದ ಸುಮ್ಮನಾದ. ಮೇಸ್ತ್ರಿಯೊಡನೆ ಮಾತನಾಡುತ್ತಿದ್ದ ಚನ್ನಯ್ಯನು ಯಾವಳೋ ಹೆಣ್ಣಾಳೊಬ್ಬಳ ಬಳಿ ಹೋಗಿ ನೀರು ತೆಗೆದುಕೊಂಡು ಕುಡಿಯತೊಡಗಿದ. ಶಾಂತಪ್ಪನೂ ತನ್ನ ಬಿಡಾರಕ್ಕೆ ಹೊರಡಲನುವಾದ.

ಖಾನ್, ತಾನು ಶಾಂತಪ್ಪನಿಗಾಗಿ ತಂದಿದ್ದ ನೀರಿನ ಶೀಶೆಯನ್ನು ಹೆಗಲಿಗೇರಿಸಿಕೊಂಡು ಮುಂದೆ ನಡೆದ ಅವರು ಹೊರಟಿದ್ದುದನ್ನು ನೋಡಿ ಚನ್ನಯ್ಯ ಹತ್ತಿರ ಬಂದು ಕೇಳಿದ,

"ನಾನೂ ಬರ್ತೀನಿ ಸಾರ್....ಇಲ್ಲಿ ಲಿಂಗಾಯಿತರು ತಂದಿರೋ ರೊಟ್ಟಿ ತೊಗೊಳ್ತೀರ ಸಾರ್ ?"

"ಊಹು....ಅದು ಯಾವುದೂ ಬೇಡಪ್ಪ....ನಾನು ಅಂಥದ್ದು ಯಾವುದನ್ನೂ ಸ್ವೀಕರಿಸುವುದಿಲ್ಲ!" ಚನ್ನಯ್ಯ ಸುಮ್ಮನಾದ. ಶಾಂತಪ್ಪ ಛತ್ರಿಯನ್ನು ಬಿಚ್ಚಿ ಹಿಡಿದುಕೊಂಡು ಹೊರಟ.

ನಾಲ್ಕಾರು ಹೆಜ್ಜೆ ಮುಂದೆ ಬಂದಿದ್ದ ಶಾಂತಪ್ಪನಿಗೆ ಬಾಲಕನ ಧ್ವನಿಯೊಂದು ಕೇಳಿತು,

"ಅವ್ವ.... ಗಂಟಲೊಣಗೈತೆ ವಸಿ ನೀರು ಕೊಡು"

"ನೀರು ಒಂದು ಹನೀನೂ ಇಲ್ಲ ಕಣೋ....ಇಟ್ಟು ತಿಂದು ಸುಮೆ ಓಗು", ಎಂದು ತಾಯಿ ರೇಗುತ್ತಿದ್ದಳು. ಶಾಂತಪ್ಪ ತಿರುಗಿ ನೋಡಿದ. ಹತಿರದ ಗಿಡವೊಂದರ ಸಂದಿನಲ್ಲಿ ತಾಯಿ ಮಗ ಇಬ್ಬರು ಊಟ ಮಾಡುತ್ತಿದ್ದುದ ಕಾಣಿಸಿತು;

"ಖಾನ್....ಆ ಸೀಶೇಲಿರೋ ನೀರು ಆ ಹುಡುಗನಿಗೆ ಕೊಟ್ಟುಬಿಡು" ಎಂದು ಶಾಂತಪ್ಪನ ಮಾತು ಕೇಳಿ ಚನ್ನಯ್ಯ ತಕ್ಷಣವೆಂದ,

"ಅವನಿಗೇ ಕೊಟ್ಟು ಬಿಟ್ರೆ ನಿಮ್ಗೆ ಸಾರ್ ?"

"ನಾನು ಹೇಗಿದ್ದರು ಊರಿಗೆ ಹೋಗುತೀನಿ....ಪರವಾಗಿಲ್ಲ....ಕೊಡು ಖಾನ್." ಶಾಂತಪ್ಪನ ಮಾತು ಕೇಳಿ ಖಾನ್ ಹೋಗಿ ಶೀಶೆಯಿಂದ ಆ ಬಾಲಕನ ತಗಡಿನ ಲೋಟವೊಂದಕ್ಕೆ ನೀರು ಬಗ್ಗಿಸಿಕೊಟ್ಟು ಬಂದ.

ಮೌನವಾಗಿ ಒಂದೆರಡು ಮೈಲಿ ನಡೆದ ನಂತರ ಶಾಂತಪ್ಪ ಕೇಳಿದ.

"ಚನ್ನಯ್ಯ....ಈ ಹೆಣ್ಣಾಳುಗಳಿಗೆ ನೆರಳಿನಲ್ಲಿ ಕೂರಿಸೋದಿಕಾಗೊಲ್ವೆ?"

"ಅಯ್ಯೊ ಸುಮ್ಕಿರಿ ಸಾರ್....ನೆರಳಿನಲ್ಲಿ ಕೂರಿಸಿಬಿಟ್ರೆ ಸುಖವಾಗಿ ಕುಂತುಕೊಂಡುಬಿಡ್ತಾರೆ. ಕಲ್ಲೇ ಒಡಿಯೋದಿಲ್ಲ....ಬಿಸಿಲಿನಲ್ಲೇ ಅವ್ರು ಕೆಲಸಾ ಮಾಡೋದು..."

ಶಾಂತಪ್ಪ ಮಾತನಾಡದೆ ಮುಂದೆ ನಡೆದ. ಅದೇ ಮೌನನಡೆಯಲ್ಲೇ ಹಾದಿ ಸಾಗಿತು.

## ೪

## ದ್ವೇಷದ ಕುಡಿ

ಶಾಂತಪ್ಪನೂ ಸುಂದರ ಪುರುಷ. ಸುಮಾರು ಐದೂವರೆ ಅಡಿಗಳಿಗಿಂತಲೂ ಎತ್ತರವಾಗಿದ್ದ ಅವನ ದೇಹದ ಸುಂದರಾಕೃತಿಗೆ ಆ ಕಪ್ಪು ತಲೆಗೂದಲು ಬಿಳಿ ಮೊಗ, ಇವು ಒಂದು ಬಗೆಯ ಮೆರುಗನ್ನಿತ್ತಿದ್ದುವು. ಹೆಚ್ಚು ಬೆಳೆಯದಿದ್ದರೂ ಎರಡು ದಿನಗಳಿಗೊಮ್ಮೆ ಮುಖ ಕ್ಷೌರ ಮಾಡಿಕೊಳ್ಳುತ್ತಿದ್ದುದರಿಂದ, ಅವನ ಮುಖವು ನಿರ್ಮೇಘ ಗಗನದಂತೆ ಶುಭ್ರವಾಗಿ ಕಾಣುತ್ತಿದ್ದಿತು. ಬೆಳಗ್ಗೆ ಏಳೂದರೆ ಗಂಟೆಗೆ, ಗಣಿಗೆ ಹೋಗಲು ಸಿದ್ಧನಾಗಿ ಬಾಗಿಲಿನಲ್ಲಿ ಅವನು ಚನ್ನಯ್ಯನಿಗಾಗಿ ಮತ್ತು ಖಾನ್‌ನಿಗಾಗಿ ಕಾಯುತ್ತಾ ನಿಂತು

ಕೊಂಡರೆ, ಗಣಿಗೆ ಹೋಗುವ ಕೂಲಿಯಾಳುಗಳಲ್ಲಿ ಯುವತಿಯರನೇಕರ ಕಣ್ಣುಗಳು ಹಲವು ಬಾರಿ ಅವನತ್ತ ತಿರುಗುತ್ತಿದ್ದುವು. ಬೂಟುಗಳು, ಇಸ್ತ್ರಿ ಮಾಡಿದ ಖಾಕಿ ಷರಾಯಿ, ಅದಕ್ಕೆ ಒಪ್ಪುವ ಷರಟು, ಕೈನಲ್ಲಿ ಸಣ್ಣದಾದೊಂದು ಗಡಿಯಾರ, ಮುಖದಲ್ಲಿ ಸದಾ ಮುಗುಳ್ನಗೆ, ನಯವಾದ ಮತ್ತು ವಿದ್ಯೆಯಿಂದ ಸಹಜವಾಗಿ ಬಂದ ಸುಸಂಸ್ಕೃತ ನುಡಿಗಳು ಇವು ಹಲವರನ್ನು ಅವನೆಡೆಗೆ ಆಕರ್ಷಿಸಿದ್ದುವು.

"ಮಧ್ಯಮ ವರ್ಗವಾದರೂ, ಸುಸಂಸ್ಕೃತ ವೀರಶೈವ ಮನೆತನದಲ್ಲಿ ಜನಿಸಿ, ಬಾಲ್ಯದಿಂದಲೂ ಸಭ್ಯರಾದ ಉಚ್ಚ ತರಗತಿಯವರೊಂದಿಗೆ ಬೆಳೆದು ಬಂದುದರಿಂದ ಉತ್ತಮ ನಡೆ ನುಡಿಗಳು ಅವನ ರಕ್ತಗತವಾಗಿದ್ದುವು.

ಗಣಿಯಲ್ಲಿ ಹಲವು ಯುವತಿಯರು, ಒಮ್ಮೆ ನೋಡಿದರೆ ಮರಳಿ ನೋಡಬೇಕೆನಿಸುವಂತಹವರಿದ್ದರು. ಹಳ್ಳಿಗಳ ಕೆಲವು ಅನುಕೂಲ ಮನೆತನಗಳಲ್ಲಿ, ವಿರಾಮವಿದ್ದರೆ ಈ ರೀತಿ ಕೂಲಿ ಮಾಡುವುದು ಆಕ್ಷೇಪಣೀಯವಲ್ಲವೆಂಬ ಭಾವನೆಯಿದೆ; ಇಂತಹ ಮನೆತನದ ಹೆಣ್ಣುಗಳು, ಅವಿವಾಹಿತರು ಹಲವರು, ಗಣಿಗೆ ದಿನಗೂಲಿಗಾಗಿ ಬರುತ್ತಿದ್ದರು. ಇವರಿಂದ ಹೆಚ್ಚು ದುಡಿಮೆಯನ್ನು ನಿರೀಕ್ಷಿಸದಿದ್ದರೂ ಗಣಿಗೆ ಇವರಿಂದ ಒಂದು ಶೋಭೆಯೆಂದೋ ಏನೋ, ಕಂಟ್ರಾಕ್ಟರುಗಳು ಇವರನ್ನು ನಿಯಮಿಸಿಕೊಳ್ಳುತಿದ್ದರು. ಶಾಂತಪ್ಪನಿಗೆ ಇವೆಲ್ಲವೂ ಸೂಕ್ಷ್ಮವಾಗಿ ಅರ್ಥವಾದರೂ ಸುಮ್ಮನಿರುತ್ತಿದ್ದ. ಅಲ್ಲಿ ತಾನು ಸುತ್ತಾಡುತ್ತಿರುವಾಗ ಆ ಹೆಣ್ಣುಗಳ ಚಂಚಲ ದೃಷ್ಟಿ ತನ್ನ ಮೇಲೆಯೇ ಬೀಳುತ್ತಿದೆಯೆಂಬ ಅನುಭವವಾದರೂ, ಗಣಿಯಲ್ಲಿ ತನ್ನ ಕರ್ತವ್ಯವನ್ನು ತಾನು ಗಮನಿಸಿ, ಅವರತ್ತ ತಿರುಗಿಯೂ ನೋಡದೆ ಸುಮ್ಮನಿದ್ದುಬಿಡುತ್ತಿದ್ದ. ಶಾಂತಪ್ಪನು ಗಣಿಗೆ, ಹಾಗೂ ಹೆಣ್ಣಾಳುಗಳ ಸಾಲಿನ ಬಳಿಗೆ ಬಂದನೆಂದರೆ ಅವನ ಈ ಗಂಭೀರ ವ್ಯಕ್ತಿತ್ವ ಅವರಲ್ಲಿ ಒಂದು ಬಗೆಯ ಭಯವನ್ನುಂಟುಮಾಡುತ್ತಿದ್ದಿತು. ಒಂದು ದಿನ—

ಗಣಿಯಲ್ಲಿಳಿದು ಕೆಲಸವನ್ನೆಲ್ಲ ಪರಿಶೀಲಿಸಿದಾಗ, ಅಲ್ಲಿನ ಕಾರ್ಯ ರೀತಿಯನ್ನು ನೋಡಿ ಅವನಿಗೆ ಕೋಪ ಬಂದಿತು. ಆ ದಿನ ಚನ್ನಯ್ಯನೂ ಗಣಿಗೆ ಬಂದಿರಲಿಲ್ಲ. ಮಾಣಿಕ್ಯಂ, ಶಾಂತಪ್ಪನು ಬಂದ ದಿನದಿಂದಲೂ ಏನಾದರೂ ನೆಪ ಹೇಳಿ ರಾಮನಾಯ್ಕನ ಹಳ್ಳಿಯಲ್ಲೇ ಉಳಿಯುತ್ತಿದ್ದ. ಹಾಗೆಯೇ ಈ ದಿನವೂ ಭಟ್ಟರ ಹೋಟೇಲಿನಿಂದ ಊಟ ತರಿಸುವುದಕ್ಕೆ ಏರ್ಪಾಡು ಮಾಡು

ವೆನೆಂದು ಹೇಳಿ ಉಳಿದಿದ್ದ. ಗಣಿಯಲ್ಲಿ ಜವಾಬ್ದಾರಿಯುತನಾದ ಯಾವ ಮೇಸ್ತ್ರಿಯೂ ಬಂದಿರಲಿಲ್ಲ. ಆದ್ದರಿಂದ ಕೆಲಸಗಾರರು ತಮಗೆ ತೋರಿದಂತೆ ಕೆಲಸ ಮಾಡುತ್ತಿದ್ದರು. ಒಂದು ಭಾಗದಲ್ಲಿ, ಗಣಿಯೊಳಗೆ ಇಳಿದುಬರಲು ನೆಲವನ್ನು ಅಗೆದು ಮೆಟ್ಟಿಲು ಮಾಡಿದ್ದರು. ಅದು ಹಲವು ದಿನಗಳ ಹಿಂದೆ ಅಗೆದದ್ದರಿಂದ, ಅದರ ಮೇಲೆ ಕೆಲಸಗಾರರೆಲ್ಲ ನಡೆದು .ಅದು ಸವೆದುಹೋಗಿದ್ದಿತು. ಗಣಿಯೊಳಗಿನಿಂದ ಅದಿರು ತುಂಬಿದ ಬಾಣಲೆಗಳನ್ನು ಹೊತ್ತುಕೊಂಡು ಮೇಲಕ್ಕೆ ಹೋಗುತ್ತಿದ್ದ ಬಾಲಕಿಯೊಬ್ಬಳು, ಮೆಟ್ಟಿಲಿಂದ ಜಾರಿ ಬಿದ್ದು ಬಿಟ್ಟಳು. ಮೊದಲೇ ಹರಿದಿದ್ದ ಅವಳ ಲಂಗವು ಛಿದ್ರ ಛಿದ್ರವಾಯಿತು, ಕೈಕಾಲುಗಳಲ್ಲಿ ಗಾಯವಾಗಿ ರಕ್ತ ಸೋರಲಾರಂಭವಾಯಿತು. ಪ್ರಥಮ ಚಿಕಿತ್ಸೆ ಮಾಡೋಣವೆಂದರೆ, ಪ್ರಥಮ ಚಿಕಿತ್ಸೆಯ ಪೆಟ್ಟಿಗೆಯೂ ಇರಲಿಲ್ಲ. ಒಬ್ಬ ಆಳನ್ನು ಶಾಂತಪ್ಪ ಕೇಳಿದ,

"ಪೆಟ್ಟಿಗೆ ಎಲ್ಲಿ?"

"ತಂದಿಲ್ಲ ಸಾರ್....ಚನ್ನಯ್ಯನೋರಿಗೆ ಸಾವಕಾರ್ರು ಏಳಿದ್ರಂತೆ, ಇನಸ್ಪೆಕ್ಷನ್ ಇರೋದಿನಾ ಮಾತ್ರ ಪೆಟ್ಟಿಗೇನ ಗಣೀಗೆ ತೆಗೆದ್ಕೊಂಡ್ಹೋಗಿ.... ಬಾಕಿ ದಿನ ಆಫೀಸಲ್ಲೇ ಇಡ್ಲಿ....ಇಲ್ದಿದ್ರೆ ಔಸ್ತಿಯೆಲ್ಲಾ ಖರ್ಚಾಗಿಬಿಡುತ್ತೇಂತ...." ಎಂದು ಆಳು ಹೇಳಿದ.

ಶಾಂತಪ್ಪನು ಏನೂ ಮಾತನಾಡಲಿಲ್ಲ. ಕೆಲವು ಎಲೆಗಳನ್ನಾದರೂ ತರಿಸಿ ಗಾಯಕ್ಕೆ ಅವುಗಳ ರಸವನ್ನು ಸವರೋಣವೆಂದು ಪಠಾಣಖಾನ್‌ನನ್ನು ಕೂಗಿದ. ಅವನು ಹತ್ತಿರದಲ್ಲಿ ಎಲ್ಲಿಯೂ ಇರಲಿಲ್ಲವಾಗಿ ಮತ್ತೊಮ್ಮೆ ಅವನನ್ನು ಕೂಗಿದ.

"ಅವನು ಮೇಲಿದಾನೆ ಸಾರ್" ಎಂದ ಆಳು

"ಮೇಲೆ ಎಲ್ಲಿದಾನೆ ?"

"ಕಲ್ಲು ಒಡೆಯೋ ಜಾಗದಲ್ಲಿ ಹೆಣ್ಣು ಮಕ್ಕಳ ಹತ್ರ ಕುಂತವ್ನೆ"

ಶಾಂತಪ್ಪನಿಗೆ ಕೋಪವುಕ್ಕಿ ಬಂದಿತು. ಅವನ ಕಣ್ಣುಗಳೆಲ್ಲಾ ಕೆಂಪಾದುವು.

"ಅವನ್ನ ಕರೀ ಇಲ್ಲಿ!"

ಶಾಂತಪ್ಪನ ಮಾತು ಕೇಳಿಯೇ ಹೆದರಿದ್ದ ಆಳು ಸರ್ರನೆ ಓಡಿಹೋಗಿ ಪಠಾಣನನ್ನು ಕರೆತಂದ.

"ಕ್ಯಾ ಸಾಬ್ ?" ಖಾನ್ ಕೇಳಿದ ಹತ್ತಿರ ಬಂದು.

"ಎಲ್ಲಿ ಹೋಗಿದ್ದೆ ?"

"ಎಲ್ಲೂ ಇಲ್ಲ ಸಾರ್....ಅಲ್ಲೇ ನಿಂತಿದ್ದೆ...." ಖಾನ್ ತಲೆ ತಗ್ಗಿಸಿ ಉತ್ತರವಿತ್ತ. ಪಠಾಣನ ಆ ವಿನಯ ಶಾಂತಪ್ಪನ ಕೋಪವನ್ನು ಕಡಿಮೆ ಮಾಡಿತು.

"ಹೋಗಿ ಲಾಂಟಾನ ಎಲೆಗಳನ್ನು ತೆಗೆದ್ಕೊಂಡು ಬಾ!" ಶಾಂತಪ್ಪನ ಮಾತು ಕೇಳಿ ಖಾನ್ ಓಡಿದ. ಆಳುಗಳೆಲ್ಲ ಮುಖ ಮುಖ ನೋಡಿಕೊಂಡು, ತಮ್ಮ ತಮ್ಮ ಕೆಲಸವಲ್ಲಿ ತೊಡಗಿದರು. ಶಾಂತಪ್ಪನು ಹಾಗೆಯೇ ನಿಂತು ಕೊಂಡು ಸುತ್ತಲೂ ನೋಡಿದ. ಹಲವೆಡೆಗಳಲ್ಲಿ, ತಲೆಯಮೇಲೆ ದೊಡ್ಡ ದೊಡ್ಡ ಕಲ್ಲುಗಳು ಭೂಮಿಯಿಂದ ಅರ್ಧ ಹೊರಬಂದು, ಕೆಳಗೆ ಬೀಳುವಂತೆ ನಿಂತಿದ್ದುವು. ಹಲವೆಡೆ ಮಣ್ಣು ರಾಶಿರಾಶಿಯಾಗಿ ಬಿದ್ದಿದ್ದಿತು. ಒಂದು ನಿಶ್ಚಿತ ರೀತಿಯಿಲ್ಲದೆ ಅದಿರು ಕಂಡೆಡೆಗಳಲ್ಲೆಲ್ಲಾ ಅಗೆಮುಕೊಂಡು ಹೋಗು ತ್ತಿದ್ದ ರೀತಿಯನ್ನು ನೋಡಿ ಅವನಿಗೆ ಬೇಸರಬಂದಿತು. ಆ ಕಲ್ಲುಗಳ ಕೆಳಗೆ ನಿಂತು ಕೆಲಸ ಮಾಡುತ್ತಿದ್ದವರನ್ನು ಬೇರೆ ಕಡೆಗೆ ಕಳುಹಿಸಿದ. ಮಣ್ಣನ್ನು ತೆಗೆದು ದೂರ ಬಿಸುಡುವಂತೆ ಹೇಳಿದ ಮೇಲೆ ಹತ್ತಿ ಹೋಗಲನುಕೂಲ ವಾಗುವಂತೆ, ವಿಸ್ತಾರವಾದ ಮೆಟ್ಟಿಲುಗಳನ್ನಗೆಯುವಂತೆ ತಿಳಿಸಿದ. ಅಷ್ಟರಲ್ಲಿ ಪಠಾಣ ಲಾಂಟಾನಾ ಎಲೆಗಳನ್ನು ತಂದುದನ್ನು ನೋಡಿ ಎಲೆಯ ರಸವನ್ನು ಹಿಂಡಿ, ಬಿದ್ದ ಬಾಲಕಿಯ ಗಾಯಗಳಿಗೆ ಸವರಿ, ಗಾಯಕ್ಕೆ ಬಟ್ಟೆ ಕಟ್ಟಿ, ಆ ಬಾಲಕಿಯನ್ನು ಒಂದೆಡೆ ನೆರಳಿನಲ್ಲಿ ಕುಳ್ಳಿರಿಸುವಂತೆ ತಿಳಿಸಿ ಗಣಿಯಿಂದ ಮೇಲೆ ಬಂದ.

ಅವನು, ಹೆಣ್ಣಾಳುಗಳು ಕುಳಿತಿದ್ದೆಡೆಗೆ ಬಂದಾಗ, ಅಲ್ಲಿ ಒಂದೆಡೆ ಕುಳಿತಿದ್ದ ಮೇಸ್ತ್ರಿಯು ಮೇಲೆದ್ದು ನಿಂತುಕೊಂಡ. ಶಾಂತಪ್ಪನ ಮುಖದಲ್ಲಿ ಬೆವರು ಹರಿಯುತ್ತಿದ್ದಿತು. ಅವನು ಬಳಿಗೆ ಬರುತ್ತಿದ್ದಂತೆಯೇ ಆ ಹೆಂಗಸರ ಮಾತುಗಳೆಲ್ಲವೂ ನಿಂತು, ವಾತಾವರಣ ನಿಶ್ಶಬ್ದವಾಯಿತು. ಅವರೆಲ್ಲ ತಲೆ ತಗ್ಗಿಸಿಕೊಂಡು ಅದಿರನ್ನು ಒಡೆಯತೊಡಗಿದರು. ಶಾಂತಪ್ಪ ನಿಧಾನವಾಗಿ ಎಲ್ಲರೂ ಒಡೆದ ಅದಿರನ್ನು ಪರೀಕ್ಷಿಸತೊಡಗಿದ. ಒಬ್ಬಿಬ್ಬರು, ಮುದುಕಿ ಯರನ್ನುಳಿದು ಎಲ್ಲರೂ ಅಶುದ್ಧವಾದ ಅದಿರನ್ನೇ ಒಡೆದು ಬಾಣಲೆಗಳಲ್ಲಿ ತುಂಬಿದ್ದರು. ಒಂದೊಂದು ಬಾಣಲೆಯನ್ನು ನೋಡಿದಂತೆಯೂ ಶಾಂತಪ್ಪ

ಸಹನೆ ಕಡಿಮೆಯಾಗುತ್ತಿದ್ದಿತು. ಕೊನೆಗೆ ಒಂದೆಡೆ ಬಂದಾಗ, ಬರಿಯ ಬೆಣಚುಕಲ್ಲು, ಕಬ್ಬಿಣದ ಕಲ್ಲುಗಳೇ ತುಂಬಿದ್ದ ಬಾಣಲೆಯನ್ನು ನೋಡಿ ಶಾಂತಪ್ಪ, ಬಳಿಯಲ್ಲಿಯೇ ನಿಂತಿದ್ದ ಮೇಸ್ತ್ರಿಯನ್ನು ಕೇಳಿದ,

"ಏನಯ್ಯ....ನೀನು ಇಲ್ಲಿ ನಿದ್ರೆ ಮಾಡ್ತಿರ್ತೀಯೇನು?"

"ಇಲ್ಲ ಸಾರ್....ಇಲ್ಲಿ ಸರಿಯಾಗಿ ಕಲ್ಲು ಒಡೆಯೋದು ಹೇಳಿಕೊಡ್ತೀನಿ. ಎಷ್ಟು ಹೇಳಿದ್ರೂ...."

"ಸಾಕು....ಸಾಕು....ನೀನು ಹೇಳಿಕೊಡೋದು ಇದೇ ತಾನೇ?" ಎಂದು ಆ ಬಾಣಲೆಯನ್ನು ತೋರಿಸಿದ. ಅದನ್ನು ನೋಡಿ, ನೋಡಿದಂತೆ ಶಾಂತಪ್ಪನಿಗೆ ಕೋಪ ಬರುತ್ತಿದ್ದಿತು.

"ಏನಮ್ಮ....ನಿಂಗೆ ಮ್ಯಾಂಗನೀಸು ಯಾವುದು ಗೊತ್ತಿದೆಯೆ?" ಶಾಂತಪ್ಪ ಎದುರಿನಲ್ಲಿ ಕುಳಿತಿದ್ದವಳನ್ನು ಕೇಳಿದ. ಅವನು ಅದುವರೆಗೂ ಅವಳ ಮುಖವನ್ನು ನೋಡಿರಲಿಲ್ಲ. ಈ ರೀತಿ ಪ್ರಶ್ನಿಸಿದನಂತರ ಆ ಮುಖವನ್ನು ನೋಡಿದಾಗ ಒಂದು ಕ್ಷಣ ಅವನ ಕೋಪ ಮರೆತುಹೋಯಿತು. ಆ ಮುಖದಲ್ಲಿ ಮೂಡಿದ್ದ ಮೂರು ಗೆರೆ ವಿಭೂತಿಯು ಮುಖದ ಬಿಳುಪಿನ ಹಿನ್ನೆಲೆಯಲ್ಲಿ ಕಂಡು ಕಾಣದಂತಿದ್ದಿತು. ಉಬ್ಬಿದ ಆ ಎದೆಯ ಮೇಲೆ ಹಾದುಹೋದ ತೆಳುವಾದ ಸೀರೆಯ ಒಳಗೆ ಹೊಳೆಯುತ್ತಿದ್ದ ಬೆಳ್ಳಿಯ ಕರಡಿಗೆ ಕಾಣುತ್ತಿದ್ದಿತು. ಅವಳು ಒಮ್ಮೆ ಶಾಂತಪ್ಪನ ಮುಖವನ್ನು ನೋಡಿ ನಸುನಕ್ಕಾಗ ಶಾಂತಪ್ಪನನ್ನು ಚೇಳೊಂದು ಕುಟುಕಿದಂತಾಗಿ ಅವನ ಮುಖವು ಪುನಃ ಗಂಭೀರವಾಯಿತು. ಇದ್ದಕ್ಕಿದ್ದಂತೆ ಪುನಃ ಮೂಡಿದ ಈ ಗಂಭೀರತೆಯು ಅವಳ ನಸುನಗುವನ್ನು ಒಳಗೆಳೆದುಕೊಂಡು, ಭಯದ ಛಾಯೆಯನ್ನು ಮೇಲೆ ಮೂಡಿತು. ಇದೆಲ್ಲವೂ ನಡೆದುದು ಒಂದೇ ಕ್ಷಣದಲ್ಲಿ. ನಂತರ ಶಾಂತಪ್ಪನ ಕೋಪ ಹಿಂತಿರುಗಿತು.

"ಏನಮ್ಮ?....ಗೊತ್ತಿಲ್ಲದಿದ್ದರೆ ಗಣೀಗೆ ಕೆಲಸಕ್ಕೆ ಬರಬೇಡ ಇನ್ಮೇಲೆ!" ಎಂದ ಶಾಂತಪ್ಪ. ಅವಳು ತಲೆತಗ್ಗಿಸಿದಳು. ಶಾಂತಪ್ಪ ಮೇಸ್ತ್ರಿಯನ್ನು ಕರೆದು ಅದಿರನ್ನು ಹೇಗೆ ಒಡೆದು ಬೇರ್ಪಡಿಸಬೇಕೆಂದು ತೋರಿಸಿದ.

ನಾಲ್ಕಾರು ನಿಮಿಷ, ಒಡೆದ ಅದಿರನ್ನು ಪರೀಕ್ಷಿಸಿ ಶಾಂತಪ್ಪ ಹೊಸದಾಗಿ ಕೆಲಸ ಪ್ರಾರಂಭಿಸಿದ್ದೆಡೆಗೆ ನಡೆದ. ಅವನು ಹತ್ತಾರು ಗಜ ಮುಂದೆ ನಡೆದಾಗ ಹೆಣ್ಣಾಳುಗಳು ಮೆಲ್ಲನೆ ಮಾತನಾಡಿ ಕೊಂಡುದು ಕೇಳಿಸಿತವನಿಗೆ.

"ಏನೇ ಪಾರ್ವತಿ....ನಿನ್ನ ಹಾಗೆ ನೋಡಿದ್ರಲ್ಲೇ ಮ್ಯಾನೇಜರ್ ಸಾಹೇಬ್ರು ?"

"ಅವಳು ಚಂದಾಗವ್ಳೆ, ಅವರು ನೋಡಿದ್ರು...." ಮತ್ತೊಬ್ಬಳೆಂದಳು.

"ಬಾಯ್ಮುಚ್ಕೊಂಡು ಸುಮ್ಕಿರ್ರೆ ಲೌಡೀರ....ಒಳ್ಳೆ ಭೂಮಿ ತೂಕದ ಮನುಸ್ರಾ ಆಗಿದಾರೆ ಅವ್ರು. ಒಬ್ಬರನ್ನ ಕಣ್ಣೆತ್ತಿ ಕೂಡಾ ನೋಡಾಕಿಲ್ಲ. ಇವಳನ್ನ ನೋಡಿ ಬಿಟ್ರಂತೆ," ಮುದುಕಿಯೊಬ್ಬಳೆಂದಳು.

"ಅವರು ಒಳ್ಳೆ ಬೆಳ್ಳಗೆ ಪರಂಗಿಯೋರ ಹಂಗಿದಾರೆ....ಮಹಾ ರಂಭೇಂತ ಈ ಪಾರ್ವತೀನ ನೋಡೇಕೆ ಬತ್ತಾರೇನೋ ಅವ್ರು !...."ಎಂದಳು ಮಧ್ಯ ವಯಸ್ಕಳೊಬ್ಬಳು.

"ಓಯ್! ಮೇಸ್ತ್ರಪ್ಪಾ....ಈ ಅಯ್ನೋರಿಗೆ ಲಗ್ನ ಆಗೈತಾ?" ಮುದುಕಿ ಕೇಳಿದಳು,

"ಇಲ್ಲಾಂತ ಕಾಣ್ಸೈತೆ ...ನಾನು ಕೇಳಿಲ್ಲ...." ಮೇಸ್ತ್ರಿಯು ಉತ್ತರ ವಿತ್ತ.

ಶಾಂತಪ್ಪನಿಗೆ ಮುಂದಿನ ಸಂಭಾಷಣೆ ಕೇಳಲಿಲ್ಲ. ಹೆಂಗಸರು ಯಾರಾದರೇನು, ಅವರ ಬುದ್ಧಿ ಒಂದೇ ತೆರನಾದುದು.

ಹೊಸದಾಗಿ ಪ್ರಾರಂಭಿಸಿದ್ದ ಕೆಲಸದೆಡೆಗೆ ಹೋಗಿ ಅಲ್ಲಿ ನೋಡುತ್ತಾ ನಿಂತುಕೊಂಡ. ಈ ನಾಲ್ಕೈದು ದಿನಗಳಲ್ಲಿ ಆ ಕುಳಿಯು ಆಳವಾಗಿಸಲ್ಪಟ್ಟಿದ್ದಿತು. ಆದರೆ ಅಲ್ಲಿಯೂ ಸಹ ಅದೇ ರೀತಿಗೆಟ್ಟ ಕೆಲಸ! ಒಂದೆಡೆ ಹತ್ತು ಹನ್ನೆರಡಡಿ ಆಳವನ್ನು ಒಂದೆ ಸಮನೆ ಅಗೆದು, ಒಳಗೆ ನಿಂತು ಒಬ್ಬನು ಕಲ್ಲು ಮಣ್ಣು ತುಂಬಿ ಮೇಲಕ್ಕೆ ಕೊಡುತ್ತಿದ್ದ. ಅವನೇ ಪುನಃ ಆಳ ಅಗೆಯುತ್ತಿದ್ದ. ಅವನು ಮಾತ್ರ ನಿಂತು ಕೆಲಸ ಮಾಡುವಷ್ಟು ಜಾಗವಿದ್ದಿತು ಅಲ್ಲಿ. ಮತ್ತೊಂದೆಡೆಯಲ್ಲಿ, ಗೋಡೆಯಂಚಿನಲ್ಲಿ, ಒಣಗಿದ ಮರವೊಂದು ಕುಳಿಯೊಳಗೆ ಬೀಳುವಂತೆ ನಿಂತಿದ್ದಿತು. ಈ ಅವ್ಯವಸ್ಥೆಯನ್ನು ಕಂಡು ಶಾಂತಪ್ಪನಿಗೆ ಇದು ಗಣಿಯೇ ಎಂದೆನಿಸಿತು. ಅವನು ಕೇಳಿದ,

"ಏನಯ್ಯ....ಇದು ಗಣಿಯೋ ಹೆಗ್ಗಣದ ಡೊಗರೋ?"

ಶಾಂತಪ್ಪನು ಕೋಪ ನಿರಾಶೆಗಳಿಂದಲೇ ಕೇಳಿದ ಪ್ರಶ್ನೆಯಿದು. ಗಣಿಯೆಂದರೆ ಯಾವುದೋ ಒಂದು ಯಾಂತ್ರೀಕರಣವಾದ ಕೈಗಾರಿಕೆ, ಅಲ್ಲಿ ಎಲ್ಲವೂ ವ್ಯವಸ್ಥಿತ ರೀತಿಯಿಂದ, ವೈಜ್ಞಾನಿಕವಾಗಿ ಕಾರ್ಯ ನಡೆಯುವುದು

ರಷ್ಯಾ ದೇಶದ ಚಿಯಾತುರಾ ಮ್ಯಾಂಗನೀಸ್ ಗಣಿಗಳು, ಮೆಕ್ಸಿಕೋ ದೇಶದ ಬೆಳ್ಳಿಯ ಗಣಿಗಳು, ದಕ್ಷಿಣ ಆಫ್ರಿಕಾದಲ್ಲಿನ ಚಿನ್ನ ವಜ್ರದ ಗಣಿಗಳು, ಕೋಲಾರದಲ್ಲಿ ಆಳವಾಗಿ ಸುರಂಗ ಕೊರೆದ ಚಿನ್ನದ ಗಣಿಗಳು ಇವುಗಳಲ್ಲಿನಂತೆ, ಅಷ್ಟಲ್ಲದಿದ್ದರೂ ಸ್ವಲ್ಪವಾದರೂ, ಯಾಂತ್ರೀಕೃತವಾದ ಗಣಿಗಳು ಇವು ಎಂದುಕೊಂಡು ಆಶೆಯಿಂದ ತಾನು ಬಂದದ್ದು. ಆದರೆ ಇವು ಕೇವಲ ಕಾರ್ಮಿಕ ಶ್ರಮದಿಂದ ಅಗೆಸಿ, ಒಗೆಸುವ ಕುಳಿಗಳಷ್ಟೇ. ಇಲಿಗಳು ಬಿಲ ತೋಡಿದಂತೆ, ಈ ಕಂಟ್ರಾಕ್ಟರುಗಳು ತೋಡಿಸುತ್ತಿದ್ದಾರೆ. ಛೆ!....ಇದೆಂತಹ ಕ್ರೈಗಾರಿಕೆ.

ಅಷ್ಟರಲ್ಲಿ ದೂರದಿಂದ ಲಾರಿಯು ಬರುತ್ತಿರುವ ಶಬ್ದ ಕೇಳಿಸಿತು.

ಶಾಂತಪ್ಪ ತಿರುಗಿ ನೋಡಿದ. ಧೂಳೆಬ್ಬಿಸಿಕೊಂಡು ಲಾರಿಯು ಬರುತ್ತಿದ್ದಿತು. ಒಳಗೆ ಚನ್ನಯ್ಯ ಅವನ ಪಕ್ಕದಲ್ಲಿ ಮಾಣಿಕ್ಯಂ ಕುಳಿತಿದ್ದರು. ಆ ದಿನ ಆ ವಾರದಲ್ಲಿ ತೆಗೆದ ಅದಿರಿನ ಅಳತೆ ಮಾಡಬೇಕೆಂಬುದು ಶಾಂತಪ್ಪನಿಗೆ ನೆನಪಾಯಿತು. ಶಾಂತಪ್ಪ ತನ್ನ ಪಾಡಿಗೆ ತಾನು. ಗಣಿಯಲ್ಲಿಳಿದು ಪರಿಶೀಲಿಸ ತೊಡಗಿದ. ಅವನ ಅನನುಭವೀ ಬುದ್ಧಿಗೆ ಆ ಸ್ಥಳವಲ್ಲಿ ಅದಿರು, ಅದೂ ಸಹ ಉತ್ತಮವಾದುದು, ದೊರೆಯುವುದೆ ಇಲ್ಲವೆಯೆಂಬುದು ಅರಿವಾಗುವುದು ಕಷ್ಟವಾಯಿತು. ಪ್ರತಿಯೊಬ್ಬ ಕೂಲಿಗಾರನ ಬಳಿಯಲ್ಲಿಯೂ ನಿಂತು ಅವನ ಕೆಲಸವನ್ನು ಅವನು ಅಗೆಯುತ್ತಿದ್ದ ಸ್ಥಳವನ್ನು ನೋಡತೊಡಗಿದ.

"ಇವತ್ತು ಅಳತೆ ಇದೆ ಸಾರ್," ಚನ್ನಯ್ಯನ ಸ್ವರವನ್ನು ಕೇಳಿ ಶಾಂತಪ್ಪ ಹಿಂತಿರುಗಿ ನೋಡಿದ.

"ಮಾಣಿಕ್ಯಂ ಬಂದಿದಾರೇನು?" ಏನೂ ತಿಳಿಯದವನಂತೆ ಶಾಂತಪ್ಪ ಕೇಳಿದ.

"ಬಂದಾರೆ ಸಾರ್....ನೀವೂ ಅಳತೆ ಮಾಡುವಾಗ ಎದುರಿಗೆ ಇರ್ತೀರಾ, ಅವರೇ ಮಾಡಿದ್ರೂ ಪರವಾಗಿಲ್ಲವೊ?"

"ಆ ಸಮಯದಲ್ಲಿ ಕರೆದರೆ ನಾನೂ ಬರ್ತೀನಿ," ಎಂದು ಶಾಂತಪ್ಪ ಹೇಳಿ ಪುನಃ ಕಾರ್ಯದಲ್ಲಿ ಮಗ್ನನಾದ.

ಮಾರನೆಯ ದಿನವೇ ಕೂಲಿಗಾರರಿಗೆ 'ಬಟವಾಡೆ'ಯ ದಿನ: ಸಾಹುಕಾರರು ಬರುವ ದಿನ! ತನ್ನ ಒಂದು ವಾರದ ಕೆಲಸದಲ್ಲಿ ಪ್ರಗತಿಯನ್ನು ನೋಡುವರು, ಹೊಸದಾಗಿ ಕೆಲಸ ಪ್ರಾರಂಭಿಸಿದೆಡೆಯಲ್ಲಿ ಉತ್ತೇಜಕ ಚಿಹ್ನೆಗಳಾವುವೂ ಕಾಣ ಬರುತ್ತಿಲ್ಲ. ಒಂದು ವಾರವೂ ವೃಥಾ ಕೆಲಸವಾಗಿದೆ, ಹಣ

ನಷ್ಟವಾಗಿದೆ. ಒಂದೆರಡು ದಿನಗಳಲ್ಲಿ ಆಶಾದಾಯಕವಾಗಿ ಕಂಡು ಬರದಿದ್ದರೆ ಈ ಸ್ಥಳದಲ್ಲಿ ಕೆಲಸ ನಿಲ್ಲಿಸಲು ಸಾಹುಕಾರರು ಆಣತಿಯೀಯುವರು. ನಿಲ್ಲಿಸಿದರೂ ಚಿಂತೆಯಿಲ್ಲ. ಆದರೆ ತನಗೆ ಸೋಲು—ಹೊಸದಾಗಿ ಬಂದ ಕಾಲದಲ್ಲಿಯೇ ಎಲ್ಲರೆದುರಿಗೆ ಸೋಲು! ಈ ನೂರಾರು ಜನರೆದುರು, ರಾಮನಾಯ್ಕನ ಹಳ್ಳಿಯವರೆದುರು. ಎಂತಹ ಅಪಮಾನ! ಈ ಸ್ಥಳದಲ್ಲಿ ಕೆಲಸ ಪ್ರಾರಂಭಿಸದಿದ್ದರೇ ಚೆನ್ನಾಗಿದ್ದಿತು. ಈಗ ತಾನು ಭೂಗರ್ಭ ಶಾಸ್ತ್ರದ ಪದವೀಧರನಾದರೂ ಮ್ಯಾಂಗನೀಸಿನ ಬಗ್ಗೆ ಏನೂ ತಿಳಿಯದ ಮೂಢನೆಂದು ಕೈ ಕೆಳಗಿನವರ್ರು ಹಾಸ್ಯ ಮಾಡುವಂತಾಯ್ತು....

ಪಠಾಣನು ಬಂದು ಅಳತೆಯನ್ನು ಹೋಗಿ ನೋಡುಬಹುದೆಂದು ಶಾಂತಪ್ಪನಿಗೆ ತಿಳಿಸಿ, ಅಲ್ಲಿಯೇ ನಿಂತುಕೊಂಡ. ಶಾಂತಪ್ಪನು, ಕೂಲಿಗಾರರು ಒಬ್ಬಿಬ್ಬರಿಗೆ ಕೆಲಸದ ನಿರ್ದೇಶನವಿತ್ತು ಹೊರಟ. ಪಠಾಣಖಾನ್, ಅವನ ಹಿಂದೆ ನಡೆದ.

ದೂರದ ವಿಸ್ತಾರವಾದ ಬಯಲಿನಲ್ಲಿ ಅದಿರಿನ ರಾಶಿಯನ್ನು ನಿರ್ಮಿಸಿದ್ದರು. ಶಾಂತಪ್ಪ ಆ ರಾಶಿಯ ಬಳಿಗೆ ಹೋಗಿ ನೋಡಿದ, ಮೇಲೆಲ್ಲಾ ಶ್ರೇಷ್ಠ ದರ್ಜೆಯ ಅದಿರನ್ನು ಚೆಲ್ಲಿಸಿದ್ದ ಚನ್ನಯ್ಯ. ಆದರೆ ರಾಶಿಯ ಒಳಗೆ ಎಂತಹುದಿದೆಯೋ ಎಂದು ಶಾಂತಪ್ಪನಿಗೆ ಅನುಮಾನವುಂಟಾಗಿ, ರಾಶಿಯ ಮಧ್ಯೆ ನಾಲ್ಕಾರು ಸ್ಥಳಗಳಲ್ಲಿ ತೋಡಲು, ಕೆಲಸಗಾರರಿಗೆ ಹೇಳಿದ.

"ಯಾಕೆ ಸಾರ್?....ಇದುವರೆಗೂ ಸಾವಕಾರ್ರು ಹಾಗೆ ತೋಡಿಸಿರಲಿಲ್ಲ" ಎಂದ ಚನ್ನಯ್ಯ.

"ಸಾಹುಕಾರ್ರು ತೋಡಿಸದಿದ್ದರೆ, ನಾನು ತೋಡಿಸುತ್ತೇನೆ—ಯಾಕೆ ಸುಮ್ಮನೆ ನಿಂತಿದ್ದೀ, ಅಲ್ಲಿ ಹೋಗಿ ತೋಡು" ಎಂದು ಶಾಂತಪ್ಪ ಆಳೊಬ್ಬನಿಗೆ ಹೇಳಿದ.

ಆಳು ಹೋಗಿ ರಾಶಿಯ ಮಧ್ಯೆ ನಾಲ್ಕಾರು ಕಡೆಗಳಲ್ಲಿ ಗುದ್ದಲಿಯಿಂದ ಗೆದು ಒಳಗಿನ ಅದಿರನ್ನು ಮೇಲೆ ತೆಗೆದು ಚೆಲ್ಲಿದ. ಶಾಂತಪ್ಪ ಆ ಅದಿರನ್ನು ನೋಡಿದ. ಅವೆಲ್ಲ ಕಡಿಮೆ ದರ್ಜೆಯವು.

"ಏನು ಚನ್ನಯ್ಯ....ಹೋದ ವಾರವೇ ಸಾಹುಕಾರ್ರು ಹೇಳಿರಲಿಲ್ಲವೇ ಹೀಗೆ ಮಾಡಬೇಡಾಂತ?" ಶಾಂತಪ್ಪ ಕೇಳಿದ.

"ಯಾಕೆ ಸಾರ್....ಏನಾಗಿದೆ?" ಏನೂ ತಿಳಿಯದವನಂತೆ ಚನ್ನಯ್ಯ ಕೇಳಿದ.

"ಇಲ್ಲಿ ಬಂದು ನೋಡು....ಈ ಕಡಿಮೆ ಅದಿರು ಏಕೆ ಹಾಕಿಸಿದ್ದೀ?"

ಮಾಣಿಕ್ಯಂ ಒಂದು ಮರದ ಕೆಳಗೆ ಸಿಗರೇಟು ಸೇದುತ್ತಿದ್ದ. ಅವನೊಡನೆ ಖಾನ್ ಮಾತನಾಡುತ್ತಾ ನಿಂತಿದ್ದ. ಅವರು ಒಮ್ಮೊಮ್ಮೆ ಅದಿರಿನ ರಾಶಿಯತ್ತ ನೋಡುತ್ತ ಮಾತನಾಡುತ್ತಿದ್ದರು. ಒಂದೇ ಕಂಪೆನಿಯವರಾಗಿ ಇವರದೇನು ರಹಸ್ಯದ ಮಾತು?

ಚನ್ನಯ್ಯ, ಹತ್ತಿರ ಹೋಗಿ ಅದಿರನ್ನು ನೋಡಿ ಹಲ್ಲು ಕಿರಿಯುತ್ತಾ, "ಇದೇನು ಬಿಡಿ ಸಾರ್ ಪರವಾಗಿಲ್ಲ....ಎಲ್ಲೋ ಒಂದೊಂದು ಕೆಟ್ಟ ಕಲ್ಲು ಸೇರಿದೆ ಅಷ್ಟೇ...." ಎಂದ.

"ಒಂದೊಂದು ಮಾತ್ರ ಸೇರಿಲ್ಲ. ಈ ರಾಶಿಯಲ್ಲಿ ಮುಕ್ಕಾಲು ಭಾಗ ಅಂತಹದೇ ಇದೆ....ಅದಿರಲಿ....ಇದು ಎಷ್ಟು ಟನ್ ಇದೆ?" ಶಾಂತಪ್ಪ ಕೇಳಿದ.

"ಎಂಟು ನೂರು ಟನ್ ಇದೆ ಸಾರ್"

"ಹೇಗೆ?....ಉದ್ದ, ಅಗಲ, ಎತ್ತರ ಎಷ್ಟು?"

"ಇನ್ನೂರಡಿ ಉದ್ದ, ಎಂಭತ್ತಡಿ ಅಗಲ, ಒಂದಡಿ ಎತ್ತರ....ಇಪ್ಪತ್ತು ಅಡೀಗೆ ಒಂದು ಟನ್ನು" ಚನ್ನಯ್ಯನೆಂದ.

"ಅದೆಲ್ಲ ಗೊತ್ತಿದೆ....ಆದರೆ ಎತ್ತರ ಕಡಿಮೆಯಿದೆ ಗೊತ್ತೇನು?" ಎಂದು ಶಾಂತಪ್ಪನೆಂದಾಗ ದೂರ ನಿಂತಿದ್ದ ಮಾಣಿಕ್ಯಂ ಇತ್ತಲೇ ನೋಡುತ್ತಿದ್ದ.

"ಮಿಸ್ಟರ್ ಮಾಣಿಕ್ಯಂ....ಈ ರಾಶಿಯ ಎತ್ತರ ಸರಿಯಾಗಿ ನೋಡಿದ್ರಾ? ಮಾಣಿಕ್ಯಂಗೆ ಕೇಳುವಂತೆ ಹೇಳಿದ ಶಾಂತಪ್ಪ.

ಸಿಗರೇಟು ಬಿಸುಟು ಹತ್ತಿರ ಬಂದ ಮಾಣಿಕ್ಯಂ. ಅವನ ಮುಖ ಗಂಭೀರವಾಗಿತ್ತು. ಚನ್ನಯ್ಯನ ಮುಖವೂ ಅಷ್ಟೆ. ಹತ್ತಿರ ಬಂದ ಮಾಣಿಕ್ಯಂ ರಾಶಿಯ ಒಂದೆಡೆ ಅಡಿಗೋಲಿನಿಂದ ಅಳೆದ, ಅಲ್ಲಿ ಒಂದು ಅಡಿ ಎತ್ತರವಿದ್ದಿತು. ಸರಿಯಾಗಿದೆಯೆಂಬಂತೆ ಶಾಂತಪ್ಪನ ಮುಖ ನೋಡಿದನವನು.

ಶಾಂತಪ್ಪನೂ ಅದೇ ಅಡಿ ಗೋಲಿನಿಂದ ರಾಶಿಯ ಹತ್ತಾರೆಡೆ ಅಳೆದ. ಅಲ್ಲೆಲ್ಲಾ ಒಂಭತ್ತು, ಹತ್ತು ಅಂಗುಲಗಳ ಮೇಲಿರಲಿಲ್ಲ.

"ಹತ್ತು ಅಂಗುಲ ಎತ್ತರ ಬರೆದು ಕೊಳ್ಳಿ ಮಾಣಿಕ್ಯಂ;" ಎಂದವನೇ ಶಾಂತಪ್ಪ ಮುಂದೆ ನಡೆದ.

ಲಾರಿಯ ಕೆಲಸಗಾರರು, ಗಣಿಯ ಕೂಲಿಗಾರರು ಕೆಲವರು ನಿಂತು ನೋಡುತ್ತಿದ್ದರು. ಶಾಂತಪ್ಪನನ್ನು ನೋಡುತ್ತಿದ್ದವರ ನೋಟದಲ್ಲಿ ಕುತೂ

ಹಲವಡಗಿದ್ದಿತು. ಈ ಹೊಸ ಮೇನೇಜರು ಏನು ಮಾಡುವನೋ, ಹೇಗೆ ನಡೆದು ಕೊಳ್ಳುವನೋ ಎಂಬುದವರ ಕುತೂಹಲ. ಗಣಿಯ ಕೆಲಸಗಾರರಿಗೆ ಇದು ಮುಖ್ಯ ದಿನ, ಕುತೂಹಲದ ದಿನ. ಏಕೆಂದರೆ, ಈ ದಿನವೇ ತಮ್ಮ ಒಂದು ವಾರದ ದುಡಿಮೆಯ ಫಲಿತಾಂಶ ತಿಳಿವ ದಿನ.

ಆದ್ದರಿಂದಲೇ ಆ ವಾರದಲ್ಲಿ ತೆಗೆದಿಟ್ಟ ಅದಿರನ್ನು ಕಂಪೆನಿಯ ಕಡೆಯವರು ಬಂದು ಅಳೆಯುವಾಗ ಎಲ್ಲರೂ ನಿಂತಲ್ಲಿಂದಲೇ, ಕುಳಿತಲ್ಲಿಂದಲೇ ಇಣುಕಿ ಅತ್ತ ನೋಡುತ್ತಿದ್ದರು. ಶಾಂತಪ್ಪನೂ ಇದೆಲ್ಲವನ್ನೂ ಗಮನಿಸಿದ್ದ.

"ಹಾಗೆ ಮಾಡಬೇಡಿ ಸಾರ್....ಈ ವಾರ ಬಟವಾಡೆ ಜಾಸ್ತಿಯಾಗುತ್ತೆ, ಕೈಯಿಂದಲೇ ಕೂಲಿ ಕೊಡಬೇಕಾಗಿದೆ" ಚನ್ನಯ್ಯ ಶಾಂತಪ್ಪನ ಹಿಂದೆಯೇ ಬರುತ್ತಾ ಗೋಗರೆದ-

ಅವನು ಕಳೆದ ವಾರವೂ ಇದೇ ಮಾತುಗಳನ್ನಾಡಿದ್ದ. ಆದರೆ ಈ ವಾರ ಮಾಣಿಕ್ಯಂ ಮತ್ತು ಚನ್ನಯ್ಯ ಸೇರಿ ಗುಣಿಸಿದ ಪ್ರಕಾರ ನೂರ ಅರವತ್ತು ಟನ್ನುಗಳಷ್ಟು ಹೆಚ್ಚಾಗಿದ್ದಿತು ; ಅದರಿಂದ ಕಂಪೆನಿಗೆ ಅಥವ ಸಾಹುಕಾರರಿಗೆ ಮೂರು ಸಾವಿರದ ಇನ್ನೂರು ರೂಪಾಯಿಗಳಷ್ಟು ನಷ್ಟವಾಗುತ್ತಿದ್ದಿತು.

"ಏಕಯ್ಯ............ನಾನೇನು ಅನ್ಯಾಯ ಮಾಡಿದ್ದೀನೇನು? ಅಲ್ಲಿ ಎಷ್ಟಿದೆಯೋ ಅಷ್ಟು ಬರೆದುಕೊಳ್ಳುವಂತೆ ಮಾಣಿಕ್ಯಂಗೆ ಹೇಳಿದೆ," ಎಂದು ಶಾಂತಪ್ಪ ಹೇಳಿ ಮುಂದೆ ಹೊರಟ.

ನಿರಾಶನಾದ ಚನ್ನಯ್ಯ ಹಿಂತಿರುಗಿ ರಾಶಿಯ ಬಳಿ ಹೋಗಿ, ಮಾಣಿಕ್ಯಂ ನೊಡನೆ ಮಾತನಾಡುತ್ತಾ, ಬೀಡಿ ಸೇದುತ್ತಾ ಕುಳಿತ.

ಶಾಂತಪ್ಪ, ಖಾನ್‌ನ ಬಳಿಯಿದ್ದ ತನ್ನ ನೀರಿನ ಶೀಶೆಯಿಂದ ಒಂದು ಲೋಟ ನೀರು ಕುಡಿದು ಉಳಿದ ನೀರನ್ನು ಯಾರಾದರೂ ಕುಡಿದುಬಿಡುವಂತೆ ಹೇಳಿದ. ಅವನು ತೆಗೆದುಕೊಂಡುಹೋದ ಆ ಸ್ವಲ್ಪ ನೀರಿಗಾಗಿ ಹಲವರ ಮುತ್ತಿಕ್ಕಿಕೊಂಡರು. ಶಾಂತಪ್ಪ ನಗುತ್ತಾ ಆ ದೃಶ್ಯವನ್ನು ನೋಡಿ ಲಾರಿಯ ಬಳಿ ನಡೆದ. ಅವನಿಗೂ ಹಸಿವೆಯಾಗಿದ್ದಿತು.

ಕೆಲವರು ಆಳುಗಳು ಲಾರಿಯೊಳಕ್ಕೆ ಅದಿರನ್ನು ತುಂಬುತ್ತಿದ್ದರು. ಒಂದೆರಡು ನಿಮಿಷ ಅಲ್ಲಿಯೇ ನಿಂತು ನೋಡುತ್ತಾ, "ಕಲ್ಲಿನ ಜೊತೆಗೆ ಮಣ್ಣು ತುಂಬಬೇಡಿ" ಎಂದವರಿಗೆ ಹೇಳಿ ಲಾರಿಯೊಳಗೆ ಹೋಗಿ ಕುಳಿತ. ಬಿಸಿಲಿನಲ್ಲಿ ಅದುತನಕ ಸುತ್ತಿದ್ದರಿಂದ ಅಲ್ಲಿ ಕುಳಿತುದು ಹಿತವೆನಿಸಿತು ಅವನಿಗೆ. ಒಂದ್ನು

ಕ್ಷಣದ ನಂತರ ಇದ್ದಕ್ಕಿದ್ದಂತೆ ಕೈಗಡಿಯಾರ ನೋಡಿಕೊಂಡ ಶಾಂತಪ್ಪ. ಎರಡು ಗಂಟೆಯಾಗಿದ್ದಿತು. ಕೆಲಸಗಾರರನ್ನಿನ್ನ ಊಟಕ್ಕೆ ಬಿಟ್ಟಿರಲಿಲ್ಲ. ತಕ್ಷಣ ಚನ್ನಯ್ಯನನ್ನು ಕರೆದು ಕೂಲಿಯವರನ್ನು ಊಟಕ್ಕೆ ಕಳಿಸುವಂತೆ ಹೇಳಿದ.

"ಈಗಲೇ ಬಿಟ್ಟರೆ ಇನ್ನು ಮಧ್ಯಾಹ್ನ ಕೆಲಸಾನೇ ಮಾಡೋಲ್ಲ ಸಾರ್ ಅವರು. ನೀವು ಬೇರೆ ಕಡಿಮೆ ಬರೆದುಕೊಂಡುಬಿಟ್ಟಿದೀರಿ. ಸಂಜೆ ಹೊತ್ತಿಗೆ ಸ್ವಲ್ಪ ಹೆಚ್ಚಾಗಿ ಕಲ್ಲು ಕಟ್ಟಬೇಕು" ಎಂದ ಚನ್ನಯ್ಯ. ಶಾಂತಪ್ಪನಿಗೆ ಈ ಮಾತು ಕೇಳಿ ಕೋಪ ಬಂದಿತಾದರೂ ಅದನ್ನು ತಡೆದುಕೊಂಡು ಹೇಳಿದ, "ನೋಡು ಚನ್ನಯ್ಯ, ನೀನು ಕಂಟ್ರಾಕ್ಟರು. ಲಾರಿಗೋಸ್ಕರ ಕಾದಿದ್ದು ಈಗ ಬಂದೆ. ಬೆಳಗ್ಗೆಯಿಂದ ಇಲ್ಲಿ ನೋಡಿಕೊಳ್ಳೋರು ಯಾರೂ ಇಲ್ಲ. ಹೀಗಾದ್ರೆ ಇಲ್ಲಿ ಕೆಲಸ ಹೇಗೆ ನಡೀಬೇಕು? ನೀನು ಮುತುವರ್ಜಿಯಿಂದ ನೋಡಿಕೊಳ್ಳದೇ, ಕೂಲಿಯವರನ್ನ ಇಷ್ಟುಹೊತ್ತಿನ ತನಕ ಊಟಕ್ಕೂ ಬಿಡದೆ ಅವರಿಂದ ಕೆಲಸ ತೆಗೆಯೋದು ಒಳ್ಳೇದಲ್ಲ. ಮೊದಲು ಅವರನ್ನ ಊಟಕ್ಕೆ ಬಿಡು."

ಮಾರುತ್ತರ ಕೊಡದೆ ಚನ್ನಯ್ಯ ಹೊರಟುಹೋದ. ಒಂದೆರಡು ನಿಮಿಷಗಳ ನಂತರ ಶಿಳ್ಳೆಯೂದಿದ ಶಬ್ದ ಕೇಳಿಬಂದಿತು. ಅದರೊಡನೆಯೇ ಆಳುಗಳೆಲ್ಲರ ಬಿಡುಗಡೆಯ ಸಂತಸದ ಕೂಗೂ ಕೇಳಿಬಂದಿತು.

"ಅಯ್ತು ಸಾರ್....ಹೋಗೋಣವೆ ?" ಲಾರಿಯ ಆಳೊಬ್ಬನು ಬಂದು ಶಾಂತಪ್ಪನನ್ನು ಕೇಳಿದ.

"ಹೋಗೋಣ....ಡ್ರೈವರ್ ಎಲ್ಲಿ ?"

"ಅಲ್ಲಿ ಸೌದೆ ಕಟ್ಟಿಸ್ತಿದಾನೆ ಸಾರ್....ಕೋಣಸಂದ್ರದಲ್ಲಿ ಸುಬ್ಬಣ್ಣನೋರ ಮನೇಗೆ ಸ್ವಲ್ಪ ಸೌದೆ ಬೇಕಂತೆ."

"ಸರಿ ಹಾಗಾದ್ರೆ....ಬೇಗ ಬರೋದಕ್ಕೆ ಹೇಳು" ಎಂದ ಶಾಂತಪ್ಪ.

ಒಂದೆರಡು ನಿಮಿಷಗಳ ನಂತರ ಡ್ರೈವರು ಬಂದ "ನಮಸ್ಕಾರ....ಹೋಗೋಣವೇ ಸಾರ್" ಎಂದ. ಶಾಂತಪ್ಪ ಅವನನ್ನು ನೋಡಿದ. ಅವನಿಗೆ ಸುಮಾರು ಐವತ್ತಕ್ಕೆ ಕಡಿಮೆಯಿಲ್ಲದ ವಯಸ್ಸಾಗಿದ್ದಿತು. ಮುಖದಲ್ಲಿಯೇ ನಡತೆಪರತೆಯು ಕಾಣುತ್ತಿದ್ದಿತು. ಅವನನ್ನು ನೋಡಿದಾಕ್ಷಣವೇ ಶಾಂತಪ್ಪನಿಗೆ ಅವನಲ್ಲಿ ವಿಶ್ವಾಸವುಂಟಾಯಿತು.

"ಹೊತ್ತಾಗಿದೆ. ಹೊರಡಪ್ಪ.....ಮಾಣಿಕ್ಯಂ, ಖಾನ್ ಬರ್ತಾರೇನೋ ಕರೀಬೇಕಲ್ಲ" ಎಂದ ಶಾಂತಪ್ಪ.

"ಮಾಣಿಕ್ಯಂ ಇಲ್ಲೇ ಇರ್ತಾರಂತೆ ಸಾರ್.....ಖಾನ್ ಹೊಟ್ಟೆಲಿ ಕುಳಿತು ಕ್ಕೊಂಡಿದಾನೆ" ಎಂದು ಆತ ಒಳಗೆ ಬಂದು ಕುಳಿತುಕೊಂಡು ಯಂತ್ರದ ಕಲ್ಲಿಣ್ಣೆಯ ಬೀಗದ ಕೈಯನ್ನು ತಿರುಗಿಸಿ, ಕಾಲನ್ನೊತ್ತಿದ.

ಲಾರಿಯು ಹೊರಟು ಅರ್ಧ ಮೈಲಿ ಕಳೆಯುವವರೆಗೂ ಮೌನದಿಂದಿದ್ದ ಡ್ರೈವರು ಮಾತಿಗೆ ಪ್ರಾರಂಭಿಸಿದ: "ತಾವು ಬೆಂಗಳೂರಿನವರೇನು ಸಾರ್?"

"ಹೌದಪ್ಪಾ....."

"ತಾವು ಈ ಚನ್ನಯ್ಯನವರ ಹತ್ತಿರ ಹುಷಾರಾಗಿರಬೇಕು....ಬಹಳ ಘಾಟಿ."

"ಓ!....ಹಾಗೇನು?"

"ಹೌದು ಸಾರ್....ನಿಮಗೆ ತಿಳಿಯುತ್ತೆ ಎಲ್ಲಾ ವಿಷಯವೂ!"

ಶಾಂತಪ್ಪ ಏನೂ ಉತ್ತರವೀಯಲಿಲ್ಲ. ಆತನೇ ಪುನಃ ಹೇಳಿದ,

"ಪ್ರತಿ ವಾರಾನೂ ಈ ಅಳತೆಯ ತಕರಾರು ಇದ್ದೇ ಇರುತ್ತೆ ಸಾರ್. ಈ ಕಂಟ್ರಾಕ್ಟರುಗಳಿಗೆ ಎಷ್ಟು ಹೇಳಿದರೂ ಬುದ್ಧಿ ಬರೋಲ್ಲ. ಆ ಗಣೇಲೂ ಅಷ್ಟೆ."

"ಹಾಗೋ. ಇಲ್ಲಿನ ಸಮಾಚಾರ?"

"ಹೌದು ಸಾರ್.......ನಾನೂ ಎಷ್ಟೋ ವರ್ಷದಿಂದ ನೋಡಿ ಬೇಜಾರು ಪಟ್ಟುಬಿಟ್ಟಿದೀನಿ."

"ಹಾಗಾದ್ರೆ ಎಷ್ಟು ವರ್ಷದಿಂದ ಈ ಕೆಲಸದಲ್ಲಿದೀಯಪ್ಪಾ."

"ನಾನೂ ಗಣೀ ಲಾರಿ ಓಡಿಸ್ತಾ ಇಪ್ಪತ್ತು ವರ್ಷದಿಂದೀನಿ ಸಾರ್. ಎಷ್ಟೋ ಜನ ಸಾವ್ಕಾರ್ರುಗಳನ್ನ ನೋಡಾಯ್ತು...." ಎಂದ ಆತ.

"ನಿನ್ನ ಹೆಸರೇನಪ್ಪ?"

"ನನ್ನ ಹೆಸರು ರಾಮುಲು."

"ಓ....ಹಾಗಾದ್ರೆ ಆಂಧ್ರರೇನಪ್ಪ?" ಎಂದ ಶಾಂತಪ್ಪ ನಗುತ್ತಾ.

"ಹೌದು ಸಾರ್. ನಮ್ಮ ತಂದೆ ಆಂಧ್ರ ಸೀಮೆಯವರು. ನಾನು ಮೊದಲಿನಿಂದಲೂ ಕನ್ನಡದವನೇ."

"ಸರಿ....ಸರಿ...."

ಪುನಃ ನಾಲ್ಕಾರು ನಿಮಿಷ ಮೌನದಲ್ಲಿ ಸಾಗಿತು. ಯಂತ್ರದ ಶಬ್ದ ದೊಡನೆ ಹಿಂಭಾಗದಲ್ಲಿ ಕುಳಿತಿದ್ದ ಆಳುಗಳು ಮಾತನಾಡುತ್ತಿದ್ದುದು ಕೇಳು ತ್ತಿದ್ದಿತು. ಅವರ ಪಿಸುಮಾತು ಅಸ್ಪಷ್ಟವಾಗಿ ಶಾಂತಪ್ಪನಿಗೆ ಕೇಳುತ್ತಿದ್ದಿತು.

"ಯಾಕೋ ಹಂಗೆ ಹೇಳ್ತಿ....ಅಳತೇ ತೊಗೋಳೋಕೆ ಸಾವ್ಕಾರ್ರು ಹೇಳಿರೋದು ಆ ಮಾಣಿಕ್ಯಪ್ಪನಿಗಲ್ವಾ ?"

"ಅವನಿಗೆ ಹೇಳಿದ್ರೇನು....ಇವರು ಮೇನೇಜರಲ್ವಾ? ಇವರಿಗೆ ಎಲ್ಲ ಅಧಿಕಾರಾನೂ ಐತೆ."

"ಹಂಗಾದ್ರೆ ಮಾಣಿಕ್ಯಪ್ಪನಿಗೆ ತೊಂದರೆ ಇನ್ನು ಮೇಲೆ...."

"ಹೂ ಮತ್ತೆ.....ಚನ್ನಪ್ಪ ಊರಿನಲ್ಲಿ ಆ ರಂಡೇ ಮನೇಲಿ ಕಾಲ ಕಳೆಯುತ್ತಿದ್ದ. ಮಾಣಿಕ್ಯಪ್ಪನೇ ಅವನು ಹೇಳಿದಷ್ಟು ಊರಿನಲ್ಲೇ ಅಳತೆ ಬರ್ಕ್ಕೊಂಡುಬಿಡ್ತಿದ್ದ. ಈಗ ತೊಂದರೆ!"

"ಹೂ ಮತ್ತೆ....ಚನ್ನಯ್ಯ ಅಲ್ಲಿ....ಮಾಣಿಕ್ಯಪ್ಪ ಇಲ್ಲಿ!"

ಘೊಳ್ಳನೆ ಎಲ್ಲರೂ ನಕ್ಕರು. ಕಡ್ಡಿ ಗೀರಿ ಬೀಡಿಗಳನ್ನು ಹಚ್ಚಿಕೊಂಡು ಪುನಃ ಪಿಸುಮಾತಾಡತೊಡಗಿದರು.

"ಸುಬ್ಬಣ್ಣನೋರಿದ್ದಾಗ ಮಾಣಿಕ್ಯಪ್ಪ ಹಿಂಗಾಡುತ್ತಿರಲಿಲ್ಲ ಅಲ್ವ ?"

"ಅಯ್ಯೋ ಸುಮ್ಕಿರು....ಅವರಿಬ್ಬರೂ ಒಳಗೆ ಒಂದೇನೇ. ಇಬ್ಬರೂ ಒಬ್ಬರಿಗೊಬ್ಬರು ಸಾಮೀಲು."

"ಅಷ್ಟೇ ಅಲ್ಲ ಸುಬ್ಬಣ್ಣೋರ ವಿಸ್ಯ"....ಎಂದು ಇನ್ನೂ ಮೆಲ್ಲನೆ ಏನನ್ನೋ ಹೇಳತೊಡಗಿದ. ಶಾಂತಪ್ಪನಿಗೆ ಆ ಮಾತು ಕೇಳಿಸಲಿಲ್ಲ.

ರಾಮನಾಯ್ಕನ ಹಳ್ಳಿಯು ಹತ್ತಿರವಾದಂತೆ ಶಾಂತಪ್ಪನಿಗೆ ಆ ಮಾತ ನ್ನಾಡುವುದು ಬೇಕಾಗಲಿಲ್ಲ.

## ೪

## ವಿಸ್ಮಯಕರ - ವಿಷವ್ಯೂಹ

ಮಾರನೆಯ ದಿನ ಬೆಳಗ್ಗೆ ಶಾಂತಪ್ಪ ಎಂಟು ಗಂಟೆಗೆ ತನ್ನ ಉಡುಪನ್ನು ಧರಿಸಿ ಬಿಡಾರದ ಹೊರಗೆ ಬಂದು ನಿಂತುಕೊಂಡ. ಹಿಂದಿನ ದಿನ ಸಂಜೆಯೇ ಸಾಹುಕಾರರು ಕೋಣಸಂದ್ರಕ್ಕೆ ಬಂದು ಆ ರಾತ್ರಿ ಅಲ್ಲಿ ತಂಗಿದ್ದು ಮಾರನೆಯ

ದಿನ ರಾಮನಾಯ್ಕನಹಳ್ಳಿಗೆ ಬರುವುದು ಪದ್ಧತಿಯಾಗಿದ್ದಿತು. ಒಂಭತ್ತು ಘಂಟೆಯ ವೇಳೆಗೆ ರಾಮನಾಯ್ಕನಹಳ್ಳಿಗೆ ಬಂದುಬಿಡುತ್ತಿದ್ದರು. ಅವರು ಬರುತ್ತಿದ್ದರೆ ಅವರ 'ಬ್ಯೂಕ್' ಕಾರು ಬಹು ದೂರದಿಂದಲೇ ಶಬ್ದಮಾಡುತ್ತಾ, ಸಾಹುಕಾರರು ಬರುತ್ತಿರುವರೆಂದು ತಿಳಿಸುತ್ತಿದ್ದಿತು. ಆ ವೇಳೆಗಾಗಲೇ ಕಂಟ್ರಾಕ್ಟರುಗಳೂ, ಊರಿನ ಕೆಲವರೂ ಬಿಡಾರದ ಬಳಿ ಬಂದು ಸೇರು ತ್ತಿದ್ದರು, ಕಾರು ಬಂದ ಶಬ್ದ ಕೇಳಿ "ಕಾರು ಬಂತು....ಕಾರು ಬಂತು" ಎನ್ನುತ್ತಾ ಎದ್ದು ನಿಲ್ಲುತ್ತಿದ್ದರು.

ಈ ದಿನವೂ ಹಾಗೆಯೇ ಎಲ್ಲರೂ ಸೇರಿದ್ದರು. ಶಾಂತಪ್ಪ ಬಾಗಿಲಿನಲ್ಲಿ ನಿಂತಿದ್ದ. ದೂರದಿಂದ ಬಂದ ಕಂಟ್ರಾಕ್ಟರು ಗಂಗಯ್ಯ ಬಂದು ಅವನಿಗೆ ವಂದಿಸಿದ.

"ಏನು ಗಂಗಯ್ಯ....ಆರೋಗ್ಯವೆ.... ?"

"ಇಷ್ಟರವುಟ್ಟಿಗೆ ಸಾರ್....ತಾವು ನಮ್ಮ ಗಣಿಯ ಕಡೆ ದಯಮಾಡಿ ಸಲೇ ಇಲ್ಲ ಈ ವಾರ" ಎಂದ ಗಂಗಯ್ಯ.

"ನಾಳೆ ಬರ್ತೀನಿ ನಿಮ್ಮ ಗಣೀಗೆ........ಈ ವಾರವೆಲ್ಲ ಇಲ್ಲಿಯೇ ಕೆಲಸ ವಿತ್ತು."

"ಶಾಂತಪ್ಪ ಬಂದವರೊಡನೆ ಮಾತನಾಡುತ್ತ ಬಾಗಿಲಿನಲ್ಲಿಯೇ ನಿಂತಿದ್ದ. ಪಕ್ಕದ ಮನೆಯ ರತ್ನಮ್ಮ ಆಗಾಗ ತಮ್ಮ ಮನೆಯ ಬಾಗಿಲ ಸಂದಿನಿಂದ ನೋಡುತ್ತಿದ್ದುದನ್ನು ಶಾಂತಪ್ಪನು ಗಮನಿಸಿದ್ದ. ಇದನ್ನು ಇತರರು ಕೆಲವರು ಗಮನಿಸಿದ್ದರೂ, ಶಾಂತಪ್ಪನು ನೋಡಿಯೂ ನೋಡದವನಂತೆ ಇದ್ದುಬಿಟ್ಟ.

"ಓಹೋ ಕಾರು ಬರ್ತಿದೆ...." ಎಂದು ಗಂಗಯ್ಯ ಹೇಳಿದುದನ್ನು ಕೇಳಿ ಎಲ್ಲರೂ ರಸ್ತೆಯತ್ತ ತಿರುಗಿನೋಡಿದರು. ದೂರದಲ್ಲಿ ಧೂಳು ಮೇಲೇಳುತ್ತಾ ಬರುತ್ತಿದ್ದಿತು. ನಂತರ ಕಾರಿನ ಶಬ್ದವೂ ಕೇಳಿಸಿ ಕಾರು ಕಾಣಿಸಿಕೊಂಡಿತು. ಎಲ್ಲರೂ ಎದ್ದು ನಿಂತರು.

ಕಾರು ಬಿಡಾರದ ಹತ್ತಿರ ಬಂದು ನಿಂತಿತು. ಬಾಗಿಲು ತೆಗೆದು ಕೊಂಡು ಸಾಹುಕಾರರು ಕೆಳಗಿಳಿದರು. ಶಾಂತಪ್ಪ ಸಾಹುಕಾರರಿಗೆ ವಂದಿಸಿದ, ಸಾಹುಕಾರರು ಪ್ರತಿಯಾಗಿ ವಂದಿಸುತ್ತಾ ಕೇಳಿದರು, "ಏನು ಮಿಸ್ಟರ್ ಶಾಂತಪ್ಪ, ಆರೋಗ್ಯವೇ ?"

"ಹೂ ಸಾರ್" ಶಾಂತಪ್ಪ ವಿನಯದಿಂದ ನುಡಿದ.

ಎಲ್ಲರೂ ಆ ಬಿಡಾರದ ಒಳಹೊಕ್ಕರು. ಸಾಹುಕಾರರೊಡನೆ ಸುಬ್ಬಣ್ಣ, ಗೋಪಾಲಯ್ಯನೂ ಬಂದಿದ್ದರು. ಶಾಂತಪ್ಪ ಅವರಿಬ್ಬರ ಕುಶಲವನ್ನೂ ವಿಚಾರಿಸಿದ.

ಸಾಹುಕಾರರು ಮಾಣಿಕ್ಯಂನನ್ನು ಆ ವಾರದಲ್ಲಿ ತೆಗೆದ ಅದಿರೆಷ್ಟೆಂದು ಕೇಳಿದರು. ಅವನು ಹೇಳಿದ. ಉತ್ತರ ಕೇಳಿ ಶಾಂತಪ್ಪ ಅಪ್ರತಿಭನಾಗಿದ್ದ. ಅವನು ಆ ವಾರದಲ್ಲಿ ತೆಗೆದಿದ್ದುದು ಎಂಟುನೂರು ಟನ್ನುಗಳೆಂದು ಹೇಳಿದ್ದ. ಇವನೇಕೆ ಹೀಗೆ ನುಡಿದ. ನೂರ ಅರವತ್ತು ಟನ್ನುಗಳು ಹೆಚ್ಚಾಗಿ ಹೇಳಿ ಬಿಟ್ಟಿರುವನು. ಹಿಂದಿನ ದಿನದ ಸಂಜೆಯುವರೆಗೆ ತೆಗೆದ ಅದಿರನ್ನು ಸೇರಿಸಿದ್ದರೂ ಇಪ್ಪತ್ತೈದು ಮೂವತ್ತು ಟನ್ನು ಹೆಚ್ಚಿರಬಹುದು. ಆದರೆ ನೂರ ಅರವತ್ತು ಟನ್ನುಗಳಲ್ಲ. ಮಾಣಿಕ್ಯಂ ಏಕೆ ತಿಳಿದಿದ್ದೂ ಸಹ ಹೀಗೆ ಹೇಳಿದ? ಸಾಹುಕಾರರಿಗೆ ಇದು ತಿಳಿದರೆ ಅವನ ಗತಿ ?....

"ಏನು ಮಿಸ್ಟರ್ ಶಾಂತಪ್ಪ, ಈ ವಾರದ ಅದಿರು ನೀವು ನೋಡಿದ್ದೀರಾ....ಹೇಗಿದೆ ?" ಸಾಹುಕಾರರು ಕೇಳಿದರು.

"ನಾನು ಅದಿರು ನೋಡಿದೀನಿ ಸಾರ್....ಅದರಲ್ಲಿ ಅರ್ಧಭಾಗ ಒಳ್ಳೆಯದಿದೆ ಇನ್ನು ಅರ್ಧ ಭಾಗ ಕಡಿಮೆ ಅದಿರು ಬೆರೆಸಿದ್ದಾರೆ" ಶಾಂತಪ್ಪ ಹೇಳಿಬಿಟ್ಟ.

"ಇಲ್ಲ ಸಾರ್........ಈ ವಾರ ಕಲ್ಲು ಚೆನ್ನಾಗಿದೆ...." ಚನ್ನಯ್ಯ ತಕ್ಷಣ ಹೇಳಿದ ತಲೆಗೆರೆಯುತ್ತಾ.

"ಸುಮ್ಮನಿರು ಸಾಕು!....ನಮ್ಮ ಶಾಂತಪ್ಪನವರಿಗೆ ನಿನ್ನ ಮೇಲೆ ದ್ವೇಷವೇನು ಹಾಗಾದ್ರೆ ಸುಳ್ಳು ಹೇಳೋಕೆ ?" ಸಾಹುಕಾರರು ಚನ್ನಯ್ಯನ ಮೇಲೆ ರೇಗಿದರು.

"ಕಲ್ಲು ಅಳತೆ ಸರಿಯಾಗಿದೆಯೋ ಶಾಂತಪ್ಪನೋರೆ ?" ಸಾಹುಕಾರರು ಪುನಃ ಕೇಳಿದರು.

ಶಾಂತಪ್ಪನಿಗೆ ಚಿಂತೆಯಾಯಿತು. ನಿಜಾಂಶವನ್ನು ಹೇಳಿದರೆ ಚನ್ನಯ್ಯನ ಗುಟ್ಟು ಬಯಲಾಗುವುದು. ಸಾಹುಕಾರರಿಗೆ ಮಾಣಿಕ್ಯಂ ವಿಷಯದಲ್ಲೂ ದುರಭಿಪ್ರಾಯ ಮೂಡುವುದು. ಅಲ್ಲದೇ ತಾನು ಹೇಳಿದುದು ಹಾಗೆ ಸರಿಯಾಗಿರಬೇಕು. ಆಕಸ್ಮಾತ್ ಸಂಜೆಯ ವೇಳೆಗೆ ನೂರ ಅರವತ್ತು ಟನ್ನುಗಳಷ್ಟು ಅದಿರನ್ನು ಒಡೆಸಿ ರಾಶಿಯನ್ನು ಸರಿಯಾಗಿ ಕಟ್ಟಿಸಿರಬಹುದು....

ಆದರೂ ತಾನು ಕಂಡುದನ್ನು ಹೇಳದಿದ್ದರೆ ಸಾಹುಕಾರರಿಗೆ ಮೂರು ಸಾವಿರದ ಇನ್ನೂರು ರೂಪಾಯಿ ನಷ್ಟವಾಗುವುದು!....ಹೇಳಿದರೆ ಚನ್ನಯ್ಯ, ಮಾಣಿಕ್ಯಂ ರವರ ದ್ವೇಷಕ್ಕೆ ಗುರಿಯಾಗಬೇಕು !....

"ಏನ್ರೀ ?........ನೀವು ನೋಡಿದೀರಾ ? " ಸಾಹುಕಾರರು ಪುನಃ ಕೇಳಿದರು.

"ನಾನು ಅಳತೆನೋಡಿಲ್ಲ ಸಾರ್....ಅದಿರುಮಾತ್ರ ತೋಡಿಸಿನೋಡಿದೆ" ಎಂದ ಶಾಂತಪ್ಪ. ಅವನು ಚನ್ನಯ್ಯನನ್ನು ನೋಡಿದಾಗ ಅವನು ಬಿಡುಗಡೆಯ ಉಸಿರುಬಿಡುತ್ತಿದ್ದ. ಮಾಣಿಕ್ಯಂ ಎದ್ದು ಹೊರಗೆ ಹೋಗಿ ನಿಂತಿದ್ದ.

"ಸುಬ್ಬಣ್ಣೋರೆ ಏನು ಮಾಡೋಣ ?.....ಕಲ್ಲು ಚೆನ್ನಾಗಿಲ್ಲಾಂತಾರೆ.... ಅಳತೆ ಬೇರೆ ನೋಡಿಲ್ಲವಂತೆ...." ಸಾಹುಕಾರರೆಂದರು.

"ಅಳತೆ ನಾನು ತೆಗೆದುಕೊಳ್ಳಲಿಲ್ಲ ಸಾರ್....ಮಾಣಿಕ್ಯಂ ಅದಿರು ರಾಶಿಯ ಅಳತೆ ನೋಡಿಕೊಳ್ತಾರೆ. ನಾನು ಅದಿರಿನ ಗ್ರೇಡು ಮಾತ್ರ ನೋಡ ಬೇಕೆಂದು ನೀವೇ ಹೇಳಿದ್ದಿರಿ" ಎಂದ ಶಾಂತಪ್ಪ.

"ಆದರೂ ನೀವು ಅಳತೇನೂ ನೋಡಬೇಕು ಸಾರ್ " ಆಪಾದಿಸುವವ ನಂತೆ ನುಡಿದ ಸುಬ್ಬಣ್ಣ.

"ಮುಂದಿನ ವಾರದಿಂದ ನೋಡಿಕೊಳ್ತೇನೆ....ಈ ವಾರ ಮಾಣಿಕ್ಯಂ ನೋಡಿದ್ದರಲ್ಲಾಂತ ನಾನು ನೋಡಲಿಲ್ಲ," ಎಂದು ಹೇಳಿ ಶಾಂತಪ್ಪ ಅಲ್ಲಿ ನಿಂತಿದ್ದ ಚನ್ನಯ್ಯನ ಮುಖವನ್ನೂ, ಆಗತಾನೇ ಒಳಬಂದಿದ್ದ ಮಾಣಿಕ್ಯಂನ ಮುಖವನ್ನೂ ನೋಡಿದ. ಶಾಂತಪ್ಪನು ಅದಿರಿನ ಅಳತೆಯನ್ನು ತೆಗೆದು ಕೊಳ್ಳುವುದಕ್ಕೆ ನಿಯಮಿತನಾದನೆಂದು ಅವರಿಬ್ಬರ ಮನಸ್ಸಿನಲ್ಲಿಯೂ ಕುದಿದುದು, ಅವರ ಮುಖದಲ್ಲಿಯೇ ಶಾಂತಪ್ಪ ಕಂಡುಕೊಂಡ. ಆದರೆ ಸುಬ್ಬಣ್ಣ ಪುನಃ ಹೇಳಿದ,

"ಹಾಗಲ್ಲ ನಾನು ಹೇಳಿದ್ದು. ಮಾಣಿಕ್ಯಂ ಮಾಡಬೇಕಾದ ಕೆಲಸ ನೀವೇಕೆ ಮಾಡಬೇಕು? ನೀವೂ ಆ ಸಮಯದಲ್ಲಿ ಎದುರಿಗಿದ್ದರೆ ಸಾಕೂಂತ ನಾನು ಹೇಳಿದ್ದು."

ಶಾಂತಪ್ಪ ಉತ್ತರವೀಯಲಿಲ್ಲ. ಸಾಹುಕಾರರೇ ಎದುರಿಗಿರುವಾಗ ತಾನೇಕೆ ಸುಬ್ಬಣ್ಣನ ಸಂಗಡ ವಾದವಾಡಬೇಕು, ಅವರೇ ಒಂದು ನಿರ್ಣಯಾತ್ಮಕ ನುಡಿಯಾಡಲಿ ಎಂದವನ ಅಭಿಲಾಷೆಯಿದ್ದಿತು. ಅಲ್ಲದೆ, ಸುಬ್ಬಣ್ಣ

ಮಾಣಿಕ್ಯಂ ಪರವಾಗಿಯೇ ಮಾತನಾಡುವನೆಂಬ ಅಭಿಪ್ರಾಯ ಶಾಂತಪ್ಪನಿಗೆ ಹೇಗೋ ಬಂದುಬಿಟ್ಟದ್ದಿತು. ಸುಬ್ಬಣ್ಣನ ಸಂಗಡ ಹೆಚ್ಚು ಮಾತನಾಡುವ ಇಚ್ಛೆಯೂ ಅವನಿಗಿರಲಿಲ್ಲ. ಕೋಣಸಂದ್ರದಲ್ಲಿ ಸುಬ್ಬಣ್ಣನ ನಡೆನುಡಿಗಳನ್ನು ನೋಡಿ ತಿಳಿದಿದ್ದ ಅವನಿಗೆ ಸುಬ್ಬಣ್ಣನ ವಿಷಯದಲ್ಲಿ ತಾತ್ಸಾರವೊಂದು ಮೊಳೆತಿದ್ದಿತು.

"ಒಟ್ಟಿನಲ್ಲಿ ನೀವು ಎಲ್ಲದರ ಮೇಲೂ ನಿಗಾ ಕೊಡಬೇಕು ಮಿಸ್ಟರ್ ಶಾಂತಪ್ಪ" ಎಂದು ಹೇಳಿ ಸಾಹುಕಾರರು ಹಣವನ್ನೆಣಿಸತೊಡಗಿದರು. ಎಲ್ಲರ ದೃಷ್ಟಿಯೂ ಅವರು ಎಣಿಸುತ್ತಿದ್ದ ಹಣದತ್ತ ತಿರುಗಿತು. ಸಾಹುಕಾರರ ಚನ್ನಯ್ಯನಿಗೆ ಹಣವನ್ನೀಯುವಾಗ ಸುಬ್ಬಣ್ಣನೆಂದ,

"ಈ ವಾರದ ಕಲ್ಲೂ ಅರ್ಧ ಕಡಿಮೆ ಗ್ರೇಡೂಂತ ಶಾಂತಪ್ಪನೋರು ಹೇಳಿದ್ರಲ್ಲಾ ಸಾರ್!"

"ಓ!....ಹೌದು....ಅರ್ಧ ಕಡಿಮೆ ಕಲ್ಲಿನ ಬೆಲೆ ಹಾಕಿಕೊಡೋಣ," ಎಂದು ಸಾಹುಕಾರರು ಚನ್ನಯ್ಯನ ಮುಖ ನೋಡಿದರು.

ಚನ್ನಯ್ಯ ಅಳುವವನಂತೆ ಮುಖ ಮಾಡಿಕೊಂಡು ಕೈ ಮುಗಿಯುತಾ ಕೇಳಿದ, "ಅಯ್ಯೋ ಹಾಗೆ ಮಾಡಬೇಡಿ ಸಾರ್....ಈ ವಾರ ಕೂಲಿ ತುಂಬಾ ಜಾಸ್ತಿ. ಕೈಯಿಂದಲೇ ಹಾಕಬೇಕು....ತುಂಬಾ ಲುಕ್ಸಾನಾಗಿ ಬಿಡುತ್ತೆ."

ಈ ಶಬ್ದಗಳು ಎಲ್ಲರಿಗೂ ಹಲವಾರು ಬಾರಿ ಕೇಳಿ ಬಂದಿದ್ದುವು. ಅದಕ್ಕೆ ಬೆಲೆಯೇ ಇರಲಿಲ್ಲ. ಅಲ್ಲದೇ ಅವುಗಳನ್ನು ಕೇಳಿದರೆ ಬೇಸರ ಬರುತ್ತಿದ್ದಿತು. ಸಾಹುಕಾರರ ಮೌನವನ್ನು ನೋಡಿ ಪುನಃ ಚನ್ನಯ್ಯನೆಂದ, "ತಮ್ಮನ್ನೇ ನಂಬಿದ್ದೀನಿ ಸಾರ್....ಈ ಸಾರಿ ತಾವು ಹಾಗೆ ಮಾಡಿಬಿಟ್ಟರೆ ನಾನು ಹೇಳದೇ ಕೇಳದೆ ಈ ಊರುಬಿಟ್ಟು ಓಡಿಹೋಗಿ ಬಿಡುತೀನಿ...." ಈ ಮಾತುಗಳು ಸಾಹುಕಾರರ ಮೇಲೆ ಪರಿಣಾಮವನ್ನುಂಟುಮಾಡುತ್ತವೆಂದು ಚನ್ನಯ್ಯನಿಗೆ ಗೊತ್ತಿದ್ದಿತು. ಏಕೆಂದರೆ ಸಾಹುಕಾರರು ಅವನಲ್ಲದೇ ಬೇರೆ ಕಂಟ್ರಾಕ್ಟರು ಯಾರೂ ಇಷ್ಟೊಂದು ಅದಿರನ್ನು ತೆಗೆಯುವುದಿಲ್ಲವೆಂದು ಅರಿತಿದ್ದರು. ಶಾಂತಪ್ಪನೂ ಅವನ ಈ ಚಾತುರ್ಯಕ್ಕೆ ಬೆರಗಾದ.

"ಹಾಳಾಗಿ ಹೋಗು....ನಿನ್ನಿಂದ ನಮಗೆ ಏನೇನು ತೊಂದರೆ ಆಗುತ್ತೋ ಆಗಲಿ...ನೀನು ನಿನ್ನ ದುಡ್ಡು ಮಾತ್ರ ನೋಡಿಕೊಳ್ಳೋನೇ ಹೊರತು ನಮ್ಮ

ಸುಖದುಃಖ ನಿನಗೆ ಬೇಕಾಗಿಲ್ಲ," ಎಂದು ಹಣವನ್ನೆಣಿಸಿ ಅವನ ಮುಂದಿಡ ತೊಡಗಿದರು. ಆದರೆ ಚನ್ನಯ್ಯನು ಈ ಮಾತು ಕೇಳಿದ ತಕ್ಷಣ ಹೇಳಿದ,

"ಛೆ !...ಛೆ !...ತಾವು ಹಾಗೆ ಹೇಳಬೇಡಿ ದೊರೆ...ತಾವು ಸುಖವಾಗಿದ್ದರಲ್ವಾ ನಾವೂ ನಾಲಕ್ಕು ಕಾಸು ವಾರವಾರವೂ ಸಂಪಾದಿಸಿಕೊಳ್ಳೋದು...? ತಾವು ಬೇಡವೆಂದರೆ ಈ ಹಣವೇ ಬೇಡ ನಂಗೆ" ಎಂದು ಕೈಕಟ್ಟಿಕೊಂಡು ನಿಂತು ಬಿಟ್ಟ.

"ಹೋಗಲಿ ತಗೋ....ತಗೋ....ನನಗೂ ನಿನಗೂ ಬ್ರಹ್ಮಗಂಟು, " ಎಂದರು ಸಾಹುಕಾರರು ನಗುತ್ತಾ. ಅವರ ಮಾತು ಕೇಳಿ ಎಲ್ಲರೂ ಖೊಳ್ಳನೆ ನಕ್ಕರು. ಸಾಹುಕಾರರ ಮಾತೇ ಸರಿ ಎಂದೂ ಹೊಗಳಿದರು.

ಈ ಶ್ರೀಮಂತ ಪೂಜೆಯನ್ನು ನೋಡಿ ಶಾಂತಪ್ಪನಿಗೆ ಮನಸ್ಸಿನಲ್ಲಿಯೇ ನಗೆ ಬಂದಿತು. ದೊಡ್ಡವರ ಬಾಲಹಿಡಿದು ಹೋಗುವುದೇ ನಮ್ಮವರ ಪರಿಪಾಠ.

ಹಣವನ್ನೆಣಿಸಿಕೊಟ್ಟ ನಂತರ, ಅದನ್ನು ತೆಗೆದುಕೊಂಡು ಕಂಟ್ರಾಕ್ಟರುಗಳೆಲ್ಲರೂ ಹೊರಟು ಹೋದ ನಂತರ ಸಾಹುಕಾರರು ಶಾಂತಪ್ಪನನು ಕೇಳಿದರು,

"ಏನು ಶಾಂತಪ್ಪನೋರೆ...ಹೇಗಿದೆ ಕೆಲಸ...ಊಟಕ್ಕೆ ಏನು ಮಾಡಿದೀರಿ...ಆರೋಗ್ಯ ಹೇಗಿದೆ ?"

"ಎಲ್ಲಾ ಸರಿಯಾಗಿದೆ ಸಾರ್."

"ನಿಮ್ಮ ಅಡಿಗೆಯವರು ಯಾರಾದರೂ ದೊರಕಿದರೇನು ?"

"ಇನ್ನೂ ಇಲ್ಲ ಸಾರ್, ಇವತ್ತು ಬೆಂಗಳೂರಿಗೆ ಕಾಗದ ಬರೀತೀನಿ... ಒಂದು ವಾರದಲ್ಲಿ ಯಾರಾದರೂ ಬರುತ್ತಾರೆ."

"ಹಾಗಾದರೆ ಸರಿ...ಆ ಹೊಸ ಜಾಗದಲ್ಲಿ ಏನಾದರೂ ಉತ್ತಮವಾಗಿದೆಯೇ ?"

ಶಾಂತಪ್ಪನಿಗೆ ಮೈ ಬೆವತಂತಾಯಿತು. ಹೇಳುವುದೇನು ಈಗ ? ಆದರೂ ತಕ್ಷಣ ಹೇಳಿಬಿಟ್ಟ.

"ಸ್ವಲ್ಪ ಪರವಾಗಿಲ್ಲ ಸಾರ್...ಇನ್ನೂ ಒಂದು ವಾರ ಕೆಲಸಮಾಡಿ ಆಳ ಇಳಿಸಿದರೆ ಒಳ್ಳೇ ಇದಿರು ಸಿಕ್ಕುತ್ತೆ."

"ಹಾಗಾದರೆ ತುಂಬಾ ಸಂತೋಷ, ಕೆಲಸಮಾಡಿಸಿ...ನಮ್ಮ ಗೋಪಾಲಯ್ಯನೂ ಇರ್ತಾನೆ ಅವನೂ ಸ್ವಲ್ಪ ಸಹಾಯ ಮಾಡ್ತಾನೆ...ಏನು ಗೋಪಾಲಯ್ಯ ಇರ್ತೀಯೇನು ?" ಎಂದು ಗೋಪಾಲಯ್ಯನತ್ತ ತಿರುಗಿ ಕೇಳಿದರು.

"ಓಹೋ...ಖಂಡಿತಾ ಇರ್ತೀನಿ ಸಾರ್...ನಿಮ್ಮ ಮಾತಿಗೆ ಎದುರು ಹೇಳ್ತೀನೇ ನಾನು? ಅದೂ ಅಲ್ಲದೆ ನಮ್ಮ ಶಾಂತಪ್ಪನೋರನ್ನ ಜೇರೆ ತಯಾರು ಮಾಡಬೇಕು..." ಎಂದು ಹೇಳಿದ ಗೋಪಾಲಯ್ಯ.

"ಸರಿ ಹಾಗಾದ್ರೆ ನೀನು ಇಲ್ಲೇ ಇರು...ನಾವು ಹೊರಡೋಣವೆ ಸುಬ್ಬಣ್ಣನೋರೆ ?" ಎನ್ನುತ್ತಾ ಸಾಹುಕಾರರು ಮೇಲೆದ್ದರು. ಅಷ್ಟರಲ್ಲಿಯೇ ಮೂಲೆಯಲ್ಲಿ ನಿಂತಿದ್ದ ಮಾಣಿಕ್ಯಂ ಮುಂದೆ ಬಂದು ಸಾಹುಕಾರರ ಬಳಿ ನಿಂತು ಏನನ್ನೋ ಕೇಳತೊಡಗಿದ.

"ಏನು ಮಾಣಿಕ್ಯಂ...ಮೂಲೆ ಸೇರಿಬಿಟ್ಟಿದ್ದರಲ್ಲಾ...ಏನು ಜೇಕು ?" ಎಂದರು ಸಾಹುಕಾರರು.

"ಒಂದು ಹತ್ತು ರೂಪಾಯಿ ಜೇಕಾಗಿತ್ತು ಸಾರ್..."

"ಹತ್ತು ರೂಪಾಯಿ ಜೇಕೆ ?..." ಎಂದು ತಮ್ಮ ಪುಸ್ತಕದಲ್ಲಿ ಬರೆದುಕೊಂಡು ಹತ್ತು ರೂಪಾಯಿ ನೋಟೊಂದನ್ನು ತೆಗೆದುಕೊಟ್ಟ ನಂತರ ಹೇಳಿದರು, "ನೀವು ಹೀಗೆ ವಾರವಾರವೂ ತೆಗೆದುಕೊಂಡ್ರೆ ನಮಗೆ ತೊಂದರೆ. ಒಂದು ತಿಂಗಳಿಗೆ ಒಂದು ಸಾರಿ ತೆಗೆದುಕೊಂಡುಬಿಡಿ..."

"ನಾನು ಹೊರಡ್ತೇನೆ...ಇನ್ನು ಮಠಕ್ಕೆ ಜೇರೆ ಹೋಗಬೇಕು...ನಿಮಗೆ ಏನಾದ್ರೂ ಹಣ ಬೇಕೆ ಶಾಂತಪ್ಪನೋರೆ?" ಎಂದು ಕೇಳಿದರು ಸಾಹುಕಾರರು ಕಾರಿನಲ್ಲಿ ಕೂರುತ್ತಾ.

"ಜೇಡಿ ಸಾರ್..." ಎಂದು ಶಾಂತಪ್ಪನೆಂದ.

ಆಗ ತಾನೇ ತೊಳೆದು ಶುಭ್ರಪಡಿಸಿದ್ದ ಕಾರು ಪುನಃ ಧೂಳನ್ನು ಮೈಗಂಟಿಸಿಕೊಳ್ಳುತ್ತಾ ಮುಂದ ಹೊರಟಿತು.

## ೨೨

## ಗೋಪಾಲಯ್ಯ ಸೀಚನೆ ?

ಮಾರನೆಯ ದಿನ ಬೆಳಿಗ್ಗೆ ಶಾಂತಪ್ಪ, ಗೋಪಾಲಯ್ಯ ಗಣಿಯ ರಸ್ತೆಯಲ್ಲಿ ನಡೆದುಕೊಂಡು ಹೋಗುತ್ತಿದ್ದರು. ಖಾನನು ದೇಹಸ್ಥಿತಿ ಸರಿಯಿಲ್ಲವೆಂದು ಹಳ್ಳಿಯಲ್ಲೇ ಉಳಿದಿದ್ದನು. ಅವರ ಸಂಗಡ ಗಣಿಯ ಕೆಲಸಗಾರರೂ ಹೋಗುತ್ತಿದ್ದರು. ಜೊತೆಯಲ್ಲೇ ಶಾಂತಪ್ಪನೂ ಇದ್ದುದರಿಂದ ಅವರೆಲ್ಲರೂ

ಮಾತನಾಡದೇ ನಡೆಯುತ್ತಿದ್ದರು. ಗೋಪಾಲಯ್ಯನು ಬೀಡಿಯೊಂದನ್ನು ಸೇದುತ್ತಾ ಮಾತಿಗೆ ಪ್ರಾರಂಭಿಸಿದ.

"ಹೇಗಿದೆ ಸಾರ್ ಹೊಸ ಜಾಗ?"

"ಚೆನ್ನಾಗಿದೆ."

"ಗಣಿ ಕೆಲಸ ಕಷ್ಟ ಸಾರ್...ಬಿಸಿಲಿನಲ್ಲಿ ನಿಂತು ಕೆಲಸ ಮಾಡಿಸೋದು ನಿಮ್ಮಂತಹವರಿಗೆ ತೊಂದರೆ."

"ನಮ್ಮಂತಹವರಿಂದ ಹಿಡಿದು ಮಾಲೀಕರವರೇನು...ಕೆಲಸ ಯಾವುದಾದರೂ ಕಷ್ಟವೇ ಅಲ್ಲವೇ!"

"ಅದು ಸರೀನ್ನಿ...ಆದರೂ ನಾವು ಹೊಂದಿಕೊಳ್ಳೋದು ಕಷ್ಟ."

"ನೋಡಿ ಗೋಪಾಲಯ್ಯನೋರೆ ನಮ್ಮ ಕಾಲೇಜು ಹುಡುಗರ ಹಣೇ ಬರಹವೇ ಹೀಗೆ.. ಓದೋವಾಗ ಏನೇನೋ ಕನಸು ಕಟ್ಟಿಕೊಂಡಿರುತ್ತಾರೆ.... ತಾನು ಮಂತ್ರಿಯೇ ಆಗುತ್ತೀನೀಂತ ಭಾವಿಸಿರ್ತಾರೆ...ಆದರೆ ಎಲ್ಲರೂ ಮಂತ್ರಿಗಳಾದರೆ ಪ್ರಜೆಗಳಾಗೋರು ಯಾರು!" ಶಾಂತಪ್ಪ ನಗುತ್ತಾ ಹೇಳಿದ.

"ನೀವು ಸರಿಯಾದ ಮಾತು ಹೇಳಿದ್ರಿ..."

"ಏನೋ ಒಂದು ನಾಲ್ಕಾರು ದಿನ ಮೊದಲು ಕಷ್ಟವಾಗುತ್ತೆ...ಅನುಭವವಾದ ನಂತರ ಸರಿಹೋಗುತ್ತೆ."

"ಹೌದು...ಹೌದು ಸಾರ್..." ಗೋಪಾಲಯ್ಯನೆಂದ. ಒಂದೆರಡು ನಿಮಿಷ ಮೌನವಾಗಿ ನಡೆದ ನಂತರ ಪುನಃ ಕೇಳಿದ, "ಏನ್ಸಾರ್...ಮಾಣಿಕ್ಯಂ ಹೇಗೆ?"

"ಒಳ್ಳೇ ಮನುಷ್ಯ ಪಾಪ.." ಶಾಂತಪ್ಪನೆಂದ. ಆದರೆ ಮನಸ್ಸಿನಲ್ಲೇ ಗೋಪಾಲಯ್ಯನ ಈ ಕುತೂಹಲದ ಬಗ್ಗೆ ಶಂಕೆಗೊಂಡ.

"ಏನೋ ಸಾರ್...ನೀವು ನೋಡಿದ್ರೆ ಪ್ರಪಂಚದ ಅನುಭವವೇ ಇಲ್ಲದವರ ಹಾಗೆ ಕಾಣ್ತೀರಿ. ಅವನ ವಿಷಯ ಜನ ಏನೇನೋ ಹೇಳ್ತಾರೆ."

"ಏನೋ ನನಗೆ ಗೊತ್ತಿಲ್ಲವಲ್ಲ ಗೋಪಾಲಯ್ಯನೋರೆ...ಏನು ಅದು ನಿಮ್ಮವರೆಗೂ ಬಂದಿರೋ ವಿಷಯ?"

"ನನ್ನವರೆಗೇ ಏನು ಸಾರ್, ಸಾಹುಕಾರ್ರವರೆಗೂ ಬಂದಿತ್ತು. ನಿನ್ನೆ ಸುಬ್ಬಣ್ಣನೋರನ್ನ ಅವರು ಕೋಣಸಂದ್ರದಲ್ಲಿ ಕೇಳಿಯೇ ಬಿಟ್ರು...ಆದರೆ ಸುಬ್ಬಣ್ಣನೋರು ಮಾಣಿಕ್ಯಂ ಅಂಥವನಲ್ಲ ಒಳ್ಳೆಯವನೂಂತ ಹೇಳಿದ್ರು."

"ಅಂಥದ್ದೇನು ನನಗೆ ಕಾಣಲಿಲ್ಲವಲ್ಲ ಗೋಪಾಲಯ್ಯನೋರೆ...."

"ಅದೆಲ್ಲ ನಿಮಗೇ ಗೊತ್ತಾಗುತ್ತೆ....ಇನ್ನೊಂದು ವಿಷಯ ಸಾರ್, ದುಡ್ಡಿಲ್ಲಾಂತ ಸಾವಕಾರ್‍ರ ಹತ್ತಿರ ಹತ್ತು ರೂಪಾಯಿ ತಗೊಂಡನಲ್ಲಾ ನಿನ್ನೆ' ಅವನ ಊರಿಗೆ ನೂರು ರೂಪಾಯಿ ಮನಿಯಾರ್ಡರು ಮಾಡಿದನಲ್ಲ ಎಲ್ಲಿಂದ ಬಂತು ಈ ದುಡ್ಡು ?"

"ಶಾಂತಪ್ಪನಿಗೆ ಗೋಪಾಲಯ್ಯನ ಈ ಮಾತುಗಳನ್ನು ಕೇಳಿ ಆಶ್ಚರ್ಯ ವಾಯ್ತಲ್ಲದೇ ಅವನ ಚುರುಕು ಬುದ್ಧಿಗೆ ಮನಸ್ಸಿನಲ್ಲಿಯೇ ತಲೆದೂಗಿದ. ತಾನು ಹಿಂದಿನ ದಿನ ನೋಡಿದ್ದ ದೃಶ್ಯ ನೆನಪಾಯಿತು ಶಾಂತಪ್ಪನಿಗೆ. ಸಾಹುಕಾರರು ಹೊರಟು ಹೋಗಿ, ಬಟವಾಡೆಯೆಲ್ಲವೂ ಮುಗಿದನಂತರ ಮಧ್ಯಾಹ್ನ ಚನ್ನಯ್ಯ ಬಂದಿದ್ದ. ಶಾಂತಪ್ಪ ಊಟ ಮಾಡಿ ಮಲಗಿ ಕೊಂಡಿದ್ದ. ನಿ್ರೆಯಿನ್ನೂ ಬಂದಿರಲಿಲ್ಲ. ಚನ್ನಯ್ಯನು ಬಂದು ಮೆಲ್ಲನೆ ಮಾಣಿಕ್ಯಮ್‌ನನ್ನು ಹೊರಗೆ ಕರೆದುದು ಕೇಳಿ ಶಾಂತಪ್ಪನಿಗೆ ಕುತೂಹಲ ಉದಯವಾಗಿ ಅವನ ಕಿವಿಗಳು ಚುರುಕಾದುವು, "ಇಗೋ ನೂರು ರೂಪಾಯಿ ಇದೆ. ಬೇಗ ತಗೋಳಿ....ಮೇನೇಜರು ಮಲಗಿದಾರೆ ?" ಎಂದು ಚನ್ನಯ್ಯ ಹೇಳಿದ್ದ.

"ಹೂ ಮಲಗಿದಾರೆ....ನೀನು ಈಗ ಹೊರಟು ಹೋಗು....ನೀನು ಬಂದಿರಲಿಲ್ಲಾಂತ ಹೇಳಿಬಿಡ್ತೀನಿ" ಎಂದ ಮಾಣಿಕ್ಯಮ್. ನೋಟುಗಳನ್ನು ಮಡಿಸಿಕೊಂಡ ಶಬ್ದ ಕೇಳಿಬಂದಿತು ಶಾಂತಪ್ಪನಿಗೆ. ಒಂದೆರಡು ನಿಮಿಷಗಳ ನಂತರ ಬಳೆಗಳ ಶಬ್ದ ಕೇಳಿಬಂದುವು. ಅದರೊಡನೆಯೇ ಮಾಣಿಕ್ಯಮ್ ಮೆಲ್ಲನೆ ಹೇಳುತ್ತಿದ್ದ, "ರತ್ನಮ್ಮ ಈ ಹದಿನೈದು ರೂಪಾಯಿ ತಗೋ!," ಎಂದು.

"ಇವತ್ತು ತೋಟಕ್ಕೆ ಬರೋಕಿಲ್ವ ನೀವು?....ಎಳನೀರು ಕುಡಿಯೋಕೆ" ರತ್ನಮ್ಮ ಕೇಳಿದಳು. ಶಾಂತಪ್ಪ ಕಣ್ತೆರೆದು ನೋಡುತ್ತಿದ್ದ. ರತ್ನಮ್ಮ ಹುಸಿನಗೆ ನಗುತ್ತಿದ್ದಳು. ಒಂದು ಕ್ಷಣದ ನಂತರ, "ಯಾರಾದರೂ ನೋಡುತಾರೆ" ಎಂದು ಹೊರಟುಹೋದಳು. ಮಾಣಿಕ್ಯಮ್ ಒಳಬಂದು ಸಿಗರೇಟು ಹಚ್ಚಿಕೊಂಡು ಕುಳಿತ.

ಇದನ್ನು ನೆನೆದು ಶಾಂತಪ್ಪನಿಗೆ ಬೇಸರವುಕ್ಕಿಬಂದಿತು. ಕಂಪೆನಿಯ ಕೆಲಸಗಾರರು, ಅದೂ ಸಹ ಕಂಪೆನಿಯ ಬಿಡಾರದಲ್ಲೇ ಇಂತಹ ಹೀನ

ನಡತೆ ತೋರುವುದೇ? ಮಾಣಿಕ್ಯಮ್ ತನ್ನ ಕೈಕೆಳಗಿನವನಾದರೂ ತೀರ ಕೀಳು ದರ್ಜೆಯ ಕೆಲಸಗಾರನಲ್ಲ, ಅವನಿಗೂ ಒಂದು ಜವಾಬ್ದಾರಿಯುತವಾದ ಸ್ಥಾನವಿದೆಯಾದ್ದರಿಂದ ಅವನನ್ನು ಬಹಿರಂಗವಾಗಿ ಖಂಡಿಸುವಂತಿಲ್ಲ.

"ನನಗೇನೋ ಅವನ ವಿಷಯದಲ್ಲಿ ಅನುಮಾನ" ಎಂದು ಗೋಪಾಲಯ್ಯ ಸುಮ್ಮನಾದ. ಶಾಂತಪ್ಪನು ಏನೊಂದೂ ಉತ್ತರವನ್ನು ಕೊಡದೇ ಮುಂದು ವರೆದ; ಅವನಿಗೆ ಹೊಸಬನಾದ ಗೋಪಾಲಯ್ಯನೊಡನೆ ಮಾತನಾಡಲಿಷ್ಟ ವಿರಲಿಲ್ಲ.

"ಒಂದು ರೀತಿಯಲ್ಲಿ ನೋಡಿದ್ರೆ ಈ ಕಾಲದಲ್ಲಿ ಅವನಂಥವರಿಗೇ ಏಳಿಗೆ", ಗೋಪಾಲಯ್ಯ ಪುನಃ ಹೇಳಿದ.

"ಅದೇಕೆ ಹಾಗೆ ಹೇಳ್ತೀರಿ?"

"ಹೌದು ಶಾಂತಪ್ಪನೋರೇ, ನೋಡಿ ನಾನು ವರ್ಷದಿಂದ ನಿಮ್ಮ ಸಾವಕಾರ್ರಿಗಾಗಿ ಎಷ್ಟೊಂದು ದುಡೀತಿದೀನಿ. ಗಣೇಲಿ ಒಂದು ಕೆಲಸ ಮಾಡಿಸ್ತೀನಿ....ರೈಲ್ವೆ ಸ್ಟೇಷನ್ನಲ್ಲಿ ಅದಿರು ಸಾಗಿಸೋದು, ಬೆಂಗಳೂರಿನಲ್ಲಿ ಬ್ರಾಡ್‌ಗೇಜ್ ವಾಗೀನಿಗೆ ಬದಲಾಯಿಸೋದು, ಸ್ಯಾಂಪಲ್ ತೆಗಿಯೋದು, ಮಾರಾಟ ಮಾಡಿಸೋದು, ಎಲ್ಲಾ ನೋಡಿಕೊಳ್ತೀನಿ....ಆದರೆ ನನಗೆ ಕೊಡಬೇಕಾದ ದುಡ್ಡಿನಲ್ಲಿ ಅರ್ಧಾನೂ ಕೊಡೋಲ್ಲ." ಗೋಪಾಲಯ್ಯ ನೊಂದು ನುಡಿದುದನ್ನು ಕೇಳಿ ಶಾಂತಪ್ಪನಿಗೆ ಆಶ್ಚರ್ಯವಾಯಿತು. ಈತನನ್ನು ಸಾಹುಕಾರರು ಎಷ್ಟೊಂದು ಹೊಗಳಿದ್ದರು, ಎಷ್ಟೊಂದು ಆತ್ಮೀಯತೆಯಿಂದ ಇವನ ವಿಷಯ ಮಾತನಾಡಿದ್ದರು, ಇವನಿಂದ ಎಷ್ಟೊಂದು ಉಪಕಾರ ಪಡೆದಿರುವುದಾಗಿ ಮಾತನಾಡಿದ್ದರು, ಆದರೆ ಈ ಹಣದ ಮಾತು ನಿಜವೆ? ಎಂದು ಶಾಂತಪ್ಪನೆಂದುಕೊಂಡ.

"ನಿಮ್ಮ ವಿಷಯ ತುಂಬಾ ಹೊಗಳಿದಾರೆ ಸಾವುಕಾರರು," ಶಾಂತಪ್ಪನೆಂದ.

"ಎಷ್ಟು ಹೊಗಳಿದರೇನು, ಈ ಗಣಿ ಮಾಲೀಕರೆಲ್ಲರ ಹಣೇಬರಹವೇ ಇಷ್ಟು. ಚೆನ್ನಾಗಿ ಹೊಗಳಿ ಕೆಲಸ ತೆಗೀತಾರೆ. ಒಂದು ಕಾಸು ಮಾತ್ರ ಬಿಚ್ಚೋದಿಲ್ಲ. ನನ್ನ ಹೆಂಡತಿ ಮಕ್ಕಳ ಗತಿಯೇನು? ಅವರು ಅಲ್ಲಿ ಉಪವಾಸವಿದ್ದರೆ ನಾನಿಲ್ಲಿ ಸಾವುಕಾರ್ರ ಕಾರಿನಲ್ಲಿ ಕೂತುಕೊಂಡು ಮಜಾ ಮಾಡ್ತೀರ್ತೀನಿ. ಅಷ್ಟೇಕೆ ನಿನ್ನೆ ಕೋಣಸಂದ್ರದಲ್ಲಿ ಸಾವಕಾರ್ರು ಕೊಡಿಸಿದ

ದೋಸೆ ತಿನ್ನೋವಾಗ ನನಗೆ ಅದು ಗಂಟಲಲ್ಲೇ ಇಳೀಲಿಲ್ಲ. ಯಾಕೆ ಗೊತ್ತೆ?....ಮೊನ್ನೆ ದಿನ ನನ್ನ ಹೆಂಡ್ತಿ ನಾನು ಬರೋವಾಗ ಹೇಳಿದ್ದು ನಾಳೇಗೆ ಅಕ್ಕಿ ಇಲ್ಲ ಅಂತ!"

ಗೋಪಾಲಯ್ಯನ ಈ ಮಾತು ಕೇಳಿ ಶಾಂತಪ್ಪನಿಗೆ ಸಂಕಟವಾಯಿತು. ಆ ಹೆಂಗಸು ಇಂದು ಉಪವಾಸವಿರಬಹುದೇ ಎಂದುಕೊಂಡು ಹೇಳಿದ,

"ನಿಮ್ಮಂಥ ತಿಳಿದವರಿಗೆ ಅನುಭವಸ್ಥರಿಗೇ ಹೀಗಾದರೆ ನಮ್ಮ ಗತಿಯೇನು ಗೋಪಾಲಯ್ಯನೋರೆ?"

"ನಾನಾದರೇನು ನೀವಾದರೇನು ಎಲ್ಲರೂ ಒಂದೆ. ನೀವಾದರೂ ವಿದ್ಯಾವಂತರು. ಸ್ವಲ್ಪ ದಿನ ಅನುಭವವಾದರೆ ಎಲ್ಲಾದರೂ ಕೆಲಸ ನೋಡಿಕೊಳ್ತೀರಿ. ನಿಮಗೆ ಸರ್ಕಾರದಲ್ಲಾದರೂ ಕೆಲಸ ಸಿಕ್ಕುತ್ತೆ, ಸಾವಕಾರೀಲೂ ಸಿಕ್ಕುತ್ತೆ. ಆದರೆ ನಮ್ಮಂಥವರಿಗೇ ತೊಂದರೆ. ಆದ್ದರಿಂದಲೇ ಈ ಸಾವಕಾರ್ರನ್ನು ಅನುಸರಿಸಿಕೊಂಡಿದೀವಿ" ಎಂದ ಗೋಪಾಲಯ್ಯನ ಮಾತು ಕೇಳಿ ಶಾಂತಪ್ಪನಿಗೆ ಆಶ್ಚರ್ಯವಾಯಿತು. ಏಕೆಂದರೆ ಗೋಪಾಲಯ್ಯ ಗಣಿ ಕಾರ್ಯದಲ್ಲಿ ಪರಿಣತನೆಂದು ಮೊದಲೇ ತಿಳಿದಿದ್ದ ಅವನು. ಅವನು ವಿದ್ಯಾವಂತ ಅನುಭವಸ್ಥ ಅಂತಹವನು ಈ ತೆರನಾಗಿ ಪರಿತಪಿಸುವುದೆಂದರೇನು?

"ಯಾಕೆ ನೀವು ಇಂಜನಿಯರಲ್ಲವೆ ಗೋಪಾಲಯ್ಯನೋರೆ? ಸರ್ಕಾರೀ ಕೆಲಸವಲ್ಲದಿದ್ದರೆ ಯಾರಾದರೂ ಸಾಹುಕಾರರು, ಕಂಪೆನಿಯವರು ನಿಮ್ಮನ್ನು ತೆಗೆದುಕೊಳ್ತಾರೆ...."

ಗೋಪಾಲಯ್ಯ ಗಹಗಹಿಸಿ ನಕ್ಕುಬಿಟ್ಟ. ಮತ್ತೊಂದು ಬೀಡೀಗೆ ಬೆಂಕಿ ತಗಲಿಸುತ್ತಾ "ಕೇಳಿದ ಹಾಗಾದರೆ ನಿಮಗೆ ನಮ್ಮ ಗಣಿಗಳ ವಿಷಯವೇ ಗೊತ್ತಿಲ್ಲ ಶಾಂತಪ್ಪನೋರೆ....ನಿಮಗೆ ಈ ರಹಸ್ಯಗಳನ್ನೆಲ್ಲಾ ಹೇಳಬಾರದು. ಆದರೆ ನಿಮ್ಮನ್ನ ಕಂಡರೆ ಏನೋ ಒಂದು ರೀತಿ ವಿಶ್ವಾಸ ಹುಟ್ಟುತ್ತಿದೆ ನನ್ನಲ್ಲಿ. ಹೇಳ್ತೀನೆ ಕೇಳಿ...." ಎಂದು ಒಂದು ಬಾರಿ ಬೀಡಿಯನ್ನೆಳೆದು ಅದನ್ನು ಅರ್ಧದವರೆಗೂ ಬೂದಿ ಮಾಡಿ, ನಂತರ ರೈಲ್ವೆ ಯಂತ್ರದಿಂದ ಹೊಗೆಯುಗುಳಿದಂತೆ ಹೊಗೆಯುಗುಳಿ ಹೇಳಿದ,

"ನಾನೂ ಒಬ್ಬ ಗಣಿ ಕೆಲಸದಲ್ಲಿ ಇಂಜಿನೀರೂಂತ ಹೇಳಿಕೊಂಡಿದ್ದೇನೆ. ನನ್ನ ಹಾಗೇ ಇನ್ನೂ ಕೆಲವರು ಇದ್ದಾರೆ ಈ ಗಣಿ ಮಾಲೀಕರ ಹತ್ತಿರ. ನಾವೆಲ್ಲ ಯಾವ ಕಾಲೇಜಿನಲ್ಲೂ ಓದಿದವರಲ್ಲ. ನಮಗೆ ನಾಲ್ಕಕ್ಷರ

ಇಂಗ್ಲೀಷು ಸರಿಯಾಗಿ ಬರೋದಿಲ್ಲ....ನಮ್ಮದೆಲ್ಲಾ ಈ ಗಣಿಗಳಲ್ಲಿ ಹತ್ತಾರು ವರ್ಷಗಳ ಅನುಭವ. ಆದ್ದರಿಂದ ಈ ಗಣಿಗಳ ಕೆಲಸದ ವಿಷಯ ಚೆನ್ನಾಗಿ ತಿಳಿದುಕೊಂಡಿದ್ದೀವಿ. ಇಂಜಿನೀರುಗಳೂಂತ ಹೇಳಿಕೊಳ್ತೀವಿ....ಪ್ರತಿಯೊಂದು ಗಣೀಲೂ ಇಂಜಿನೀರುಗಳನ್ನೂ, ಜೀಯಾಲಜಿಸ್ಟುಗಳನ್ನೂ ಇಟ್ಟಿರಬೇಕು ಅಂತ ಸರ್ಕಾರದ ಹುಕುಂ ಇದೆ. ಆದ್ದರಿಂದ ನಮ್ಮಂತಹವರನ್ನ ಇಂಜಿನೀರು ಗಳು ಅಂತ ಕರೆಯೋದು...."

ಈ ಮಾತುಗಳನ್ನು ಕೇಳಿ ಶಾಂತಪ್ಪನಿಗೆ ಅಚ್ಚರಿಯಾಯ್ತು. ಇಂತಹ ಜೋಲು ಕೋಟಿನ ವ್ಯಕ್ತಿಗಳನ್ನು ನಿಪುಣರೆಂದು ಸರ್ಕಾರದ ಅಧಿಕಾರಿಗಳು ತಾನೇ ಹೇಗೆ ಒಪ್ಪಿಕೊಳ್ತಾರೆ, ನಾಲ್ಕಾರು ಇಂಗ್ಲೀಷ್ ಪದಗಳನ್ನು ಮಾತ ನಾಡಲು ಬಾರದ ಇಂತಹವರು ತಾನೇ ಆ ಅಧಿಕಾರಿಯ ಮುಂದೆ ಎಂತಹ ಧೈರ್ಯದಿಂದ ಇಂತಹ ಸುಳ್ಳು ಹೇಗೆ ಹೇಳುವರು! ಇದು ಅಪರಾದ ವಲ್ಲವೇ?....ಇದೆಂತಹ ವಿಚಿತ್ರ ವ್ಯಾಪಾರ? ಶಾಂತಪ್ಪನ ಮನಸ್ಸಿನಲ್ಲಿ ಈ ಭಾವನೆಗಳ ತೆರೆಯೇಳುತ್ತಿದ್ದಾಗ ಗೋಪಾಲಯ್ಯ ಪುನಃ ಹೇಳಿದ,

"ನಿಮಗೆ ಆಶ್ಚರ್ಯವಾಗಭೌದು, ಇನ್‌ಸ್ಪೆಕ್ಟರು ಬಂದಾಗ ನಮ್ಮಂಥ ವರೆಲ್ಲ ಇಂಜಿನೀರೂಂತ ಹೇಗೆ ಕೇಳ್ತೀವೀಂತ....ಅವರು ಬಂದಾಗ ಸೂಟು ಹಾಕಿಕೊಂಡಿರೋರು ಯಾರಾದರೂ ಒಬ್ಬರನ್ನ ಇವರೇ ಇಂಜಿನೀರೂಂತ ತೋರಿಸಿಬಿಡ್ತಾರೆ. ಅವರು ನಾಲ್ಕಾರು ಅಕ್ಷರ ಇಂಗ್ಲೀಷಿನಲ್ಲಿ ಮಾತಾಡಿ ಬಿಡ್ತಾರೆ ಸರಿಯಾಗಿಬಿಡುತ್ತೆ...."

"ಅದು ಹೇಗಾಗುತ್ತೆ ಗೋಪಾಲಯ್ಯನೋರೆ......ಯಾವ ಕಾಲೇಜಿನಲ್ಲಿ ಓದಿರೋನು ಇವನೂಂತ ಕೇಳೋದಿಲ್ಲವೆ....ಕೆಲಸಕ್ಕೆ ಸಂಬಂಧಪಟ್ಟ ಪ್ರಶ್ನೆ ಕೇಳೋದಿಲ್ಲವೆ....ಆ ಅಧಿಕಾರಿಗಳಿಗೆ ಯಾವ ಅನುಮಾನವು ಬಂದಿದ್ದರೂ ಸಹ ಕಾಲೇಜಿನಲ್ಲಿ ಇವರ ಹೆಸರನ್ನಾದರೂ ನೋಡೋದಿಲ್ಲವೆ?......ಸರ್ಕಾರದವರು ಅಂಥ ಗುಗ್ಗುಗಳೇ?" ಶಾಂತಪ್ಪ ಏನೂ ಅರ್ಥವಾಗದೇ ಕೇಳಿದ.

"ಇದು ನಿಮಗಿನ್ನೂ ಅರ್ಥವಾಗೋಲ್ಲ ಸಾರ್...ಯಾವ ಅಧಿಕಾರಿ ಬಂದರೇನು. ಅವನ ಕೈ ಬೆಚ್ಚಗೆ ಮಾಡಿಬಿಟ್ಟರೆ ಯಾವ ಅನುಮಾನವೂ ಬರೋಲ್ಲ..ಆಗ ಎಲ್ಲ ಸರಿಯಾಗಿಬಿಡುತ್ತೆ" ಎಂದು ಗೋಪಾಲಯ್ಯ ಕೊನೆಯ ಬಾರಿ ಬೀಡಿಯನ್ನು ಸೇದಿ ಅದನ್ನು ಬಿಸುಟ. ಆ ಬೀಡಿಯ ಬೆಂಕಿಯು ಬಿದ್ದೆಡೆ ಬೆಳೆದಿದ್ದ ಒಣಹುಲ್ಲುಗಳು ತಕ್ಷಣ ಹೊಗೆಯಾಗತೊಡಗಿದುವು!

ಆ ವೇಳೆಗಾಗಲೇ ಅವರು ಗಣಿಯ ಬಳಿ ಬಂದಿದ್ದರು. ಅವರು ಬಂದುದರಿಂದ ಅಲ್ಲಿನ ವಾತಾವರಣ ಗಂಭೀರವಾಯಿತು. ಕೆಲಸಗಾರರೆಲ್ಲರೂ ತಮ್ಮ ತಮ್ಮ ಕೆಲಸದಲ್ಲಿ ತೊಡಗಿದರು. ಮೇಸ್ತ್ರಿಗಳು ಕೂಲಿಗಾರರಿಗೆ ಆಗೊಮ್ಮೆ ಈಗೊಮ್ಮೆ ಕೆಲಸಗಾರರಿಗೆ ಏನಾದರೂ ಹೇಳುತ್ತಿದ್ದರು. ಚನ್ನಯ್ಯನೂ ಸಹ ಹೆಣ್ಣಾಳುಗಳು ಅದಿರನ್ನು ಒಡೆಯುವ ತಾಣದಲ್ಲಿ ಕುಳಿತು ಕಲ್ಮಶವಾದ ಅದಿರನ್ನು ಒಡೆದು ಉತ್ತಮವಾದ ಮ್ಯಾಂಗನೀಸ್ ಅದಿರನ್ನು ಬೇರ್ಪಡಿಸಲು ಹೇಳುತ್ತಿದ್ದ. ಗೋಪಾಲಯ್ಯ ಇದೆಲ್ಲವನ್ನೂ ನೋಡಿದ ನಂತರ ಶಾಂತಪ್ಪನಿಗೆ ಹೇಳಿದ,

"ಪರವಾಗಿಲ್ಲರಪ್ಪಾ ನೀವು....ಇಷ್ಟೊಂದು ಆಳುಗಳನ್ನು ಹಿಡಿತದಲ್ಲಿಟ್ಟು ಕೊಂಡಿದ್ದೀರಿ..." ಎಂದು ತನ್ನ ಬಾಯಲ್ಲಿದ್ದ ನಾಲ್ಕಾರು ಹಲ್ಲುಗಳನ್ನು ತೋರಿಸಿ ನಕ್ಕ.

ಶಾಂತಪ್ಪ ಹೊಸ ಗಣಿಯೊಳಗಿಳಿದ. ಅವನೊಡನೆ ಗೋಪಾಲಯ್ಯನೂ ಇಳಿದು ಒಳಗಿನ ಕೆಲಸಗಳನ್ನು ನೋಡತೊಡಗಿದ. ಗೋಪಾಲಯ್ಯ ಅಲ್ಲಲ್ಲೇ ಕುಳಿತು ನೆಲದ ಮೇಲೆ ಕಂಡುಬಂದ ಅದಿರನ್ನು ಒಡೆದು ನೋಡತೊಡಗಿದ, ಶಾಂತಪ್ಪನು ಇದೆಲ್ಲವನ್ನೂ ಗಮನಿಸುತ್ತಿದ್ದ. ಗೋಪಾಲಯ್ಯನ ಅಭಿಪ್ರಾಯ ಹೇಗೆ ಹೊರಬೀಳುವುದೋ ಎಂದವನಿಗೆ ಕುತೂಹಲವಾಗಿದ್ದಿತು.

ಗಣಿಯಿಂದ ಮೇಲೆ ಬರುತ್ತಾ ಗೋಪಾಲಯ್ಯನೆಂದ, "ಏನು ಸಾರ್ ಈ ಹೊಸ ಜಾಗದ ವಿಷಯದಲ್ಲಿ ನಿಮಗೆ ಏನನ್ನಿಸುತ್ತೆ ?"

"ನನಗೇನೂ ಗೊತ್ತಾಗೋಲ್ಲ ನೀವೇ ಹೇಳಿಬಿಡಿ" ಶಾಂತಪ್ಪ ಸ್ಪಷ್ಟವಾಗಿಯೇ ನುಡಿದ. ತನಗೆ ತಿಳಿಯದಿದ್ದರೂ, ಅನುಭವಸ್ಥನಾದ ಗೋಪಾಲಯ್ಯನೊಡನೆ ಹೀಗೆ ಮಾತನಾಡಿದರೆ ತಪ್ಪೇನಿಲ್ಲವೆನ್ನಿಸಿದ್ದಿತವನಿಗೆ.

"ಇದು ಇನ್ನೂ ಹತ್ತು-ಇಪ್ಪತ್ತು ಅಡಿ ಆಳ ಇಳಿಸಬೇಕು.......ಒಳ್ಳೆಯ ಕಲ್ಲೇನೋ ಸಿಕ್ಕುತ್ತೆ.......ಆದರೆ ತುಂಬಾ ಖರ್ಚಾಗುತ್ತೆ" ಎಂದ ಗೋಪಲಯ್ಯ ಮೇಲೆ ಬರುತ್ತಾ.

"ಹಾಗಾದರೆ ?"

"ಹಾಗಾದ್ರೆ ಸಧ್ಯಕ್ಕೆ ನಿಲ್ಲಿಸಿಬಿಡೋದು. ಏಕೆಂದ್ರೆ ಇಷ್ಟೇ ಖರ್ಚಿನಲ್ಲಿ ಬೇರೆ ಕಡೆ ಒಂದು ಹೊಸ 'ಪಿಟ್ಟು' ಅಗೆಸಬಹುದು."

"ಸಾಹುಕಾರ್ರಿಗೆ ಏನು ಹೇಳೋಣ?" ಶಾಂತಪ್ಪನಿಗೆ ಭಯವಾಯಿತು; ಗಣಿಯಲ್ಲಿ ಅದು ಅವನ ಮೊದಲ ಸೋಲು.

"ನಾನು ಹೇಳ್ತೀನಿ ಸುಮ್ನೆ ಇರಿ ನೀವು........ನಾಳೆಯಿಂದ ಇಲ್ಲಿ ಕೆಲಸ ನಿಲ್ಲಿಸಿಬಿಡಿ" ಗೋಪಾಲಯ್ಯನೆಂದ. ಆ ವೇಳೆಗೆ ಚನ್ನಯ್ಯ ಎದುರು ಬಂದು ಇಬ್ಬರಿಗೂ ವಂದಿಸಿದ.

"ಓಹೋ....ಏನು ಚನ್ನಯ್ಯ......ಈವತ್ತು ಬೆಳಿಗ್ಗೇನೆ ಗಣೀಗೆ ಬಂದುಬಿಟ್ಟದ್ದೀ....ಯಾಕೆ?........" ಎಂದು ಮತ್ತೇನನ್ನೋ ಹೇಳುವುದರಲ್ಲಿದ್ದ ಗೋಪಾಲಯ್ಯನಿಗೆ, ಚನ್ನಯ್ಯ ಏನೋ ಕಣ್ಣು ಸಂಜ್ಞೆ ಮಾಡಿ ಸುಮ್ಮನಾಗಿಸಿದ. ಶಾಂತಪ್ಪ ಇದನ್ನು ಗಮನಿಸಿದ. ಗೋಪಾಲಯ್ಯ ಹೆಂಗಸರ ಸಾಲಿನತ್ತ ಕಾಲುಹಾಕುತ್ತಾ,

"ನಮ್ಮ ಅಮ್ಮಾವರುಗಳು ಏನು ಕೆಲಸ ಮಾಡ್ತಾರೆ ನೋಡೋಣ...." ಎನ್ನುತ್ತಾ ಒಂದು ಬೀಡಿ ಹಚ್ಚಿದ.

ಮೂವರೂ ಹೆಂಗಸರ ಬಳಿ ಬರುವಲ್ಲಿ ಎಲ್ಲರೂ ತಲೆ ತಗ್ಗಿಸಿಕೊಂಡು ಅದಿರನ್ನೊಡೆಯುತ್ತಿದ್ದರು. ಗೋಪಾಲಯ್ಯ ಒಬ್ಬಳ ಬಳಿ ಬಂದು ಕೇಳಿದ "ಏನು ದೇವೀರಮ್ಮ ಚನ್ನಾಗಿದ್ದೀಯ?"

"ಹೂನ್ರಪ್ಪ" ಅವಳು ತಲೆ ತಗ್ಗಿಸಿಕೊಂಡೇ ಉತ್ತರವಿತ್ತಳು.

"ಏನು ಮುದುಕಮ್ಮ ನೀನೂ ಹಿಂಗೇನ ಕೆಲಸ ಮಾಡೋದು.... ನೋಡು ಬೆಣಚುಕಲ್ಲು ಹಾಕಿಬಿಟ್ಟದ್ದೀಯಲ್ಲ......ನೀನೇ ಹೀಗಾದರೆ ಉಳಿದ ಹುಡುಗೀರನ್ನ ಕೇಳ್ಳೀಬೇಕಾಗಿಲ್ಲ........"ಎಲ್ಲರ ಮುಖದಲ್ಲೂ ಮುಗುಳುನಗೆ ಬೀರಿದರೂ, ಗಂಭೀರನಾಗಿ ನಿಂತಿದ್ದ ಶಾಂತಪ್ಪನಿಂದ ನಗೆ ಬರಲಿಲ್ಲ. ಆದರೂ ಶಾಂತಪ್ಪ ಮನಸ್ಸಿನೊಳಗೇ ನಕ್ಕ.

"ಏನವ್ವ ಸಿದ್ದಮ್ಮಾ ನೀನು ಮ್ಯಾಂಗನೀಸು ಗಣೀಲಿದೀಯೊ ಕಬ್ಬಿಣದ ಗಣೀಲೋ....?"

"ಮ್ಯಾಂಗ್ನೀಸು ಗಣೀಲಿ......" ಮೆಲ್ಲನೆ ನುಡಿದಳು ಮಧ್ಯವಯಸ್ಕಳಾದ ಸಿದ್ದಮ್ಮ.

"ಮತ್ತೆ ಯಾಕೆ ಕಬ್ಬಿಣ ತುಂಬಿದ್ದೀಯವ್ವ?" ಪುನಃ ಅದೇ ನಗೆ ಎಲ್ಲರ ಮುಖದಲ್ಲೂ ಬಿರಿಯಿತು.

"ಓ ಏನು ಪಾರ್ವತಮ್ಮ ಚೆನ್ನಾಗಿದ್ದೀಯ?.... ಈಗಲಾದರೂ ದಿವಸಕ್ಕೆ

ನಾಲ್ಕು ಬಾಂಡ್ಲೆ 'ಕಲ್ಲಾ'ದರೂ ಒಡೀತೀ ತಾನೇ? ಅಥವಾ ಅಲ್ಲಿ ಇಲ್ಲಿ ನೋಡ್ತಾ ಕಾಲಾ ಕಳೀತೀಯೋ?"

ಪಾರ್ವತಮ್ಮನ ಮುಖದಲ್ಲೂ ನಗೆಯುಕ್ಕಿತು. ಅವಳು ತಲೆಯೆತ್ತಿ ಶಾಂತಪ್ಪನನ್ನು ಒಮ್ಮೆ ಮೋಹಕವಾಗಿ ನೋಡಿ ಪುನಃ ತಲೆ ತಗ್ಗಿಸಿದಳು.

ಶಾಂತಪ್ಪನ ಎದೆಗೆ ಹೂವಿನ ಬಾಣವೊಂದನ್ನು ಇರಿದಂತಾಯ್ತು. ಚನ್ನಯ್ಯನು ಇದೆಲ್ಲವನ್ನೂ ನಗುತ್ತಾ ನೋಡುತ್ತಲೇ ಇದ್ದ. ಗೋಪಾಲಯ್ಯ ಪುನಃ ಪಾರ್ವತಮ್ಮನನ್ನು ಕೇಳಿದ,

"ಏನು ಮಾತಾಡು....ಎಷ್ಟು ಬಾಂಡ್ಲೆ ಒಡೀತಿ?"

ಪಾರ್ವತಮ್ಮ ತಲೆಯೆತ್ತಲಿಲ್ಲ. ಸುತ್ತಲೂ ಕುಳಿತಿದ್ದವರೆಲ್ಲ ತಲೆ ತಗ್ಗಿಸಿದರೂ ಓರೆಗಣ್ಣಿನಿಂದ ಇತ್ತಲೇ ನೋಡುತ್ತಿದ್ದರು. ಗೋಪಾಲಯ್ಯ ಚನ್ನಯ್ಯನನ್ನು ಕೇಳಿದ,

"ಏನು ಚನ್ನಯ್ಯ......ಸರಿಯಾಗಿ ಕೆಲಸ ಮಾಡ್ತಾಳೆ ತಾನೇ ಈಗ?"

"ಪರವಾಗಿಲ್ಲ ಸಾರ್" ಎಂದ ಚನ್ನಯ್ಯ ನಗುತ್ತಾ.

ಕೆಲಸಗಾರರೊಡನೆ ಈ ತೆರನಾದ ಸರಸವಾಡುವುದು ಶಾಂತಪ್ಪನಿಗೆ ಸರಿಯೆನಿಸಿರಲಿಲ್ಲ. ಆದರೂ ಗೋಪಾಲಯ್ಯನನ್ನು ಪ್ರತಿಭಟಿಸುವುದಾಗಲಿಲ್ಲ ಅವನಿಗೆ. ಹಳ್ಳಿಯ ಹೆಣ್ಣುಗಳು ನಯವಾಗಿ ಮಾತನಾಡುವ ಪಟ್ಟಣಿಗರೊಡನೆ ನಗುತ್ತಲೇ ಮಾತನಾಡುವರು, ರಸಿಕತನದ ಮಾತಿಗೆ ಮೋಹದ ಉತ್ತರವನ್ನು ಕೊಡುವರು, ಇನ್ನು ಮುಂದುವರಿದರೆ....! ಆದರೆ ಕಂಪೆನಿಯವರಾದ ತಾವು ಕೈಕೆಳಗೆ ದುಡಿಯುವ, ಈ ಕೂಲಿಗಾರರೊಡನೆ ಸರಸವಾಡುವುದೇ?....ಛೇ!....ಶಾಂತಪ್ಪ ನಿಧಾನವಾಗಿ ಆ ಸ್ಥಳದಿಂದ ಮುಂದೆ ನಡೆದು ಗಣಿಗಳತ್ತ ಹೊರಟ.

ಹತ್ತಾರು ನಿಮಿಷಗಳ ನಂತರ ಅವನು ಸುರಂಗದ ಬಳಿಗೆ ಬಂದಾಗ ಗೋಪಾಲಯ್ಯನೂ ಬಂದ.

"ಏನು ಸಾರ್ ನೀವು ಆಗ್ಲೆ ಬಂದುಬಿಟ್ಟಿರಿ?" ಎನ್ನುತ್ತಾ, ಇಬ್ಬರೂ ಸುರಂಗದ ಒಳಗೆ ಇಳಿದು ಅಲ್ಲಿ ಮೂರು - ನಾಲ್ಕು ಜನ ಕೆಲಸ ಮಾಡುತ್ತಿದ್ದುದನ್ನು ನೋಡಿಕೊಂಡು ಮೇಲೆ ಬಂದರು. ಶಾಂತಪ್ಪ ನಿಧಾನವಾಗಿ ಹೇಳಿದ,

"ಗೋಪಾಲಯ್ಯನೋರೆ........ನನಗೇನೋ ಈ ಸುರಂಗದ ಕೆಲಸವೇ ಸಮಾಧಾನಕರವಾಗಿಲ್ಲ."

"ಯಾಕೆ ಸಾರ್ ? "

ಇದೇನು ಗಣಿಗಳಲ್ಲಿನ ಸುರಂಗವೋ ಅಥವ ಇಲಿಗಳು ತೋಡುವ ಬಿಲವೋ ?........ಈ ಬಡ ಕೆಲಸಗಾರರು ಜೀವವನ್ನು ಕೈನಲ್ಲಿ ಹಿಡಿದ್ಕೊಂಡು ಒಳಗೆ ಕೆಲಸ ಮಾಡ್ತಿರ್ತಾರೆ...ಯಾವ ಸಮಯದಲ್ಲಿ ಮೇಲಿನ ಮಣ್ಣು ಕಳಚಿ ಕೊಳ್ಳುತ್ತೋಂತ.....ಸಾಹುಕಾರ್ರಿಗೆ ಹೇಳಿದರೆ ಏನಾದರೂ ತಿಳ್ಕೋತಾರೇಂತ ಸುಮ್ಮನಿದೀನಿ."

"ನೀವು ಸರಿಯಾಗಿ ಯೋಚಿಸಿದ್ದೀರಿ...ಸಾವಕಾರ್ರಿಗೆ ಈ ಸುರಂಗದ 'ಕಲ್ಲಿ'ನಿಂದಲೇ ಟನ್‌ಗೆ ಎಂಭತ್ತು-ತೊಂಭತ್ತು ರೂಪಾಯಿ ಲಾಭವಿರೋದು... ದಿನಕ್ಕೆ ನಾಲ್ಕೈದು ಟನ್ ತೆಗೆದರೂ ಸಾಕು. .....ಅಂಥಾದ್ದರಲ್ಲಿ ಈ ಸುರಂಗದ ಕೆಲಸ ನಿಲ್ಲಿಸೋಕೆ ಹೇಳೋದು ಸರಿಯಲ್ಲ......ಈ ಸಾಹುಕಾರ್ರುಗಳಿಗೆ ಲಾಭ ಬರುವಂಥ ವಿಷಯದಲ್ಲಿ ಯಾವಾಗಲೂ ಬೇಡವೆನ್ನಬಾರದು..."

ಶಾಂತಪ್ಪನೇನೂ ಉತ್ತರವೀಯಲಿಲ್ಲ. ಅವನು ಯೋಚಿಸುತ್ತಲೇ ನಡೆಯುತ್ತಿದ್ದಾಗ ಗೋಪಾಲಯ್ಯ ಕೇಳಿದ,

"ನಿಮಗೆ ಮದುವೆಯಾಗಿದೆಯೆ ಸಾರ್ ? "

"ಇಲ್ಲ..." ಶಾಂತಪ್ಪ ಉತ್ತರವಿತ್ತು ಪುನಃ ಮೊದಲಿನಂತೆಯೇ ಚಿಂತಿಸ ತೊಡಗಿದ್ದಾಗ ದೂರದಲ್ಲಿ ಶಿಳ್ಳಿಯೂದಿದ ಶಬ್ದ ಕೇಳಿಸಿತು.

"ಓ ಡೈನಮೈಟು ಇಡ್ತಾರೇನೋ ಬನ್ನಿ ಈ ಮರದ ಹತ್ತಿರ ಕೂತು ಕೊಳ್ಳೋಣ" ಎಂದ ಗೋಪಾಲಯ್ಯ ಹತ್ತಿರವಿದ್ದ ಮರದ ಬಳಿ ಹೋಗ ತೊಡಗಿದ. ಶಾಂತಪ್ಪ ಶಿಳ್ಳಿಯ ಶಬ್ದ ಬಂದತ್ತ ನೋಡಿದ. ಕೆಲಸಗಾರ ರೆಲ್ಲರೂ ಎದ್ದು ದೂರ ದೂರಕ್ಕೆ ಚದುರಿಹೋಗುತ್ತಿದ್ದರು. ದೂರದಲ್ಲಿ ಬಂಡೆ ಗಳ ಹಿಂದೆ ಮರದ ಬದಿಯಲ್ಲಿ ಅವರು ನಿಂತುಕೊಂಡರು. ಹೆಂಗಸರು ಕೆಲವರ ಗುಂಪು ಒಂದೆಡೆ ಹೋಗಿ ನಿಂತಿತು, ಉಳಿದ ಕೆಲವರು ಶಾಂತಪ್ಪನಿದ್ದ ಸ್ಥಳಕ್ಕೆ ಬರತೊಡಗಿದರು. ಶಾಂತಪ್ಪ, ಗೋಪಾಲಯ್ಯನವರು ದೊಡ್ಡದಾದ ಮಣ್ಣಿನ ರಾಶಿಯೊಂದರ ಬಳಿ ಕುಳಿತಿದ್ದುದರಿಂದ ಆ ಹೆಂಗಸರಿಗೆ ಇವರಿದ್ದುದು ಕಾಣಲಿಲ್ಲ. ಅವರು ಇತ್ತಕಡೆಗೇ ಬರುತ್ತಿದ್ದರು.

"ನಮ್ಮಲ್ಲಿ ಡೈನಮೈಟು ಉಪಯೋಗಿಸಬೇಕಾದರೆ ಲೆಸನ್ಸು ಇದೆಯೇ?" ಶಾಂತಪ್ಪ ಕೇಳಿದ.

"ಲೈಸನ್ಸು ಇಲ್ಲ...ಈ ಕಾಡಿನಲ್ಲಿ ಲೈಸನ್ಸು ಇದೆಯೇಂತ ನೋಡೋನ

ಯಾರು ? ಇನ್‌ಸ್ಪೆಕ್ಟರು ಬಂದ ದಿನ ಉಪಯೋಗಿಸದಿದ್ದರಾಯಿತು...." ಎಂದ ಗೋಪಾಲಯ್ಯ.

ಅಲ್ಲಿ ಕುಳಿತುಕೊಳ್ಳಲು ಬಂದ ಹೆಂಗಸರು ಇವರಿದ್ದುದನ್ನು ನೋಡಿ ಬೇರೆ ಕಡೆ ಹೋಗತೊಡಗಿದುದನ್ನು ಕಂಡ ಗೋಪಾಲಯ್ಯನೆಂದ, "ಯಾಕೆ ಹೋಗ್ತೀರಿ...ಇಲ್ಲೇ ಕೂತ್ಕೊಳ್ಳಿ...ಇನ್ನೇನು ಅಲ್ಲಿ ಬೆಂಕಿ ಹಚ್ಚಿಬಿಡ್ತಾರೆ...." ಈ ಮಾತು ಕೇಳಿ ಅವರೆಲ್ಲ ಅಲ್ಲೇ ನಿಂತರು. ಆ ಗುಂಪಿನಲ್ಲಿ ಪಾರ್ವತಿಯೂ ಇದ್ದಳು. ಗೋಪಾಲಯ್ಯ ಬೀಡಿಯೊಂದನ್ನು ಹಚ್ಚಿಕೊಂಡು ಮಾತಿಗೆ ಪ್ರಾರಂಭಿಸಿದ ಅವರ ಬಳಿ.

"ಏನು ಪಾರ್ವತಿ......ಈ ಬಾರಿ ಎಷ್ಟು ರಾಗಿ ಬಂತು ನಿಮ್ಮ ಹೊಲದಲ್ಲಿ ?"

"ಏನಿಲ್ಲ ಒಂದು ಇಪ್ಪತ್ತೈದು ಚೀಲ ಬಂತು" ಪಾರ್ವತಿ ಓರೆಗಣ್ಣಿನಲ್ಲಿ ಶಾಂತಪ್ಪನನ್ನು ನೋಡುತ್ತಾ ಉತ್ತರವಿತ್ತಳು.

"ನಿಂಗೆ ಇಷ್ಟೊಂದು ಆಸ್ತಿಪಾಸ್ತಿ ಇದ್ದರೂ ಗಣೀಗೆ ಕೂಲಿ ಮಾಡೋಕೆ ಬರ್ತೀಯಲ್ಲ ನಾಚಿಕೆಯಾಗೊಲ್ವ. ಇರೋರು ನೀನು ನಿನ್ನ ಗಂಡ.... ಮಕ್ಕಳಿಲ್ಲ ಮರಿಯಿಲ್ಲ...ಯಾರಿಗೋಸ್ಕರ ಈ ಸಂಪಾದನೆ ?" ಗೋಪಾಲಯ್ಯನಿಗೆ ಇಲ್ಲಿನವರ ವಿಷಯವೆಲ್ಲಾ ತಿಳಿದಿದ್ದಿತು, ಒಳ್ಳೆ ಅನುಭವಿಯಾಗಿದ್ದ ಅವನು.

"ಗೋಪಾಲಯ್ಯನ ಮಾತು ಕೇಳಿ ಪಾರ್ವತಿ ಕತ್ತುಕೊಂಕಿಸಿ ಮುಗುಳು ನಗೆಯೊಂದನ್ನು ಬೀರಿ ಸೆರಗನ್ನು ಸರಿಯಾಗಿ ಹೊದ್ದುಕೊಂಡಳು. ಅವಳು ಸೆರಗು ಹೊದೆಯುವಾಗ ಒಳಗಿದ್ದ ಬೆಳ್ಳಿಯ ಕರಡಿಗೆ ತೂಗಿತು. ಹೂವು ಹೂವಿನ ಚೀಟಿ ಬಟ್ಟೆಯ ರವಿಕೆಯು ಸೆರಗಿನ ಒಳಗೆ ಉಬ್ಬಿ, ಹೂವುಗಳೆರಡು ಮೂರು ಅಸ್ತವ್ಯಸ್ತವಾಗಿ ಹರಡಿಕೊಂಡಿದ್ದುದೂ, ಸೊಂಟದ ಮೇಲೆ ಕಟ್ಟಲ್ಪಟ್ಟಿದ್ದ ಆ ರವಿಕೆಯ ಗಂಟಿನ ಮೇಲೆ ಉದ್ದಕ್ಕೂ ಸೀಳಿದಂತೆ ಗುಂಡಿಗಳ ಪಟ್ಟಿ ಬಿರಿದುದೂ ಕಾಣಿಸಿತು. ಒಳಗಿನ ಬಿಳಿ ಚರ್ಮವನ್ನು ನೋಡಿದ ಶಾಂತಪ್ಪನಿಗೆ ಒಂದು ಕ್ಷಣ ತಲೆ ಗಿರ್ರೆಂದಂತಾಯ್ತು. ಏನೋ ಒಂದು ತರಹದ ಅಸಹ್ಯವೂ ಉಂಟಾಯ್ತು ಗೃಹಿಣಿಯಾದವಳು ಈ ಹೀನ ನಡತೆ ತೋರುವುದು ಸರಿಯಲ್ಲವೆನಿಸಿ, ಆ ಸ್ಥಳದಿಂದ ಎದ್ದು ಹೊರಟುಬಿಡಬೇಕೆಂದುಕೊಂಡ.

ಆದರೆ ಅಷ್ಟರಲ್ಲಿ ಮತ್ತೊಂದು ಶಿಲ್ಪಿಯೂದಿದ ಶಬ್ದ ಕೇಳಿಸಿತು. ಚನ್ನಯ್ಯನು ಸ್ಫೋಟಕ ವಸ್ತುವಿಗೆ ಬೆಂಕಿಯಿಟ್ಟು ದೂರಕ್ಕೆ ಓಡಿಹೋಗುತ್ತಿದ್ದುದೂ ಕಾಣಿಸಿತು. ಒಂದೆರಡು ನಿಮಿಷ ಆ ಸ್ಥಳದಲ್ಲಿ ಹೊಗೆಯಾಡಿದ ನಂತರ ಢಢಾರ್ ಢಢಾರ್ ಎಂದು ಮೂರು-ನಾಲ್ಕು ಸಾರಿ ಸ್ಫೋಟನವಾಯಿತು. ಸ್ಫೋಟನವಾದ ಬಂಡೆಗಳು ರೊಯ್ಯನೆ ಗಗನಕ್ಕೆ ತುಯ್ದು ಸೆಯಲ್ಪಟ್ಟು ದೂರದೂರಕ್ಕೆ ಹೋಗಿಬಿದ್ದುವು. ಇದಾದ ಒಂದು ನಿಮಿಷದನಂತರ ಎಲ್ಲರೂ ಗಣಿಯತ್ತ ಹಿಂದಿರುಗಿದರು. ಶಾಂತಪ್ಪನೂ ಸರ್ರನೆದ್ದು ಹೊರಟು ಹೋದ.

ಅವನು ಹೋಗಿ ಸ್ಫೋಟನವಾದ ಬಂಡೆಯನ್ನು ನೋಡುತ್ತಿದ್ದ. ನಾಲ್ಕೆಡೆಗಳಲ್ಲಿ ಸ್ಫೋಟಕ ವಸ್ತುವನ್ನಿಟ್ಟು ಬೆಂಕಿ ಹಚ್ಚಿದ್ದರು. ಆದರೆ ಮೂರು ಮಾತ್ರ ಸರಿಯಾಗಿ ಸ್ಫೋಟಕವಾಗಿ ಆ ದೊಡ್ಡ ಬಂಡೆಯೆಲ್ಲ ಒಡೆದು ಸೀಳಿಹೋಗಿದ್ದುದಲ್ಲದೇ ಮೇಲಿನ ಭಾಗವೆಲ್ಲ ಪುಡಿಪುಡಿಯಾಗಿದ್ದಿತು. ಆ ಬಂಡೆಯ ಅಡಿ ಬಂಡೆಗಳೆಲ್ಲವೂ ಅಲುಗಾಡಿದ್ದುವು. ಸ್ಫೋಟಕ ವಸ್ತುವು ಸುಟ್ಟುಹೋದುದರ ಗುರುತಾಗಿ ಅದನ್ನು ತುಂಬಿದ್ದ ಕುಳಿಯು ಅರ್ಧ ಸೀಳಿ, ಉದ್ದಕ್ಕೂ ಕಪ್ಪಾಗಿದ್ದಿತು.

"ಚೆನ್ನಾಗಿ ಒಡೆದಿದೆ ಸಾರ್....." ಎಂದ ಚನ್ನಯ್ಯ. ಅಲ್ಲಿಗೆ ಗೋಪಾಲಯ್ಯನೂ ಬಂದಿದ್ದ.

"ಹೌದು....ಹೌದು....ಐದಾರು ಟನ್ ಕಲ್ಲು ಒಡೆದಿದೆ" ಎಂದು ಗೋಪಾಲಯ್ಯ ಧ್ವನಿಗೂಡಿಸಿದ.

ಎಲ್ಲವನ್ನೂ ನೋಡಿದನಂತರ ಶಾಂತಪ್ಪ ಗೋಪಾಲಯ್ಯ ಹೊರಟರು. ಚನ್ನಯ್ಯನು ಎಳನೀರನ್ನು ತರುವುದಕ್ಕೆ ಹೇಳಿದ, ನಾಲ್ಕಾರು ನಿಮಿಷಗಳಲ್ಲಿ ಬರುವುದರಲ್ಲಿದ್ದುವು ; ಅವನ್ನು ಸ್ವೀಕರಿಸಿ ಹೋಗಬೇಕೆಂದು ಹೇಳಿದ. ಆದರೆ ಶಾಂತಪ್ಪನು ಅದೊಂದನ್ನೂ ಬೇಡವೆಂದು ಹೇಳಿ ಹೊರಟುಬಿಟ್ಟ, ಗೋಪಾಲಯ್ಯನಿಗೆ ಇರಬೇಕೆಂದು ಇಚ್ಛೆಯಿದ್ದರೂ ಶಾಂತಪ್ಪನೊಡನೆ ಹೊರಟ. ಶಾಂತಪ್ಪನು ಹಬ್ಬುಗೆ ಗುಡ್ಡದತ್ತ ಹೊರಟದ್ದನಾದ್ದರಿಂದ ಅವನೆಂದ,

"ಗೋಪಾಲಯ್ಯನೋರೆ ಹಬ್ಬುಗೆ ಗುಡ್ಡಕ್ಕೆ ಹೋಗೋಣವೇನು ? "

ಅಲ್ಲಿಂದ ಹಬ್ಬುಗೆ ಗುಡ್ಡಕ್ಕೆ ಸುಮಾರು ಒಂದೂವರೆ ಎರಡು ಮೈಲಿಗಳ

ದೂರ್ರವಿದ್ದಿತು. ಈ ಸ್ಫಟಿಕಮಣಿ ಗುಡ್ಡದೆದುರು ಕಾಣುತ್ತಿದ್ದ ಐದಾರು ಸಣ್ಣ ಸಣ್ಣ ಗುಡ್ಡಗಳ ಹಿಂದೆ ಎತ್ತರವಾಗಿ ಕಾಣುತ್ತಿದ್ದಿತು, ಹಬ್ಬುಗೆ ಗುಡ್ಡದ ತಲೆ. ಸುತ್ತಲಿನ ಗುಡ್ಡಗಳಲ್ಲೆಲ್ಲಾ ಹಬ್ಬುಗೆಯೇ ಎತ್ತರವಾದುದು ಮತ್ತು ವಿಸ್ತಾರವಾದುದು. ಹಲವು ಗುಡ್ಡಗಳ ಮಧ್ಯೆ ಹರಡಿಕೊಂಡಿದ್ದ ಇದರ ತಲೆಯ ಉದ್ದಕ್ಕೂ ಹಬ್ಬಿದ್ದಿತು. ಮೇಲೆ ಯಾರೋ ಕಟ್ಟಿಸಿದ ದೇಗುಲವೊಂದು ದೂರಕ್ಕೆಲ್ಲಾ ಕಾಣುತ್ತಿದ್ದಿತು. ಇದನ್ನು ನೋಡಿದರೆ ಯಾರಿಗಾದರೂ ಹತ್ತಿರ ಹೋಗಿ ನೋಡಬೇಕೆನ್ನಿಸುವಂತಿದ್ದಿತು. ಅದನ್ನು ನೋಡುತ್ತಲೇ ಗೋಪಾಲಯ್ಯನೆಂದ,

"ಆಗಲಿ ನಡೀರಿ.... ನಿಮ್ಮ ಅಪ್ಪಣೆ ಮೀರೋದಕ್ಕಾಗುತ್ತದೆಯೆ ?"

"ನನ್ನ ಅಪ್ಪಣೆಗಿಂತ ನಿಮ್ಮ ಶಕ್ತಿ ಮುಖ್ಯವಾದುದು, ನಡೆಯುವುದು ಸಾಧ್ಯವೇ ನೋಡಿಕೊಳ್ಳಿ. ನಿಮಗೆ ಬರುವುದಕ್ಕೆ ಕೈಲಾಗದಿದ್ದರೆ ನೀವು ಇಲ್ಲೇ ಇರಿ. ನಾನು ಒಂದೆರಡು ಘಂಟೆಗಳಲ್ಲಿ ಹೋಗಿ ಬಂದುಬಿಡ್ತೀನಿ.... ಅಲ್ಲಿನ ಕೆಲಸ ನೋಡಲೇಬೇಕು ನಾನೀದಿನ."

"ಹಾಗಾದರೆ ನಾನೂ ನೋಡಬೇಕು.....ನಡೀರಿ....." ಎಂದು ಗೋಪಾಲಯ್ಯನೂ ಮುಂದುವರೆದ.

ಶಾಂತಪ್ಪ ಪಟ್ಟಣಿಗನಾದರೂ ಗುಡ್ಡಗಾಡಿನಲ್ಲಿ, ಏಕಾಂಗಿಯಾಗಿ ಸುತ್ತುವ, ಅವನ ಆಕಾಂಕ್ಷೆಯನ್ನು ನೋಡಿ ಗೋಪಾಲಯ್ಯನಿಗೆ ಆಶ್ಚರ್ಯವಾಗದಿರಲಿಲ್ಲ. ಪಟ್ಟಣದ, ಅದರಲ್ಲೂ ಕಾಲೇಜು ಯುವಕರದು ತೋರಿಕೆಯ ಜೀವನ. ಅವರು ಕಷ್ಟಸಹಿಷ್ಣುಗಳೂ ಅಲ್ಲ ಸಂಯಮಿಗಳೂ ಅಲ್ಲವೆಂಬ ಭಾವನೆಯನ್ನು ಹೊತ್ತಿದ್ದ ಗೋಪಾಲಯ್ಯನಿಗೆ ಶಾಂತಪ್ಪನನ್ನು ನೋಡಿ ಆಶ್ಚರ್ಯವಾಯಿತು. ಅದೂ ಸಹ ಪಾರ್ವತಿಯಂತೆ ಹೇಯಚಂಚಲ ಹೆಣ್ಣಿನ ಮುಂದೆ ಯಾವ ವಿಕಾರವನ್ನೂ ತೋರಿರಲಿಲ್ಲ ಇವನು. ಅವಳನ್ನು ನೋಡಿದರೆ ತನ್ನಂತಹ ವಯಸ್ಕನಿಗೇ ಮನಸ್ಸು ಸಡಿಲವಾಗುವಾಗ ಮದುವೆಯಾಗದ ಶಾಂತಪ್ಪನ ಸಂಯಮ ಎಷ್ಟು ದೊಡ್ಡದು ? ಅರ್ಧಮೈಲು ನಡೆದನಂತರ ಗೋಪಾಲಯ್ಯನೆಂದ,

"ನೀವು ಎಲ್ಲಾ ಕಾಲೇಜು ಹುಡುಗರ ಹಾಗಲ್ಲ ಸಾರ್ !"

"ಯಾಕೆ ಹಾಗೆ ಹೇಳುತ್ತೀರಿ ?" ಎಂದು ನಡಿಗೆಯ ವೇಗವನ್ನು ಕೊಂಚ ಕಡಿಮೆ ಮಾಡಿ ಕೇಳಿದ ಶಾಂತಪ್ಪ.

"ನೀವು ಸಿಗರೇಟು ಸೇದೋದಿಲ್ಲ, ಎಲಡಿಕೆ ಹಾಕೋದಿಲ್ಲ, ಎಳನೀರು ಕುಡಿಯೋದಿಲ್ಲ........ನಿಮ್ಮಂತಹವರ ಜೊತೇಲಿದ್ದರೆ ನಮಗೆಲ್ಲಾ ನಾಚಿಕೆಯಾಗುತ್ತೆ."

"ಯಾಕೆ ?........ಈಗ ಚನ್ನಯ್ಯ ತರಿಸ್ತೀನೆಂದ ಎಳನೀರು ಬೇಡವೆಂದುದಕ್ಕೇನು ? "

"ಅದೂ ಒಂದು ಕಾರಣವೇ."

"ನೀವು ಹೇಳೋದೇನೋ ಸರಿ ಗೋಪಾಲಯ್ಯ......ಆದರೆ ಈ ಜನಗಳ ಕೈಯಿಂದ ನಾವು ಏನೂ ತೆಗೆದುಕೋಬಾರದು....ಅಷ್ಟು ತೆಗೆದುಕೊಂಡರೆ ನಾವು ಅವರ ದಾಕ್ಷಿಣ್ಯಕ್ಕೆ ಒಳಗಾಗಬೇಕು...ಅಲ್ಲವೇ ಅವರು ಒಂದು ಕೊಟ್ಟು ನಾಲ್ಕು ಹೇಳುವುದಕ್ಕೂ ಹೇಸೋದಿಲ್ಲ...ಇವರೆಲ್ಲಾ ತುಂಬಾ ಸಣ್ಣ ಜನ."

"ನಿಮ್ಮ ಮುಂದೆ ನಾನು ಏನೂ ಉತ್ತರವನ್ನೇ ಕೊಡೋಕಾಗೊಲ್ಲರಪ್ಪ."

"ಏನೋ ಗೋಪಾಲಯ್ಯನೋರೆ...ನನ್ನದೇ ಒಂದು ರೀತಿಯ ಹಾದಿ... ನಾನು ನನಗೆ ಸರಿತೋರಿದುದನ್ನು ಮಾಡಿಬಿಡುತೀನಿ...ಅದು ಬೇರೆಯವರ ದೃಷ್ಟಿಯಿಂದ ಸರಿಯೋ ತಪ್ಪೋ ನಾನು ಯೋಚಿಸೋಲ್ಲ..."

"ಆದರೂ ಕೈಗೆ ಬಂದ ಸುಖಾನ ಬಿಡಬಾರದೂ ಶಾಂತಪ್ಪನೋರೆ ! "

ಅವರು ಕಾಲುಹಾದಿಯ ಮೂಲಕ ಹೋಗುತ್ತಿದ್ದರು. ಮಧ್ಯೆ ಅಡ್ಡ ಬಂದ ಕಲ್ಲುಮುಳ್ಳುಗಳನ್ನು ತೆಗೆದು ದೂರ ಒಗೆಯುತ್ತಿದ್ದ ಶಾಂತಪ್ಪ. ಕಾಲುಹಾದಿಯು ಹಳ್ಳದಿಣ್ಣೆಗಳನ್ನು ಇಳಿದು ಏರಿ ಬಿಳಿ ಹಾವಿನಂತೆ ಆ ಕಾಡಿನಲ್ಲಿ ಹಾದುಹೋಗಿತ್ತು. ಒಂದೊಂದೆಡೆ ಮಳೆ ಬಂದು ದೊಡ್ಡ ದೊಡ್ಡ ದಿಣ್ಣೆಗಳನ್ನು ಕೊರೆದು ಮೃದು ಮಣ್ಣನ್ನೆಲ್ಲಾ ಬದಿಯಲ್ಲಿ ಹರಡಿ ಗಟ್ಟಿ ಮಣ್ಣಿನ ಗೋಡೆಗಳನ್ನು ಮಾತ್ರ ನಿಲ್ಲಿಸಿದ್ದಿತು. ಅವುಗಳು ಕೋಟೆಯ ಗೋಡೆಗಳಂತೆ ಕಾಣುತ್ತಿದ್ದುವು. ಗುಡ್ಡದ ತುದಿಯಲ್ಲಿ ಬಿದ್ದ ಮಳೆ ನೀರು ಕಲ್ಲು ಮಣ್ಣನು ಆಳವಾಗಿ ಕೊರೆದುಕೊಂಡು ಹಳ್ಳಗಳನ್ನು ನಿರ್ಮಿಸಿಕೊಂಡು ಅದರಲ್ಲಿ ಹರಿದು ಹೋಗಿ, ನೀರು ಕೊರೆದ ಆ ಹಳ್ಳವು ಡೊಂಕುಡೊಂಕಾಗಿ ಓಡಿದ್ದಿತು. ಬಿಸಿಲಿನ ಕಾಲವಾದ್ದರಿಂದ ಹಳ್ಳಗಳಲ್ಲೀಗ ಕೇವಲ ತೇವವಾಗಿದ್ದ ಬರಿ ಮಳಲೇ ತುಂಬಿದ್ದಿತು. ಶಾಂತಪ್ಪನು ಸುತ್ತಲಿನ ರಮಣೀಯ ದೃಶ್ಯವನ್ನು ನೋಡುತ್ತಾ ನಡೆಯುತ್ತಿದ್ದ.

ಶಾಂತಪ್ಪನು ಹಾಗೆ ನೋಡುತ್ತಾ ನಡೆಯುತ್ತಿದ್ದನಾದರೂ ಗೋಪಾಲಯ್ಯನ ಮಾತನ್ನು ಮೆಲುಕುಹಾಕುತ್ತಿದ್ದವನು ಕೇಳಿದ,

"ಕೈಗೆ ಬಂದ ಎಂತಹ ಸುಖವನ್ನೂ ಬಿಡಬಾರದೆ ? "

"ನಿಮಗೆ ಎಲ್ಲವನ್ನು ಬಿಡಿಸಿ ಹೇಳಬೇಕೆ?....ನಿಮಗೆ ಆಗದ ಅನುಭವವನ್ನು ಪಡೆಯಬೇಕು.....ಗಿಡದಲ್ಲಿ ಹಣ್ಣು ಬಿಟ್ಟಿರುವುದನ್ನು ಕಂಡು ಸುಮ್ಮನೆ ಮುಂದೆ ಹೊರಟುಹೋಗಬಾರದು" ಎಂದ ಗೋಪಾಲಯ್ಯನ ಮಾತುಗಳನ್ನು ಕೇಳಿ ಶಾಂತಪ್ಪನು ಅವನತ್ತ ತಿರುಗಿನೋಡಿದ. ಅರುವತ್ತು ವರ್ಷ ವಯಸ್ಸು ಸಮೀಪಿಸುತ್ತಿದ್ದ ಹಿರಿಯನೊಬ್ಬನ ಬಾಯಿಂದ ಬಂದ ಮಾತೇ ಇದು? ಅವನ ಆ ಜೋಲು ಕೋಟು, ಕಿವುಟು ಟೋಪಿ, ಬೀಡಿಯ ಹೊಗೆಗಳನ್ನು ನೋಡಿ ಯಾವುದೋ ಒಂದು ಬಗೆಯ ಅಸಹ್ಯತೆಯುಕ್ಕಿಬಂದಿತು. ಬೇರೆ ಯಾರಾದರೂ ಆಗಿದ್ದರೆ ಅವನು ಏನೆಂದುಬಿಡುತ್ತಿದ್ದನೋ, ಆದರೆ ಮುದುಕನಾಗುತ್ತಿದ್ದ ಗೋಪಾಲಯ್ಯನ ಮಾತಿಗೆ ಉತ್ತರವಿತ್ತ,

"ನೀವು ಹೇಳಿದ ಮಾತು ನಾನು ಸರಿಯಾಗಿ ಅರ್ಥ ಮಾಡಿಕೊಂಡಿದ್ದರೆ ಅಂತಹ ಕೆಲಸಕ್ಕೆ ಕೈಹಾಕುವುದು ನಮ್ಮ ಘನತೆಗೆ ಕಡಮೆ ಗೋಪಾಲಯ್ಯನವರೆ...ಕಂಪೆನಿಯ ಕಡೆಯವರೆಂದರೆ ಎಲ್ಲರನ್ನೂ ನಮ್ಮ ಹಿಡಿತದಲ್ಲಿಟ್ಟುಕೊಳ್ಳಬೇಕು...ನಾವೇ ನಾಯಿಗಳಂತೆ ಇಂತಹ ಅನೀತಿಗಿಳಿದರೆ ಇನ್ನು ಉಳಿದ ನೂರಾರು ಕೂಲಿಕಾರರ ವಿಷಯ ಕೇಳಬೇಕಾಗಿಲ್ಲ..."

"ಅದೊಂದೇ ಅಲ್ಲ ಶಾಂತಪ್ಪನೋರೆ....ನೋಡಿ ನಿನ್ನೆ ರಾತ್ರಿ ಚನ್ನಯ್ಯ ನಂಗೆ ಸಿಕ್ಕಿದ್ದ...ಅವನೂ ಸಹ ನೀವು ಅವನ ವಿಷಯದಲ್ಲಿ ಸಿಟ್ಟಾಗಿದ್ದೀರೀಂತ ಹೇಳಿದ..." ಗೋಪಾಲಯ್ಯನು ಪರೀಕ್ಷಕ ದೃಷ್ಟಿಯಿಂದ ಶಾಂತಪ್ಪನ ಮುಖವನ್ನು ನೋಡಿದ. ಹೆಣ್ಣು ಹೊನ್ನುಗಳ ಆಸೆಗೆ ಬಲಿಬೀಳುವನೇನೊ ಈ ಯುವಕ, ಎಂದು ಅವನು ಪರೀಕ್ಷಿಸುತ್ತಿದ್ದ.

"ಏನು!...ಚನ್ನಯ್ಯ ಹಾಗೆ ಹೇಳಿದನೇ, ನಾನು ಅವನ ವಿಷಯದಲ್ಲೇಕೆ ಕೋಪ ಮಾಡಿಕೋಬೇಕು?"

"ಹಾಗಲ್ಲ...ನೀವು ಅಳತೆ ತೆಗೆದುಕೊಳ್ಳೋವಾಗ ಅಳತೆ ಕಡಿಮೆ ಇದ್ದೆ, ಕಲ್ಲು ಚೆನ್ನಾಗಿಲ್ಲಾಂತ ಅಂದ್ರಂತೆ."

"ಹೌದು ಅದು ಇದ್ದುದು ಹಾಗೆ ನಾನು ಹೇಳಿದ್ದೂ ಹಾಗೇ!"

"ನೀವೇನೋ ಸಾವಕಾರ್ರ ಎದುರಿಗೆ ಹಾಗೆ ಹೇಳಿಬಿಟ್ಟಿರಿ. ಆದರೆ ಸಾವಕಾರ್ರು ಅವನು ಹೇಳಿದಂತಹ 'ಕಲ್ಲಿ'ಗೆ ಮಾಣಿಕ್ಯಂ ಬರೆದುಕೊಂಡಷ್ಟಕ್ಕೆ ದುಡ್ಡು ಕೊಟ್ಟರು. ನೀವು ಹೇಳಿದ್ದು ಏನು ಪ್ರಯೋಜನವಾಯ್ತು?"

"ನನ್ನ ಕರ್ತವ್ಯ ನಾನು ಮಾಡಿಬಿಟ್ಟೆನಲ್ಲಾ. ದುಡ್ಡು ಕೊಡೋರು ಸಾಹುಕಾರ್ರು. ಅವರಿಷ್ಟಬಂದಂತೆ ಕೊಡಲಿ."

"ಸರಿ. ಸಾಹುಕಾರ್ರು ಇಷ್ಟಬಂದಷ್ಟು ಕೊಡುತಾರೆ. ಮಾಣಿಕ್ಯಂ ಬರೆದುಕೊಂಡದ್ದು ಸರಿಯಾದ ಅಳತೆ. ಚನ್ನಯ್ಯ ಹೇಳಿದ ಹಾಗೇ ಕಲ್ಲು ಇದೇಂತ ಹೇಳಿದ ಮೇಲೆ, ನೀವು ಯಾಕೆ ಹಾಗೆಲ್ಲಾ ಹೇಳಬೇಕು?"

"ನನ್ನ ಕರ್ತವ್ಯ ಅದು, ನಾನು ಮೊದಲೇ ಹೇಳಲಿಲ್ಲವೇ?"

"ನಿಮ್ಮ ಕರ್ತವ್ಯವನ್ನ ನೀವು ಮಾಡಿದರೂ ಸಹ ನೀವು ಹೇಳಿದಂತೆ ಆಗದಿದ್ದರೆ, ನೀವು ವೃಥಾ ಮಾಣಿಕ್ಯಂ ಮತ್ತು ಚನ್ನಯ್ಯನ ದ್ವೇಷ ಕಟ್ಟಕೊಳ್ಳೋದಿಲ್ಲವೆ?" ಗೋಪಾಲಯ್ಯ ಪ್ರಶ್ನಿಸಿದ.

ಗೋಪಾಲಯ್ಯನ ಪ್ರಶ್ನೆಯು ಶಾಂತಪ್ಪನ ಮನಸ್ಸಿನಲ್ಲಿ ತಿರುಗತೊಡಗಿತು. ಹಾಗೆಯೇ ಇಂತಹ ಪ್ರಶ್ನೆ ಕೇಳುವುದರಲ್ಲಿ ಗೋಪಾಲಯ್ಯನ ಉದ್ದಿಶ್ಯವಾದರೂ ಏನೆಂದು ಚಿಂತಿಸತೊಡಗಿದ ಅವನು.

ಅವರು ಹಬ್ಬುಗೆ ಗುಡ್ಡದ ದೇಗುಲವನ್ನು ಸಮೀಪಿಸಲು ಎರಡು ಮೂರು ಫರ್ಲಾಂಗುಗಳಷ್ಟೇ ದೂರವಿದ್ದುದು. ಅಲ್ಲೇ ಬೆಳೆದುನಿಂತಿದ್ದ ಚಿಕ್ಕು ಹಣ್ಣಿನ ಗಿಡಗಳ, ಅಳಲೇಕಾಯಿ ಗಿಡಗಳ ಸಂದಿನಲ್ಲಿ ಆ ದೇಗುಲದ ಕಲ್ಲು ಗೋಡೆಗಳು ಕಾಣುತ್ತಿದ್ದುವು. ಹಿಂದುರುಗಿ ನೋಡಿದಾಗ ಶಾಂತಪ್ಪನಿಗೆ ಒಂದು ನಿಮಿಷ ವೈಮರೆಯುವಂತಾಯಿತು. ಎತ್ತರವಾಗಿದ್ದ ಹಬ್ಬುಗೆ ಗುಡ್ಡವನ್ನು ಅವರು ಹತ್ತಿ ಬರುವಾಗ ಬೆನ್ನಹಿಂದೆ ನಿಸರ್ಗರಮಣೀಯತೆಯನ್ನು ನೋಡಿರಲಿಲ್ಲ ಅವರು. ಎದುರಿನಲ್ಲಿ ದೂರದೂರದಲ್ಲಿ ಸಣ್ಣ ಸಣ್ಣ ಗುಡ್ಡಗಳು ಹಲವು ಸುತ್ತಲೂ ತುಂಬಿದ್ದುವು. ನಿಂತಿದ್ದುದೇ ಬಹು ಎತ್ತರವಾದ ಗುಡ್ಡವಾದ್ದರಿಂದ ಅವೆಲ್ಲವೂ ಆ ಗುಡ್ಡದಿಂದಲೇ ಸಿಡಿದುಹೋಗಿ ದೂರ ದೂರದಲ್ಲಿ ನೆಲಕ್ಕೆ ಹೂತುಕೊಂಡು ಕೂತುವೋ ಎನ್ನುವಂತೆ, ಸೂರ್ಯನಿಂದ ಸಿಡಿದು ದೂರದೂರ ಹೋಗಿ ಹರಡಿಕೊಂಡ ಗ್ರಹಗಳಂತೆ ಕಾಣಿಸಿದುವು. ಆ ಗುಡ್ಡಗಳ ಹಸಿರಿನ ಸಂದಿನಲ್ಲಿ ಹಾದುಹೋದ ಹೆಬ್ಬಾವಿನಂತೆ, ಕಂಪೆನಿಯವರೇ ನಿರ್ಮಿಸಿದ್ದ ಲಾರಿಯ ರಸ್ತೆಯು ಬೆಳ್ಳಗೆ ಕಾಣಿಸುತ್ತಿತ್ತು. ಸುತ್ತಲ್ಲ

ಲ್ಲಿಯೂ ಬರಿ ಗುಡ್ಡಗಳೇ ಕಾಣುತ್ತಿದ್ದುವು. ಅವುಗಳ ಮಧ್ಯೆ ಹರಿದುಹೋದ ರಸ್ತೆಯು ತಮ್ಮನ್ನು ಈ ಗುಡ್ಡಗಾಡಿನಿಂದ ಬಿಡುಗಡೆ ಮಾಡುವ ಬಯಲು ಯಾವುದೆಂದೇ ಅವರಿಗೆ ಕಾಣುತ್ತಿರಲಿಲ್ಲ. ಸಂತೋಷೋದ್ರೇಕವಾದಂತೆ ಶಾಂತಪ್ಪ "ಹೋ" ಎಂದು ಗಟ್ಟಿಯಾಗಿ ಕೂಗಿದ. ಅದಕ್ಕೆ ಉತ್ತರವೆಂಬಂತೆ ಹತ್ತಿರದ ದೂರದ ಗುಡ್ಡಗಳಿಂದ ಹೋ ಹೋ ಎಂದು ಏಳೆಂಟು ಪ್ರತಿ ಧ್ವನಿಗಳು ಬಂದುವು.

"ನಿಮಗೆ ಈ ಕಾಡಿನಲ್ಲೇ ಸಂತೋಷವಾಗಿದೆ ಸಾರ್" ಎಂದ ಗೋಪಾಲಯ್ಯ ನಗುತ್ತಾ.

"ಹೌದು ಗೋಪಾಲಯ್ಯ, ಇಂತಹ ಸುಂದರ ದೃಶ್ಯ ಬೆಂಗಳೂರಿನಲ್ಲಿ ಕನಸಿನಲ್ಲಿಯೂ ಬರುವುದಿಲ್ಲ" ಎಂದ ಶಾಂತಪ್ಪನಿಗೆ ಬೆಂಗಳೂರಿನ ನೆನಪಾಯಿತು.

ಪ್ರವಾಸಿಗರು ಕಾಣುವ ಬೆಂಗಳೂರೆಂದರೆ ಅಲ್ಲಿನ ಯಾಂತ್ರಿಕ ವಾತಾವರಣ, ಗಿರಣಿಗಳು, ಕಾರ್ಖಾನೆಗಳು, ಕಬ್ಬನ್ ವನ, ಕೆಂಪು ತೋಟ, ಕಂಟೋನ್ಮೆಂಟು, ಮಾರುಕಟ್ಟೆ, ನರಸಿಂಹರಾಜ ರಸ್ತೆ, ಇವೇ ಮೊದಲಾದ ದೃಶ್ಯಗಳು. ಆದರೆ ಹಾಲಿನಲ್ಲೆ ಹಾಲಾಹಲ ಬೆರೆದಂತೆ, ಈ ನಾಗರಿಕತೆಯ ಪಕ್ಕದ ನರಕವನ್ನವರು ಕಾಣರು. ಗಿರಣಿಗಳನ್ನು ಕಂಡು ಬೆರಗಾಗುವವರು, ಆ ರಾಷ್ಟ್ರಸಂಪತ್ತನ್ನು ಕಂಡು ಮೆಚ್ಚುವರು ಅವುಗಳ ಹಿಂದಿರುವ ಕಾರ್ಮಿಕ ಗೃಹಗಳನ್ನು ನೋಡಬೇಕು, ಹುಳುಗಳಂತೆ ಅವರು ವಾಸಿಸುವುದನ್ನು ಅವರ ಮುಂದೆ ಹರಿವ ಮೋರಿ ನೀರನ್ನು, ಅವರಿಗೆ ದೊರಕದ ಒಂದೆರಡು ಕೊಡ ನೀರಿಗಾಗಿ ಹತ್ತಾರು ಜನ ಮುಂದಲೆ ಹಿಡಿದೆಳೆದಾಡುವುದನ್ನು ಆ ರೋಗ ಗ್ರಸ್ತರನ್ನು ನೋಡಬೇಕು — ಕಂಟೋನ್ಮೆಂಟಿನ ಥಳುಕನ್ನು ನೋಡುವವರು ಹೊಟ್ಟೆ ಹೊರೆಯಲು ತಮ್ಮ ದೇಹವನ್ನು ರೋಗದಾಗರವನ್ನು ಹೂಡಿಕೊಂಡ ಆಂಗ್ಲೋ ಇಂಡಿಯನ್ ತರುಣಿಯರನ್ನರಿಯಬೇಕು—ಮಾರುಕಟ್ಟೆಯ ಭವ್ಯ ದೃಶ್ಯವನ್ನು ನೋಡಿ ಬೆರಗಾಗುವವರು ಅದರ ಸುತ್ತಲಿನ ಕೊಳಕು ಕೊಂಪೆಗಳನ್ನು ನೋಡಬೇಕು, ಅಲ್ಲಿನ ನಿರ್ಲಜ್ಜ ನೀತಿಯನ್ನು ನೋಡಬೇಕು— ನರಸಿಂಹರಾಜ ರಸ್ತೆಯನ್ನು ನೋಡಿ ಸಂತೋಷಿಸುವವರು ಅದರ ಪಕ್ಕದಲ್ಲಿರುವ ಹರಕು ಬಟ್ಟೆಗಳು ಮಾರಾಟವಾಗುವ, ಹೆಂಡ ಕುಡಿದು ಜನ ಜಗಳವಾಡುವ, ಕೊಳಕು ರಸ್ತೆಗಳಲ್ಲಿ ಹರಿವ ಮೋರಿ ನೀರಿನ ದುರ್ನಾತಕ್ಕೆ

ಜನ ಮೂಗು ಕೊಡಬೇಕು — ಕೆಂಪು ತೋಟವನ್ನು ನೋಡಿ ಅಲ್ಲಿನ ಸೌಂದರ್ಯಕ್ಕೆ ಬೆರಗಾಗುವವರು ಪಕ್ಕದ ಮಾವಳ್ಳಿಯ ಸಂದಿಗಳ ದೃಶ್ಯಗಳನ್ನು ನೋಡಬೇಕು — ಇದುವೇ ನಾಗರಿಕತೆ ಸೃಜಿಸಿದ ನರಕ. ನಗರದ ಯಂತ್ರದಲ್ಲಿ ಕಡೆದಾಗ ಹುಟ್ಟಿದ ಹಾಲಾಹಲ—ಬೆಂಗಳೂರಿನ ಒಳಚಿತ್ರ !

ಆದರೆ ಇಲ್ಲಿ—ಈ ಕಾಡಿನಲ್ಲಿ ಒಳಹೊಕ್ಕಷ್ಟೂ ಕಾಣುವುದು ಸೌಂದರ್ಯವೇ, ಸಹಜತೆಯೇ. ಹೊರಗೂ ಒಂದೇ, ಒಳಗೂ ಒಂದೆ. ಇಂತಹ ವಾತಾವರಣದಲ್ಲಿ ಮೈಮರೆಯುವುದೇನು ಹೆಚ್ಚು ?

"ಏನೋ ಬಹಳ ಯೋಚಿಸುತ್ತಿದ್ದೀರಿ ?" ಸುತ್ತಲಿನ ದೃಶ್ಯವನ್ನೇ ನೋಡುತ್ತಾ ಯೋಚಿಸುತ್ತಿದ್ದ ಶಾಂತಪ್ಪನನ್ನು ಕೇಳಿದ ಗೋಪಾಲಯ್ಯ.

"ಏನಿಲ್ಲ ಏನೋ ಬೆಂಗಳೂರಿನ ಯೋಚನೆ ಅಷ್ಟೆ," ಎಂದು ನಕ್ಕು ಸುಮ್ಮನಾದ.

ಅವರು ನಾಲ್ಕಾರು ಹೆಜ್ಜೆ ಮುಂದೆ ನಡೆದಿದ್ದಾಗ, ಶಾಂತಪ್ಪನ ಕೂಗು ಪ್ರತಿಧ್ವನಿಗಳಿಗೆ ಉತ್ತರವೋ ಎಂಬಂತೆ ನಾಲ್ಕಾರು ಜನ ಕೂಲಿಗಾರರು ಮೇಲಿಂದ ಕೊಡಲಿ ಮಚ್ಚುಗಳನ್ನು ಹಿಡಿದು ಓಡಿಬಂದರು. ಅವರು ಹಾಗೆ ಬಂದುದನ್ನು ನೋಡಿ ಶಾಂತಪ್ಪನಿಗೆ ಆಶ್ಚರ್ಯವಾದರೂ ಗೋಪಾಲಯ್ಯನಿಗೆ ಭಯವಾಗಿದ್ದಿತು.

"ಏನಯ್ಯಾ ಇದು....ಹೀಗೆ ಬರ್ತಿದ್ದೀರಿ ?" ಶಾಂತಪ್ಪ ಕೇಳಿದ.

"ತಾವು ಹಾಗೆ ಕೂಗಿದ್ದು ಕೇಳಿ ಹುಲಿ ಬಂತೇನೋಂತ ಬಂದ್ವಿ ಸಾರ್. ಇಲ್ಲೆಲ್ಲಾ ಹುಲಿ ಕಾಟ ಭಾಳ ಜಾಸ್ತಿ....ಮೊನ್ನೆ ಒಂದು ನಾಯೀನ ಹಿಡಿದ್ಬಿಡ್ತು," ಎಂದರು ಕೂಲಿಗಾರರು.

ಅವರ ಮಾತು ಕೇಳಿ ಶಾಂತಪ್ಪ, ಗೋಪಾಲಯ್ಯ ಜೋರಾಗಿ ನಗತೊಡಗಿದರು.

ಹಬ್ಬುಗೆ ಗುಡ್ಡದ ಗಣಿಗಳನ್ನೆಲ್ಲಾ ನೋಡಿಕೊಂಡು ಕೆಲವು ಸೂಚನೆಗಳನ್ನಿತ್ತು ಹಿಂದಿರುಗಿ ಬರುತ್ತಿದ್ದಾಗ ಏನೋ ಯೋಚಿಸುತ್ತಿದ್ದ ಗೋಪಾಲಯ್ಯನೆಂದ,

"ನೀವು ಎಲ್ಲರಂತಲ್ಲ ಸಾರ್....ಹುಡುಗರಾದರೂ ದೊಡ್ಡವರು."

"ಯಾಕೆ ಹಾಗೆ ಹೇಳ್ತೀರಿ ಗೋಪಾಲಯ್ಯ ?"

"ಇಲ್ಲಿ ಮೊದಲು ಮ್ಯಾನೇಜರಾಗಿದ್ರಲ್ಲ ಸುಬ್ಬಣ್ಣೋರು ಅವರನ್ನ ಕೋಣಸಂದ್ರಕ್ಕೆ ಯಾಕೆ ವರ್ಗಮಾಡಿದ್ರು ಗೊತ್ತೇ ?"

"ಗೊತ್ತಿಲ್ಲ !"

"ಅವರೂ ಚನ್ನಯ್ಯ ಒಂದಾಗಿ ಸಾವಕಾರ‍್ರಿಗೇ ನೀರು ಕುಡುಸ್ತಾ ಇದ್ದರು. ಸುಬ್ಬಣ್ಣ ಮೇಲೆ ಮಾತ್ರ ಚನ್ನಯ್ಯನನ್ನು ಕಂಡರೆ ಆಗುಲ್ಲಾಂತ ದ್ವೇಶ ತೋರಿಸಿಕೊಂಡರೂ ಸಹ ಒಳಗೇ ಅವನಿಗೆ ಸಹಾಯಮಾಡ್ತಿದ್ದ."

"ಹಾಗೇನು ?....ಸಾಹುಕಾರ‍್ರು ಹೇಗೆ ನಂಬಿದ್ದರು ?"

"ಓ ! ಅದಕ್ಕೆ ಒಂದು ನಾಟಕಾನೇ ಆಡಿಬಿಟ್ಟರು ಇಬ್ಬರೂನು. ಒಂದು ದಿನ ಚನ್ನಯ್ಯ ನೂರು ರೂಪಾಯಿ ಲಂಚ ಕೊಡೋದಕ್ಕೆ ಬಂದ ಹಾಗೆ, ಸುಬ್ಬಣ್ಣನವರು ಆ ಲಂಚವನ್ನು ಬೇಡಾಂತ ಹೇಳಿ ಅವನನ್ನು ಸಿಕ್ಕಾಪಟ್ಟೆ ಬಯ್ದು ಸಾವಕಾರ‍್ರ ಹತ್ತಿರ ದೂರು ಕೊಟ್ಟ ಹಾಗೂ ಮಾಡಿ ಗಲಾಟೆಯೆಬ್ಬಿಸಿ ತಾವಿಬ್ಬರೂ ದ್ವೇಷಿಗಳೂಂತ ತೋರಿಸಿಕೊಂಡು ಬಿಟ್ಟರು. ಸಾವಕಾರ‍್ರು ಇದನ್ನು ನಂಬಿ ಸುಬ್ಬಣ್ಣನವರನ್ನ ನಂಬಿಕಸ್ತರೆಂದುಕೊಂಡು ಬಿಟ್ಟಿದ್ದರು."

"ಸರಿ....ಆಮೇಲೆ ?"

"ಆಮೇಲೇನು....ಚನ್ನಯ್ಯ ಹೇಳಿದಷ್ಟು ಟನ್ನು ಕಲ್ಲು ಬರೆದ್ಕೊಂಡು ಸಾವಕಾರ‍್ರ ಹತ್ತಿರ ಹಣ ಕೊಡಿಸಿಬಿಡ್ತಿದ್ದರು. ಸುಬ್ಬಣ್ಣನವರ ಮಾತೂಂದ್ರೆ ಅವರಿಗೆ ವೇದವಾಕ್ಯ."

"ಇದರಿಂದ ಅವರಿಗೇನು ಪ್ರಯೋಜನ ?"

"ಪ್ರಯೋಜನ ಇನ್ನೇನು........ಟನ್ನಿಗೆ ಸುಬ್ಬಣ್ಣನೋರಿಗೆ ಒಂದು ರೂಪಾಯಿ, ಮಾಣಿಕ್ಯಂಗೆ ಎಂಟು ಆಣೆಯಂತೆ, ಚನ್ನಯ್ಯ ಲಂಚಕೊಡ್ತಿದ್ದ."

"ಆ....ಹಾಗೇನು !" ಶಾಂತಪ್ಪ ಆಶ್ಚರ್ಯಚಕಿತನಾದ.

"ಹೌದು....ಆದರೆ ಈ ನಾಲ್ಕು ತಿಂಗಳ ಹಿಂದೆ ಸುಬ್ಬಣ್ಣನೋರ ಇನ್ನೊಂದು ವಿಷಯ ಗೊತ್ತಾಗಿ ಸಾವಕಾರ‍್ರು ಬೇಜಾರುಪಟ್ಕೊಂಡರು."

"ಅಂಥ ವಿಷಯವೇನು ?"

"ಹಳ್ಳೀಲಿ ಯಾವಳನ್ನೋ ಇಟ್ಕೊಂಡು ಖಾಯಿಲೆ ತಂದುಕೊಂಡು ಬಿಟ್ಟರು. ಔಷಧಿ ತೆಗೆದುಕೊಳ್ಳೋಕೆ ಬೆಂಗಳೂರಿಗೆ ಹೋದರು. ಆಮೇಲೆ ಅವರನ್ನ ಸೀದ ಕೋಣಸಂದಕ್ಕೆ ಕಳಿಸಿಬಿಟ್ಟರು....ಆಮೇಲೇ ನಿಮ್ಮನ್ನ ಅವರ ಜಾಗಕ್ಕೆ ಹಾಕಿದ್ದು."

ಈ ರಾಜಕೀಯವನ್ನು ಕೇಳಿ ಶಾಂತಪ್ಪ ಬೆರಗಾದ.

ಈ ಒಂದು ವಾರದಲ್ಲಿ ಶಾಂತಪ್ಪ ಗೋಪಾಲಯ್ಯನ ಸ್ನೇಹ ಗಾಢವಾಗಿ ಬೆಳೆದುಬಿಟ್ಟಿತ್ತು. ಅದಕ್ಕೆ ಒಂದು ಕಾರಣವೂ ಇದ್ದಿತು. ಒಂದು ದಿನ ಶಾಂತಪ್ಪನಿಗೆ ತಲೆನೋವಾದ್ದರಿಂದ ಅವನು ಗಣಿಗೆ ಹೋಗಿರಲಿಲ್ಲ. ಆ ದಿನ ಮಾಣಿಕ್ಯಂ ಹೋಗಿದ್ದ. ಮಧ್ಯಾಹ್ನ ಹನ್ನೆರಡು ಗಂಟೆಯ ಸಮಯದಲ್ಲಿ ಕಾಫಿ ಕುಡಿದು ಬರೋಣವೆಂದು ಊರಿನ ಒಳಕ್ಕೆ ಹೊರಟ. ಅವನು ಹಾಗೆ ಊರಿನ ಒಳಗೆ ಹೊರಟದ್ದು ಅದೇ ಮೊದಲನೇ ದಿನವಾದ್ದರಿಂದ ಎದುರಿಗೆ ಬಂದ ಜಾನುಭೋಗರು, ಪಟೇಲರು ಮತ್ತೆ ಕೆಲವರು ಅವನಿಗೆ ಪರಿಚಯವಿಲ್ಲ ದವರೆಲ್ಲರೂ ಅವನನ್ನು ಗೌರವದಿಂದ ಮಾತನಾಡಿಸಿದರು. ಅಷ್ಟೇ ಗೌರವದಿಂದ ಶಾಂತಪ್ಪನೂ ಉತ್ತರವಿತ್ತಿದ್ದ. ಭಾವಿಯಿಂದ ನೀರು ತರುತ್ತಿದ್ದ ಕೆಲವು ಹೆಂಗಸರು ಶಾಂತಪ್ಪನನ್ನು ಒಮ್ಮೆ ತಲೆಯೆತ್ತಿ ನೋಡಿ ಪುನಃ ತಲೆತಗ್ಗಿಸಿ ಕೊಂಡು ಮುಂದೆ ಹೋಗಿದ್ದರು. ಶಾಂತಪ್ಪನು ಊರೊಳಗೆ ಹೊರಟದ್ದು ಆ ದಿನ ಹಲವರಿಗೆ ಆಶ್ಚರ್ಯಕರವಾದೊಂದು ಪ್ರಸಂಗವಂತಿದ್ದಿತು. ಅವನು ಭಟ್ಟರ ಫಲಹಾರ ಮಂದಿರದೊಳಗೆ ಕಾಲಿಟ್ಟಾಗ ಒಳಗೆ ಒಬ್ಬರೇ ಕುಳಿತಿದ್ದ ಭಟ್ಟರು "ದಯಮಾಡ್ಸಿ ಸ್ವಾಮಿ" ಎಂದು ಆಹ್ವಾನಿಸಿದರು.

"ಏನು ಭಟ್ಟರೇ....ಚೆನ್ನಾಗಿ ಕಾಫಿ ಮಾಡಿ ಕೊಡುತೀರಾ ? " ಎಂದು ಶಾಂತಪ್ಪ ಕೇಳಿದ.

"ಅಗತ್ಯವಾಗಿ ಮಾಡಿಕೊಡ್ತೇನೆ...ಬಿಸಿಬಿಸಿ ಖಾರ ಇದೆ ಕೊಡಲೇನು?"

"ಕೊಡಿ," ಎಂದು ಶಾಂತಪ್ಪ ಹೇಳಿದಾಗ ಭಟ್ಟರು ಒಳಗೆ ಹೋದರು. ಶಾಂತಪ್ಪ ಸುತ್ತಲೆಲ್ಲಾ ಒಂದು ಬಾರಿ ದೃಷ್ಟಿ ಹರಿಸಿದ. ಆ ಹಳ್ಳಿಯ ಉಪ ಹಾರ ಗೃಹದಲ್ಲಿದ್ದುದು ಎರಡು ಬೆಂಚುಗಳು, ನೆಲದ ಮೇಲೆ ಹಾಸಿದ್ದ ಒಂದು ಈಚಲು ಗರಿಯ ಹಳೆಯ ಚಾಪೆ, ಎದುರು ಗೋಡೆಯ ಮೇಲೆ ಇದ್ದುದು ಒಂದು ಕನ್ನಡಿ, ಅದರ ಹಿಂದೆ ಒಂದು ಕ್ರಾಪು ಬಾಚಣಿಗೆಯಿದ್ದಿತು. ಮತ್ತೊಂ ದೆಡೆ ಒಂದು ಲಕ್ಷ್ಮೀದೇವಿಯ ಪಠವನ್ನು ತೂಗುಹಾಕಿದ್ದರು, ಅದರ ಮೇಲೆ ಒಣಗಿ ನಿಂತಿದ್ದ ಸೇವಂತಿಗೆ ಹೂವು, ಗೋಡೆಗಳೆಲ್ಲಾ ಕಪ್ಪಾಗಿದ್ದುವು, ಒಟ್ಟಿನಲ್ಲಿ ಅದೊಂದು ಪುರಾತನ ಗೃಹದಂತೆ ತೋರುತ್ತಿದ್ದಿತು. ಅಷ್ಟರಲ್ಲಿ ಭಟ್ಟರು ಒಂದು ತಟ್ಟೆಯಲ್ಲಿ ಚೌ ಚೌ ತಂದುಕೊಟ್ಟರು.

ಚೌ ಚೌ ತಿನ್ನುತ್ತಿದ್ದಾಗ ಶಾಂತಪ್ಪನಿಗೆ ಗೋಪಾಲಯ್ಯನ ನೆನಪಾ

ಯಿತು. ಅವನು ಬರುವಾಗ ಗೋಪಾಲಯ್ಯನು ನಿದ್ರಿಸುತ್ತಿದ್ದ. ಬಂದು ಐದು ದಿನಗಳಿಂದಲೂ ಭಟ್ಟರ ಹೋಟೇಲಿನಲ್ಲಿ ಊಟಮಾಡುತ್ತಿದ್ದುದಾಗಿ ಶಾಂತಪ್ಪನೊಡನೆ ಹೇಳಿದ್ದನಾದ್ದರಿಂದ ಆ ನೆನಪು ಬಂದು ಭಟ್ಟರನ್ನು ಕೇಳಿದ,

"ನೀವು ಊಟವನ್ನೂ ತಯಾರು ಮಾಡುತ್ತೀರಾ ಭಟ್ಟರೇ ?"

"ಇಲ್ಲ ಸ್ವಾಮಿ....ಇರೋನು ನಾನೊಬ್ಬ....ತಿಂಡಿ ಕಾಫಿ ಮಾಡೋದೇ ಕಷ್ಟ, ಇನ್ನು ಊಟ ಎಲ್ಲಿ ತಯಾರುಮಾಡ್ಲಿ."

"ನಮ್ಮ ಗೋಪಾಲಯ್ಯನವರು ಇಲ್ಲೀಗೇ ಬರ್ತಾರೇನು ?"

"ದಿನಾ ಬೆಳಗ್ಗೆ ಬಂದು ಎರಡು ಇಡ್ಲಿ ತಿಂದು ಕಾಫಿ ಕುಡಿದು ಹೋಗ್ತಾರೆ ಅಷ್ಟೆ, ಇನ್ನು ಪುನಃ ಬರೋದಿಲ್ಲ."

"ಅವರು ಊಟ ನಿಮ್ಮಲ್ಲೇ ಮಾಡ್ತಾರಂತಲ್ಲಾ ಭಟ್ಟರೆ ?"

ಭಟ್ಟರ ಮಾತು ಕೇಳಿ ಶಾಂತಪ್ಪನಿಗೆ ಆಶ್ಚರ್ಯವಾಯಿತು. ಒಂದು ಕ್ಷಣ ತನ್ನೊಡನೆ ಸುಳ್ಳು ಹೇಳಿದ್ದ ಗೋಪಾಲಯ್ಯನ ವಿಷಯದಲ್ಲಿ ಕೋಪ ಬಂದಿತ್ತಾದರೂ, ಮರುಕ್ಷಣವೇ ಮರುಕವುಕ್ಕಿ ಬಂದಿತ್ತು, ಅವನ ಬಳಿ ಹಣವಿದೆಯೋ ಇಲ್ಲವೋ ಎಂದು ಅನುಮಾನವುಂಟಾಗಿ ಪುನಃ ಕೇಳಿದ.

"ಪ್ರತಿದಿನಾ ದುಡ್ಡು ಕೊಡ್ತಿದಾರೇನು ?"

"ಇದೆಲ್ಲ ಹೇಳಬಾರದು ಸಾರ್, ನಂಗೆ ಗೋಪಾಲಯ್ಯನೋರು ಕೆಲವು ದಿವಸಗಳಿಂದ ಗೊತ್ತು. ಆದರೆ ನೀವು ಕೇಳಿದ್ರಿಂದ ಹೇಳ್ತೀನಿ. ಇವತ್ತು ಬೆಳಿಗ್ಗೇ ಮಾತ್ರ ಕೊಟ್ಟಿಲ್ಲ, ಸಾಲ ಹೇಳಿದಾರೆ," ಭಟ್ಟರು ಹೇಳಿದುದನ್ನು ಕೇಳಿ ಶಾಂತಪ್ಪನ ಮನಸ್ಸು ಒಮ್ಮೆ ಕಲಕಿದಂತಾಯಿತು. ಆಗಲೇ ನಾಲ್ಕೈದು ದಿನಗಳ ಮುನ್ನ ಗೋಪಾಲಯ್ಯ ತನ್ನ ಹೆಂಡತಿ ಮಕ್ಕಳು ಊರಿನಲ್ಲಿ ಉಪವಾಸವಿರಬಹುದೆಂದು ಹೇಳಿದುದೂ ನೆನಪಾಯಿತು. ಯಾವುದೋ ಒಂದು ನಿರ್ಧಾರ ಭಾವವು ಅವನ ಮುಖದಲ್ಲಿ ಒಡಮೂಡಿ ಮಾಯವಾಯಿತು.

"ಇನ್ನು ಮೇಲೆ ಅವರ ಲೆಕ್ಕ ಇಟ್ಟಿರಿ, ನಾನು ಹಣ ಕೊಡ್ತೇನೆ" ಎಂದ ಶಾಂತಪ್ಪನಿಗೆ ತಾನು ಯಾರೆಂಬುದನ್ನೇ ಭಟ್ಟರಿಗೆ ಹೇಳಿಲ್ಲವೆಂಬುದು ನೆನಪಾಯಿತು. ಅಷ್ಟರಲ್ಲಿ ಭಟ್ಟರೆಂದರು.

"ಆಗಬಹುದು ಸಾರ್.....ನೀವಾದರೇನು ಅವರಾದರೇನು ನಮಗೆ ಇಬ್ಬರೂ ಒಂದೆ...ನೀವೂ ಸಹ ಆಗಾಗ್ಗೆ ಬನ್ನಿ ಸಾರ್."

"ಆಗಲಿ ನಮಸ್ಕಾರ" ಎಂದು ಶಾಂತಪ್ಪ ತನ್ನ ಬಿಡಾರಕ್ಕೆ ಹೋದವನೇ ನಾಲ್ಕು ದಿನಗಳಿಂದ ಊಟಮಾಡದೇ ತನಗೂ ಸಹ ತಿಳಿಸದೇ ಬರೀ ಇಡಲಿಗಳಲ್ಲಿ ಕಾಲ ನೂಕಿದ್ದಕ್ಕಾಗಿ ಗೋಪಾಲಯ್ಯನ ಮೇಲೆ ತುಂಬಾ ಆಗ್ರಹ ಮಾಡಿದ. ಹಾಗೆಯೇ ಅವನ ಹೆಂಡತಿಗೆ ತಕ್ಷಣ ಕಳುಹಿಸಲು ಹತ್ತು ರೂಪಾಯಿಗಳನ್ನು ಕೊಟ್ಟ. ಬೇಡವೆಂದು ಎಷ್ಟು ಹೇಳಿದರೂ ಅವನ ಮಾತನ್ನು ಲೆಕ್ಕಿಸದೆ ಗೋಪಾಲಯ್ಯನ ಜೇಬಿನಲ್ಲಿಟ್ಟು ಅಂಚೆ ಕಚೇರಿಗೆ ಓಡಿಸಿದ. ಗೋಪಾಲಯ್ಯ ಬೇರೆ ವಿಧಿಯಿಲ್ಲದೆ ಒಪ್ಪಬೇಕಾಯ್ತು.

ಈ ದಯೆ, ಗೋಪಾಲಯ್ಯನಂತಹ ವಯಸ್ಕನು ಶಾಂತಪ್ಪನ ಬಗ್ಗೆ ಗೌರವ ಬುದ್ಧಿ ತೋರಲು ಕಾರಣವಾಯಿತು. ಗೋಪಾಲಯ್ಯನ ಮುಚ್ಚುಮರೆಯಿಲ್ಲದ ಮಾತು, ಗಣಿಗಳಲ್ಲಿನ ಅವನ ಅನುಭವದ ಜೊತೆಗೆ, ಅವನ ಕಷ್ಟ ಜೀವನವೂ ಸಹ ಶಾಂತಪ್ಪನಲ್ಲಿ ಅವನ ಬಗೆಗೊಂದು ಸ್ನೇಹದ ಬಾಗಿಲನ್ನು ತೆರೆಸಿತ್ತು. ಆದ್ದರಿಂದಲೇ ಗೋಪಾಲಯ್ಯನು ಗಣಿಯಲ್ಲಿನ ಒಬ್ಬೊಬ್ಬರ ಗುಣಾವಗುಣಗಳನ್ನು ತೂಕ ಮಾಡಿದಂತೆ ಶಾಂತಪ್ಪನ ಮುಂದಿಟ್ಟುಬಿಟ್ಟಿದ್ದ—

ಸಾಹುಕಾರರು ಮೊದಲು ಎಲ್ಲಿಯೋ ಕಾರಕೂನರಾಗಿದ್ದರು. ಆದರೂ ಸಹ ಹೇಗೋ ಪ್ರಯತ್ನಮಾಡಿ ಅಧಿಕಾರಿಗಳನ್ನು ಒಲಿಸಿಕೊಂಡು ಗಣಿಗಳನ್ನು ಪಡೆದರು. ಮ್ಯಾಂಗನೀಸಿಗೆ ಒಳ್ಳೆಯ ಬೆಲೆ ಇದ್ದುದರಿಂದಲೂ ಅದೃಷ್ಟ ಚೆನ್ನಾಗಿದ್ದುದರಿಂದಲೂ ಎರಡು-ಮೂರು ಲಕ್ಷ ರೂಪಾಯಿಗಳಷ್ಟನ್ನು ಸಂಪಾದಿಸಿದರು. ಗಣಿ, ಭೂಗರ್ಭ, ವರಮಾನ ತೆರಿಗೆ, ರೈಲ್ವೆ ಮೊದಲಾದ ಎಲ್ಲ ಇಲಾಖೆಗಳ ಅಧಿಕಾರಿಗಳನ್ನು ತಮ್ಮ ಬುಟ್ಟಿಯೊಳಗೆ ಹಾಕಿಕೊಂಡು ತಮ್ಮ ವಾಣಿಜ್ಯವನ್ನು ನಿರಾಯಾಸವಾಗಿ ಮುಂದುವರಿಸಿಕೊಂಡು ಬಂದರು. ಅರವತ್ತು-ಎಪ್ಪತ್ತು ಸಾವಿರ ರೂ.ಗಳು ವೆಚ್ಚಮಾಡಿ ಬಂಗಲೆಯನ್ನು ಕಟ್ಟಿಸಿಕೊಂಡರು. ಎರಡು-ಮೂರು ಕಾರುಗಳನ್ನು ಕೊಂಡರು. ಈ ಕಾಲದಲ್ಲಿ ಸಿರಿವಂತರಾಗುವುದು ಮುಖ್ಯವೇ ಹೊರತು ಸಿರಿವಂತರಾಗುವ ಮಾರ್ಗವಲ್ಲ. ಅವರು ಯಾರನ್ನೂ ಸಹ ದ್ವೇಷಿಯನ್ನಾಗಿ ಮಾಡಿಕೊಳ್ಳಲು ಇಚ್ಛಿಸುವುದಿಲ್ಲ. ಯಾವ ವಿಷಯವನ್ನೂ ಸಹ ಕ್ಷಣಿಕ ದೃಷ್ಟಿಯಿಂದಲೇ ನೋಡುವುದು. ಆದ್ದರಿಂದಲೇ ಸುಬ್ಬಣ್ಣನವರ ಯೋಗ್ಯತೆಯು ತಿಳಿದಿದ್ದರೂ ಸಹ ತಿಳಿಯದಂತೆ ನಟಿಸಿ ಅವರನ್ನು ಗಣಿಯಿಂದ ಕೋಣಸಂದ್ರಕ್ಕೆ ವರ್ಗ ಮಾಡಿದ್ದರು.

ಕಂಟ್ರಾಕ್ಟ್ ಚನ್ನಯ್ಯನ ವಿಷಯ ಶಾಂತಪ್ಪನಿಗೆ ಸ್ವಲ್ಪಸ್ವಲ್ಪ ತಿಳಿದಿದ್ದರೆ ತಾವರೂ ಗೋಪಾಲಯ್ಯನಿಗೆ ಹೆಚ್ಚು ತಿಳಿದಿದ್ದಿತು. ಅವನು ಅಸಮರ್ಥನಾದ ಕಂಟ್ರಾಕ್ಟರು. ವಾರವಾರವೂ ನೂರಾರು ಟನ್ನು ಅದಿರು ತೆಗೆದು ಸಾಹುಕಾರರಿಗೆ ಕೊಡುತ್ತಿದ್ದನಾದ್ದರಿಂದ ಅವನ ಅನೇಕ ಮೋಸಗಳನ್ನು ತಿಳಿದೂ ಕ್ಷಮಿಸಿಬಿಡುತ್ತಿದ್ದರು ಸಾಹುಕಾರರು. ಏಕೆಂದರೆ ಅವನನ್ನು ಬಿಟ್ಟರೆ ಬೇರೆ ಅಂಥ ಕಂಟ್ರಾಕ್ಟರು ದೊರೆಯುತ್ತಿರಲಿಲ್ಲವವರಿಗೆ. ಕೂಲಿಯವರಿಗೆ ಅವನು ಒಂದು ವಾರವಾದರೂ ಸರಿಯಾಗಿ ಆರು ದಿನಗಳ ಕೂಲಿಯನ್ನು ಕೊಟ್ಟವನಲ್ಲ. ಏನಾದರೊಂದು ನೆಪ ಹೇಳಿ ಎರಡು-ಮೂರು ದಿನಗಳ ಕೂಲಿ ಹಣ ಕಡಿಮೆ ಮಾಡಿಬಿಡುತ್ತಿದ್ದ. ಇದು ಸಾಹುಕಾರರಿಗೆ ತಿಳಿದರೂ ಸುಮ್ಮನಿದ್ದುಬಿಡುತ್ತಿದ್ದರು. ಏಕೆಂದು ವಿಚಾರಿಸಿದರೆ ಅವರೇ ಕೈಯಿಂದ ತೆರುವ ಪ್ರಸಂಗ ಬರುತ್ತಿದ್ದಿತು. ವಾರವಾರವೂ ನೂರಾರು ರೂಪಾಯಿ ಲಾಭ ಗಳಿಸಿದರೂ ಅವನ ಕೈಯಲ್ಲಿ ಒಂದು ಕಾಸೂ ಉಳಿಯುತ್ತಿರಲಿಲ್ಲ. ಅವನ ಗಣಿಕೆಯರಾದ ನಾಲ್ಕೈದು ಮುಂದಿ ಹೆಣ್ಣುಗಳಿಗೆ ಮತ್ತು ಅವನ ಹಿಂಬಾಲಕರಾದ ಹಳ್ಳಿಯ ಹಲವು ನಿರುದ್ಯೋಗಿಗಳಿಗೆ ಅವನ ಸಂಪಾದನೆ ಸೇರವಾಗುತ್ತಿದ್ದಿತು. ಗಣಿಯ ಕೂಲಿಗಾರ್ತಿಯರು ಇಬ್ಬರು-ಮೂವರು ಅವನು ಇಟ್ಟುಕೊಂಡಿದ್ದವರೇ. ಅವರಲ್ಲಿ ಒಬ್ಬಳು ಶಿವಮ್ಮ. ಅವಳು ಅವಳ ಗಂಡನ ನಾಲ್ಕನೇ ಹೆಂಡತಿ. ಅವಳ ಗಂಡನಿಗೆ ಐವತ್ತು ವರ್ಷ. ಅವಳಿಗಾದರೊ ಇನ್ನೂ ಇಪ್ಪತ್ತೈದು ಇಪ್ಪತ್ತಾರು. ಅವಳ ಗಂಡನಿಗೆ ಗಣಿಯಲ್ಲಿ ಮೇಸ್ತ್ರಿ ಕೆಲಸ ಕೊಟ್ಟು ಅವಳಿಗೆ ಕೆಲಸವಿಲ್ಲದ ಕೂಲಿ ಕೊಡುತ್ತಿದ್ದ ಚನ್ನಯ್ಯ. ಅದರಿಂದ ಹರೆಯದ ಹಕ್ಕಿ ಅವನ ಬಲೆಯಲ್ಲಿ ಬಿದ್ದಿತ್ತು. ಇಂತಹ 'ದಾಕ್ಷಿಣ್ಯ'ದ ಮೇಸ್ತ್ರಿಗಳೇ ಹದಿನಾರು ಜನರಿದ್ದರು ಅವನ ಗಣಿಯಲ್ಲಿ. ಹೀಗಾಗಿ ಹೆಚ್ಚು ಸಂಪಾದನೆಯಾದರೂ, ಖರ್ಚು ಸಾಕಷ್ಟಿದ್ದಿತು ಚನ್ನಯ್ಯನಿಗೆ. ಚನ್ನಯ್ಯ ವಾರವಾರವೂ ಸುಬ್ಬಣ್ಣ ಮಾಣಿಕ್ಯಂರಿಗೆ ಲಂಚ ಕೊಟ್ಟು ಅವರನ್ನು ತನ್ನ ಕಡೆಗೆ ಒಲಿಸಿಕೊಂಡಿದ್ದನಾದ್ದರಿಂದ ಅವನ ಮೋಸಗಾರಿಕೆ, ಸಂಪಾದನೆ, ಕಾಮುಲೀಲೆಗಳು ಸರಾಗವಾಗಿ ನಡೆಯುತ್ತಿದ್ದುವು. ಅವನೇ ಹಲವು ಬಾರಿ ಸುಬ್ಬಣ್ಣನವರಿಗೆ ಬೇಕಾದ ಹೆಣ್ಣುಗಳನ್ನು ಒಪಗಿಸಿದ್ದನೆಂದು ವದಂತಿಯಿದ್ದಿತು. ಆದರೆ ಮಾಣಿಕ್ಯಂ-ರತ್ನಮ್ಮ ಇವರ ವ್ಯವಹಾರವನ್ನು ತಿಳಿದಿದ್ದರೂ ತಿಳಿಯದವನಂತೆ ಸುಮ್ಮನಿರುತ್ತಿದ್ದ. ಹೆಣ್ಣು, ಹೊನ್ನು ಇವುಗಳಲ್ಲಿ ಚನ್ನಯ್ಯನ ಸಹಕಾರ ದೊರೆಯ

ತ್ತಿದ್ದುದರಿಂದ ಅವರಿಬ್ಬರೂ ಅವನ ವಿರುದ್ಧ ಏನೂ ಹೇಳದೆ ಸುಮ್ಮನಿದ್ದು ಬಿಡುತ್ತಿದ್ದರು.

ಇಂತಹ ವಿಷವ್ಯೂಹವೊಂದರಲ್ಲಿ ಬಂದುಬಿದ್ದಿರುವವನು ಶಾಂತಪ್ಪ, ಎಂದು ಗೋಪಾಲಯ್ಯ ತಿಳಿಸಿದ್ದ.

## ೬

# ಒಲಿದು ಬಂದ ಹೆಣ್ಣು ಹೊನ್ನುಗಳು

ಗೋಪಾಲಯ್ಯನದು ಅನುಭವ, ಶಾಂತಪ್ಪನದು ವಿಜ್ಞಾನ. ಇಬ್ಬರೂ ಒಬ್ಬರಿಂದೊಬ್ಬರು ಕೇಳಿ ತಿಳಿದು ಕಲಿತರು. ಗೋಪಾಲಯ್ಯನ ಜ್ಞಾನವು ಕೇವಲ ಅನುಭವಜನ್ಯವಾದುದರಿಂದ, ಅದು ಕೇವಲ ಅವೈಜ್ಞಾನಿಕವಾಗಿದ್ದಿತು. ಒಮ್ಮೊಮ್ಮೆ ಅವನ ಮೌಢ್ಯದ ಮಾತು ಕೇಳಿ ಶಾಂತಪ್ಪನಿಗೆ ಮೊಕ್ಕನೆ ನಗು ಬಂದುಬಿಡುತ್ತಿದ್ದಿತು. ಒಂದು ದಿನ ಗಣಿಯೊಳಗಿದ್ದಾಗ ಚನ್ನಯ್ಯನೊಡನೆ ಗೋಪಾಲಯ್ಯ ಮಾತನಾಡುತ್ತಿದ್ದುದು ಶಾಂತಪ್ಪನಿಗೂ ಕೇಳಿಸಿತು,

"ನಿಂಗೆ ಗೊತ್ತಿಲ್ಲ ಚನ್ನಯ್ಯ, ಹತ್ತು ವರ್ಷಕ್ಕೊಂದು ಸಲ ಭೂಮಿಯಲ್ಲಿ ಮ್ಯಾಂಗನೀಸು ಹುಟ್ಟುತ್ತೆ....ಆದ್ದರಿಂದ ಮೊದಲು ಹತ್ತು ಹದಿನೈದು ವರ್ಷದ ಹಿಂದೆ ಅದು ಸಿಕ್ಕದಿದ್ದ ಜಾಗದಲ್ಲಿ ಈಗ ಅಗೆದರೆ ಅಲ್ಲಿ ಮ್ಯಾಂಗನೀಸು ಸಿಕ್ಕುತ್ತೆ....!"

"ಹಂಗಾ!....ಸಾವಕಾರ್ರೂ ಒಂದಿನಾ ಹಂಗೇ ಹೇಳಿದ್ರು......" ಎಂದು ಚನ್ನಯ್ಯನೆಂದ. ಅವನಿಗೆ ಗೋಪಾಲಯ್ಯನೆಂದರೆ ಒಬ್ಬ ಬೌದ್ಧಿಕ ದೈತ್ಯನೆಂಬ ಭಾವನೆಯಿದ್ದಿತು. ಏಕೆಂದರೆ ಮಾತೆತ್ತಿದರೆ ಗೋಪಾಲಯ್ಯ ಸುಪ್ರಸಿದ್ಧ ಗಣಿಗಳ, ಸುಪ್ರಸಿದ್ಧ ಕಂಪೆನಿಗಳ ಹೆಸರನ್ನೇ ಹೇಳುತ್ತಿದ್ದ. ಅವನ ಮಾತಿನ ತುಂಬಾ ಇಂಗ್ಲೀಷಿನ ಪಾರಿಭಾಷಿಕ ಶಬ್ದಗಳೇ ತುಂಬಿರುತ್ತಿದ್ದುವು. ಎಲ್ಲಾ ಅದಿರಿನ ವಿಷಯವೂ ತನಗೆ ಕರತಲಾಮಲಕವೆಂದೇ ನುಡಿಯುತ್ತಿದ್ದ. ಆದ್ದರಿಂದ ಅವನ ವಿಷಯದಲ್ಲಿ ಚನ್ನಯ್ಯನಿಗೆ ನಂಬಿಕೆಯಿದ್ದಿತು. ಸಾಹುಕಾರರೇ ನಂಬಿದ ಮೇಲೆ ತಾನು ಹೇಳುವುದೆಲ್ಲ ಸತ್ಯವೆಂದೇ ಅವನ ಭಾವನೆಯೂ

ಗಿದ್ದಿತು. ಆದ್ದರಿಂದಲೇ ಅವನು ನಿರ್ಭಯವಾಗಿ ಶಾಂತಪ್ಪನೆದುರಿನಲ್ಲಿಯೇ ಈ ಮಾತನ್ನೆಂದ. ಆದರೆ ಶಾಂತಪ್ಪನ ನಗೆ ಸಿಡಿತದಿಂದ ಅವನು ತನ್ನ ಮಾತನ್ನು ನಿಲ್ಲಿಸಿ ಶಾಂತಪ್ಪನ ಮುಖವನ್ನು ನೋಡಿದ. ಶಾಂತಪ್ಪನ ಮುಖದಲ್ಲಿ ಅದೇ ನಗೆ ತಾಂಡವವಾಡುತ್ತಿದ್ದುದರಿಂದ ಗೋಪಾಲಯ್ಯ ಪ್ರಶ್ನಿಸಿದ.

"ಯಾಕೆ ನಗುತ್ತಿದ್ದೀರಲ್ಲ ?"

"ಏನಿಲ್ಲ ಆಮೇಲೆ ಊರಿಗೆ ಹೋಗುವಾಗ ಕೇಳಿ ಹೇಳ್ತೀನೆ" ಎಂದು ಬೇರೆ ಕಡೆ ಹೊರಟು ಹೋದ ಶಾಂತಪ್ಪ. ಅವನಿಗೆ ನಗುವನ್ನು ತಡೆಯಲಾಗಲಿಲ್ಲ.

ರಸ್ತೆಯಲ್ಲಿ ಹೋಗುವಾಗ ಗೋಪಾಲಯ್ಯ ಕೇಳಿದ "ಯಾಕೆ ನಕ್ಕರಲ್ಲ ಆಗ ?"

"ಏನಿಲ್ಲ......ನೀವು ಹತ್ತು ವರ್ಷಕ್ಕೊಂದು ಸಲ ಮ್ಯಾಂಗನೀಸು ಹುಟ್ಕೊತ್ತೆ ಎಂದಿರಲ್ಲಾ ಅದಕ್ಕೇ ನಗು ಬಂದಿತು. ಅಷ್ಟೆ !"

"ಯಾಕೆ ? ನಾನು ಹೇಳಿದ್ದು ಸುಳ್ಳೆ ?"

"ಹೌದು. ಹತ್ತು ವರ್ಷಕ್ಕೊಂದು ಸಲ ಅದು ಹುಟ್ಕೋದಿಲ್ಲ. ಈ ಭೂಮಿಯ ಮೇಲೆ ಯಾವಾಗ ಶಿಲಾಸ್ತೋಮವುಂಟಾಯ್ತೋ ಆಗಲೇ ಆ ಶಿಲೆಗಳಲ್ಲಿ ತೇಪೆಯಾದಂತೆ ಅಲ್ಲಿ ಇಲ್ಲಿ ಮ್ಯಾಂಗನೀಸಾದುದು. ಆಮೇಲೆ ಎಷ್ಟೋ ವರ್ಷಗಳಾದ ಮೇಲೆ ಅತ್ಯಂತ ಬಿಸಿಯಾದ ನೀರು ಭೂಗರ್ಭದಲ್ಲಿ ಹರಿಯುವಾಗ ಈ ಮ್ಯಾಂಗನೀಸಿನ ತೇಪೆಗಳನ್ನೆಲ್ಲಾ ಕರಗಿಸಿ, ಶಿಲಾಸ್ತೋಮದ ಮಧ್ಯೆಯಿದ್ದ ಪೊಟರೆಯಲ್ಲಿ ಘನೀಭೂತಗೊಳಿಸಿತು. ಅವೇ ಈಗ ಕಾಣುವ ಸೆಲೆಗಳು, ನೀವು ಹೇಳುವಂತೆ 'ರೀಫು'ಗಳು."

ಗೋಪಾಲಯ್ಯ ಶಾಂತಪ್ಪನ ಮಾತುಗಳನ್ನು ಕಣ್ಣೆವೆ ಮಿಟುಕಿಸದೆ ಕೇಳುತ್ತಿದ್ದ. ಅವನಿಗವು ಅರ್ಥವಾದುವೋ ಇಲ್ಲವೋ! ಆದರೂ ಸಹ ತಾನು ತಿಳಿದ ರೀತಿಯಲ್ಲಿ ಈ ಅದಿರಿನ ಜನನವಾಗಿಲ್ಲವೆಂದುಕೊಂಡ. ಅವನ ಮಾತುಗಳನ್ನೇ ಮೆಲುಕು ಹಾಕುತ್ತಾ ನಡೆಯುತ್ತಿದ್ದಾಗ ದೂರದಲ್ಲಿ ಲಾರಿಯು ಗುಡ್ಡವನ್ನೇರಿ ಬರುತ್ತಿರುವ ಶಬ್ದ ಕೇಳಿಬಂದಿತು. ಲಾರಿಯವರನ್ನು ಮಾತನಾಡಿಸಿ ಮುಂದೆ ಹೋಗೋಣವೆಂದುಕೊಂಡು ಶಾಂತಪ್ಪ ಅಲ್ಲಿಯೇ ನಿಂತುಬಿಟ್ಟ.

ಸುತ್ತಲೂ ಬಿಸಿಲು ಸುಡುತ್ತಿದ್ದರೂ ಗುಂಪಾಗಿ ಬೆಳೆದ ಮರಗಳ ಎಲೆಗಳು ಭೂಮಿಯ ಮೇಲೆ ಪಟ್ಟೆವಾದ ನೆರಳನ್ನು ಹಾಸಿದ್ದುವು. ರಸ್ತೆಯ ಮೇಲೆ ಹರಿದುಕೊಂಡು ಹೋದ ಹಾವಿನ ಮೈಯ ಗುರುತುಗಳು ವಕ್ರವಕ್ರವಾಗಿ ಮಣ್ಣಿನ ಮೇಲೆ ಅಚ್ಚಾಗಿದ್ದುವು. ದೂರದ ಗಿಡಗಳ ಬದಿಯಲ್ಲಿ ಅದುವರೆಗೂ ಪಟ್ಟಣವಾಸಿಯಾದ ಶಾಂತಪ್ಪನು ನೋಡದಿದ್ದ ಕಾಡಿನ ಆಮೆಗಳು ಹಸಿ ಮಣ್ಣನ್ನು ಕೆರೆಯುತ್ತಿದ್ದುವು. ಸುಂದರವಾದ ಹಳದಿ ಗೆರೆಗಳು ಆಮೆಯ ಚಿಪ್ಪಿನ ಮೇಲೆ ಜೇಡನ ಬಲೆಯಂತೆ ಚಿತ್ರ ರಚಿಸಿದ್ದುವು. ಅದೇ ಗುಡ್ಡದಲ್ಲಿಯೇ ಸೇರಿಕೊಂಡಿದ್ದ ಹೆಣ್ಣು ಹುಲಿಯೊಂದರ ಆರ್ಭಟ ಆಗಾಗ್ಗೆ ಕೇಳಿಬರುತ್ತಿದ್ದಿತು. ಆ ಹೆಣ್ಣು ಹುಲಿಯು ತನ್ನ ಎರಡು-ಮೂರು ಮರಿಗಳೊಡನೆ ಅಲ್ಲಿಯೇ ಸುತ್ತುತ್ತಿದೆಯೆಂದು ಶಾಂತಪ್ಪನಿಗಾರೋ ಹೇಳಿದ್ದರು. ಈ ಗುಡ್ಡಗಾಡಿನ ಸನ್ನಿವೇಶದಲ್ಲಿಯೇ ಮಗ್ನನಾಗಿದ್ದ ಶಾಂತಪ್ಪ ತಿರುಗಿ ನೋಡಿದಾಗ ಮರಗಳ ಮೇಲೇಳುತ್ತಿದ್ದ ಧೂಳು ಕಾಣಿಸಿತು. ಸ್ವಲ್ಪ ಹೊತ್ತಿನ ನಂತರ ಲಾರಿಯೂ ಎದುರಿಗೆ ಬಂದಿತು. ಮೇನೇಜರನ್ನು ಕಂಡು ಲಾರಿಯನ್ನು ನಿಲ್ಲಿಸಿ, ಡ್ರೈವರು ಕೆಳಗಿಳಿದು ಬಂದು ಶಾಂತಪ್ಪನಿಗೆ ವಂದಿಸಿ, ಪತ್ರವೊಂದನ್ನವನ ಕೈಗಿತ್ತ.

ಶಾಂತಪ್ಪ ಆ ಪತ್ರವನ್ನು ಓದಿಕೊಂಡ. ಅದು ಸಾಹುಕಾರರು ಅವನಿಗೆ ಬರೆದ ಮೊದಲ ವ್ಯವಹಾರ ಪತ್ರ. ಆದರಲ್ಲಿ ಶಾಂತಪ್ಪನು ಎಲ್ಲಾ ಗಣಿಗಳನ್ನು ನೋಡಿಕೊಂಡು ಬರಬೇಕೆಂದೂ, ಅಲ್ಲಿ ಸರಿಯಾಗಿ ಕೆಲಸ ನಡೆಯುವಂತೆ ನೋಡಿಕೊಳ್ಳಬೇಕೆಂದೂ ತಾವು ಇನ್ನೆರಡು ವಾರ ಬರುವುದಕ್ಕಾಗುವುದಿಲ್ಲವೆಂದೂ, ಅಲ್ಲಿಯವರೆಗೆ ಗೋಪಾಲಯ್ಯ ಅಲ್ಲಿಯೇ ಇರಬೇಕೆಂದೂ ತಿಳಿಸಿದ್ದರು. ಕಾಗದವನ್ನೋದಿಕೊಂಡ ನಂತರ ಶಾಂತಪ್ಪ ಹೇಳಿದ,

"ಸರಿ, ನೀನು ಹೋಗಿ ಅದಿರು ತುಂಬಿಕೊಂಡು ಬಾ, ನಾವು ಹೋಗ್ತೇವೆ".

ಡ್ರೈವರು ಶಾಂತಪ್ಪನಿಗೆ ವಂದಿಸಿ, ಹೋಗಿ ಲಾರಿಯಲ್ಲಿ ಕುಳಿತ. ರಸ್ತೆಯಲ್ಲಿ ಹೋಗುತ್ತಾ ಶಾಂತಪ್ಪನೆಂದ,

"ನಾಳೆ ರತ್ನ ಗುಡ್ಡಕ್ಕೆ ಹೋಗೋಣ್ವಾ ಗೋಪಾಲಯ್ಯ?"

"ಆಗಲಿ....ಆದರೆ ಹೇಗೆ ಹೋಗೋದು?"

"ದೇವರು ಕೊಟ್ಟ ಕಾಲುಗಳಿಲ್ಲವೆ?" ಶಾಂತಪ್ಪನೆಂದ, ನಗುತ್ತಾ.

"ನೀವು ಇನ್ನೂ ರಕ್ತ ತುಂಬಿಕೊಂಡಿರೋ ಹುಡುಗರಪ್ಪ, ನನ್ನಂಥ ಮುದುಕ ನಡೆದ್ಹೋದೇಂದರೇನು?"

"ಹೋಗಲಿ ಬಿಡಿ ನಾನೇ ಹೋಗಿ ಬರ್ತೇನೆ."

"ನೀವೇನು ಅದಕ್ಕೂ ತಯಾರಿದ್ದೀರಿ. ಅಲ್ಲಾರೀ, ನೀವು ಮೇನೇಜರಾಗಿ ಗಣೀಲಿ ದಿನಾ ದಿನಾ ಸುತ್ತುತೀರಿ, ನಿಮ್ಮ ಕೈಕೆಳಗಿನ ಆ ಕೊಂಗ, ಮಾಣಿಕ್ಯಮ್ ಊರಿನಲ್ಲೇ ಕೂತಿರ್ತಾನಲ್ಲರೀ, ಇದೇನನ್ಯಾಯ?"

"ಅವನು ತನ್ನ ಕರ್ತವ್ಯ ಮಾಡಲಿಲ್ಲಾಂತ ನಾವೂ ಮಾಡದಿರೋದಕ್ಕಾಗುತ್ತೆಯೇ ಗೋಪಾಲಯ್ನೋರೆ."

"ಹಾಗಲ್ಲರೀ, ನೀವು ಅವನಿಗೆ ದಿನಾ ಏನಾದರೂ ಕೆಲಸ ಹೇಳಬೇಕು, ಇಲ್ಲದಿದ್ದರೆ ನಿಮ್ಮ ಜೊತೇಲೇ ಗಣೀಗೆ ಕರಕೊಂಡು ಬರಬೇಕು. ಹೇಗಿದ್ರೂ ಅಡಿಗೆಯವನು ಬಂದಿದ್ದಾನೆ ನಿನ್ನೆಯಿಂದ," ಎಂದು ಕಳೆದ ದಿನ ಅಡಿಗೆಯವನು ಬಂದುದನ್ನು ಜ್ಞಾಪಿಸಿದ ಗೋಪಾಲಯ್ಯ.

ಶಾಂತಪ್ಪ ಏನೂ ಮಾತನಾಡಲಿಲ್ಲ. ಅವನು ಸುಮ್ಮನೆ ನಡೆಯುತ್ತಿದ್ದುದನ್ನು ಕಂಡು ಪುನಃ ಗೋಪಾಲಯ್ಯನೆಂದ,

"ನೀವು ಹೀಗೆಲ್ಲಾ ಸುಮ್ಮನಿರಬಾರದು ಶಾಂತಪ್ಪನೋರೆ! ಅವನು ಊರಿನಲ್ಲಿ ಆ ರತ್ನಮ್ಮನ ಗಂಟು ಹಾಕ್ಕೊಂಡು ಮಜವಾಗಿ ಕುಳಿತಿರೋದು, ವಾರವಾರವೂ ಚನ್ನಯ್ಯನ ಹತ್ತಿರ ಲಂಚ ಹೊಡೀತಿರೋದು, ನೀವು ಮಾತ್ರ ಮೇನೇಜರಾಗಿ ಸುಮ್ಮನಿರೋದು. ಇದೇನನ್ಯಾಯ....ನಾನು ನಿಮ್ಮ ಈ ಒಳ್ಳೆಯತನಾ ಸಹಿಸಲಾರೆನಪ್ಪಾ!"

"ಹಾಗಾದರೆ ಏನು ಮಾಡಬೇಕು ನಾನು?"

"ಇಲ್ಲ ನೀವೂ ಸಹ ಗಣಿಗೆ ಬರೋ ನಾಲ್ಕಾರು ಹುಡುಗೀರನ್ನ ನೋಡಿಕ್ಕೊಂಡು, ಚನ್ನಯ್ಯನಿಂದ 'ಸಲೀಸಾಗಿ' ಕೈಗೆ ನಾಲ್ಕು ಕಾಸು ಇಸುಕೊಂಡು ಮಜಾ ಮಾಡಿ, ಇಲ್ಲದಿದ್ದರೆ ಈ ಅನ್ಯಾಯಗಳೆಲ್ಲಾ ನಿಲ್ಲಿಸೋಕೆ ಗುಟ್ಟಾಗಿ ಸಾವಕಾರ್ರಿಗೆ ತಿಳಿಸಿ. ನೀವು ಮಾತ್ರ ಸುಮ್ಮನಿರಬೇಡಿ."

"ಇವೆರಡರಲ್ಲಿ ಯಾವುದು ಸರಿಯಾದ್ದು?" ಶಾಂತಪ್ಪ ಕೇಳಿದ.

"ನಾನು ಸತ್ಯವಾಗಿ ಹೇಳೋದಾದರೆ, ನೀವು ಇನ್ನೂ ಮೈನಲ್ಲಿ ಶಕ್ತಿಯಿರೋವಾಗಲೆ ಮಜಾ ಮಾಡೋದು ಒಳ್ಳೇದು ನೋಡೀಪ್ಪ. ಇದೇನೂ ಕೆಟ್ಟ

ಚಾಳಿಯಲ್ಲ. ಗಣಿಗೆ ಬರೋ ನಾಲ್ಕಾರು ಹುಡುಗೀರಂತೂ ನಿಮ್ಮನ್ನು ಕಂಡು ಮಿಡುಕಾಡುತ್ತಾರೆ; ಚನ್ನಯ್ಯನೂ ಸಹ ನೀವು ಸಹಾಯ ಮಾಡೋದಾದ್ರೆ ಕಾಲಿಗೆ ಬಿದ್ದುಬಿಡುತ್ತಾನೆ. ತಾನಾಗೇ ಬಂದ ಸುಖಾ ಬಿಡಬಾರದು ಶಾಂತಪ್ಪ ನೋರೆ !"

ಗೋಪಾಲಯ್ಯನ ಮಾತು ಕೇಳಿ ಶಾಂತಪ್ಪನಿಗೆ ಒಂದು ಬಾರಿ ಬೇಸರ, ಒಂದು ಬಾರಿ ನಗು ಬರುತ್ತಿದ್ದುವು

"ಇಂಥ ಸುಖಗಳೆಲ್ಲಾ ಹೀಗೇ ಗೋಪಾಲಯ್ಯ ಬಹಳ ಸುಲಭವಾಗಿ ಬರುತ್ವೆ. ಆದರೆ ಅನೀತಿ ಅನುಸರಿಸೋದು ಸುಲಭವಾಗಿದೇಂತ ಆ ತಪ್ಪು ಮಾಡೋಕಾಗುತ್ಯೆ ?"

"ನೀವು ಬರೀ ಘನಸ್ತರ ಗೊಡ್ಡು ಶಾಂತಪ್ಪ. ನೀವಾಗಿಯೇ ತಪ್ಪು ಮಾಡ್ತೀರಾ ? ಹೆಣ್ಣುಗಳೇ ಮೇಲೆ ಬಿದ್ದು ಬರೋವಾಗ ಯಾಕೆ ಬಿಡಬೇಕು ? ....ಚೆನ್ನಯ್ಯನೇ ಮುಂದೆ ಬಂದು ರೂಪಾಯಿ ಕೊಡೋವಾಗ ಬೇಡ ವೆನ್ನೋದು ಯಾಕೆ ?"

ಶಾಂತಪ್ಪ ಉತ್ತರಿಸದೇ ಮೌನವಾಗಿ ನಡೆಯುತ್ತಿದ್ದ.

"ನಿಮಗೆ ಗೊತ್ತಿಲ್ಲ ಶಾಂತಪ್ಪ, ನೀವು ಅವರ ಹತ್ತಿರದಿಂದ ದೂರಹೋದ ತಕ್ಷಣವೇ ಆ ಹುಡುಗೀರು ನಿಮ್ಮನ್ನ ಹೇಗೆ ನೋಡುತಾರೆ ಗೊತ್ತೆ ? ಅವರ ಆ ದೃಷ್ಟಿಯ ಅರ್ಥ ನಂಗೆ ಗೊತ್ತು....ಅವರಿಗೆ ಬೇಕು !"

ಗೋಪಾಲಯ್ಯನ ಒಂದೊಂದು ಮಾತೂ ಶಾಂತಪ್ಪನ ಮನಸ್ಸನ್ನು ಕಲಕಿ ಕಲಕಿ ಪರೀಕ್ಷಿಸುತ್ತಿದ್ದುವು. "ನೀವೇನು ಶುಕಮುನಿಯೇ" ಎಂಬೊಂದು ಪ್ರಶ್ನಾರ್ಥಕ ವಾಕ್ಯವನ್ನವನು ಎಂದೋ ಎಲ್ಲಿಯೋ ಓದಿದುದು ನೆನಪಾಯ್ತು. ಅವನೇನು ಶುಕಮುನಿಯಲ್ಲ. ಕಂಡ ಕಂಡ ತರುಣಿಯರನ್ನೆಲ್ಲ ತಾಯಿಯೆಂಬ ಸನ್ಯಾಸ ದೃಷ್ಟಿ ಅವನಲ್ಲಿರಲಿಲ್ಲ. ಸೌಂದರ್ಯವನ್ನು ಕಂಡತ್ತ ನೋಡುವುದ ವನಿಗೂ ಸ್ವಾಭಾವಿಕವಾಗಿದ್ದಿತು. ಉಪ್ಪು, ಖಾರ ಸೇರುತ್ತಿದ್ದ ಅವನ ದೇಹ ದಲ್ಲೂ ಬಯಕೆ ಬಾಧೆಗಳೇಳುತ್ತಿದ್ದುವು ಅದೇ ಹಳ್ಳಿಯ ಹಲವು ಸುಂದರ ಹೆಣ್ಣುಗಳು ತನ್ನನ್ನು ಯಾವುದೋ ಒಂದು ದೃಷ್ಟಿಯಿಂದ ನೋಡುತ್ತಿದ್ದುದು, ನೋಡಿ ಮುಗುಳ್ನಗೆ ಬೀರಿ ತಲೆ ತಗ್ಗಿಸಿಕೊಂಡು ಹೊರಟುಹೋಗುತ್ತಿದ್ದುದು, ಅವರುಗಳು ನಗರದ ಹೆಣ್ಣುಗಳಿಗೆ ವಿರುದ್ಧವಾಗಿ ಯಾವ ತೆರನಾದ ನಿಯಂತ್ರ ಣವೂ ಇಲ್ಲದೇ ಸ್ವೇಚ್ಛೆಯಾಗಿ ಬೆಳೆದಿದ್ದುದನ್ನು ಕಂಡು ಒಂದು ಕ್ಷಣ ವೈ

ಮರೆಯುತ್ತಿದ್ದ ನವನು. ಆದ್ದರಿಂದ ಅವನಲ್ಲಿಯೂ ಗೋಪಾಲಯ್ಯನ ಮಾತು ಗಳಿಂದಾಗಿ, ಬಯಕೆಯು ಮುಗಿಲೆತ್ತರಕ್ಕೆ ಬೆಳೆದು ನಿಂತಿತು.

ಆದರೆ ಮರುಕ್ಷಣವೇ ಅವನ ಸಂಸ್ಕಾರ ಸಮುದ್ರದಿಂದ ವಿವೇಕಯುತ ಭಾವನೆಯೊಂದು ಮೇಲೆದ್ದು ಬಂದಿತು. ತಾನು ಎಲ್ಲರಿಗಿಂತಲೂ ವಿದ್ಯಾವಂತ, ವಿಚಾರಶೀಲ ಬುದ್ಧಿಯುಳ್ಳವನು. ಸರಿ ತಪ್ಪುಗಳನ್ನು ತಿಳಿಯಬಲ್ಲವನು. ತಾನೇ ದುರಾಚಾರ ಶೀಲನಾಗುವುದೇ ? ನಾಗರಿಕತೆಯರಿಯದ, ನಡತೆ ತಿಳಿಯದ ಕೆಲವು ಹಳ್ಳಿಯ ಹೆಣ್ಣುಗಳು ದೇಹ ತೋರಿದರೆ ಆಸ್ಪಿಕೊಳ್ಳುವುದೆ? ಛೆ!....

"ಆದರೆ ನಾವು ಹಾಗೆಲ್ಲಾ ಹೋಗಬಾರದು ಗೋಪಾಲಯ್ಯ" ಎಂದು ಹೇಳಿದ ಶಾಂತಪ್ಪ, ಅವನ ಮುಖವನ್ನೇ ಕುತೂಹಲಿಯಾಗಿ ನೋಡುತ್ತಿದ್ದ ಗೋಪಾಲಯ್ಯನಿಗೆ ನಿರಾಶೆಯುಂಟುಮಾಡಿದ.

"ನೀವು ಹುಡುಗರಾದರೂ ದೊಡ್ಡೋರು ಸಾರ್!" ಕೊನೆಗೆ ಗೋಪಾಲಯ್ಯ ಉದ್ಗರಿಸಿದ.

* * *

ಅವರು ಬಿಡಾರಕ್ಕೆ ಹಿಂದಿರುಗಿದ ನಂತರ ಕೆಲವು ಗಂಟೆಗಳು ಕಳೆದರೂ ಲಾರಿ ಬಂದಿರಲಿಲ್ಲ. ಕೂಲಿಯಾಳುಗಳು ಹಿಂದಿರುಗಿ ಎಲ್ಲರೂ ಬಂದನಂತರವೂ ಲಾರಿ ಬರಲಿಲ್ಲ; ಅದು ಯಂತ್ರ ಕೆಟ್ಟು ಗಣಿಯಲ್ಲೇ ನಿಂತಿದ್ದಿತೆಂದು ಕೆಲವರೆಂದರು.

ರಾತ್ರಿ ಊಟವಾದ ನಂತರವೂ ಒಂದೆರಡು ಗಂಟೆಗಳ ಕಾಲ ಲಾರಿ ಬರ ಲಿಲ್ಲವೆಂದು ಕೊಂಡು ಬಾಗಿಲಿಗೆ ಹೋಗಿ ಹಲವಾರು ಬಾರಿ ಗುಡ್ಡಗಳತ್ತ ನೋಡಿ ಬಂದ ಶಾಂತಪ್ಪ. ಕೊನೆಗೊಮ್ಮೆ ಮಾಣಿಕ್ಯಂ ಹೇಳಿದ,

"ಅವರು ಯಾವಾಗ ಬರುತ್ತಾರೋ, ನೀವು ಮಲಗಿಕೊಳ್ಳಿ ಸಾರ್."

"ಪಾಪ!....ಅವರೆಲ್ಲ ಊಟವಿಲ್ಲದೇ ಅಲ್ಲೇ ರಾತ್ರಿಯೆಲ್ಲಾ ಇದ್ದು ಬಿಡ್ತಾರೋ ಏನೋ!" ಎಂದ ಶಾಂತಪ್ಪ.

ಅದಕ್ಕೆ ನಾವೇನು ಮಾಡೋಕಾಗುತ್ತೆ ಸಾರ್....ಹಸಿವಾದರೆ ಅವರೇ ಬರುತ್ತಾರೆ, ನಡಕೊಂಡು."

ಶಾಂತಪ್ಪ ಮಲಗಿದ ನಂತರವೂ ಅವನಿಗೆ ಎಷ್ಟೋ ಹೊತ್ತಿನ ತನಕ ನಿದ್ರೆ ಬಂದಿರಲಿಲ್ಲ. ಗಣಿಯ ಬಳಿಯೋ ಗುಡ್ಡಗಳ ನಡುವೆಯೋ ಕತ್ತಲೆಯಲ್ಲಿ ಛಳಿಯಲ್ಲಿ ನಡುಗುತ್ತಾ ಉಪವಾಸವಿರುವ ಲಾರಿಯ ಕೆಲಸಗಾರರ ನೆನಪೇ

ಆಗುತ್ತಿದ್ದಿತು; ಅವರಲ್ಲಿ ಅದಿರನ್ನು ಬಾಣಲೆಗಳಿಗೆ ತುಂಬಿಕೊಡುವ ಒಂದಿಬ್ಬರು ಹನ್ನೆರಡು ಹದಿಮೂರು ವರುಷ ವಯಸ್ಸಿನ ಬಾಲಕರಿದ್ದರು. ಅವರ ಹರಿದ ಉಡುಪುಗಳನ್ನು ಮಧ್ಯಾಹ್ನವೇ ನೋಡಿದ್ದ ಶಾಂತಪ್ಪ. ಆ ಬಾಲಕರು ಛಳಿಯಲ್ಲಿ ನಡುಗುವ ಚಿತ್ರವನ್ನು ಕಲ್ಪಿಸಿಕೊಂಡು ಶಾಂತಪ್ಪನೂ ಒಂದು ಬಾರಿ ತನ್ನ ಹೊದಿಕೆಯೊಳಗೇ ಮುಲುಗುಟಿದ. ಆ ಗುಡ್ಡಗಳಲ್ಲಿ ಸೇರಿಕೊಂಡಿದ್ದ ಕೂಲಿಗಳ ವಿಷಯದ ನೆನಪೂ ಆಗ ಅವನಿಗೆ; ಕೊನೆಗೆ ನಿದ್ರೆಯೇ ಬರಲಿಲ್ಲ. ಒಂದೆರಡು ಬಾರಿ ಎದ್ದು ಹೊರಗೆ ಹೋಗಿ ನಿಂತುಕೊಂಡು ಗುಡ್ಡಗಳತ್ತ ನೋಡಿದ. ಅದೇ ಗುಡ್ಡಗಳು ನುಂಗುತ್ತಿದ್ದ ಹಿಮರಾಶಿಯ ಮಧ್ಯೆ ಮಸಕು ಮಸಕಾಗಿ ಕಾಣುತ್ತಿದ್ದುವು. ಅತ್ತಣಿಂದ ಛಳಿ ಗಾಳಿ ಭರ್ರನೆ ಬೀಸಿ ಬಂದು ಮುಖಕ್ಕೆ ಬಡಿಯುತ್ತಿದ್ದಿತು. ತಲೆಯೆತ್ತಿ ನೋಡಿದಾಗ, ಕತ್ತಲಿನಲ್ಲಿ ಆಕಾಶದಲ್ಲಿ ಚೆಲ್ಲಿಕೊಂಡಿದ್ದ ಅಸಂಖ್ಯಾತ ನಕ್ಷತ್ರಗಳು ಕಾಣಿಸಿದುವು. ಒಂದೆಡೆ ದಪ್ಪನಾದ ದೀಪ ಹಚ್ಚಿದಂತೆ ಶುಕ್ರ ನಕ್ಷತ್ರ ಬೆಳಗುತ್ತಿದ್ದಿತು. ಬೆಳಕಾಗುವುದಕ್ಕಿದು ಮುನ್ಸೂಚನೆ.

"ಇಷ್ಟು ಹೊತ್ತಾದರೂ ಅವರೇಕೆ ಬಂದಿಲ್ಲ?" ಎಂದುಕೊಂಡ ಶಾಂತಪ್ಪ.

ಇದ್ದಕ್ಕಿದ್ದಂತೆ ದೂರದ ಗುಡಿಸಲಿನ ಬಾಗಿಲ ಬಳಿ ನಾಯಿಯೊಂದು ಬೊಗಳಿತು. ಅತ್ತ ಕಡೆಯಿಂದ ಕೆಲವರು ಮಾತನಾಡಿಕೊಂಡು ಬರುತ್ತಿದ್ದುದೂ ಶಾಂತಪ್ಪನಿಗರಿವಾಯ್ತು. ಅವರು ಹತ್ತಿರ ಬಂದಂತೆ ಲಾರಿಯ ಕೆಲಸಗಾರನೊಬ್ಬ ಒಬ್ಬ ಬಾಲಕನನ್ನು ಕೈಹಿಡಿದು ನಡೆಸಿಕೊಂಡು ಬರುತ್ತಿದ್ದುದ್ದು ಕಾಣಿಸಿತು. ತಕ್ಷಣ ಕೇಳಿದ ಶಾಂತಪ್ಪ,

"ಯಾಕಪ್ಪಾ....ಯಾಕೆ ಇಷ್ಟು ತಡವಾಯ್ತು....ಇವನಿಗೇನಾಯ್ತು?"

"ಲಾರಿ ಕೆಟ್ಟು ಹೋಯ್ತು ಸಾರ್....ಇಷ್ಟು ಹೊತ್ತೂ ರಿಪೇರಿ ಮಾಡಿದ್ನು ಏನೂ ಆಗಲಿಲ್ಲ....ಹೊರಟು ಬರುವಾಗ ದಾರೀಲಿ ಹುಲಿ ಅಡ್ಡ ಹಾಕಿಬಿಡ್ತು....ಹತ್ತು ಹದಿನೈದು ನಿಮಿಷ ಹೆದರಿಸಿದ ಮೇಲೆ ಓಡಿಹೋಯ್ತು........ಅದ್ನು ನೋಡಿ ಇವನಿಗೆ ಛಳಿ ಬಂದುಬಿಟ್ಟಿದೆ," ಆಳು ಉತ್ತರವಿತ್ತ.

ಆ ಬಾಲಕ ಗಡಗಡನೆ ನಡುಗುತ್ತಿದ್ದ. ಕಟಕಟನೆ ಹಲ್ಲುಗಳು ಹೊಡೆಯುತ್ತಿದ್ದವು. ಅವರು ಯಾರ ಬಳಿಯಲ್ಲಿಯೂ ಬೆಚ್ಚನಾದ ಬಟ್ಟೆಯಿರಲಿಲ್ಲವಾದುದರಿಂದ ಅವನನ್ನು ಹಾಗೆಯೇ ಕರೆತಂದಿದ್ದರು. ಶಾಂತಪ್ಪ ತಕ್ಷಣ ಒಳ

ಹೋಗಿ ತಾನು ಹೊದ್ದಿದ್ದ ರಗ್ಗನ್ನು ತಂದುಕೊಟ್ಟ. ಅವರೆಲ್ಲ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು.

"ಯಾಕೆ ಮುಖ ನೋಡ್ತೀರಿ. ಹೊದಿಸಿಬಿಡಿ." ಶಾಂತಪ್ಪನೆಂದ.

"ನಿಮಗೆ ಸಾರ್...." ಶಂಕಿಸುತ್ತ ಕೇಳಿದ ಆಳು.

"ಮೊದಲು ಅವನಿಗೆ ಹೊದಿಸು....ಆಮೇಲೆ ಮಾತಾಡುವಿಯಂತೆ"ಎಂದು ಶಾಂತಪ್ಪ ಅವನ ಕೈಗೆ ರಗ್ಗನ್ನಿತ್ತ. ಬಾಲಕನಿಗೆ ರಗ್ಗನ್ನು ಹೊದಿಸುತ್ತಿರುವಾಗ ಆಳು ಕೇಳಿದ,

"ತಾವು ಸಾರ್....ಇಷ್ಟು ಬೇಗ ಎದ್ದುಬಿಟ್ಟಿದೀರಾ ?"

"ನಂಗೆ ರಾತ್ರಿಯೆಲ್ಲಾ ನಿದ್ರೇನೆ ಬರಲಿಲ್ಲ....ನೀವು ಯಾಕೆ ಬರಲಿಲ್ಲಾಂತ ಯೋಚನೆಯಾಗಿತ್ತು," ಶಾಂತಪ್ಪನೆಂದಾಗ ತಕ್ಷಣ ಡ್ರೈವರು ಹೇಳಿದ,

"ಇವೆಲ್ಲಾ ನಮಗೆ ಸಾಮಾನ್ಯವಾಗಿಬಿಟ್ಟಿದೆ ಸಾರ್... ಹೀಗೇ ಎಷ್ಟೋ ದಿನ ಆಗಿಬಿಟ್ಟಿದೆ....ಎಷ್ಟೋ ದಿನ ಒಂದೊಂದು ದಿನ ಪೂರ್ತಿ ಗುಡ್ಡದಲ್ಲೇ ಉಪವಾಸ ಇದ್ದುಬಿಡ್ತೀವಿ....ಈವತ್ತು ಈ ಹುಡುಗ ಇದ್ದಾಂತ ಬಂದುಬಿಟ್ವಿ ಅಷ್ಟೆ....ಇಲ್ದಿದ್ರೆ ಬರ್‍ತಾ ಇರ್‍ಲಿಲ್ಲ."

"ಬರದೆ ಇದ್ರೆ ಉಪವಾಸ ಹೇಗಿರ್‍ತಿದ್ರಿ ?" ಶಾಂತಪ್ಪ ಕುತೂಹಲತೆಯಿಂದ ಕೇಳಿದ.

"ಈ ಕೆಲಸಕ್ಕೆ ಬಂದ ಮೇಲೆ ಅದರಲ್ಲೂ ಗಣಿ ಲಾರೀಗೆ ಬಂದ ಮೇಲ್ತೆ ಇವೆಲ್ಲಾ ನಮ್ಮ ಹಣೇಲಿ ಬರೆದಿದ್ದೀಂತ ನಮಗೆ ಗೊತ್ತು ಸಾರ್...." ನಗುತ್ತಾ ಹೇಳಿದ ಆ ಡ್ರೈವರು.

ಆ ಛಳಿ, ಆಯಾಸ ಮತ್ತು ಹಸಿವಿನಲ್ಲಿಯೂ ಡ್ರೈವರು ಹೇಳಿದ ಆ ಮಾತುಗಳು ಅವನ ಸಂತೋಷ ಪ್ರವೃತ್ತಿಯನ್ನು ಕಂಡು ಶಾಂತಪ್ಪನಿಗೊಂದು ತೆರನಾದ ವ್ಯಾಕುಲವುಂಟಾಯಿತು. ಅವನು ಕೇಳಿದ,

"ಈಗ ಊಟಕ್ಕೇನು ಮಾಡ್ತೀರಿ ಮತ್ತೆ ?"

"ಏನು ಮಾಡೋದು ಸಾರ್....ನಮ್ಮ ಹತ್ತಿರ ಯಾರಲ್ಲೂ ದುಡ್ಡಿಲ್ಲ... ನಾವು ನಿನ್ನೇನೆ ಕೋಣಸಂದ್ರಕ್ಕೆ ಹೊರಟು ಹೋಗ್ತೀವೀಂತ ತಿಳ್ಕೊಂಡಿದ್ವಿ." ಎಂದು, ಜೋಲು ಮುಖ ಹಾಕಿಕೊಂಡ.

"ಹೋಗಲಿ....ನಾನು ಅಕ್ಕಿ ಬೇಳೆಯೆಲ್ಲಾ ಕೊಡ್ತೀನಿ....ನೀವು ಅಡಿಗೆ

ಮಾಡಿಕೊಂಡು ಮೊದಲು ಊಟ ಮಾಡಿ...." ಎಂದು ಒಳಹೋಗಿ ತಾನೇ ಅವರ ಊಟಕ್ಕೆ ಬೇಕಾದುದನ್ನೆಲ್ಲಾ ತಂದು ಕೊಟ್ಟ. ಅವನು ಒಳಕ್ಕೆ ಹೋಗಿದ್ದಾಗ ಮಾಣಿಕ್ಯಂ. ಗೋಪಾಲಯ್ಯ, ಅಡಿಗೆ ಮನೆಯಲ್ಲಿ ಅಡಿಗೆಯವನು ಇವರ ಗೊರಕೆ ಶಬ್ದಗಳು ಒಂದಕ್ಕೊಂದು ಪಂಥಹೂಡಿದಂತೆ ಕೇಳಿ ಬರುತ್ತಿದ್ದುವು. ಅವನ್ನು ಕೇಳಿದ ಶಾಂತಪ್ಪನಿಗೆ ನಗು ಬಂತು.

*　　　*　　　*

ಮಾರನೆಯ ದಿನ ಶಾಂತಪ್ಪನು ಗಣಿಗೆ ಹೋಗಿದ್ದವನು, ಆದಿನ ಬಂದ ಬೇರೊಂದು ಲಾರಿಯಲ್ಲಿನ ಸಲಕರಣೆಗಳ ಸಹಾಯದಿಂದ ಕೆಟ್ಟು ನಿಂತಿದ್ದ ಲಾರಿಯನ್ನು ಸರಿಮಾಡಿಸಿದ. ಆ ದಿನವೆಲ್ಲಾ ಅದೇ ಗಣಿಯಲ್ಲೇ ಇರಬೇಕಾದ್ದರಿಂದ ರತ್ನಗುಡ್ಡಕ್ಕೆ ಹೋಗಲೇ ಇಲ್ಲ. ಲಾರಿಯಲ್ಲೇ ಕುಳಿತು ಹಿಂದಿರುಗಿದ್ದ. ಅವನು ಊರಿಗೆ ಹಿಂದಿರುಗಲು ಲಾರಿಯೇರುವಾಗ—

ಹತ್ತಿರದಲ್ಲೇ ಗಿಡವೊಂದರ ಗುಂಪಿದ್ದಿತು. ಆ ಗಿಡಗಳ ಹಿಂದೆ ಯಾವುದೋ ಬಟ್ಟೆ ಚಲಿಸಿದುದು ಅವನಿಗೆ ಕಾಣಿಸಿತು. ಹಾಗೆಯೇ ಪುನಃ ನೋಡಿದ. ಸುಮಾರು ಹದಿನೆಂಟು ವರ್ಷ ವಯಸ್ಸಿನ ಯುವತಿಯೋರ್ವಳು, ಗಣಿಯ ಕಲಸಗಾರ್ತಿ, ಅಲ್ಲಿ ನಿಂತಿದ್ದಳು. ಅವಳ ಸೀರೆಯ ಸೆರಗು ಪೂರ್ಣವಾಗಿ ನೆಲದ ಮೇಲೆ ಬಿದ್ದಿದ್ದಿತು. ಚೌಕಚೌಕನಾದ ಚಿತ್ರಗಳಿದ್ದ ಬಟ್ಟೆಯ ರವಿಕೆಯನ್ನವಳು ಧರಿಸಿದ್ದಳು. ಅದೇ ಅದನ್ನು ಬಿಚ್ಚಿದಳೋ ಅವನಿಗೆ ತಿಳಿಯದು ; ಆ ರವಿಕೆಯ ತುದಿಗಳನ್ನು ಗಂಟುಹಾಕುತ್ತಿದ್ದಳು. ಆ ಗಂಟಿನ ಬದಿಯ ನಸು ಬಿಳುಪಾದ ನಣ್ಣ ಸೊಂಟವವನಿಗೆ ಕಾಣಿಸಿತು, ಹಾಗೆಯೇ ಅದರ ಮೇಲಿನ ಪುಷ್ಟಾಂಗಗಳು. ಶಾಂತಪ್ಪ ಅವಳ ಮುಖವನ್ನು ನೋಡಲಿಲ್ಲ. ಅವನಿಗೆ ನೋಡಬೇಕೆನ್ನಿಸಲೇ ಇಲ್ಲ. ಅವಳ ವಿಷಯದಲ್ಲಿಯೇ ಅವನಿಗೆ ಜುಗುಪ್ಸೆ ಉಂಟಾಗಿದ್ದಿತು. "ಥತ್....ಹೀನ ಹೆಣ್ಣು !" ಎಂದುಕೊಂಡು ಲಾರಿಯಲ್ಲಿ ಕುಳಿತ. ಬೇರೆ ಯಾರು ಆ ದೃಶ್ಯವನ್ನು ನೋಡಿದರೆಂಬುದನ್ನು ಅವನು ಗಮನಿಸಲಿಲ್ಲ. ಯಾವುದೋ ಒಂದು ಮೂಕ ಸಂಕಟ ಅವನೊಳಗೆ ಕುದಿಯುತ್ತಿದ್ದಿತು. ಅದೇ ಸಂಕಟದಲ್ಲಿಯೇ ಬಿಡಾರವನ್ನು ಸೇರಿದ.

ಆ ಸಂಜೆ ಶಾಂತಪ್ಪ ಬೀದಿಯ ಬಾಗಿಲು ಬಳಿ ನಿಂತಿದ್ದಾಗ, ಗಣಿಯ ಹೆಣ್ಣಾಳು ಪಾರ್ವತಿ ಎದುರು ಮನೆಯಲ್ಲಿಯೇ ವಾಸವಾಗಿದ್ದುದು ಅವನಿಗೆ ತಿಳಿಯಿತು. ಅವಳು ಆ ಮನೆಯ ಒಳಗಿನಿಂದ ಬಂದು ಬೀದಿಯಲ್ಲಿ ಮುಖ

ತೊಳೆದುಕೊಂಡಳು, ಪುನಃ ಒಳಕ್ಕೆ ಹೊರಟುಹೋದಳು. ಒಂದೆರಡು ನಿಮಿಷ ಗಳ ನಂತರ ಹೊರಬಂದಾಗ ಅವಳ ಮುಖವನ್ನು ನೋಡಿದ ಶಾಂತಪ್ಪನಿಗೆ ಅವಳೇ ಪಾರ್ವತಿಯೇ ಎನಿಸಿತು. ತೆಳ್ಳಗಿನ ಚೀಟಿ ಸೀರೆಯೊಂದನ್ನುಟ್ಟಿದ್ದಳು. ಮುಖಕ್ಕೆ ಪೌಡರು ಹಚ್ಚಿದ್ದುದು ಸ್ಪಷ್ಟವಾಗಿ ಕಾಣುತ್ತಿದ್ದಿತು. ಸರಿಯಾಗಿ ಉಜ್ಜಿಕೊಳ್ಳದೇ ಬಿಟ್ಟ ಪೌಡರು ಅವಳ ಕಿವಿಯ ಬಳಿ ಗಡ್ಡೆಯಾಗಿ ನಿಂತಿದ್ದಿತು. ಹೆರಳು ಹಾಕಿದ ತಲೆಗೂದಲಿಗೆ, ಆ ದಿನವೇ ಬಹುಶಃ ಗುಡ್ಡ ಮರಗಳಿಂದ ಕಿತ್ತು ತಂದ ಜಾಲಿ ಹೂವುಗಳನ್ನು ಮುಡಿದಿದ್ದಳು. ಎಲ್ಲಕ್ಕಿಂತಲೂ ಹೆಚ್ಚಾಗಿ ಆ ಹಳ್ಳಿಯ ಹೆಣ್ಣನ್ನು ನೋಡಿದ ಗಂಡಿನಲ್ಲಿ ಬಯಕೆಯ ಬೆಟ್ಟವನ್ನೆಬ್ಬಿಸುತ್ತಿದ್ದ ಆ ಎದೆ! ಅವಳು ತೊಟ್ಟಿದ್ದುದು ಅವನು ಮಧ್ಯಾಹ್ನ ಗಣಿಯಲ್ಲಿ ಕಂಡ ಚೌಕ ಚೌಕನಾದ ಚಿತ್ರಗಳಿದ್ದ ಬಟ್ಟೆಯ ರವಿಕೆ! ಅವಳು ಶಾಂತಪ್ಪನನ್ನು ನೋಡಿ ಕಿಸಕ್ಕನೆ ನಕ್ಕಳು.

ಆ ರಾತ್ರಿ ಊಟಮಾಡಿ ಮಲಗಿದ ಶಾಂತಪ್ಪನಿಗೆ ನಿದ್ರೆಯೇ ಬರಲಿಲ್ಲ. ಹಲವು ಭಾವಗಳು ಕಲಸಿಕೊಂಡು ಕುದಿಯುತ್ತಾ ಅವನ ಮನಸ್ಸನ್ನು ಕಲಕುತ್ತಿದ್ದುವು. ಹೆಚ್ಚು ಹೆಚ್ಚು ಚಿಂತಿಸಿದಂತೆ ನಿದ್ರೆಯೂ ದೂರ ದೂರ ಹೋಗುತ್ತಿದ್ದಿತು. ಹಾಸಿಗೆಯಲ್ಲಿ ಹೊರಳುತ್ತಲೇ ಇದ್ದ. ಅಂದು ಮಧ್ಯಾಹ್ನ, ಸಂಜೆ ಕಂಡ ಆ ದೃಶ್ಯಗಳು ಪುನಃ ಪುನಃ ಬಂದು ಎದುರು ನಿಲ್ಲುತ್ತಿದ್ದುವು. ಸಂಜೆ ಪಾರ್ವತಿಯು ಆ ರೀತಿ ತನ್ನನ್ನು ನೋಡಿ ಬೀದಿಯಲ್ಲೇ ನಕ್ಕಾಗ ಬೇಸರಗೊಂಡ ಶಾಂತಪ್ಪ ತಕ್ಷಣ ಬೇರೆಡೆಗೆ ಮುಖಮಾಡಿಕೊಂಡಿದ್ದ. ಅವಳನ್ನು ನೋಡದವನಂತೆ ನಟಿಸಿದ್ದ. ಆದರೆ ಮನೆಯ ಒಳ ಬಂದನಂತರ ಅವಳ ಆ ರೂಪ ಅವನನ್ನು ಕೆಣಕಿ ಕೆಣಕಿ ಅವನ ಧ್ಯೇಯ ದೇಗುಲದ ಬುಡವನ್ನೇ ಅಲುಗಿಸಲು ಪ್ರಯತ್ನಪಡುತ್ತಿದ್ದಿತು. ಇನ್ನೂ ಒಂದೇ ಒಂದು ಬಾರಿ ಹೊರಗೆ ಹೋಗಿ ಅವಳನ್ನು, ಅವಳ ಆ ಉಬ್ಬಿದೆದೆಯನ್ನು ನೋಡಿಬಿಡೋಣ ಎಂದವನು ಚಪಲಗೊಳ್ಳುತ್ತಿದ್ದನು. ಮತ್ತೊಮ್ಮೆ ಅವಳ ಆ ಮುಗುಳ್ನಗುವನ್ನು ನೋಡಬೇಕು ಎಂದು ಮನಸ್ಸೆಳೆಯುತ್ತಿದ್ದಿತು. ಆದರೆ ಯಾವುದೋ ಶಕ್ತಿ. ಅವನನ್ನು ಆ ಚಪಲದ ಬಾಯಿಗೆ ದೂಡಿ ಬೀದಿಯ ಬಾಗಿಲಿನ ಬಳಿ ಹೋಗಿ ಮತ್ತೊಮ್ಮೆ ನಿಲ್ಲದಂತೆ ತಡೆಗಟ್ಟಿತ್ತು. ಅವನು ಚಿಂತಿಸುತ್ತಾ ಒಳಗೇ ಕುಳಿತಿದ್ದ. ಆದರೀಗ ಪುನಃ ಅವೇ ಚಪಲದ ಬೆಂಕಿಯೆದ್ದಿತವನಲ್ಲಿ. ಬೇಸರವಾಗಿ ಎದ್ದು ಕುಳಿತುಕೊಂಡು ಕೈ ಗಡಿಯಾರವನ್ನು ನೋಡಿಕೊಂಡ. ರಾತ್ರಿ ಹನ್ನೊಂದು

ಗಂಟೆಯಾಗಿದ್ದಿತು. ನಿದ್ರೆ ಬಾರದೆಂದು ಖಚಿತವಾದುದರಿಂದ ಎದ್ದು ಬಾಗಿಲು ತೆರೆದುಕೊಂಡು ಹೋದ. ಅಲ್ಲಿ ನಿಂತಾಗ ಅವನಿಗೆ ಕಂಡುದು ಮೇಲೆ ಅವೇ ನಕ್ಷತ್ರ ಪೂರ್ಣ ಬಾಂದಳ. ಅದೇ ಮಸಕು ಮಸಕಾದ ಗುಡ್ಡಗಳ ದೃಶ್ಯ. ಹಾಗೆಯೇ ಒಂದೆರಡು ಹೆಜ್ಜೆ ಮುಂದಿಟ್ಟು ಹೊರಟ.

ಆ ಮನೆಯ ಹಿಂದೆ ವಿಶಾಲವಾದ ಬಯಲೊಂದಿದ್ದಿತು. ಹಳ್ಳಿಯ ಹುಡುಗರು ಸಂಜೆ ಅಲ್ಲಿ ಆಟವಾಡುತ್ತಿದ್ದರು. ಕತ್ತಲೆ ಹೊತ್ತಿನಲ್ಲಿ ಹೆಂಗಸರು ಅಲ್ಲಿಯೇ ಒಮ್ಮೊಮ್ಮೆ ಶೌಚಕ್ಕೂ ಕೂಡುತ್ತಿದ್ದರು. ಶಾಂತಪ್ಪನೂ ಅತ್ತ ಕಡೆಯೇ ಹೋಗಿ ಜಲಬಾಧೆ ತೀರಿಸಿಕೊಂಡು ನಾಲ್ಕಾರು ಹೆಜ್ಜೆ ಮುಂದುವರೆದ; ಇನ್ನು ಹಾಗೆಯೇ ಹೋಗುತ್ತಿದ್ದನೋ ಏನೋ. ಆದರೆ ಯಾರೋ ಹಿಂದುಗಡೆ ಕೆಮ್ಮಿದಂತಾಯಿತು. ಶಾಂತಪ್ಪ ತಿರುಗಿ ನೋಡಿದ. ಸೀರೆಯುಟ್ಟ ವ್ಯಕ್ತಿಯೊಂದು ಕಾಣಿಸಿತು,

"ಯಾರದು ?" ಶಾಂತಪ್ಪ ಕೇಳಿದ.

"ನಾನು....ಪಾರ್ವತಿ !"

ಶಾಂತಪ್ಪನಿಗೆ ಆ ಎರಡು ಶಬ್ದಗಳು ಕೇಳಿದಾಕ್ಷಣವೇ ಭುಗ್ಗನೆ ಅವನೊಳಗೊಂದು ಬೆಂಕಿಯನ್ನು ಹಚ್ಚಿಟ್ಟಂತಾಯ್ತು.

"ಇಷ್ಟು ಹೊತ್ತಿನಲ್ಲಿ ಯಾಕೆ ಬಂದಿದ್ದೀ ?" ಶಾಂತಪ್ಪ ಪ್ರಶ್ನಿಸಿದ.

ಅವನು ಹಾಗೆ ಪ್ರಶ್ನಿಸಿದನಷ್ಟೇ. ಆದರೆ ಮರುಕ್ಷಣದಲ್ಲಿಯೇ ಅವಳು ಮುಂದೆ ಬಂದು ಅವನನ್ನು ಬಾಚಿ ತಬ್ಬಿಕೊಂಡುಬಿಟ್ಟಳು. ಅವನು ನೋಡಿ ಚಪಲಗೊಂಡ ಅವೇ ಸ್ತನಗಳವನೆದೆಯನ್ನು ಒತ್ತುತ್ತಿದ್ದುವು. ಅವನ ಮನಸ್ಸನ್ನು ಸೆಳೆದಿದ್ದ ಮುಗುಳ್ನಗೆಯನ್ನು ಬೀರಿದ್ದ ಆ ಮೊಗ ಅವನ ಮುಂದೆಯೇ ಇದ್ದಿತು. ಮೊಗದ ಪೌಡರಿನ ಸುವಾಸನೆ ಮೂಗಿಗೆ ಬಂದು ತುಂಬಿಕೊಳ್ಳುತ್ತಿತ್ತು. ಅವಳ ಆ ಬಿಳಿ ತೋಳುಗಳು ಅವನನ್ನು ತಬ್ಬಿದ್ದುವು. ಅವಳು ಕೇಳುತ್ತಿದ್ದಳು,

"ಸಾರ್!....ನನ್ನ ಆಸೆ ತೀರಿಸೋಲ್ಲವೆ ಸಾರ್ ?"

ಆದರೆ ಆಗ ಬೀಸಿ ಬಂದ ಥಣ್ಣನೆಯ ಗಾಳಿಯೊಂದು ಅವನನ್ನು ನಡುಗಿಸಿತು. ಅವನಲ್ಲಿ ಯಾವುದೋ ಒಂದು ದೈತ್ಯಶಕ್ತಿ ಇದ್ದಕ್ಕಿದ್ದಂತೆ ಉದ್ಭವಿಸಿದಂತಾಯ್ತು. ಆಗ ಸರ್ರನೆ ಅವಳ ಕೈಗಳನ್ನು ಕಿತ್ತು ಹಾಕಿ ಛಟಾರನೆ ಅವಳ ಕೆನ್ನೆಗೊಂದೇಟು ಬಿಗಿದು ಸರಸರನೆ ಹೊರಟು ಬಂದುಬಿಟ್ಟ. ಒಳ ಬಂದು

ಬಾಗಿಲು ಹಾಕಿ, ಹಾಸಿಗೆಯ ಮೇಲೆ ಉರುಳಿಕೊಂಡ. ಶಕ್ತಿಯನ್ನೆಲ್ಲ ಕಳೆದು ಕೊಂಡು, ಜೀವವಿದ್ದರೂ ಹೆಣದಂತಾಗಿದ್ದನವನು ಆ ಕ್ಷಣದಲ್ಲಿ. ಅವನು ಹಾಗೆ ಉರುಳಿಕೊಂಡನಷ್ಟೇ. ಅವನಿಗೆ ನಿದ್ರೆಯೇ ಬರಲಿಲ್ಲ. ಅವನೆದೆ ಡವಡವನೆ ಶಬ್ದ ಮಾಡುತ್ತಿದ್ದುದು ಅವನ ಕಿವಿಗೆ ಕೇಳುತ್ತಿದ್ದಿತು.

ಅದೊಂದು ಹೊಸ ಅನುಭವ ಅವನ ಜೀವನದಲ್ಲಿ. ಆ ಮೃದು ಸ್ಪರ್ಶ, ಬಿಗಿಯಪ್ಪುಗೆಯ ಸುಖ, ಹಲವರು ಅವನಂತಹ ಯುವಕರು ಹಗಲೂ ರಾತ್ರಿ ಅದನ್ನೇ ಬಯಸಿ ಬಯಸಿ, ಕಲ್ಪನೆ ಮಾಡಿಕೊಂಡು ಹುಚ್ಚರಾಗುತ್ತಿದ್ದಂತಹ ಸಮಯವದು, ಘಟನೆಯದು. ಆದರೆ ಅದು ತನ್ನ ಬಳಿಗೇ ಬ ದಿದ್ದಿತು. ಅಂತಹ ಸಮಯದಲ್ಲಿ ತನ್ನ ಬುದ್ಧಿ ತನ್ನ ಹಿಡಿತದಲ್ಲಿದ್ದುದು ಒಂದು ಹೆಮ್ಮೆಯ ವಿಷಯ ಅಂತಹ ಸಮಯದಲ್ಲಿ ಒಂದು ಗುದುರೆಯು ಕಡಿವಾಣವನ್ನು ಕಿತ್ತೊಗೆದು ಹುಚ್ಚೆದ್ದು ಓಡಿಹೋಗುವುದು ಯೌವನಕ್ಕೆ ಸಹಜವಾದರೂ ಅದು ಮನುಷ್ಯನ ಹಿಡಿತದಲ್ಲಿದ್ದು ಹಾಗಾಗದಿರುವುದು ಉತ್ತಮ ಸಂಸ್ಕಾರವೆಂದುಕೊಂಡ ಶಾಂತಪ್ಪ.

ಹಲವು ಯುವಕರು ಇದೇ ತೆರನಾಗಿ ಯೋಚಿಸಿಕೊಂಡು ಹೆಮ್ಮೆ ಪಡುತ್ತಾರೆ. ತಾವು ಮುಂದುವರಿಯದುದಕ್ಕೆ ತಮ್ಮ ಉತ್ತಮ ಸಂಸ್ಕಾರವೇ ಕಾರಣವೆಂದುಕೊಂಡರೂ ಕೆಲವೊಮ್ಮೆ ಅವರಿಗೆ ಧೈರ್ಯ ಸಾಲದಿರುತ್ತದೆ. ಅಂತಹ ಸಮಯದಲ್ಲಿ ತನ್ನ ಕೃತಿಯನ್ನು ಯಾರು ನೋಡುವರೋ, ತನಗೆಂತಹ ಅಪಖ್ಯಾತಿ ಬಂದೀತೋ ಎಂಬ ಭಯವೊಂದು ಬಲವಾಗಿ ಅವರು ಹಿಮ್ಮೆಟ್ಟುತ್ತಾರೆ. ಹಿಮ್ಮೆಟ್ಟಿದ ನಂತರವೂ ಪುನಃ ಅದೇ ಬಯಕೆ, ಕನಸುಗಳ ಸುಳಿಯಲ್ಲಿ ಸಿಲುಕಿಕೊಳ್ಳುವರು. ಪುನಃ ಅಂತಹ ರಸಸಮಯ ವೊದಗಿದರೆ ಖಂಡಿತಾ ಉಪಯೋಗಿಸಿಕೊಳ್ಳುವೆನು, ಇದುವರೆಗೆ ಬಂದುದನ್ನು ಉಪಯೋಗಿಸಿಕೊಳ್ಳದೇ ತಾನು ಮೂರ್ಖನಾದೆನೆಂದುಕೊಂಡು ದುಃಖ ಪಡುವರು. ಆ ಸಮಯದಲ್ಲಿ ತಾನು ಪಟ್ಟ ಸ್ಪರ್ಶಸುಖ, ಅನುಭವಿಸಿದ ಅಪ್ಪುಗೆಯ ಬಿಗಿಯನ್ನು ನೆನೆನೆನೆದು ಉದ್ರೇಕಿತರಾಗುವರು. ಶಾಂತಪ್ಪನೂ ಹಾಸಿಗೆಯ ಮೇಲೆ ಹೊರಳಾಡುತ್ತಾ ಇದೇ ತೆರನಾಗಿ ಉದ್ರೇಕಿತನಾಗಿದ್ದ.

* * *

ಮಾರನೆಯ ದಿನ ಬೆಳಗ್ಗೆ ಶಾಂತಪ್ಪನೆದ್ದಾಗ ಅವನ ಕಣ್ಣುಗಳು

ಧಗಧಗನೆ ಉರಿದಂತಾಗುತ್ತಿದ್ದುವು ಅವನಿಗೆ. ಕೆಂಪಾದ ಅವನ ಕಣ್ಣುಗಳನ್ನು ನೋಡಿದ ಗೋಪಾಲಯ್ಯ ಕೇಳಿದ,

"ಏನ್ಸಾರ್....ರಾತ್ರೆ ನಿದ್ರೇನೇ ಬರ್ಲಿಲ್ಲವೆ?"

"ಏನೋ ದೇಹಸ್ಥಿತಿ ಸ್ವಲ್ಪ ಸರಿಯಿರಲಿಲ್ಲ....ಅಷ್ಟೆ" ಎಂದು ಶಾಂತಪ್ಪ ಹೇಳಿದರೂ ಗೋಪಾಲಯ್ಯ ತನ್ನನ್ನು ನೋಡಿಬಿಟ್ಟನೇ ಎಂಬ ಶಂಕೆಯುಂಟಾಗಿತ್ತವನ ಮನದಲ್ಲಿ. ಗೋಪಾಲಯ್ಯ ತಕ್ಷಣ ಉತ್ತರವಿತ್ತ,

"ನಮಗೇನೋ ಸಾರ್ ರಾತ್ರೆಯೆಲ್ಲಾ ಗಾಢನಿದ್ರೆ ಬಂದುಬಿಟ್ಟಿತ್ತು."

ಶಾಂತಪ್ಪ ಬೀದಿಯ ಬಾಗಿಲಿಗೆ ಹೋಗಿ ನಿಂತುಕೊಂಡ. ಒಂದೆರಡು ನಿಮಿಷಗಳ ನಂತರ ಪಾರ್ವತಿ ಕೊಡ ತೆಗೆದುಕೊಂಡು ಅವಳ ಮನೆಯಿಂದ ಹೊರಬಂದು ಭಾವಿಯತ್ತ ಹೊರಟಳು. ಅವಳು ಹೊರಬಂದು, ಶಾಂತಪ್ಪನನ್ನು ನೋಡಿದಾಗ ಅವಳ ಮುಖದಲ್ಲಿ ಮಂದಹಾಸವೊಂದು ತುಂಬಿಕೊಂಡಿತು. ಕಿಸಕ್ಕನೆ ನಕ್ಕು ತಲೆತಗ್ಗಿಸಿಕೊಂಡು ಹೊರಟು ಹೋದಳು. ಅಬ್ಬ ಎಂತಹ ಹೆಣ್ಣು! ರಾತ್ರಿ ಯಾವ ಘಟನೆಯೂ ನಡೆಯಲೇ ಇಲ್ಲವೇನೋ ಎಂಬಂತೆ ವರ್ತಿಸಿದಳಲ್ಲಾ ಇವಳು, ಹೆಂಗಸರೇ ಹಾಗೇನೋ!,

ಒಮ್ಮೆ ಹುಚ್ಚು ಹಿಡಿಸಿದ್ದೇನೆ ತನ್ನ ಬಲೆಗೆ ಬಿದ್ದೇ ಬೀಳುವನು ಎಂದಾದರೂ, ಎಂದುಕೊಂಡಿರಬೇಕು ಪಾರ್ವತಿ. ಇಲ್ಲದಿದ್ದರೆ ಶಾಂತಪ್ಪನು ಅವಳ ಕೆನ್ನೆಗೆ ಬಿಗಿದ ರಭಸದ ಪರಿಣಾಮವಾಗಿ ಎಂತಹ ಹೆಣ್ಣಿನಲ್ಲಾದರೂ ಕ್ರೋಧ ಉಕ್ಕೇರಬೇಕಾಗಿತ್ತು. ನಿರಾಶೆಯ ದಾವಾನಲ ಉರಿದೇಳಬೇಕಾಗಿದ್ದಿತು. ತನ್ನ ಬಯಕೆಯಲ್ಲಿ ನಿರಾಶೆಯನ್ನನುಭವಿಸಿದ ಹೆಣ್ಣು ಕ್ರೋಧಗೊಂಡ ಹಾವಾಗುವಳು, ದ್ವೇಷ ಸಾಧಿಸಲು ಎಷ್ಟು ವರ್ಷಗಳಾದರೂ ಕಾಯುವಳು. ಆದರೆ ಪಾರ್ವತಿ ಮಾತ್ರ ಮಂದಹಾಸ ಬೀರಿ ಕಿಸಕ್ಕನೆ ನಕ್ಕಿದ್ದಳು. ತನ್ನ ರೂಪು, ತಾನೀಯುವ ಸುಖದ ಬಂಡವಾಳದ ಮೇಲೆ ಅವಳು ಎಂತಹ ಕಲ್ಪನಾ ಸೌಧವನ್ನಾದರೂ ಕಟ್ಟಿಕೊಳ್ಳುತ್ತಿದ್ದಳು. ಆದರೆ ಶಾಂತಪ್ಪನಿಗೆ ಅವಳ ವಿಚಿತ್ರ ವರ್ತನೆ ದಿಗ್ಭ್ರಮೆಗೊಳಿಸಿದ್ದಿತು, ಅವಳ ಬಗ್ಗೆ ಕುತೂಹಲವನ್ನು ಉದಯಿಸಿದ್ದಿತವನಲ್ಲಿ.

ಆ ದಿನ ಅವನು ಗಣಿಗೆ ಹೋದಾಗ ಎಷ್ಟೋ ಹೊತ್ತಿನ ತನಕ ಹೆಣ್ಣಾಳುಗಳ ಸಾಲಿನ ಬಳಿಗೆ ಹೋಗಲೇ ಇಲ್ಲ. ಆ ದಿನ ರತ್ನ ಗುಡ್ಡಕ್ಕೆ ಹೋಗಬೇಕೆಂದುಕೊಂಡಿದ್ದನಾದರೂ ಅವನ ಕಾಲುಗಳು ಚನ್ನಯ್ಯನ ಗಣಿಯತ್ತಲೇ

ಎಳೆದಿದ್ದುವು. ಯಾರಾದರೂ ತನ್ನನ್ನು ನೋಡಿದರೆ ಸಂಶಯ ದೃಷ್ಟಿಯಿಂದ ನೋಡುತ್ತಿರುವವರೇ ಎಂದು ಶಂಕಿಸುತ್ತಿದ್ದ, ಯಾರಾದರೂ ಆಳುಗಳು ತಮ್ಮೊಲ್ಲಿಯೇ ಮಾತನಾಡಿಕೊಂಡರೆ ತನ್ನ ಬಗ್ಗೆ ಮಾತನಾಡಿಕೊಳ್ಳುವರೇನೋ ಎಂದುಕೊಂಡಿದ್ದ.

ಕೊನೆಗೊಮ್ಮೆ ಊರಿಗೆ ಹಿಂತಿರುಗುವ ಮುನ್ನ ಹೆಂಗಸರ ಸಾಲಿನ ಬಳಿ ನಡೆದಿದ್ದ. ಅಲ್ಲಿ ಎಲ್ಲರ ಬಳಿಯೂ ನಿಂತು ಕೆಲವು ಸೂಚನೆಗಳನ್ನೀಯುತ್ತಾ ನಡೆದಿದ್ದಾಗ, ಒಂದೆಡೆ ಅವೇ ಚಿರಪರಿಚಿತ ಬಿಳಿಗೈಗಳು ಸುತ್ತಿಗೆಯನ್ನೆತ್ತಿ ಅದಿರನ್ನು ಬಡಿಯುತ್ತಿದ್ದುದವನ ಕಣ್ಣಿಗೆ ಕಾಣಿಸಿದುವು. ತಲೆಯೆತ್ತಿ ನೋಡಿದ ಪಾರ್ವತಿ ತಲೆ ತಗ್ಗಿಸಿಕೊಂಡು ತನ್ನ ಕೆಲಸ ಮಾಡುತ್ತಿದ್ದಳು. ಅವಳ ಆ ಗಾಂಭೀರ್ಯ, ಅವಳಿಗೆ ಏನೂ ಗೊತ್ತಿಲ್ಲವೆಂದೇ ತೋರುತ್ತಿದ್ದಿತು. ಆ ಬಿಳಿಗೈಗಳು ಶಾಂತಪ್ಪನನ್ನ ಮುಟ್ಟಿರಲೇ ಇಲ್ಲ, ಆ ಸುಪುಷ್ಟ ಅಂಗಗಳು ಅವನನ್ನೊತ್ತಿರಲೇ ಇಲ್ಲ, ಆ ಮುಖ ಅವನ ಮುಖವನ್ನೆತ್ತಿ ನೋಡಿರಲೇ ಇಲ್ಲ, ಆ ಬಾಯಿಂದ "ನನ್ನ ಆಶೆ ತೀರಿಸೋಲ್ವೆ ಸಾರ್?" ಎಂದು ಬೇಡಿಕೆಯ ನುಡಿ ಬಂದಿರಲೇ ಇಲ್ಲ, ಆ ಕೆನ್ನೆಗಳಿಗೆ ಅವನ ಕೈಯಿಂದ ಬಿದ್ದಿರಲೇ ಇಲ್ಲವೆಂದು ಸಾರಿ ಹೇಳುತ್ತಿದ್ದಂತಿತ್ತು ಅವಳ ರೀತಿ. ಶಾಂತಪ್ಪ ಅಲ್ಲಿಂದ ನಾಲ್ಕಾರು ಹೆಜ್ಜೆ ಮುಂದೆ ನಡೆದಾಗ ಅವಳು ತಲೆಯೆತ್ತಿ ಅವನನ್ನು ನೋಡಿದುದು ಅವನಿಗರಿವಾಯ್ತು.

ಆ ದಿನ ಸಾಯಂಕಾಲ ಶಾಂತಪ್ಪ ತನ್ನ ಬಿಡಾರದಿಂದ ಹೊರಟು, ಊರಿನಾಚೆ ಸುತ್ತಾಡಿಕೊಂಡು ಬರಲು ಹೊರಟಿದ್ದ. ಅವನ ತಲೆಯಲ್ಲಿ ನೂರು ಚಿಂತೆಗಳೆದ್ದಿದ್ದುವು. ಅವನು ಚಿಂತಿಸುತ್ತಲೇ ನಡೆದಿದ್ದಾಗ ಹಿಂದುಗಡೆಯಿಂದ ಯಾರೋ ಮಾತನಾಡಿದಂತಾಯ್ತು,

"ಏನ್ಸಾರ್ ತಾವು ಒಬ್ಬರೇ ಹೊರಟುಬಿಟ್ಟದ್ದೀರ?"

ಶಾಂತಪ್ಪ ನೋಡಿದ. ಚನ್ನಯ್ಯನೂ ಒಬ್ಬನೇ ಬರುತ್ತಿದ್ದ. ಅವನು ಬೇಕೆಂತಲೇ ತನ್ನನ್ನು ಹಿಂಬಾಲಿಸಿ ಬಂದಿದ್ದಾನೆನಿಸಿತು ಶಾಂತಪ್ಪನಿಗೆ. ಕಂಟ್ರಾಕ್ಟರುಗಳೊಡನೆ ಹಾಗೆ ಒಬ್ಬನೇ ಸುತ್ತುವುದು ಅವನಿಗಿಷ್ಟವಿರಲಿಲ್ಲ ಯಾರಾದರೂ ನೋಡಿದವರು ತನ್ನ ಅವರ ಸಂಬಂಧವಾಗಿ ಕಥೆಗಳನ್ನು ಕಟ್ಟಬಹುದು. ಆದರೂ ತಾನಾಗಿಯೇ ಮಾತನಾಡಿಸಿಕೊಂಡು ಬಂದವನನ್ನು ಕಡೆಗಣಿಸುವುದು ಸೌಜನ್ಯವಲ್ಲವೆಂದು ಅವನೊಡನೆ ಮಾತನಾಡುತ್ತಾ ನಡೆದ. ಮಾತು ಎಲ್ಲೆಲ್ಲೋ ಸಾಗಿ ಕೊನೆಗೆ,

"ನಿಮ್ಮಂಥವರಿಗೇನು ಸಾರ್ ಕಾಲಿಗೆ ಬಿದ್ದು ಬಳಿಗೆ ಬರ್ತಾಳೆ ಲಕ್ಷ್ಮಿ" ಎಂದ ಚನ್ನಯ್ಯ.

"ನಮ್ಮಂಥವರೇನು ದೇವರ ಅವತಾರವೇ ಚನ್ನಯ್ಯ?....ನಾವೂ ಸಹ ಹಣೇಲೆಷ್ಟು ಬರೆದಿದ್ದರೆ ಅಷ್ಟು ಸಂಪಾದಿಸುತೀವಿ ಅಷ್ಟೆ....ಎಷ್ಟು ಅದೃಷ್ಟವಿದ್ದರೆ ಅಷ್ಟೇ ಸಂತೋಷಪಡ್ತೀವಿ"

"ಇಲ್ಲ ಸಾರ್....ನೀವು ಸಂತೋಷ ಹತ್ರ ಬಂದರೂ ಅದನ್ನ ಓಡಿಸಿ ಬಿಡ್ತೀರಿ!"

"ಹಾಗೆಂದರೆ?" ಶಾಂತಪ್ಪ ತಲೆ ತಗ್ಗಿಸಿಕೊಂಡೇ ಕೇಳಿದ. ಅವನಿಗರ್ಥ ವಾಗಿರಲಿಲ್ಲ. ಚನ್ನಯ್ಯ ನಿಧಾನವಾಗಿ ಹೇಳಿದ,

"ನೀವು ನಮಗೆ ಸಹಾಯ ಮಾಡೋದಾದರೆ ನಿಮಗೆ ಪ್ರತಿವಾರವೂ ಪ್ರಯೋಜನವಾಗುತ್ತೆ ಸಾರ್....ಸುಬ್ಬಣ್ಣನೋರು ನನ್ನ ಹತ್ತಿರ ನೂರಾರು ರೂಪಾಯಿ ಸಂಪಾದಿಸಿಬಿಟ್ಟರು.....ಅವರು ಪ್ರತಿ ವಾರವೂ ಅವರೂರಿಗೆ ಬೇಕಾದಷ್ಟು ಕಳಿಸುತ್ತಿದ್ದರು....ಇದೆಲ್ಲಾ ಅವರು ನಂಗೆ ಸಹಾಯ ಮಾಡಿದ್ದ ರಿಂದ....ಇಷ್ಟೇ ಅಲ್ಲ ಸಾರ್...."

"ಹೂ...."

ಅವನ ಬಾಯಿಂದ ಮತ್ತೇನು ಮಾತು ಹೊರಡುವುದೋ ಎಂದು ಕುತೂಹಲಿಯಾಗಿದ್ದುದರಿಂದ ಚನ್ನಯ್ಯನನ್ನು ಅವನು ಉತ್ತೇಜನ ಗೊಳಿಸಿದ ಚನ್ನಯ್ಯನೆಂದ,

"ನಮ್ಮೂರಿನ ಬಸಪ್ಪನ ಮೂರನೆ ಹೆಂಡ್ತಿ ಶಿವಮ್ಮ....ಒಳ್ಳೆ ರತ್ನದಂತಹ ಹೆಣ್ಣು....ಅವಳಿಗಿನ್ನೂ ಇಪ್ಪತ್ತು ವರ್ಷ ಸಾರ್....ಬಸಪ್ಪನ ಕೈಲಿ ಆಗೋಲ್ಲ, ಆದ್ದರಿಂದ ಅವನು ಏನೂ ಕೇಳೋಲ್ಲ, ಆಕ್ಷೇಪಣೆ ಮಾಡೋಲ್ಲ....ಸುಬ್ಬಣ್ಣ ನವರೂ ಹೇಳ್ತಿದ್ದರು. ಸುಖ ಕೈಗೆ ಸಿಕ್ಕಿದಾಗ ಬಿಡಬಾರದೂಂತ...."

"ಓ!....ಅವಳು ಯಾರು....ನಮ್ಮ ಗಣೇಲೇ ಬರ್ತಾಳೇನು?" ಶಾಂತಪ್ಪ ಕುತೂಹಲಿಯಾದಂತೆ ತೋರಿಸಿಕೊಳ್ಳುತ್ತಾ ಕೇಳಿದ. ಚನ್ನಯ್ಯನೂ ತನ್ನ ಸಾಧನೆಯಾಗುವಂತಿದೆಯೆಂದುಕೊಂಡು ಬಲೆಯನ್ನು ವಿಸ್ತರಿಸಿದ,

"ಹೌದು ಸಾರ್....ಅವಳು ನಮ್ಮ ಗಣೇಗೇ ಬರ್ತಾಳೆ....ಅಲ್ಲಿರೋ ಹುಡುಗೀರಲ್ಲೆಲ್ಲಾ ಒಳ್ಳೇ ಬಂಗಾರದಂತಹ ಹೆಣ್ಣು....ಪಾರ್ವತಿಯ ಎದುರಿಗೇ ಕೂತಿರ್ತಾಳೆ....!"

"ಪಾರ್ವತಿಯೆಂದರೆ ಯಾರು ?"

"ಅದೇ ಸಾರ್ ನಿಮ್ಮ ಮನೆಯೆದುರಿಗೇ ಇದಾಳಲ್ಲ ಸಾರ್ ಅವಳು !"

"ಯಾರೋ, ನಾನು ಅವಳನ್ನ ನೋಡಿಯೇ ಇಲ್ಲಾಪ್ಪ"

"ಸರಿಯಾಯ್ತು !....ನೀವು ಹುಡುಗೀರನ್ನ ಕಣ್ಣೆತ್ತಿಯೂ ನೋಡೋದಿಲ್ಲ ಸಾರ್....ಅವರೆಲ್ಲ ನಿಮ್ಮನ್ನ ಕಂಡು ಎಷ್ಟೊಂದು ಬಾಯಿಬಿಡ್ತಾರೆ ಗೊತ್ತೆ ಸಾರ್ ?"

"ಓ !....ಹಾಗೇನು....ಅವರು ನನ್ನನ್ನೇ ನೋಡ್ತಾರೆಯೆ ?"

"ಹೌದು ಸಾರ್ !....ಬೇಕಾದ್ರೆ ಪ್ರತಿ ದಿನಾ ಒಬ್ಬೊಬ್ಬರು ನಿಮ್ಮ ಹತ್ತಿರ ಬರ್ತಾರೆ....ನೀವೂ ಹೂ ಅಂದರೆ ಆ ಶಿವಮ್ಮ....ಆ ಪಾರ್ವತಿ....ಆ ರತ್ನ....ಒಂದೊಂದು ದಿನ ಒಬ್ಬೊಬ್ಬರು....ಅವೆಲ್ಲ ಅಂಥಾ ಹೆಣ್ಣುಗಳೇ ಸಾರ್ ಮೇಲೆ ಬಿದ್ದು ಬರ್ತಾವೆ...."

"ನಾನು ಹಾಗೇನಾದರೂ ಹೂ ಅಂದುಬಿಟ್ಟರೆ ಸುಬ್ಬಣ್ಣ ಮಾಣಿಕ್ಯಮ್‌ಗೆ ಗೊತ್ತಾಗಿ ಸಾಹುಕಾರ್‍ರಿಗೆ ಅವರು ಹೇಳಿಬಿಟ್ಟರೆ ನನ್ನ ಗತಿಯೇನಪ್ಪ ?" ಉದ್ರೇಕಿತನಾದರೂ ಆತಂಕಗೊಂಡವನಂತೆ ಕೇಳಿದ ಶಾಂತಪ್ಪ.

"ಅಯ್ಯೋ ಬಿಡಿ ಸಾರ್....ನಂಗೇನು ಅವರ ವಿಷಯ ಗೊತ್ತಿಲ್ಲವೆ....ಆ ಸುಬ್ಬಣ್ಣ ಕೊನೇ ಮನೆ ಲಕ್ಕಮ್ಮನ ಮನೆಗೆ ಸ್ನಾನ ಮಾಡುವ ನೆವದಿಂದ ಹೋಗಿಬರುತ್ತಿದ್ದುದು ಗೊತ್ತಿಲ್ಲವೆ?....ಆ ಮಾಣಿಕ್ಯಮ್ ಪಕ್ಕದ ಮನೆ ರತ್ನನ್ನ ಸರಿಮಾಡಿಕೊಂಡಿರೋದು ಗೊತ್ತಿಲ್ಲವೆ?....ಅಲ್ಲದೆ ತಾವು ಹಾಗೆ ಮಾಡಿದ್ರೆ ನನ್ನ ಕತ್ತು ಕೊಯ್ದರೂ ಯಾರಿಗೂ ಹೇಳೋಲ್ಲ ಸಾರ್....ನೀವು ಇಷ್ಟಪಟ್ಟರೆ ಬಸಪ್ಪನ ಹೆಂಡತಿ ಶಿವಮ್ಮನ್ನ...."

—ಎಂದು ಹಲವು ಅಶ್ಲೀಲ ಪದಗಳಿಂದ ಶಿವಮ್ಮನ ವರ್ಣನೆ ಮಾಡಿದ ಚನ್ನಯ್ಯ. ಚನ್ನಯ್ಯನ ಮಾತು ಕೇಳಿ ಕೇಳಿ ಶಾಂತಪ್ಪನಿಗೆ ಜಿಗುಪ್ಸೆ ಕೋಪಗಳು ಕುದಿದೇಳುತ್ತಿದ್ದುವು. ಆದರೂ ಕೊನೆಗೊಮ್ಮೆ ಕೇಳಿದ,

"ಅದು ಸರೀನಪ್ಪ ನಿನಗೆ ನಾನು ಮಾಡಬೇಕಾದ ಸಹಾಯವೇನು ?"

"ಏನಿಲ್ಲ ಸಾರ್....ಮಾಣಿಕ್ಯಮ್ ಬಂದು ಪ್ರತಿವಾರದ ಕಲ್ಲಿನ ಅಳತೆ ತೆಗೆದುಕೊಂಡು ಗ್ರೇಡು ಬರೆದುಕೊಂಡಿದ್ದಕ್ಕೆ ನೀವು ಹೂ ಅಂದರೆ ಸಾಕು ಸಾರ್...."

"ನನಗೆ ಅದರಿಂದ ಉಪಯೋಗವೇನು ?"

"ಟನ್ನಿಗೆ ಒಂದು ರೂಪಾಯಿ ಕೊಡ್ತೀನಿ ಸಾರ್....ಜೊತೆಗೆ....!" ಚನ್ನಯ್ಯ ಹುಸಿನಗೆ ನಕ್ಕ.

ಅಷ್ಟು ಹೊತ್ತಿಗಾಗಲೇ ಕತ್ತಲೆಯಾಗಿದ್ದರಿಂದ ಶಾಂತಪ್ಪ ಹಿಂದುರುಗಿದ. ಊರು ಬಿಟ್ಟು ಎರಡು ಮೂರು ಮೈಲಿ ದೂರ ಬಂದುಬಿಟ್ಟಿದ್ದರಿಂದ, ಊರಿನ ಮನೆಗಳಲ್ಲಿ ಹಚ್ಚಿದ್ದ ಸೀಮೆಯೆಣ್ಣೆ ದೀಪಗಳು ಅವರಿಗೆ ಕಾಣುತ್ತಿದ್ದುವು. ಊರ ಮುಂದಿನ ಕೆರೆಯಲ್ಲಿ ಆ ದೀಪಗಳು ಕೆಲವು ಪ್ರತಿಬಿಂಬಿತವಾಗಿದ್ದುವು.

ಶಾಂತಪ್ಪ ಏನೋ ಯೋಚಿಸುತ್ತ ಮೌನವಾಗಿ ನಡೆಯುತ್ತಿದ್ದ. ಅವರು ಊರಿನ ರಸ್ತೆಯಲ್ಲಿ ನಡೆಯುತ್ತಿದ್ದಾಗ ಚನ್ನಯ್ಯ ಮೆಲ್ಲನೆ ಪಿಸುಗುಟ್ಟಿದ,

"ಇವಳೇ ಸಾರ್ ಶಿವಮ್ಮ!"

ಶಾಂತಪ್ಪ ಎದುರಿಗೆ ಬಂದ ಶಿವಮ್ಮನನ್ನು ನೋಡಿದ. ಆ ರೂಪ ರಾಶಿಯನ್ನು ನೋಡಿ ಅವನು ವಿಸ್ಮಿತನಾದ. ಅವಳ ಆ ಸೌಂದರ್ಯಕ್ಕೆ ಅವಳ ಆಭರಣಗಳ ಚಿನ್ನ, ಮತ್ತು ಹರಳುಗಳು ಹೆಚ್ಚಿನ ಮೆರಗನ್ನಿತ್ತಿದ್ದುವು. ಸುಮಾರು ಇಪ್ಪತ್ತು ಇಪ್ಪತ್ತೈದು ವರ್ಷ ವಯಸ್ಸಿನ ಆ ತುಂಬು ಯೌವ್ವನವು ಎಂತಹವರನ್ನಾದರೂ ತನ್ನೆಡೆಗೆ ಎಳೆದುಬಿಡುತ್ತಿದ್ದಿತು. ಅವಳಲ್ಲಿ ಆ ಅಯಸ್ಕಾಂತ ಗುಣವಿದ್ದುದರಿಂದಲೇ ಶಾಂತಪ್ಪ ಅವಳನ್ನು ಹಾಗೆ ನೋಡಿದುದು. ಇಂತಹ ಸೌಂದರ್ಯ ರಾಶಿಯು ಬಸಪ್ಪನಂತಹ ಮುದುಕನಿಗೆ ದೊರೆತಿದೆಯಲ್ಲಾ, ತನ್ನಲ್ಲಿರುವ ಧನದ ಬಂಡವಾಳದ ಮೇಲೆ ಈ ಚೆಲುವೆಯನ್ನು ಬಸಪ್ಪ ಕೊಂಡಿದ್ದಾನೆ. ಅವಳ ತಂದೆತಾಯಿಗಳ ಬಡತನ ಶಿವಮ್ಮನನ್ನು ಈ ಮುದುಕನ ಬಳಿಗೆ ದೂಡಿರಬೇಕು. ಆದ್ದರಿಂದಲೇ, ಆ ಮುದುಕನಿಂದ ತೃಪ್ತಿ ಪಡೆಯದ ಶಿವಮ್ಮ ಯುವಕರಾದ ತಮ್ಮಂತಹವರನ್ನು ಕಣ್ಣೆತ್ತಿ ನೋಡುವುದು, ಕಾಮಿಸುವುದು. ಅದಕ್ಕಾಗಿಯೇ ಗಣಿಗೆ ಕೆಲಸದ ನೆಪದಿಂದ ಒಂದೊಂದು ದಿನ ಬರುವುದು, ಇಂತಹ ನಿರ್ಭಾಗ್ಯ ಹೆಣ್ಣುಗಳದು ಎಷ್ಟು ದೊಡ್ಡ ಸಮಸ್ಯೆ ನಮ್ಮ ನಾಡಿನಲ್ಲಿ!, ಎಂದು ಶಾಂತಪ್ಪ ಚಿಂತಿಸುತ್ತಿದ್ದಾಗ—

ಶಿವಮ್ಮನಂತಹ ಚೆನ್ನಾದ ಹೆಣ್ಣನ್ನು ನೋಡಿದರೆ ಈ ಹೊಸ ಮೇನೇಜರಾದರೇನು, ಸಾಹುಕಾರರೇ ಹುಚ್ಚಾಗುತ್ತಾರೆ. ಇಂತಹ ಹೆಣ್ಣನ್ನು ಹತ್ತಿರ

ಬಿಟ್ಟೇ ಅಲ್ಲವೇ ಸುಬ್ಬಣ್ಣನವರನ್ನು ಗೆದ್ದುದು, ಇರಲಿ....ಸಮಯ ಬಂದರೆ ಸಾಹುಕಾರರನ್ನು ಗೆದ್ದುಬಿಟ್ಟರೆ, ಆಗ ಈ ಸಣ್ಣವರಿಗೇಕೆ ಬೆಣ್ಣೆ ಖರ್ಚು ಮಾಡೋದು ? ಸಧ್ಯಕ್ಕೆ ಹೊಸ ಮೇನೇಜರು ಬುಟ್ಟಿಗೆ ಬೀಳೋ ಹಾಗಿದೆ, ಅದಕ್ಕೆ ಆ ಹೆಣ್ಣನ್ನು ನೋಡಿದ ಮೇಲೆ ಮಾತೇ ಆಡದೆ ಯೋಚನೆ ಮಾಡುತಿರೋದು, ಎಂದು ಚನ್ನಯ್ಯ ಚಿಂತಿಸುತ್ತಿದ್ದ.

ಅವರು ಬಿಡಾರದ ಬಳಿ ಬಂದಾಗ, ಗೋಪಾಲಯ್ಯ, ಮಾಣಿಕ್ಯಮ್ ಬಾಗಿಲಿನಲ್ಲಿಯೇ ನಿಂತಿದ್ದವರು ಅವರನ್ನು ಕಂಡಾಕ್ಷಣವೇ ಕೇಳಿದರು,

"ಎಲ್ಲಿ ಹೋಗಿಬಿಟ್ಟಿದ್ದೀರಿ ಸಾರ್....ಈ ಕತ್ತಲೆಹೊತ್ತಿನಲ್ಲಿ ಹೀಗೆಲ್ಲಾ ಒಬ್ಬೊಬ್ಬರೇ ತಿರುಗಬೇಡಿ ಸಾರ್...."

"ಇಲ್ಲ ಸ್ವಾಮಿ ನಾನೂ ಅವರ ಜೊತೇಲಿದ್ದೆ" ಎಂದು ಚನ್ನಯ್ಯನೆಂದ.

ಶಾಂತಪ್ಪ ಏನೂ ಮಾತಾಡದೇ ಒಳ ಹೊಕ್ಕ. ಅವನ ತಲೆ ಭಾವನೆಗಳಿಂದ ಭಾರವಾಗಿದ್ದಿತು.

* * *

ಶಾಂತಪ್ಪ ಮೂರನೆಯ ದಿನ ಬೆಳಿಗ್ಗೆ ಎದ್ದು ಸ್ನಾನಕ್ಕೆ ಹೋಗುವಷ್ಟರಲ್ಲಿಯೇ ಮಾಣಿಕ್ಯಮ್ ಖಾನನೊಡನೆ ಗಣಿಗೆ ಹೊರಟು ಹೋದುದು ತಿಳಿಯಿತು. ಈ ಸುದ್ದಿಯನ್ನು ಹೇಳಿದ ಗೋಪಾಲಯ್ಯನೂ ಸಹ ಅವರಿಬ್ಬರ ಈ ವರ್ತನೆಯನ್ನು ತಿಳಿಯದವನಾಗಿದ್ದ. ಶಾಂತಪ್ಪನಿಗೆ ಕೋಪ ಬಂದಿತಾದರೂ ತಾನೂ ಗಣಿಗೆ ಹೋಗುವವನಿದ್ದುದರಿಂದ ಸುಮ್ಮನಾದ.

ಆ ದಿನ ವಾರದ ಅದಿರಿನ ಅಳತೆ ತೆಗೆಯುವ ದಿನ. ಶಾಂತಪ್ಪ ಸ್ನಾನ ಮಾಡುತ್ತಿದ್ದುದು ಪಕ್ಕದ ಮನೆಯಲ್ಲಿಯೇ. ಎಂದರೆ ರತ್ನಮ್ಮನ ಮನೆಯಲ್ಲಿಯೇ. ದಿನವೂ ಎದ್ದು ಅವನು ಸ್ನಾನಕ್ಕೆ ಹೋಗುವಷ್ಟರಲ್ಲಿ ಅಡಿಗೆಯವನು ಹಂಡೆಗೆ ನೀರು ಹಾಕಿ ಕಾಯಿಸಿರುತ್ತಿದ್ದ. ಮನೆಯ ಒಳಗಿದ್ದ ಆ ಸ್ನಾನದ ಮನೆಗೆ ಹೋಗಿ ಅವನು ಸ್ನಾನ ಮಾಡಿ ಬರುತ್ತಿದ್ದ. ಈ ದಿನವೂ ಹಾಗೆಯೇ ಮನೆಯ ಒಳ ಹೊಕ್ಕಾಗ ಮನೆಯಲ್ಲಿ ಯಾರೂ ಇರುವುದು ಕಾಣಲಿಲ್ಲ. ಅಡಿಗೆಯವನನ್ನು ಕೇಳಿದ ನಂತರ ರತ್ನಮ್ಮನೂ ಗಣಿಗೆ ಹೋಗಿರುವಳು, ಶಾಂತಪ್ಪನ ಸ್ನಾನವಾಗದಿದ್ದುದರಿಂದ ಬಾಗಿಲಿಗೆ ಬೀಗ ಹಾಕಿಕೊಳ್ಳದೇ ಹೋಗಿರುವಳೆಂದು ಶಾಂತಪ್ಪನಿಗೆ ತಿಳಿಯಿತು.

ಶಾಂತಪ್ಪ ಸ್ನಾನ ಮಾಡುತ್ತಿದ್ದಾಗ,

ಆ ಕತ್ತಲು ಸ್ನಾನದ ಮನೆಯ ಬಾಗಿಲಿನ ಮೇಲೆ ಅವನು ಹಾಕಿದ್ದ ಟವಲನ್ನು ಯಾವುದೋ ಬಳೆಗೈಯೊಂದು ಎಳೆದುಕೊಂಡು ಅದೃಶ್ಯವಾದುದು ಕಾಣಿಸಿತು. ಸ್ನಾನ ಮಾಡಿ ಮೈಯೊರೆಸಿಕೊಳ್ಳಬೇಕೆಂದು ನೋಡಿದಾಗಲೇ ನಡೆದ ಈ ಘಟನೆಯನ್ನವನು ಕಂಡು ವಿಸ್ಮಿತನಾದ. ಆ ಟವಲನ್ನು ಬಿಟ್ಟು ಬೇರೆ ಯಾವ ವಸ್ತ್ರವೂ ಇರದಿದ್ದುದರಿಂದ ಅವನು ನೆನೆಸಿದ್ದ ಬಟ್ಟೆಯುಟ್ಟು ಕೊಂಡೇ ಬಾಗಿಲ ಬಳಿ ಬಂದು ನೋಡಿದ. ಬೀದಿಯ ಬಾಗಿಲು ಮುಚ್ಚಿತ್ತು. ಅತ್ತಣಿಂದ ಬಾಗಿಲ ಸಂದಿನಲ್ಲಿ ಬೆಳಕಿನ ಕಿರಣಗಳು ತೂರಿಬರುತಿದ್ದುವಷ್ಟೆ. ಶಾಂತಪ್ಪನಿಗೆ ನಿಜವಾಗಿಯೂ ಕೋಪ ಬಂದಿತೀಗ, "ಯಾರದು?" ಎಂದು ಕೂಗಿದ.

ಹೆಂಗಸೊಬ್ಬಳು ಕಿಸಕಿಸನೆ ಸ್ನಾನದ ಮನೆಯ ಬಾಗಿಲಿನಲ್ಲಿ ನಕ್ಕಂತಾ ಯಿತು. ಆ ವ್ಯಕ್ತಿಯನ್ನು ಶಾಂತಪ್ಪ ಏನುಮಾಡಿಬಿಡುತ್ತಿದ್ದನೋ. ಆದರೆ ಅವಳನ್ನು ನೋಡಿದಾಗ ಅವನು ಒಂದು ನಿಮಿಷ ಹಿಮ್ಮೆಟ್ಟಿ ನಿಂತ. ಅವನೆದು ರಿಗೆ ಶಿವಮ್ಮ ನಿಂತಿದ್ದಳು. ಅವಳ ಕೈನಲ್ಲಿ ಶಾಂತಪ್ಪನ ಟವಲಿದ್ದಿತು.

"ನೀನು ಇಲ್ಲಿಗೆ ಹೇಗೆ ಬಂದೆ ?"

ಶಾಂತಪ್ಪನ ಕ್ರೂರ ನುಡಿಯನ್ನು ಕೇಳಿ ಶಿವಮ್ಮನ ಆ ಸುಂದರನಗೆಯು ಆರಿಹೋಯ್ತು. ಅವಳು ಮೆಲ್ಲನೆಂದಳು,

"ಸ್ನಾನಕ್ಕೆ ಹೋಗೋಕೆ ಮುಂಚೇನೆ ಬಂದು ಇಲ್ಲಿದ್ದೆ...."

"ಇಲ್ಲೇನು ಕೆಲಸ ನಿಂಗೆ ?" ಶಾಂತಪ್ಪ ಅದೇ ಸ್ವರದಲ್ಲಿ ಕೇಳಿದ. ಅವನ ತೇವವಾದ ಮೈನಿಂದ ನೀರಿಳಿಯುತ್ತಿತ್ತು. ಈ ಅನಿರೀಕ್ಷಿತದಿಂದಾಗಿ ಅವನು ಆಗಿನ್ನು ಸ್ನಾನ ಮಾಡಿ ಮೈಒರೆಸಿಕೊಳ್ಳದಿದ್ದುದನ್ನು ಮರೆತಿದ್ದ

"ನಿಮಗೋಸ್ಕರ....ನಿಮಗೋಸ್ಕರ ಬಂದೆ...." ಬಯಕೆ ಕಣ್ಣುಗಳಿಂದ ಶಾಂತಪ್ಪನ ಕಣ್ಣುಗಳನ್ನೇ ನೋಡುತ್ತಾ ಹೇಳಿದಳು.

"ಯಾರು ಹೇಳಿದರು ನಿಂಗೆ ಬರೋದಿಕ್ಕೆ ?...."

"ಯಾರೂ ಇಲ್ಲ !....ನಾನೇ....ಬಂದೆ."

ಶಾಂತಪ್ಪನಿಗೆ ಮಾತಿನಲ್ಲಿ ನಂಬಿಕೆ ಬರಲಿಲ್ಲವಾದರೂ ಹೆಚ್ಚು ಕೋಪಿಸಿ ಕೊಳ್ಳುವುದರಿಂದ ಪ್ರಯೋಜನವಿಲ್ಲವೆಂದುಕೊಂಡು ಕೇಳಿದ,

"ಆ ಟವೆಲು ಕೊಡು."

ಶಿವಮ್ಮ ಟವಲನ್ನು ನೀಡಿದಳು. ಶಾಂತಪ್ಪನು ಅದನ್ನು ತೆಗೆದುಕೊಳ್ಳ

ವಾಗವಳು ಅವನ ಮುಂಗೈಯನ್ನು ಹಿಡಿದು ಮೃದುವಾಗಿ ಅದುಮಿ, ಅದೇ ಬಯಕೆಪೂರ್ಣ ಕಣ್ಣುಗಳಿಂದವನನ್ನು ನೋಡಿದಳು. ಶಾಂತಪ್ಪ ಪುನಃ ಬಚ್ಚಲಿಗೆ ನಡೆದು ಒದ್ದೆಯಾದ ಚೌಕವನ್ನು ಕಳಚಿ, ಆ ಟವಲನ್ನು ಸುತ್ತಿ ಕೊಂಡು, ಉಳಿದ ಬಟ್ಟೆಗಳನ್ನು ತೆಗೆದುಕೊಂಡು ಹೊರಡಲು ಅನುವಾದ. ಆದರೆ ಸ್ನಾನದ ಮನೆಯ ಬಾಗಿಲಿಗೆ ಅವನು ಬಂದಾಗ ಬಾಗಿಲಿಗೆ ಅಡ್ಡವಾಗಿ ಶಿವಮ್ಮ ನಿಂತುಕೊಂಡು ಮುಗುಳುನಗೆ ನಗುತ್ತಾ ಅವನ ಮುಖವನ್ನು ನೋಡಿದಳು. ಅವಳ ಆ ಚೆಲುವಾದ ಮುಖ, ಮೂಗಿನಲ್ಲಿ ಹೊಳೆಯುತ್ತಿದ್ದ ವಜ್ರದ ಮೂಗುತಿ, ಕಂಠದಲ್ಲಿದ್ದ ಬಂಗಾರದ ಸರಗಳು, ಸೆರಗನ್ನಿರಿಯ್ಯು ವಂತೆ, ಶಾಂತಪ್ಪನೆಡೆಗೇ ನೋಡುವಂತಿದ್ದ ಎದೆ. ನೋಡಿ ನೋಡಿ ಶಾಂತಪ್ಪ ನಿಗೆ ಹುಚ್ಚು ಹಿಡಿದಂತಾಯ್ತು.

ಸುಸಮಯವೊಂದು ಎದುರುಬಂದು ಕಾದಿದೆ....ಆದರೆ ಬೀದಿಯಲ್ಲಿಯೂ ಅಪವಾದವು ಕಾದೇ ಇದೆ, ಇಂತಹ ಕಾಮುಕ ಹೆಣ್ಣು ಇರುವುದೂ ಸತ್ಯವೆ ? ಅವನು ಹಾಗೆಲ್ಲಾ ಚಿಂತಿಸುತ್ತಿರುವಾಗಲೇ ಅವಳೆಂದಳು,

"ನಾನು ಬೇಡವೇ ಸಾರ್....ನಿಮಗೆ ? "

ಅವಳು ಮಂದಹಾಸಯುಕ್ತಮುಖದಿಂದ ಹಾಗೆ ಕೇಳಿದಾಗಲೇ ಅವಳು ನೆಪಮಾತ್ರಕ್ಕೆ ಹೊದ್ದಿದ್ದ ಸೆರಗು ಜಾರಿತ್ತು. ಒಳಗಿನ ಆ ಉಬ್ಬಿದ್ದ ಕಂಚುಕ ನೋಡಿದ ಎಂತಹ ಮುನಿಗಾದರೂ ಬುದ್ಧಿ ಕೆಡಿಸುವಂತಿದ್ದ ಆ ದೃಶ್ಯವನ್ನು ನೋಡಿ ಶಾಂತಪ್ಪನಿಗೆ ಪ್ರಪಂಚವೇ ಮರೆತುಹೋಯಿತು. ಯಾವುದೋ ಒಳಗಿನ ಶಕ್ತಿಯೊಂದು ಅವನನ್ನು ಮಿಂಚಿನಂತೆ ಅವಳತ್ತ ದೂಡಿತು. ಶಾಂತ ಪ್ಪನ ನರನರಗಳಲ್ಲಿಯೂ ಧಾವಿಸಿಕೊಂಡು ಬರುವಂತಿದ್ದಿತು ಆ ಶಕ್ತಿ. ಅವನ ಮಾಂಸಖಂಡವನ್ನೇ ಕಿತ್ತು ಹೊರಚೆಲ್ಲುವಂತಿದ್ದಿತು ಅವನ ಆ ಉದ್ರೇಕ. ಸರ್ರನೆ ಮುಂದುವರೆದು ಇನ್ನೇನು, ಶಾಂತಪ್ಪನು ಜೀವನದಲ್ಲಿ ಹೊಸ ಮೆಟ್ಟಲೊಂದನ್ನೇರುವವನಿದ್ದ—

ಆಗ ಬೀದಿಯ ಬಾಗಿಲಿನಲ್ಲಿ ಗೋಪಾಲಯ್ಯನ ಕೂಗು ಕೇಳಿಸಿತು,

"ಸಾರ್.....ಸ್ನಾನವಾಯಿತೇ ಸಾರ್.....ಇಡ್ಲಿ ಕಾಫಿ ಆರಿಹೋಗ್ತಿದೆ!"

ಆ ಕೂಗು ಕೇಳಿ ಶಾಂತಪ್ಪನ ಮುಖಕ್ಕೆ ತಣ್ಣೀರೆರಚಿದಂತಾಗಿ, ಅವ್ವನ ದೇಹದ ನರಗಳಲ್ಲಿಯೇ ಆ ತಣ್ಣನೆಯ ನೀರು ಸಂಚರಿಸಿದಂತಾಯ್ತು, ಒಂದು ನಿಮಿಷ ತಡೆದು, ಒಮ್ಮೆ ಶಿವಮ್ಮನ ಮುಖ ನೋಡಿ ಹೇಳಿದ,

"ಹಿಂದಿನ ಬಾಗಿಲಿನಿಂದ ಹೊರಟುಹೋಗು........ಇನ್ನು ಮೇಲೆ ಹೀಗೆ ಬರಬೇಡ...."

ಹಾಗೆ ಹೇಳಿದವನೆ ಶಾಂತಪ್ಪ ಅಲ್ಲಿಂದ ನಿಧಾನವಾಗಿ ಹೊರಟುಹೋಗಿ ಬೀದಿಯ ಬಾಗಿಲು ತೆಗೆದುಕೊಂಡು ನಡೆದ.

* * * *

ಗಣಿಗೆ ನಡೆದುಕೊಂಡು ಹೋಗುತ್ತಿದ್ದಾಗ ಶಾಂತಪ್ಪ, ಗೋಪಾಲಯ್ಯ ನೊಡನೆಯೂ ಹೆಚ್ಚು ಮಾತನಾಡದೆಯೇ ನಡೆಯುತ್ತಿದ್ದ. ಸದಾ ಏನನ್ನಾದರೂ ವಟಗುಟ್ಟುವ ಸ್ವಭಾವದವನಾದ ಗೋಪಾಲಯ್ಯನಿಗೆ ಸುಮ್ಮನಿರಲಾಗದೇ ಕೊನೆಗೊಮ್ಮೆ ಕೇಳಿಬಿಟ್ಟ,

"ಏನು ಸಾರ್....ಇವತ್ತು ಒಂದು ಥರಾ ಇದೀರಿ. ಹೆಚ್ಚು ಮಾತನಾಡೋದಿಲ್ಲವಲ್ಲ."

ಶಾಂತಪ್ಪನ ಯೋಜನೆಗೆ ಗೋಪಾಲಯ್ಯನ ಈ ಮಾತುಗಳು ಹೆಚ್ಚಿನ ಪುಷ್ಟಿಯನ್ನು ಕೊಟ್ಟುವು. ಚನ್ನಯ್ಯನ ಕಳೆದ ಸಂಜೆಯ ವರ್ತನೆ, ಈ ಬೆಳಗ್ಗೆ ತನಗೆ ಹೇಳದೆಯೇ ತಾನು ಏಳುವ ಮೊದಲೇ ಮಾಣಿಕ್ಯಂ ಖಾನ್ ನನ್ನು ಕರೆದುಕೊಂಡು ಹೊರಟುಹೋಗಿದ್ದುದು, ಬೆಳಗ್ಗೆ ಸ್ನಾನದ ಮನೆಯಲ್ಲಿ ಶಿವಮ್ಮ ಬಂದು ತನ್ನ ಬಯಕೆಯನ್ನು ಪೂರ್ಣಗೊಳಿಸಲು ಸಿದ್ಧವಿದ್ದುದು, ಅದಕ್ಕಾಗಿ ಅದೇ ಮನೆಯ ಪಾರ್ವತಮ್ಮನು ಗಣಿಗೆ ಹೋಗಿದ್ದುದು, ಒಂದೊಂದು ಘಟನೆಯೂ ತನ್ನ ಸುತ್ತ ನೇಯ್ದ ಬಲೆಯ ಎಳೆಗಳು ಎಂದು ಸ್ಪಷ್ಟವಾಗಿದ್ದವು. ಅವರೆಲ್ಲರ ಮೇಲೆ ಕೋಪ ಹುಚ್ಚೆದ್ದು ಕುಣಿಯತೊಡಗಿತವನಲ್ಲಿ. ಆದರೆ ಇಂತಹ ಈ ಹೀನ ಕೃತ್ಯವನ್ನು ಇನ್ನುಮೇಲಾದರೂ ತನ್ನೆದುರು ನಡೆಸದಂತೆ ಚನ್ನಯ್ಯನಿಗೆ ತಿಳಿಸುವುದೆಂತು? ಇದು ಗೋಪಾಲಯ್ಯನೊಡನೆಯೂ ತಿಳಿಸಬಾರದಂತಹ ವಿಷಯ.

"ಏನಿಲ್ಲ ಏನೋ ಹೀಗೇ ನಮ್ಮ ಮನೆಯವರ ನೆನಪಾಯ್ತು!" ಎಂದು ಸುಳ್ಳು ಹೇಳಿದ ಅವನು.

"ಇಲ್ಲ ಸಾರ್....ನೀವು ಯೋಚಿಸುತ್ತಿರೋದು ಬೇರೆ ವಿಷಯ ನನಗೆ ಗೊತ್ತು!" ಎಂದು ಗೋಪಾಲಯ್ಯನೆಂದಾಗ ಶಾಂತಪ್ಪನಿಗೆ ದಿಗಿಲಾಯ್ತು, ಅವನಿಗೂ ತಿಳಿದುಬಿಟ್ಟಿದೆಯೆ, ಎಂದು !

"ಏನು ಹೇಳಿ ನೋಡೋಣ."

"ಮಾಣಿಕ್ಯಂ ಏಕೆ ಖಾನನೊಡನೆ ಹೊರಟುಹೋದ ಅನ್ನೋದು........ ನಂಗೆ ಮೊದಲೇ ಗೊತ್ತಿತ್ತು ಸಾರ್ ಹೀಗೆಯೇ ಏನಾದರೂ ಆಗುತ್ತೇಂತ. ನೀವು ಅವರೆಲ್ಲರ ಹಾಗೆ ಎಂಜಲು ಕಾಸಿಗೆ ಕೈ ಒಡ್ಡುವರು, ಆದ್ದರಿಂದ ನಿಮಗೆ ಅವರು ತಿಳೀದಂತೆ ಏನಾದರೂ ಮಾಡಲೇಬೇಕಲ್ಲ. ಈವತ್ತು ತಾನು ಮೊದಲೇ ಹೊರಟುಹೋದರೆ ನೀವು ಬರೋದಿಲ್ಲಾಂತ ಅವನು ತಿಳಿದು ಕೊಂಡಿರಬೇಕು. ಆದ್ದರಿಂದ ತಾನೇ ಅಳತೆ ಬರೆದುಕೊಂಡು ಬಂದುಬಿಟ್ಟರೆ? ....ಅವನ ಕೆಲಸವಾದಹಾಗೇ ತಾನೇ."

ಹೌದು, ಖಂಡಿತವಾಗಿಯೂ ಇದು ಅವರ ಕುತಂತ್ರ; ತನ್ನನ್ನು ಶಿವಮ್ಮನ ಸಹವಾಸದಲ್ಲಿ ಇಲ್ಲಿಯೇ ಇರುವಂತೆ ಮಾಡಿಬಿಟ್ಟು, ಅಲ್ಲಿ ತಾವು ತಾವೇ ತಮ್ಮ ಅನುಕೂಲಕ್ಕೆ ತಕ್ಕಂತೆ ಅದಿರಿನ ಅಳತೆ ತೆಗೆಯುವುದು! ತಾನು ಕೇವಲ ಒಂದು ಹೆಣ್ಣಿನ ಮೋಹದಲ್ಲಿ ಮೈಮರೆತು, ಅವಳ ಅಂಗ ಸಂಗದಲ್ಲಿ ತನ್ನ ಕರ್ತವ್ಯವನ್ನೇ ಮರೆತುಬಿಡುವೆನೆಂದು ಈ ಚನ್ನಯ್ಯ ಭಾವಿ ಸುವನಾದರೆ ಅವನೆಂತಹ ಕ್ಷುಲ್ಲಕ ಯೋಗ್ಯತೆಯುವನಿರಬೇಕು ?

ಅವರಿಬ್ಬರೂ ಗಣಿಗೆ ಬಂದಾಗ ದೂರದಲ್ಲಿ ಎಲ್ಲಿಯೋ ಒಂದೆಡೆ ಚನ್ನಯ್ಯ ನಿಂತಿದ್ದ, ಹೆಣ್ಣು ಕೂಲಿಗಾರರ ಸಾಲಿನಲ್ಲಿ ಮಾಣಿಕ್ಯಂ ಸಿಗರೇಟು ಸೇದುತ್ತಾ ಲಲ್ಲೆ ಹೊಡೆಯುತ್ತಾ ಕುಳಿತಿದ್ದ. ಗಣಿಯೊಳಗಿನ ಪಿಕಾಸಿ, ಹಾರೆ, ಚಿಮ್ಮಟಿಗಳ ಶಬ್ದ ಸಂಗೀತಕ್ಕೆ ತಾಳ ಹಾಕಿದಂತೆ, ಹೆಂಗಸರು ಅದಿರಿನ ಮೇಲೆ ಸುತ್ತಿಗೆಯ ಮೇಲೆ ಹೊಡೆಯುತ್ತಿದ್ದುದು ಕೇಳಿಬರುತ್ತಿದ್ದಿತು. ಅವ ರೆಲ್ಲರಿಗೂ ಶಾಂತಪ್ಪನು ಬಂದುದರ ಅರಿವೇ ಇರಲಿಲ್ಲ, ಬಹುಶಃ ಅವನು ಬರುವುದನ್ನಾರೂ ನಿರೀಕ್ಷಿಸಿದಂತಿರಲಿಲ್ಲ. ಶಾಂತಪ್ಪನು ಬಂದವನೇ ಅಲ್ಲಿಯೇ ನಿರ್ಮಿಸಲಾಗಿದ್ದ ಆ ವಾರದ ಅದಿರಿನ ರಾಶಿಯನ್ನು ತನ್ನ ಬಳಿಯಿದ್ದ ಅಳತೆ ಗೋಲಿನಿಂದ ಅಳತೆ ಮಾಡಿ ಬರೆದುಕೊಂಡ. ಒಂದೆರೆಡೆಗಳಲ್ಲಿ ತಾನೇ ಸಣ್ಣದಾಗಿ ಹಳ್ಳವನ್ನು ತೋಡಿ ಅದಿರಿನ ದರ್ಜೆಯನ್ನು ಅರಿತುಕೊಂಡ. ಆಗ ಗೋಪಾಲಯ್ಯನೆಂದ,

"ಕೊನೆಗೂ ನಮ್ಮ ಕಡೆ ದೃಷ್ಟಿ ಬಿತ್ತು ಈ ನಮ್ಮ ದೊಡ್ಡ ಕಂಟ್ರ್ಯಾಕ್ಟರಿಗೆ."

ಶಾಂತಪ್ಪ ತಲೆಯೆತ್ತಿ ನೋಡಿದ. ಚನ್ನಯ್ಯ ತನ್ನ ಖಾಕಿ ಟೋಪಿ ಯನ್ನು ಸರಿಮಾಡಿಕೊಳ್ಳುತ್ತಾ ಓಡೋಡಿ ಬರುತ್ತಿದ್ದ. ಅವನು ಹತ್ತಿರ

ಬಂದನಂತರ, ಇಷ್ಟವಿಲ್ಲದಿದ್ದರೂ ಬಲವಂತದ ನಗೆಯೊಂದನ್ನು ತೋರ್ಪಡಿಸಿ ಕೊಂಡು ಮಾತನಾಡಿದ,

"ಓ....ಏನು ಚನ್ನಯ್ಯ....ಇದೇ ತಾನೇ ಈ ವಾರದ ರಾಶಿ ?"

"ಹೌದು.....ಸಾರ್" ಎಂದ ಚನ್ನಯ್ಯ, ಶಾಂತಪ್ಪನ ಮುಖವನ್ನು ಸೂಕ್ಷ್ಮವಾಗಿ ಪರೀಕ್ಷಿಸುತ್ತಾ.

ಚನ್ನಯ್ಯನು ನಿರೀಕ್ಷಿಸಿದ್ದ ತೃಪ್ತಿಭಾವ ಆ ಮುಖದಲ್ಲಿ ಕಾಣಲಿಲ್ಲ. ಅವನೂ ಸಹ ಬೆಂಗಳೂರಿಗೆ ಒಂದೆರಡು ಬಾರಿ ಹೋಗಿದ್ದಾಗ ರಸ್ತೆಯಲ್ಲಿ ತಿರುಗಾಡುವ ಕಾಲೇಜು ಹುಡುಗರನ್ನು ನೋಡಿದ್ದ, ಯಾವುದಾದರೂ ಹೆಣ್ಣನ್ನು ರಸ್ತೆಯಲ್ಲಿ ಕಂಡಾಗ ಕಪಿಗಳಂತೆ ಹುಚ್ಚುಚ್ಚಾಗಿ ಆಡುವ ಅವರ ನಡತೆಯನ್ನು ಅರಿತಿದ್ದ, ಆದ್ದರಿಂದ, ಅಂತಹ ಯುವಕನಂತೆಯೇ ಇದ್ದ ಶಾಂತಪ್ಪನೂ ಅದೇ ಬಯಕೆಯ ಗುಲಾಮ, ಶಿವಮ್ಮನಂತಹ ಸುಂದರ ಹೆಣ್ಣು ಎದುರು ಬಂದು ತನ್ನ ಅಂಗಾಂಗಗಳನ್ನು ತೋರಿಸಿ ಬಾ ಎಂದು ಆಹ್ವಾನಿಸಿದರೆ ನಾಯಿಯಂತೆ ಅವಳ ಹಿಂದೆ ಹೋಗುತ್ತಾನೆ ಇವನೂ ಸಹ ಎಂದುಕೊಂಡಿದ್ದ. ಹಳ್ಳಿಗನಾದರೂ ಹೆಣ್ಣುಹೊನ್ನಿನ ವಿಷಯದಲ್ಲಿ ಅವನು ಗುಣಿಸಿದ ಲೆಕ್ಕಗಳು ಯಾವಾಗಲೂ ತಪ್ಪಿರಲಿಲ್ಲ. ಸುಬ್ಬಣ್ಣ, ಮಾಣಿಕ್ಯಂರ ವಿಷಯದಲ್ಲಿ ಅವನು ಗುಣಿಸಿದ ಲೆಕ್ಕ ಸರಿಯಾಗಿ, ಅವನ ನಿರೀಕ್ಷಣೆಗೂ ಮೀರಿ ಪ್ರತಿಫಲ ಬಂದಿದ್ದಿತು. ಆದರೆ, ಈ ಬಾರಿ ಅವನ ಲೆಕ್ಕ ತಪ್ಪಿದ್ದಿತು. ಅವನ ನಿರೀಕ್ಷಣೆ ಸಫಲವಾಗದ್ದರಿಂದ ಒಂದು ಕ್ಷಣ ನಿರಾಶನಾದ. ಆದರೆ ಮರುಕ್ಷಣದಲ್ಲಿಯೇ ಎಂದಿನಂತೆಯೇ ವಿನಯವಾಗಿ ಮಾತನಾಡತೊಡಗಿದ,

"ತಾವು ಇನ್ನೂ ಎದ್ದಿರಲಿಲ್ಲ........ಮೈಗೆ ಸರಿಯಿಲ್ಲವೇನೋ ಅಂತ ಮಾಣಿಕ್ಯಂ ಬಂದುಬಿಟ್ಟರಂತೆ ಸಾರ್....ಅವರು ಆಗಲೆ ಅಳತೆ ತಗೊಂಡಿದಾರೆ........"

"ಓ....ಹಾಗಾದರೆ ಅಳತೆ ಬರೆದುಕೊಂಡಾಯಿತೇನು ?........ಈ ವಾರ ಎಷ್ಟು ಟನ್ನು ಆಗಿದೆ ?"

"ಈ ವಾರ ಇನ್ನೂರು ಐವತ್ತು ಟನ್ನು ಸಾರ್...."

"ಯಾಕಪ್ಪ ಅಷ್ಟೊಂದು ಕಡಿಮೆ....ಹೋದ ವಾರದ ಅರ್ಧವೂ ಆಗ ಲಿಲ್ಲವಲ್ಲ !"

"ಈ ವಾರ ಕೂಲಿಯೋರು ಜಮೀನಿಗೆ ಹೋಗಿಬಿಟ್ಟಿದಾರೆ ಸಾರ್......

ಕುಯಿಲುಗಾಲ” ಎಂದು ಚನ್ನಯ್ಯ ತನ್ನ ಛತ್ರಿಯನ್ನು ಬಿಚ್ಚಿ ಶಾಂತಪ್ಪನಿಗೆ ಹಿಡಿಯಹೋದ. ಶಾಂತಪ್ಪ ಅದನ್ನೊಲ್ಲದೇ, ಅದನ್ನು ಗೋಪಾಲಯ್ಯನ ಕೈಗೆ ಕೊಡುತ್ತಾ ಹೇಳಿದ, “ನೀವು ಮುದುಕರು ತೆಗದುಕೊಳ್ಳಿ ಗೋಪಾಲಯ್ಯನೋರೆ.”

ಶಾಂತಪ್ಪ ಗಣಿಗೆ, ಹೆಂಗುಸರ ಸಾಲಿಗೆ ಹೋದಾಗ ಎಲ್ಲರೂ ವಿಚಿತ್ರವಾದೊಂದು ನೋಟವನ್ನು ತನ್ನ ಕಡೆಗೆ ಬೀರುತ್ತಿರುವರೆನಿಸಿತ್ತು. ಅದೂ ಸಹ ಪಾರ್ವತಿ, ರತ್ನಮ್ಮನ ಬಳಿಗೆ ನಡೆದಾಗ ರತ್ನಮ್ಮ ತನ್ನನ್ನು ಅದೇ ಪರೀಕ್ಷಿಸುವ ನೋಟದಿಂದ ನೋಡಿ ಫಕ್ಕನೆ ಮುಗುಳುನಗೆಯೊಂದನ್ನು ಬೀರಿದ್ದಳು. ಮಾಣಿಕ್ಯಂ ಸಹಾ ಅದೇ ನೋಟವನ್ನೇ ತೋರಿದ್ದ.

ಮಾಣಿಕ್ಯಂನನ್ನು ನೋಡಿದಾಗ ಶಾಂತಪ್ಪನಿಗೆ ಅವನ ಬಗ್ಗೆಯೂ ಅಸಹ್ಯವುಂಟಾಯಿತು, ಚನ್ನಯ್ಯನೊಡನೆ ಸೇರಿಕೊಂಡು, ಅವನು ಸಾಹುಕಾರರಿಗೆ ಬಗೆಯುತ್ತಿದ್ದ ದ್ರೋಹದ ಅರಿವುಂಟಾದಾಗ! ಆದರೆ ಈ ಪದ್ಧತಿಯನ್ನು ತಾನು ನಿಲ್ಲಿಸಿಯೇ ನಿಲ್ಲಿಸುತ್ತೇನೆಂದು ಮನಸ್ಸಿನಲ್ಲಿಯೇ ಪಣ ತೊಟ್ಟುಕೊಂಡ.

× × ×

ಆ ದಿನ ಸಂಜೆ ಶಾಂತಪ್ಪ ಒಬ್ಬನೇ ಸುತ್ತಾಡಿಕೊಂಡು ಬರಲು ಬಿಡಾರದಿಂದ ಹೊರಟಿದ್ದಾಗ ಚನ್ನಯ್ಯನು ಹಿಂದೆ ಬಂದುದನ್ನು ನೋಡಿ ಶಾಂತಪ್ಪ ಅವನೊಡನೆ ಗಣಿಗೆ ಸಂಬಂಧಿಸಿದಂತೆ ಯಾವು ಯಾವುದೋ ಮಾತುಗಳನ್ನಾಡುತ್ತಾ ಇದ್ದವನು ಕೊನೆಗೊಮ್ಮೆ ಕೇಳಿದ,

“ಏನಪ್ಪ....ನೀನು ವಾರ ವಾರವೂ ಆಳುಗಳಿಗೆ ಸರಿಯಾಗಿ ಕೂಲಿ ಕೊಡ್ತಿದ್ದೀ ತಾನೆ .... ಯಾಕೆಂದ್ರೆ ನಾವು ಯಾರು ಸಹ ನಿನ್ನ ಇದುವರೆಗೂ ಕೇಳಿಲ್ಲ. ಆದ್ದರಿಂದ ಕೇಳಿದೆ.”

“ಓ!....ಪ್ರತಿವಾರವೂ ಕೊಟ್ಟು ಬಿಡ್ತೀನಿ ಸಾರ್.”

“ಹಾಗಾದರೆ ಸರಿ....ಪಾಪ ಇದರಲ್ಲೇ ಜೀವನ ಮಾಡುವಂತೋರು ತುಂಬಾ ಜನ ಇದ್ದಾರೆ. ಒಂದು ವಾರ ನಾವು ಕೂಲಿ ಕೊಡದಿದ್ದರೆ ಅವರ ಹೊಟ್ಟೆಗೆ ಒದ್ದೆಬಟ್ಟೇನೇ ಗತಿ. ಅದಕ್ಕೆ ಕೇಳಿದ್ದು. ಎಂದು ಶಾಂತಪ್ಪ ಸುಮ್ಮನಾಗಿ, ಒಂದೆರಡು ನಿಮಿಷಗಳ ನಂತರ ಪುನಃ ಹೇಳಿದ,

“ಅಂದಹಾಗೆ....ಗಣಿಲೀ ಕೂಲಿಯೋರಿಗೆ ಕುಡಿಯೋ ನೀರಿಗೆ ಏನಾದರೂ

ವ್ಯವಸ್ಥೆ ಮಾಡಬೇಕಪ್ಪ. ಹಾಗೇನೆ ಅವರಿಗೆ ಊಟಕ್ಕೆ ಒಂದು ದೊಡ್ಡ ಗುಡಿಸಲು ಕಟ್ಟಿಸಬೇಕು .... ಕಾದ ಬಿಸಿಲಿನಲ್ಲಿ ಅವರು ಒಣಗೋದನ್ನೂ, ನೀರಿಲ್ಲದೇ ಬಾಯಿಬಿಡೋದನ್ನ ನೋಡೋದಕ್ಕಾಗುಲ್ಲ."

"ಅಯ್ಯೋ!....ಅದೆಲ್ಲಾ ಎಲ್ಲಿ ಸಾಧ್ಯ ಸಾರ್. ಅದಕ್ಕೆಲ್ಲ ನೂರಾರು ರೂಪಾಯಿ ಖರ್ಚಾಗುತ್ತೆ. ಸಾವಕಾರ್ರು ಅದಕ್ಕೆಲ್ಲಾ ದುಡ್ಡು ಖರ್ಚುಮಾಡಿಸೋದಿಲ್ಲ....ನಾವುಗಳು ಬರೀ ಕಂಟ್ರಾಕ್ಟರುಗಳು, ಇದೇನು ನಮ್ಮದೇ ಶಾಶ್ವತವಾದ ಆಸ್ತೀನೇ....ಇವತ್ತು ಇಲ್ಲಿ ನಾಲ್ಕು ಕಾಸು ದುಡೀತೀವಿ. ನಾಳೆಯೇ ನಾದ್ರೂ ನಷ್ಟವಾದರೆ ಹೊರಟು ಹೋಗ್ತೀವಿ....ನಾವೇಕೆ ದುಡ್ಡು ಖರ್ಚು ಮಾಡೋಣ, ಸಾವಕಾರ್ರೇ ಆಗೋಲ್ಲಾನ್ನೋವಾಗ." ಎಂದು ಉದ್ಗಾರವೆಳೆದ ಚನ್ನಯ್ಯ.

ಇವನು ಹೇಳುವುದೂ ನಿಜವೇ. ಕಂಟ್ರಾಕ್ಟರು ನೂರಾರು ಕೂಲಿಯಾಳುಗಳಿಂದ ಕೆಲಸಮಾಡಿಸಿ, ಸಾಹುಕಾರರಿಂದ ಹಣ ಸೆಳೆದು ಲಾಭ ಪಡೆಯುವವನು. ಅವನಿಗೆ ಯಾವ ತೆರನಾದ ಜವಾಬ್ದಾರಿಯೂ ಇರಬೇಕಾದುದಿಲ್ಲ. ಅವನಿಗೆ ಬೇಕಾದುದು ವಾರವಾರದ ಲಾಭ. ಆದರೆ ಸಾಹುಕಾರರಿಗೂ ಅಷ್ಟೇ, ಕಂಟ್ರಾಕ್ಟರನಿಗೆ ಟನ್‌ಗೆ ಇಷ್ಟೊಂದು ಹಣ ಕೊಡುವಾಗ ಗಣಿಯ ಮೇಲೆ ಹೆಚ್ಚು ಹಣವನ್ನೇಕೆ ವೆಚ್ಚಮಾಡಬೇಕು ಎಂಬ ಭಾವನೆ. ಹೀಗೆ ಇಬ್ಬರು ಲಾಭಕ್ಕಾಗಿ ದುಡಿಸುವವರ ಮಧ್ಯೆ ಅವರಿಗಾಗಿಯೇ ಬಳಲುವ ಈ ಕೂಲಿಗಾರರನ್ನು ಕೇಳುವವರಾರು ? ಅದಿರಿನ ದರ್ಜೆ ಕಡಿಮೆಯೆಂದು, ಸಾಹುಕಾರರು ಕಡಿಮೆ ಹಣವನ್ನು ಚನ್ನಯ್ಯನಿಗೆ ಕೊಟ್ಟಾಗ, ಅದಕ್ಕೆ ಪ್ರತಿಯಾಗಿ ಚನ್ನಯ್ಯನೂ ಕೂಲಿಗಾರರಿಗೆ ಅರ್ಧ ಕೂಲಿ ಕೊಡುತ್ತಿದ್ದ. ಅದಿರನ್ನು ಗಣಿಯಿಂದ ತೆಗೆಯಲು, ಅದನ್ನೊಡೆಯಲು ಅವರು ವಿನಿಯೋಗಿಸುತ್ತಿದ್ದ ಶ್ರಮ ಮಾತ್ರ ಒಂದೇ ದರ್ಜೆಯದು, ಹರಿಸುವ ಬೆವರಿನ ಪ್ರಮಾಣವೊಂದೇ, ಆದರೆ ಅವರಿಗೆ ಕಡಿಮೆ ಕೂಲಿ ದೊರೆತಾಗ, ಅವರು ಉಪವಾಸವಿರುವುದನ್ನು ನೋಡುವರಾರು ? ಎಂದು ಶಾಂತಪ್ಪ ಚಿಂತಿಸಿದ.

ಅವನಿಗೂ ಗೊತ್ತಿದ್ದಿತು, ಎಲ್ಲರೂ ಕೇವಲ ಜೀವನಕ್ಕಾಗಿಯೇ ಗಣಿಗೆ ಬರುತ್ತಿರಲಿಲ್ಲವೆಂದು. ಕೆಲವು ಗಂಡಸರು ಮನೆಯಲ್ಲಿ ಮಾಡಲು ಕೆಲಸವಿಲ್ಲದ್ದರಿಂದ ಹಣವನ್ನು ಕೊಡಿಸುವ ಈ ಮೋಜಿನ ಕೆಲಸಕ್ಕೆಂದು ಬಂದು ಕೂರುತ್ತಿದ್ದರು. ಅಂತಹವರೆಲ್ಲ ರಾಮನಾಯ್ಕನ ಹಳ್ಳಿಯ ಪುಂಡರ ತಂಡದ ನಾಯ

ಕರು, ಮೂರನೆ ಬಾರಿಗೆ ಮದುವೆಯಾದಂತಹವರು, ಇಂತಹರೇ ಆಗಿದ್ದರು. ಅವರಿಂದ ತಮಗಾಗುವ ಪ್ರಯೋಜನವನ್ನು ಮನಗಂಡು ಚನ್ನಯ್ಯ ಅವರನ್ನು ಮೇಸ್ತ್ರಿಗಳನ್ನಾಗಿ ಮಾಡಿಕೊಂಡಿದ್ದನು. ಇನ್ನೂ ಹಲವು ಹೆಂಗಸರೂ ಅಷ್ಟೆ; ಯುವಕರ ಮುಖಗಳನ್ನು ಕಾಣುವ ಆಶೆಯುಳ್ಳ, ಅತೃಪ್ತ ಬಯಕೆಗಳುಳ್ಳವರು ಹಲವರು ಗಣಿಗೆ ಬರುತ್ತಿದ್ದರು. ಆದರೆ—ಇಂತಹರೊಡನೆಯೇ ಶ್ರದ್ಧೆಯಿಂದ ದುಡಿಯುವ, ತಮ್ಮ ಪಾಲಿನ ಕಾರ್ಯವನ್ನು ಪ್ರಾಮಾಣಿಕತೆಯಿಂದ ಮಾಡುವ ಬಡವರೂ ಇದ್ದರು; ಇಂತಹವರು ತಮ್ಮ ದುಡಿಮೆಗೆ ಬಂದ ಪ್ರತಿಫಲವನ್ನು ಭಕ್ತಿಯಿಂದ ಸ್ವೀಕರಿಸುತ್ತಿದ್ದರು. ಒಂದೊಂದು ವಾರ ಕಡಿಮೆ ಕೂಲಿಯನ್ನು ಪಡೆದಾಗ, ಆ ಕ್ಷಣದಲ್ಲಿಯೇ ತಮ್ಮ ಮುಂದಿದ್ದ ಒಂದು ವಾರದ ಚಿತ್ರವು ಅವರಿಗೆ ಕಣ್ಣ ಮುಂದೆ ಬರುತ್ತಿದ್ದಿತು. ಈ ಕಡಿಮೆ ಹಣದಲ್ಲಿ ಒಂದು ವಾರ ಹೇಗೆ ಹೊಟ್ಟೆ ಹೊರೆಯುವುದು ದೇವರೇ, ಎಂದು ಸಂಕಟಪಡುತ್ತಿದ್ದರು. ಶಾಂತಪ್ಪ ಇಂತಹವರನ್ನು ನೋಡಿದ್ದ. ಆದ್ದರಿಂದಲೇ ಚನ್ನಯ್ಯನ ಉತ್ತರ ದಿಂದ ಅವನಿಗೆ ನಿರಾಶೆಯಾಯಿತು.

ಹತ್ತಾರು ನಿಮಿಷ ಮೌನವಾಗಿಯೇ ನಡೆದ ನಂತರ ಚನ್ನಯ್ಯ ಇದ್ದಕ್ಕಿದ್ದಂತೆ ಹೇಳಿದ,

"ಸಾರ್....ನಾನು ಬಡವ ಆದರೆ ನನ್ನ ಸೇವೆ ತೆಗೆದುಕೊಳ್ಳಬೇಕು ತಾವು" ಎಂದು ಜೇಬಿನಿಂದ ನೂರು ರೂಪಾಯಿನ ನೋಟೊಂದು ಸಣ್ಣಗೆ ಮಡಿಸಿದ್ದುದನ್ನು ಹೊರತೆಗೆದು ಅವನ ಮುಂದೆ ಹಿಡಿದ.

"ನನಗೇಕೆ ಇದು ?" ಶಾಂತಪ್ಪ ಗಂಭೀರನಾಗಿ ಕೇಳಿದ.

"ಲಕ್ಷ್ಮಿ ಬಾಗಿಲಿಗೆ ಬಂದಾಗ ಬೇಡವೆನ್ನಬಾರದು ಸಾರ್. ತಾವು ಇದನ್ನು ಇಟ್ಟುಕೊಂಡಿರಿ" ಎನ್ನುತ್ತಾ ಶಾಂತಪ್ಪನ ಜೇಬಿಗೆ ಹಾಕಲು ಬಂದ. ಶಾಂತಪ್ಪ ಹಿಂಜರಿದು,

"ನೋಡು ಚನ್ನಯ್ಯ....ಲಕ್ಷ್ಮಿಯೋ, ಸರಸ್ವತಿಯೋ, ಪಾರ್ವತಿಯೋ ನನಗೆ ಯಾವುದೂ ಬೇಡ. ನೀನು ಹೀಗೆಲ್ಲಾ ನನಗೆ ಆಶೆ ತೋರಿಸೋಕೆ ಬರಬೇಡ. ನಾನೂ ದುಡ್ಡು ಕಂಡಿದೀನಿ, ಅದೂ ಅಲ್ಲದೆ ನನಗೆ ಸಾಹುಕಾರ್ರು ಕೊಡೋ ಸಂಬಳ ಸಾಕು....ನಿನ್ನ ಹಣ ನಂಗೆ ಬೇಡ." ಎಂದು ಶಾಂತಮನಸ್ಸಿನಿಂದಲೇ ಎಂದ.

"ತಾವು ಹಾಗೆಲ್ಲಾ ಅಂದುಕೋಬಾರದು ಸಾರ್.......ತಾವು ಇದನ್ನು

ತಗೋಳಿ” ಪುನಃ ಅದೇ ನೋಟನ್ನು ಎದುರಿಗೆ ಹಿಡಿದ. ಶಾಂತಪ್ಪ ಆ ನೋಟಿನತ್ತಲೂ ನೋಡದೆ ಕೋಪದಿಂದ ಹೇಳಿದ,

“ನನಗೆ ನೀನು ಈ ದುಡ್ಡು ಯಾಕೆ ಕೊಡೋಕೆ ಬರುತ್ತಿದ್ದೀಂತ ನಂಗೆ ಗೊತ್ತು. ಆದರೆ ನಾನು ನೀನು ತಿಳಿದಿರೋ ಹಾಗೆ ಆಶೆಪಡೋನಲ್ಲ.... ಅದನ್ನ ಜೇಬಿಗಿಟ್ಟುಕೋ....ಇನ್ನೊಂದು ದಿನಾ ಹೀಗೆ ಕೊಡೋಕೆ ಬರಬೇಡ.”

ಶಾಂತಪ್ಪನ ಉತ್ತರದಿಂದ ಚನ್ನಯ್ಯನ ಮುಖ ಕಂಗೆಟ್ಟಿತು. ನೋಟನ್ನು ಜೇಬಿನೊಳಗಿಟ್ಟುಕೊಂಡು ತಲೆತಗ್ಗಿಸಿಕೊಂಡೇ ಶಾಂತಪ್ಪನೊಡನೆ ನಡೆಯ ತೊಡಗಿದ.

* * *

ಮಾರನೆಯ ದಿನ ಸಾಹುಕಾರರ ಸಣ್ಣದಾದ ಕಾರೊಂದರಲ್ಲಿ ಸಾಹುಕಾರರ ಮಾವನವರೊಡನೆ ಸುಬ್ಬಣ್ಣ ಬಂದಿದ್ದ; ಆ ವಾರದ ಬಟವಾಡೆಗಾಗಿ ಸಾಹುಕಾರರು ಅವರ ಸಂಗಡ ಹಣ ಕಳುಹಿಸಿದ್ದರು. ಸುಬ್ಬಣ್ಣ ಬಂದ ತಕ್ಷಣವೇ ಚನ್ನಯ್ಯ ಮೆಲ್ಲನೆ ಅವರ ಬಳಿ ಏನನ್ನೋ ನುಡಿದ. ಒಂದೇ ಒಂದು ಕ್ಷಣದಲ್ಲಿ ಅವನು ಹಾಗೆ ಹೇಳಿ ಬೇರೆಡೆಗೆ ತಿರುಗಿದುದನ್ನು ಶಾಂತಪ್ಪ ಗಮನಿಸದಿರಲಿಲ್ಲ.

ಒಳಗೆ ಬಂದ ನಂತರ ಸುಬ್ಬಣ್ಣ ಮಾಣಿಕ್ಯಂನನ್ನು ಆ ವಾರದಲ್ಲಿ ತೆಗೆದ ಅದಿರೆಷ್ಟೆಂಬುದನ್ನು ಕೇಳಿದ. ಸಾಹುಕಾರರ ಮಾವನಿಗೆ ಈ ವ್ಯವಹಾರವೊಂದೂ ತಿಳಿಯದುದರಿಂದ ಎಲ್ಲವನ್ನೂ ಸುಬ್ಬಣ್ಣನಿಗೇ ವಹಿಸಿ ತಾನು ಸಿಗರೇಟು ಸೇದುತ್ತಾ ಕುಳಿತುಬಿಟ್ಟಿದ್ದ. ಇದೆಲ್ಲವನ್ನೂ ನೋಡುತ್ತಲೇ ಇದ್ದ ಶಾಂತಪ್ಪನಿಗೆ ಒಂದು ಕ್ಷಣ ತನ್ನ ಬಗ್ಗೆಯೇ ಬೇಸರ ಬಂದಿತು. ತನಗೆ ಅಪಮಾನವಾಗುತ್ತಿದೆ, ಇಲ್ಲದಿದ್ದರೆ ತಾನು ಗಣಿಗೆ ಮೇನೇಜರನಾಗಿರುವಾಗ ತನ್ನನ್ನು ಯಾವ ವಿಷಯವನ್ನೂ ಕೇಳದೇ ಸುಬ್ಬಣ್ಣ, ಮಾಣಿಕ್ಯಂ ಹೇಳಿದುದೇ ಸರಿಯೆಂದುಕೊಳ್ಳುವನೇ........ಮಾಣಿಕ್ಯಂ ಹೇಳುವುದೇ ನಡೆಯುವುದಾದರೆ ತಾನಾದರೂ ಏಕಿರಬೇಕು ಈ ಗಣಿಯಲ್ಲಿ ?........ಸಾಹುಕಾರರಿಗೆ ಈ ದಿನವೇ ಈ ವಿಷಯ ತಿಳಿಸಿ ಒಂದು ಪತ್ರ ಬರೆದುಬಿಡಬೇಕು, ಈ ಅನ್ಯಾಯ, ಈ ದ್ರೋಹವನ್ನು ಸಹಿಸಿಕೊಂಡು ಈ ಕಂಪೆನಿಯಲ್ಲಿ ದುಡಿಯಬಾರದು, ಎಂದು ಶಾಂತಪ್ಪ ಚಿಂತಿಸುತ್ತಿರುವಾಗಲೇ,

“ಏನ್ಸಾರ್ ಶಾಂತಪ್ಪನೋರೆ....ನಿನ್ನೆ ನೀವೂ ಗಣಿಗೆ ಹೋಗಿದ್ದಿರಾ ?”

ಎಂದು ಸುಬ್ಬಣ್ಣ ಕೇಳಿದ. ಆ ಮಾತಿನಲ್ಲಿದ್ದ ಪರೀಕ್ಷಕಭಾವ ಶಾಂತಪ್ಪನಿಗೆ ಅರಿವಾಯ್ತು. ನೀವೂ ಹೋಗಿದ್ದಿರಾ ಎನ್ನಬೇಕಾದರೆ, ಪ್ರತಿದಿನವೂ ಗಣಿಗೆ ಹೋಗುವವನು ಮಾಣಿಕ್ಯಂ ಮಾತ್ರ, ತಾನಲ್ಲ ಎಂದಂತಾಯಿತು. ತಾನು ಪ್ರತಿದಿನವೂ ಗಣಿಗೆ ಹೋಗುತ್ತಿದ್ದರೂ, ತನ್ನ ಕೈಕೆಳಗಿನ ಮಾಣಿಕ್ಯಂ ಪಕ್ಕದ ಮನೆಯ ರತ್ನಮ್ಮನೊಡನೆ ಲಲ್ಲೆಹೊಡೆಯುತ್ತ ಕಾಲ ಕಳೆಯುತ್ತಿದ್ದರೂ, ಈ ಸುಬ್ಬಣ್ಣ ತನ್ನನ್ನೇ, ನೀವೂ ಹೋಗಿದ್ದಿರಾ ಎನ್ನುತ್ತಿದ್ದಾನೆ. ಶಾಂತಪ್ಪನಿಗೆ ಸುಬ್ಬಣ್ಣನ ವಿಷಯದಲ್ಲಿ ದ್ವೇಷದ ಕುಡಿಯೊಂದು ಒಡೆಯಿತು.

"ನಾನು ಪ್ರತಿ ದಿನಾ ಹೋಗುತ್ತಿದೀನಿ ಸಾರ್", ಶಾಂತಪ್ಪನೆಂದ.

"ಅದು ಸರಿ ಸಾರ್....ನಿನ್ನೆ ನೀವು ಹೋಗಿದ್ದಿರಾ....ಮಾಣಿಕ್ಯಂ ಬರೆದುಕೊಂಡಿರೋ ಅಳತೆ ಸರಿಯಾಗಿದೆ ತಾನೆ....ಕಲ್ಲು ಹೇಗಿದೆ ಈ ವಾರ ?"

"ನಾನೂ ಸಹ ಅಳತೆ ತಗೊಂಡಿದೀನಿ ಸಾರ್....ಮಾಣಿಕ್ಯಂ ಬರೆದುಕೊಂಡಿರೋದೂ ನಾನು ಬರೆದುಕೊಂಡಿರೋದೂ ವ್ಯತ್ಯಾಸವಾಗಿದೆ" ಎಂದು ಶಾಂತಪ್ಪನೆಂದ.

"ಹಾಗೆಂದರೆ !....ವ್ಯತ್ಯಾಸವೇಕೆ ?"

"ಮಾಣಿಕ್ಯಂ ಹೇಳಿರೋದು ಇಪ್ಪತ್ತು ಟನ್ ಜಾಸ್ತಿ ಇದೆ. ಆದರೆ ಈ ವಾರದ ಕಲ್ಲು ಅದಕ್ಕಿಂತ ಇಪ್ಪತ್ತು ಟನ್ ಕಮ್ಮಿ ಇದೆ, ಅದರಲ್ಲಿ ಅರ್ಧಕ್ಕರ್ಧ ಕಡಿಮೆ ಗ್ರೇಡಿನ ಕಲ್ಲು ಬೆರೆಸಿದೆ" ಎಂದು ಶಾಂತಪ್ಪ ಸ್ಪಷ್ಟವಾಗಿ ನುಡಿದಾಗ, ಸುತ್ತಲೂ ಕುಳಿತಿದ್ದವರೆಲ್ಲಾ ಅಪ್ರತಿಭರಾದರು. ಚನ್ನಯ್ಯನ ಮುಖ ಒಂದು ಕ್ಷಣ ಬಣ್ಣಗೆಟ್ಟಿತು. ಮಾಣಿಕ್ಯಂ ಮಾತ್ರ ಕಣ್ಣು ಕಣ್ಣು ಬಿಡುತ್ತಿದ್ದ. ಸಾಹುಕಾರರ ಮಾವ, ತಕ್ಷಣ ತನ್ನ ಸಿಗರೇಟು ಬಿಸುಟು ಏನೋ ಹೇಳಲು ಬಾಯ್ತೆರೆದ. ಅಷ್ಟರಲ್ಲಿ ಸುಬ್ಬಣ್ಣನೆಂದ,

"ನೋಡಿ ಸಾರ್ ನೀವು ವಿದ್ಯಾವಂತರು, ನಿಮಗೆ ಎಲ್ಲ ತಿಳಿದಿದೆ, ನಿಮ್ಮ ನಿಮ್ಮ ಮಾತಿನಲ್ಲೇ ಹೀಗೆ ವ್ಯತ್ಯಾಸವಾದರೆ, ನೋಡಿದವರೆದುರಿಗೆ....ನೀವು ಮೊದಲೇ ಇಬ್ಬರೂ ಸೇರಿ ಒಂದೇರೀತಿ ಇರೋ ಪಟ್ಟಿಯೊಂದು ಬರೆದಿಟ್ಟುಕೋಬೇಕು !"

ಶಾಂತಪ್ಪನಿಗೆ ಒಂದು ನಿಮಿಷ ದಿಕ್ಕು ತೋರದಂತಾಯಿತು. ಪುನಃ ಸುಬ್ಬಣ್ಣ ತನ್ನ ಮೇಲೆಯೇ ತಪ್ಪು ಹೊರಿಸುತ್ತಿದ್ದಾನೆ, ತಾವಿಬ್ಬರೂ ಸೇರಿ ಮೊದಲೇ ಒಮ್ಮತಕ್ಕೆ ಬಂದಿರಬೇಕೆಂದು ಇವನು ಹೇಳುವುದರ ಅರ್ಥವೇನು ?

ತಮ್ಮಿಚ್ಛೆಯಂತೆ ವಾರದ ಅದಿರಿನ ಉತ್ಪನ್ನದ ಪಟ್ಟಿ ಬರೆಯಬೇಕೋ ಅಥವ ಕಂಟ್ರಾಕ್ಟರು ಉತ್ಪಾದಿಸಿದಷ್ಟನ್ನು ಅಳತೆಮಾಡಿ ಪಟ್ಟಿಮಾಡಬೇಕೋ, ತಾನ ಸತ್ಯವನ್ನು ನುಡಿದರೂ ಬೆಲೆ ಬರಲಿಲ್ಲ. ಸತ್ಯವನ್ನು ನುಡಿದುದೇ ತಪ್ಪಾಯ್ತು ವೃಥಾ ಎಲ್ಲರನ್ನೂ ಎದುರು ಹಾಕಿಕೊಂಡಂತಾಯ್ತು ಎಂದು ಅವನ ಚಿತ್ತದ ಒಂದೆಡೆಯಲ್ಲಿ ಧ್ವನಿಯೆದ್ದರೆ ಮತ್ತೊಂದೆಡೆ,

ಸತ್ಯವು ಅಪ್ರಿಯವೆಂದು ಅದನ್ನು ಬಿಟ್ಟುಬಿಡಲಾಗುವುದೇ ? ಸತ್ಯದರ್ಶಿಯಾದವನು ತನ್ನ ಕರ್ತವ್ಯವನ್ನು ನಿರ್ವಹಿಸಲೇಬೇಕು, ಅಪ್ರಿಯ ಸತ್ಯ ನುಡಿಯಲಿಕ್ಕೆ ಹೆದರಿ ಹಿಂಜರಿದರೆ, ಇಲ್ಲಿ ಸುತ್ತಲೂ ತನ್ನನ್ನೇ ನೋಡುತ್ತಿರುವ ಹಲವು ಜನ ಧ್ಯೇಯರಹಿತರ ತಂಡಕ್ಕೆ ತಾನು ಸೇರಬೇಕಾಗುವುದು. ಕ್ಷುದ್ರ ಜನರನ್ನು ತಾತ್ಸಾರದಿಂದ ಕಾಣಬೇಕು, ಸುಬ್ಬಣ್ಣನಾದರೇನು ಯಾವನಾದರೇನು, ಎಂಬ ಶಬ್ದವೇ ಕೇಳುತಿದ್ದಿತು.

"ಅದೇನೋ ಸಾರ್ ಇಲ್ಲಿನ ಪದ್ಧತಿ ನಂಗೊತ್ತಿಲ್ಲ. ಆದರೆ ಇದ್ದದ್ದು ಇದ್ದಂತೆ ಹೇಳೋದು ಮಾತ್ರ ನನಗೆ ಗೊತ್ತು. ನಾನು ಹೇಳಿರೋದರಲ್ಲಿ ಅನುಮಾನ ಬಂದರೆ ಬೇಕಾದರೆ ನಡೀರಿ ಗಣೀಗೆ ಹೋಗಿ ನೋಡಿಕೊಂಡು ಬರೋಣ" ಎಂದು ಕೊನೆಗೆಂದ ಶಾಂತಪ್ಪ.

ಅವನ ಉತ್ತರ ಕೇಳಿ ದೂರದಲ್ಲಿ ಮೂಲೆಯೊಂದರಲ್ಲಿ ಕುಳಿತಿದ್ದ ಗೋಪಾಲಯ್ಯನ ಮುಖದಲ್ಲಿ ಗೆಲುವು ಕಾಣಿಸಿಕೊಂಡಿತು. ನೀವು ಹೇಳಿದುದು ಸರಿ, ಎನ್ನುವಂತೆ ಶಾಂತಪ್ಪನ ಮುಖ ನೋಡಿದನವನು.

"ಏನು ಚನ್ನಯ್ಯ ಏನು ಹೇಳ್ತಿ ನೀನು ?" ಎಂದು ಸುಬ್ಬಣ್ಣ ಚನ್ನಯ್ಯನನ್ನೇ ಕೇಳಿದ.

"ತಮ್ಮ ಇಷ್ಟ ಸಾರ್", ಚನ್ನಯ್ಯನೆಂದ.

"ಹಾಳಾಗಿಹೋಗಲಿ....ಮುಂದಿನ ವಾರದಿಂದ ಹೀಗೆಲ್ಲಾ ದೂರು ಬರಕೂಡದು....ಈ ವಾರಕ್ಕೆ ನಿನ್ನ ಹಣ ನೀನು ತೆಗೆದುಕೋ" ಎಂದು ಸುಬ್ಬಣ್ಣ ಮಾಣಿಕ್ಯಂ ಬರೆದುಕೊಟ್ಟ ಪ್ರಕಾರವೇ ಹಣವನ್ನೆಣಿಸಿದ.

ಸುಬ್ಬಣ್ಣನ ಈ ಮಾತುಗಳೆಲ್ಲಾ ಕೇವಲ ಸೋಗು. ಕಡಿಮೆ ಇರುವ ಅದಿರಿಗೆ ಹೆಚ್ಚು ಹಣವನ್ನೇಕೆ ಕೊಡಬೇಕು, ಇವರಿಗೆ ಇಚ್ಛೆಯಿದ್ದರೆ ಚನ್ನಯ್ಯನಿಗೆ ಪುಕ್ಕಟೆಯಾಗಿ ಹಣವನ್ನು ಕೊಡಲಿ,- ಈ ಅದಿರಿನ ನೆಪದಿಂದ

ಕೊಡುವುದೇಕೆ, ತನ್ನನ್ನು ಕೆಟ್ಟವನನ್ನಾಗಿ ಮಾಡುವುದೇಕೆ? ಮೇಲಾಗಿ ಚನ್ನಯ್ಯನ ವಿಷಯದಲ್ಲಿ, ದೂರದಲ್ಲಿರುವ ಸುಬ್ಬಣ್ಣನಿಗೇಕೆ ಈ ವಿಶ್ವಾಸ?

ಕೊನೆಗೆ ಎಲ್ಲರೂ ಹೊರಟುಹೋದನಂತರ ಕಂಪೆನಿಯವರೇ ಉಳಿದಾಗ ಸುಬ್ಬಣ್ಣ ಶಾಂತಪ್ಪನಿಗೆ ಸಂಬಳಕ್ಕೆ ರುಜು ಹಾಕುವಂತೆ ಹೇಳಿದ. ಭೂಗರ್ಭ ಶಾಸ್ತ್ರಜ್ಞ ಮತ್ತು ಮೇನೇಜರ್ ಶಾಂತಪ್ಪ, ಗಣಿಯ ಇಂಜಿನಿಯರು ಗೋಪಾಲಯ್ಯ, ಸೂಪರ್‌ವೈಸರು ಮಾಣಿಕ್ಯಂ ಎಲ್ಲರೂ ರುಜು ಹಾಕಿದರು. ತನ್ನ ಸಂಬಳ ಇನ್ನೂರು ರೂಪಾಯಿ, ಗೋಪಾಲಯ್ಯನಿಗೆ ಇನ್ನೂರು ರೂಪಾಯಿ, ಮಾಣಿಕ್ಯಂಗೆ ನೂರೈವತ್ತು ಎಂದು ಬರೆಯಲ್ಪಟ್ಟಿತ್ತು. ಈ ಸಂಖ್ಯೆಗಳನ್ನು ನೋಡಿ ಶಾಂತಪ್ಪನಿಗೆ ವಿಸ್ಮಯವಾಯಿತು. ಅವನಿಗೆ ತಿಳಿಸಲ್ಪಟ್ಟಿದ್ದುದು ಎಂಭತ್ತು ರೂಪಾಯಿಗಳು ಮಾತ್ರ. ಅನಂತರ, ಬೇರೊಂದು ಚೀಟಿಯನ್ನು ನೋಡಿಕೊಂಡು, ಸುಬ್ಬಣ್ಣ, ಶಾಂತಪ್ಪನಿಗೆ ಎಂಭತ್ತು, ಗೋಪಾಲಯ್ಯನಿಗೆ ಅರವತ್ತು, ಮಾಣಿಕ್ಯಂಗೆ ಅರವತ್ತು ಕೊಟ್ಟ. ಶಾಂತಪ್ಪನಿಗಂತೂ ಆಶ್ಚರ್ಯವಾಯಿತು. ಇನ್ನೂರಕ್ಕೆ ರುಜು ಹಾಕಿ ಎಂಭತ್ತು ತೆಗೆದುಕೊಳ್ಳುವುದೇ?

"ಇದೇನು ಸಾರ್....ಪುಸ್ತಕದಲ್ಲಿ ಇನ್ನೂರು ಬರೆದಿದ್ದೀರಿ?" ಶಾಂತಪ್ಪ ಕೇಳಿದ.

"ಓ....ಹೌದು ಸಾರ್....ಈ ಕಂಪೆನಿಯ ಪದ್ಧತಿ ಹಾಗೇನೇ...." ಎಂದ ಸುಬ್ಬಣ್ಣ.

ಶಾಂತಪ್ಪ ಮಾತನಾಡಿ ಪ್ರಯೋಜನವಿಲ್ಲವೆಂದುಕೊಂಡು ಸುಮ್ಮನಾದ.

ಅದೇ ದಿನ ಮಧ್ಯಾಹ್ನ ಅವರು ಕೋಣಸಂದ್ರಕ್ಕೆ ಹಿಂದಿರುಗುವಾಗ, ರಾಮನಾಯ್ಕನ ಹಳ್ಳಿಯಿಂದ ಒಂದೆರಡು ಮೈಲಿಗಳ ದೂರದಲ್ಲಿ ಚನ್ನಯ್ಯ ಕಾರನ್ನು ನಿಲ್ಲಿಸಿ, ತನ್ನೊಡನೆ ಕರೆದುಕೊಂಡುಬಂದಿದ್ದ ಶಿವಮ್ಮ ಮತ್ತು ಪಾರ್ವತಿಯವರನ್ನು ಒಳಗೆ ಕೂರಿಸಿದನೆಂದೂ, ಅವರನ್ನು ನೋಡಿ ಸುಬ್ಬಣ್ಣ ಸಾಹುಕಾರರ ಮಾವ "ಭೇಷೋ....ಚನ್ನಯ್ಯ!" ಎಂದು ಚನ್ನಯ್ಯನ ಬೆನ್ನು ತಟ್ಟಿದರೆಂದೂ ಶಾಂತಪ್ಪನಿಗೆ ತಿಳಿಯಿತು.

## ೭

## ವನವಾಸದಿಂದ ಉಪವಾಸಕ್ಕೆ

ಸಾಹುಕಾರ—ಸರ್ಕಾರ ಇವರಿಬ್ಬರ ವ್ಯವಹಾರವು ನರಿಗಳ ಗುಂಪೆರಡರ ತಂತ್ರ ಪ್ರತಿತಂತ್ರಗಳಂತೆ. ತನ್ನ ಮುಂದಿರುವ ಮಾಂಸದ ತುಂಡನ್ನು ತನ್ನ

ಕಡೆಗೆ ಸೆಳೆದುಕೊಳ್ಳಲು ಒಂದು ನರಿ ಉಪಾಯ ಹೂಡಿದರೆ, ಮತ್ತೊಂದು ನರಿ ಆಗಲೇ ಪ್ರತ್ಯುಪಾಯವೊಂದನ್ನು ಯೋಚಿಸಿರುತ್ತದೆ. ಸಾಹುಕಾರರಿಂದ ಹಣ ಸೆಳೆಯಲು ಸರ್ಕಾರವು ಕೆಲವು ಕಾನೂನುಗಳನ್ನು ಯೋಚಿಸಿದರೆ, ಆ ಕಾನೂನಿನ ನೆರಳಿನಲ್ಲಿಯೇ ತಾನು ಹಣವನ್ನು ಗಳಿಸುವ ಹಂಚಿಕೆಯನ್ನು ಚಿಂತಿಸುವನು ಸಾಹುಕಾರ. ಆಡಳಿತಗಾರ, ಧನವಂತ ಇವರಿಬ್ಬರ ಈ ತಂತ್ರ ರಂಗದಲ್ಲಿ ನಡುವೆ ಸಿಲುಕಿಕೊಂಡು ಸವೆದುಹೋಗುವವನು ಧನಹೀನನಾದ ಕೂಲಿಗಾರ ಮಾತ್ರ. ಆದಾಯ ತೆರಿಗೆ ತಪ್ಪಿಸಲು ತನ್ನ ಸಾಹುಕಾರರು ಕಡಿಮೆ ವೇತನವಿತ್ತು ಹೆಚ್ಚು ವೇತನಕ್ಕೆ ಸಹಿ ಪಡೆಯುತ್ತಿದ್ದರು, ಕೆಲಸಗಾರ ರಿಂದ. ಈ ಪದ್ಧತಿಯಿರುವುದರಿಂದಲೇ ತಾನೇ ರಾಷ್ಟ್ರದಲ್ಲಿ ವಂಚನೆ, ಮೋಸ ನಿರ್ದಯೆ ಮೊದಲಾದುವು ವೃದ್ಧಿಗೊಳ್ಳುತ್ತಿರುವುದು; ಮನುಷ್ಯನು ಪಾಪಿ ಯಾಗುತ್ತಿರುವುದರ ಮೂಲ ಈ ಪದ್ಧತಿ, ಎಂದು ಶಾಂತಪ್ಪ ಹಾಸಿಗೆಯ ಮೇಲೆ ಮಲಗಿಕೊಂಡೇ ಚಿಂತಿಸುತ್ತಿದ್ದ.

ಆಗಲೇ ಬೆಳಗಾಗಿತ್ತು. ಹೊರಗೆ ಬೀದಿಯಲ್ಲಿ ತೋಟ, ಹೊಲಗಳಿಗೆ ಹೋಗುವ ರೈತರ ಎತ್ತಿನ ಗಾಡಿಗಳ ಚಕ್ರ ರಸ್ತೆಯ ಕಲ್ಲಿನ ಮೇಲೆ ಉರುಳು ವಾಗಿನ ಶಬ್ದ ಧಡಧಡನೆ ಕೇಳುತ್ತಿದ್ದಿತು. ಹೆಂಗಸರು ಭಾವಿಯಿಂದ ನೀರು ತರುವಾಗ ಕೊಡದಲ್ಲಿನ ನೀರು ಹೊರಡಿಸುತ್ತಿದ್ದ ಕಲಕಲ ಶಬ್ದ ಕೇಳಿಬರುತ್ತಿ ದ್ದಿತು. ಪಕ್ಕದ ಮನೆಯ ರತ್ನಮ್ಮನೂ ಸಹ ಬಂದು ಬಾಗಿಲಿನಲ್ಲಿಯೇ ನಿಂತು ಮಾಣಿಕ್ಯಂನಿಂದ ಕೊಡವನ್ನು ಕೇಳಿ ತೆಗೆದುಕೊಂಡುಹೋಗಿದ್ದಳು ಇವೆಲ್ಲದರ ಅರಿವಿದ್ದರೂ ತನ್ನ ಚಿಂತೆಯಲ್ಲಿಯೇ ತೊಡಗಿದ್ದ ಶಾಂತಪ್ಪ ಕೊನೆಗೊಮ್ಮೆ, ತಡೆಯಲಾರದೆ ಗೋಪಾಲಯ್ಯನೆಂದ,

"ಏನು ಸಾರ್....ಏಳೋದಿಲ್ಲವೇನು....ಇವತ್ತಾದರೂ ರತ್ನಗುಡ್ಡಕ್ಕೆ ಹೋಗೋಣ ಏಳಿ. ಅಲ್ಲಿಗೆ ಬಂದರೆ ನೀವು ಆ ಜಾಗ ನೋಡಿ ಅಲ್ಲಿಂದ ಹೊರಡೋದೇ ಇಲ್ಲಾಂತ ಕೂತುಕೊಂಡುಬಿಡ್ತೀರಿ...."

"ಓ....ಹೌದು ರತ್ನಗುಡ್ಡಕ್ಕೆ ಹೋಗೋದೇ ಮರೆತುಬಿಟ್ಟಿದ್ದೆ" ಎನ್ನುತ್ತ ತನ್ನ ಕರ್ತವ್ಯದ ಚಾಟಿಯಿಂದ ಹೊಡೆಯಲ್ಪಟ್ಟವನಂತೆ ಥಟ್ಟನೆದ್ದ.

"ನಿಮ್ಮದು ಕಲ್ಲಿನ ಕಾಲಿರಬೇಕು ಸಾರ್........ದಿನಾ ದಿನಾ ಅಷ್ಟೊಂದ್ದು ದೂರ ನಡೆಯೋಕೆ" ಎಂದು ಬಾಗಿಲಿನಲ್ಲಿಯೇ ಬೀಡಿ ಸೇದುತ್ತಾ ನಿಂತಿದ್ದ ರತ್ನಮ್ಮನ ಅಣ್ಣನೆಂದ.

"ಏನು ಮಾಡೋದಪ್ಪಾ.....ಸಾಹುಕಾರರ ಉಪ್ಪು ತಿಂದುದಕ್ಕೆ ನಮ್ಮ ಕರ್ತವ್ಯವನ್ನು ನಾವು ಸಂತೋಷದಿಂದಲೇ ಮಾಡಬೇಕು" ಎಂದ ಶಾಂತಪ್ಪ ತನ್ನ ರಗ್ಗನ್ನು ಮಡಿಸುತ್ತಾ.

"ಬೆಳಗ್ಗೆ ಏಳುತ್ತಿದ್ದ ಹಾಗೇ ಚಿನ್ನದಂತಹ ಮಾತನಾಡಿದಿರಿ ಸಾರ್" ಎಂದು ಗೋಪಾಲಯ್ಯ ಹೇಳಿದ, ಅವನ ಮುಖದಲ್ಲಿ ಬೆಳಗಿನ ಸೂರ್ಯನ ಬೆಳಕೇ ಮೂಡಿದಂತೆ ಬೆಳಕಿದ್ದಿತು.

"ಎಷ್ಟೇ ಆದರೂ ವಿದ್ಯಾವಂತರು....ದೊಡ್ಡ ಬುದ್ಧಿ" ಎಂದು ರತ್ನಮ್ಮನ ಅಣ್ಣ ಬೀಡಿಯನ್ನು ಹೊಸಕುತ್ತಾ.

ಅವರಿಬ್ಬರೂ ಹೊರಟಾಗ, ಜೊತೆಗೆ ಬಂದ ಖಾನನನ್ನು ಲಕ್ಷ್ಮೀಗುಡ್ಡಕ್ಕೆ ಹೋಗಿ ಚನ್ನಯ್ಯನ ಗಣಿಯಲ್ಲಿನ ಕೆಲಸವನ್ನು ನೋಡಿಕೊಂಡು ಬರುವಂತೆ ಹೇಳಿಕಳುಹಿಸಿ, ಬೇರೆ ರಸ್ತೆಯಿಂದ ತಾವಿಬ್ಬರೂ ರತ್ನಗುಡ್ಡದತ್ತ ಹೊರಟರು.

"ಶಾಂತಪ್ಪನೋರೆ ನೀವು ಇಷ್ಟೊಂದು ಒಳ್ಳೆಯವರಾಗಿದ್ದರಾಗುವುದಿಲ್ಲ" ನಾಲ್ಕಾರು ಫರ್ಲಾಂಗು ನಡೆದನಂತರ ಗೋಪಾಲಯ್ಯನೆಂದ.

"ನಾನೇನು ಮಹಾ ಒಳ್ಳೆಯವನು ಗೋಪಾಲಯ್ಯ....ಅದರಿಂದ ಆಗುವ ತೊಂದರೆಯಾದರೂ ಏನು ?"

"ನೋಡಿ ನಿನ್ನೆ ದಿನ ನೀವು ಮಾಣಿಕ್ಯಂ ಮಾಡಿದ ಮೋಸವನ್ನೆಲ್ಲಾ ಹೇಳಿದಿರಿ. ಚನ್ನಯ್ಯನನ್ನು ಎದುರುಹಾಕಿಕೊಂಡಿರಿ. ಏನು ಪ್ರಯೋಜನ ವಾಯ್ತು? ಸುಬ್ಬಣ್ಣ ಅವನಿಗೆ, ಅವನು ಹೇಳಿದಷ್ಟಕ್ಕೇ ದುಡ್ಡು ಕೊಟ್ಟ."

"ಹೌದು....."

"ಈ ಸಾವಕಾರೀ ಬಾಬುಗಳಲ್ಲಿ ಇದೇ ಸ್ವಾಮೀ ತೊಂದರೆ. ನೋಡಿ ನೀವು ಸರ್ಕಾರೀ ಗಣೀಲಿ ಮ್ಯಾನೇಜರಾಗಿದ್ದರೆ ಆ ಸೂಳೇಮಗ ಕೊಂಗನನ್ನೂ ಚನ್ನಯ್ಯನನ್ನೂ ಒದ್ದು ಓಡಿಸಿಬಿಡಬಹುದಾಗಿತ್ತು. ಸುಬ್ಬಣ್ಣನ ಬಾಯಿ ಮುಚ್ಚಿಸಿಬಿಡಬಹುದಾಗಿತ್ತು. ಇಲ್ಲಿ ಹೆಸರಿಗೆ ಮಾತ್ರ ನೀವು ಮ್ಯಾನೇಜರು. ಇಲ್ಲಿ ಸುಬ್ಬಣ್ಣ ಆಡಿದ ಆಟವೇ ಆಟ.....ಅವನು ಮಾಡಿದ್ದೇ ಮಜ!"

"ಹೂ...."ಶಾಂತಪ್ಪ ಮನಸ್ಸಿನಲ್ಲಿಯೇ ನಗುತ್ತಾ ನುಡಿದ.

"ಏನು ಹೂ?.........ಆ ಸುಬ್ಬಣ್ಣ ಮತ್ತು ಸಾಹುಕಾರ್ರ ಮಾವ ನಿನ್ನೆ ಚನ್ನಯ್ಯ ಹೇಳಿದಷ್ಟು ದುಡ್ಡು ಕೊಟ್ಟು, ವಾಪಸು ಹೋಗುವಾಗ ಎರಡು ಹಕ್ಕಿಗಳನ್ನು ಹೊಡಕೊಂಡು ಹೋದರು....!"

" ಹಾಗೆಂದರೆ ? "

" ಏನು ಸಾರ್ ನಿಮಗೆ ಗೊತ್ತೇ ಇಲ್ಲವಾ ? .... ನಿನ್ನೆ ಅವರು ವಾಪಸ್ಸು ಹೋಗುವಾಗ ಕಾರಿನಲ್ಲಿ ಶಿವಮ್ಮನನ್ನು ಪಾರ್ವತಿಯನ್ನೂ ಕರಕೊಂಡು ಹೋದರು ಸಾರ್........ಶಿವಮ್ಮನನ್ನ ಸಾವಕಾರ್ರ ಮಾವ, ಪಾರ್ವತೀನ ಸುಬ್ಬಣ್ಣ .... "

" ಯಾವಾಗ .... ನಾನು ನೋಡಲೇ ಇಲ್ಲವಲ್ಲ ! " ಆಶ್ಚರ್ಯ ಸೂಚಿಸಿದ ಶಾಂತಪ್ಪ.

" ಇನ್ನು ಯಾವಾಗ, ಕಾರು ರಸ್ತೇಲಿ ಹೋಗುವಾಗ .... ನಿಲ್ಲಿಸಿ ಚನ್ನಯ್ಯ ಒಳಕ್ಕೆ ಕೂಡಿಸಿದ .... "

" ಸರಿ ಇದ್ದರೂ ಇರಬಹುದು .... ಆದರೆ ನಾನೇನು ಮಾಡಬೇಕ್ರ ಅದಕ್ಕೆ ? "

" ನೀವು ಇದನ್ನೆಲ್ಲ ಏನು ಮಾಡಿದ್ರೂ ನಿಲ್ಲಿಸೋಕಾಗೋಲ್ಲ ಸಾರ್ .... ಸಾವಕಾರ್ರಿಗೆ ಇವರಲ್ಲೆಲ್ಲಾ ತುಂಬಾ ನಂಬಿಕೆಯಿದೆ, ಎಷ್ಟೋಸಲ ಸುಬ್ಬಣ್ಣನ ಕೈಲೇ ದುಡ್ಡು ಕಳಿಸುವಷ್ಟು ನಂಬಿಕೆಯಿದೆ ಅವರಿಗೆ. ಆದ್ದರಿಂದ ಇವರು ಯಾರ ವಿಷಯದಲ್ಲಿ ಎಂಥಾ ಮಾತು ಬಂದರೂ ಅವರು ನಂಬೋದಿಲ್ಲ. ಇದರ ಮೇಲೆ ಅಕಸ್ಮಾತ್ ಗೊತ್ತಾದರೂ ಸಹ ತಮ್ಮ ಕೆಲಸ ಸರಿಯಾಗಿ ಇವರೆಲ್ಲಾ ಮಾಡಿದರಾಯ್ತು, ಅವರ ಅಂತರಂಗದ ವಿಷಯ ನಂಗೇಕೇಂತ ಸುಮ್ಮನೆ ಇದ್ದುಬಿಡ್ತಾರೆ........ನಿಮಗೆ ಗೊತ್ತಿಲ್ಲ ಸಾರ್ .... ಸಾವಕಾರ್ರು ಎಂಥ ಕೋಮುಟಿ ಬುದ್ಧಿಯವರಂತ! ಮಾಣಿಕ್ಯಂ ರತ್ನಮ್ಮನ ವಿಷಯವನ್ನು ಒಂದುಸಲ ಯಾರೋ ಹೇಳಿದಾಗ ಏನಂದರು ಗೊತ್ತೆ? "

" ಇಲ್ಲ ! .... ಹೇಳಿ "

" ಅವನು ಏನು ಮಾಡಿಕೊಂಡ್ರೆ ನಂಗೇನು ... ಅವನು ನನ್ನ ಕೆಲಸ ಸರಿಯಾಗಿ ಮಾಡಿದರೆ ಸಾಕು, ಇದರಮೇಲೆ ಅವರಲ್ಲಿ ಅಂಥ ಕೆಲವು ತಪ್ಪುಗಳಿದ್ದರೇ ನಮಗೆ ಹೆದರಿಕೊಂಡು ಅವರ ಕೆಲಸ ಅವರು ಸರಿಯಾಗಿ ಮಾಡ್ತಾರೆ ಅಂದು ಬಿಟ್ಟರೂ ಸಾರ್." ಗೋಪಾಲಯ್ಯನ ಮಾತು ಕೇಳಿ ಶಾಂತಪ್ಪನಿಗೆ ಆಶ್ಚರ್ಯವಾಯಿತಾದರೂ ಅವನೆಂದ,

" ಅದಿರಲಿ, ಇವರು ಹೀಗೆ ಅಳತೇಲಿ ಮೋಸ ಮಾಡ್ತಾರಲ್ಲ ಅದು ಗೊತ್ತಾದರೆ ಏನು ಮಾಡ್ತಾರೆ ? "

" ಅದೂ ಒಂದು ಸಲ ಯಾರೋ ಸಾವಕಾರ್ರ ಕಿವೀಲಿ ಊದಿದ್ದರು ಅದಕ್ಕೆ ಅವರೇನಂದರಂತೆ ಗೊತ್ತೇನು ?....ಹೊಗಲಿ ಬಿಡಿ , ಅವರು ಕೆನೆ ತಿಂದು ನನಗೆ ಹಾಲು ಕೊಟ್ಟರು ಎಂದುಬಿಟ್ಟರಂತೆ "

ಗೋಪಾಲಯ್ಯನ ಈ ಮಾತುಕೇಳಿ ಶಾಂತಪ್ಪನಿಗೆ ದಿಗ್ಭ್ರಮೆ ಹಿಡಿದಂತಾಯ್ತು. ಹಾಗಾದರೆ ಧ್ಯೇಯವಾದಿಯಾದವನಿಗೆ ಬೆಲೆಯೇನಿದೆ ? ತಾನು ಹೇಳಿದುದಕ್ಕೆ ಬೆಲೆ ಬಾರದೇ ಕಾಮುಕನೂ ದ್ರೋಹಿಯೂ ಆದವನಿಗೇ ಮನ್ನಣೆ ದೊರೆತರೆ ತಾನು ಏಕಾದರೂ ಧ್ಯೇಯದ ಬಿಸಿಲ್ಕುದುರೆಯ ಮೇಲೆ ಹಾರಾಡಬೇಕು ? ಸಾಹುಕಾರರ ವಣಿಕ ತಂತ್ರದ ಚಕ್ರವೊಂದು ಅತ್ತಣಿಂದ ಉರುರುಳುಳಿ ಬಂದರೆ ಇತ್ತಣಿಂದ ಈ ಮೂವರ ದ್ರೋಹ ದುರ್ನಡತೆಯ ಚಕ್ರವೊಂದು ಉರುಳಿ ಬರುತ್ತದೆ. ಈ ಕಬ್ಬಿಣದ ಚಕ್ರವೆರಡರ ಮಧ್ಯೆ ಸಿಲುಕಿದ ತಾನು ಅವುಗಳ ಆಘಾತವನ್ನೇ ಅನುಭವಿಸಬೇಕಾಗುವುದೇ?....ಅನುಭವಿಸಬೇಕಾಗುವುದೇ ?

ಪ್ರಶ್ನಾರ್ಥಕ ಚಿಹ್ನೆಯು ಬೃಹದಾಕಾರ ತಾಳಿ ಗುಡ್ಡದಂತೆ ಎದುರು ನಿಂತಿತು. ಆದರೆ ಶಾಂತಪ್ಪನು ತನ್ನ ತತ್ವವನ್ನೇ ಪುನಃ ಮಥಿಸಿ ಮಥಿಸಿ ಅದರಿಂದ ನಂಬುಗೆಯ ಅಮೃತವನ್ನು ತೆಗೆದಾಗ ತನ್ನ ತತ್ವವನ್ನೇ ಹಿಡಿದು ಸಾಗುವೆನು, ಸತ್ಯವನ್ನೇ ಆರಾಧಿಸುವೆನು, ಎದುರು ಬಂದ ಎಲ್ಲರೊಡನೆ ಹೋರಾಡುವೆನು ಎಂದುಕೊಂಡು ತಲೆಯೆತ್ತಿ ನುಡಿದ,

"ಏನಾದರಾಗಲೀ ಗೋಪಾಲಯ್ಯ ನಾನೂ ಸಹ ನಾಯಿಯಂತೆ ಎಂಜಲು ದೊರೆತಾಗ ನಾಲಗೆ ಚಾಚುವುದು ಹೆಣ್ಣು ಸಿಕ್ಕಿದಾಗ ಹಿಂದೆ ಹೋಗುವುದು ಮಾಡಲಾರೆ....ನಾನು ಏನೇನು ಪ್ರಯತ್ನಿಸಿದರೂ ನನ್ನ ಕೈಯಿಂದ ಅದು ಸಾಧ್ಯವಾಗುವುದಿಲ್ಲ....ನೀವು ಬೇಕಾದರೆ ನಂಗೆ ಧೈರ್ಯವಿಲ್ಲ ಅಂತ ಹೇಳಿರಿ."

"ಅದರಿಂದ ತುಂಬ ತೊಂದರೆಯಾಗಬಹುದು....ನೋಡಿ ನಾನು ಒಂದೆರಡು ದಿವಸಗಳಲ್ಲಿ ಹೊರಟುಹೋಗ್ತೇನೆ....ಆಮೇಲೆ ನೀವೊಬ್ಬರೇ ಆಗ್ತೀರಿ.... ಆದ್ದರಿಂದಲೇ ಹೇಳಿದ್ದು ತುಂಬಾ ಹುಷಾರಾಗಿರಿ....ಚನ್ನಯ್ಯ, ಸುಬ್ಬಣ್ಣ ಇಬ್ಬರೂ ಹಾವಿನಂಥವರು," ಎಂದ ಗೋಪಾಲಯ್ಯ.

"ಅವರು ನನ್ನನ್ನ ಏನೂ ಮಾಡಲಾರರು ಗೋಪಾಲಯ್ಯ !" ಶಾಂತಪ್ಪ ಧೃಡಚಿತ್ತದಿಂದ ನುಡಿದ.

ಎದುರಿನಲ್ಲಿಯೇ ರತ್ನಗುಡ್ಡ ; ಅದರ ಮೇಲಿನ ದೇವಾಲಯದ ಬಿಳಿ ಗೋಡೆಗಳು ದೂರದಿಂದಲೇ ಕಾಣಬರುತ್ತಿದ್ದುವು. ರತ್ನಗುಡ್ಡವೆಂದು ಒಂದೇ ಗುಡ್ಡದ ಹೆಸರಾದರೂ ಅದಕ್ಕೆ ಸೇರಿದಂತೆ ಅದರ ಸುತ್ತಲೂ ಹಲವಾರು ಸಣ್ಣ ಸಣ್ಣ ಗುಡ್ಡಗಳಿದ್ದುವು. ರತ್ನಗುಡ್ಡದ ಮೇಲೆ ಎಲ್ಲೆಲ್ಲಿಯೂ ಮ್ಯಾಂಗನೀಸ್ ಅದಿರಿನ ಗುಂಡುಗಳೇ ಭೂಮಿಯಿಂದ ಹೊರಗೆ ತಲೆ ಹಾಕಿದುದು ಕಾಣು ತ್ತಿದ್ದುವು. ಗುಡ್ಡದ ಮುಂದೆ, ಇದ್ದ ಇತರ ಗುಡ್ಡಗಳ ನಡುವೆ ಕಣಿವೆಯಂತಹ ಸ್ಥಳವೊಂದು ಸದಾ ಹಸಿರಾಗಿಯೇ ಇರುತ್ತಿದ್ದಿತು, ಅಲ್ಲಿ ಮಾವು, ಆಲ, ಬೇಲದ ಮರಗಳ ಬದಿಯಲ್ಲಿಯೇ ಬಿಳಿ ಕಣಗಿಲೆ ಗಿಡಗಳು ಹಲವು ಪೊದೆ ಯಾಗಿ ಬೆಳೆದಿದ್ದುವು. ಈ ಗಿಡಗಳ ಮಧ್ಯೆ ಕಣಿವೆಯಲ್ಲಿ ಅಲ್ಲಲ್ಲಿಯೇ ನೀರು ಭೂಮಿಯಿಂದ ಉಕ್ಕಿ ಮೇಲೆ ಬರುತ್ತಿದ್ದಿತು. ಈ ನೀರೇ ಮುಂದೆ ಮುಂದೆ ಹೋದಂತೆ ಜರಿಯಾಗಿ, ಕಲ್ಲುಗಳ ಮೇಲೆ ಜುಳಜುಳನೆ ಹರಿಯುತ್ತಿದ್ದಿತು. ದೂರದೂರದ ಊರಿನಿಂದ ರತ್ನಗುಡ್ಡದ ಮೇಲಿನ ದೇವಾಲಯಕ್ಕೆ ಬರುತ್ತಿದ್ಧ ಹಲವಾರು ಯಾತ್ರಿಕರು ಬಿಸಿಲಿನಲ್ಲಿ ಗುಡ್ಡಗಳನ್ನೇರಿ ದಣಿದು ಬಾಯಾರಿ ಬಂದಾಗ, ಈ ಜರಿಯ ನೀರು ಅವರ ಪಾಲಿನ ಅಮೃತವಾಹಿನಿಯಂತೆ ಕಾಣು ತ್ತಿದ್ದಿತು. ಸುತ್ತಮುತ್ತಲೂ ಗುಡ್ಡಗಳೇ, ಬಿಸಿಲಿನಲ್ಲಿ ಬೇಯುತ್ತಾ, ಆ ಬೇಗೆಗೆ ಪುಡಿಯಾಗುತ್ತಾ ಸಿಂತಿದ್ದ ಬೆಟ್ಟಗಳೇ. ಅವುಗಳ ಮಧ್ಯೆ ಉಕ್ಕುತ್ತಿದ್ದ ಈ ನೀರನ್ನು ನೋಡಿ ಶಾಂತಪ್ಪನಿಗೆ ಸಂತೋಷವಾದಂತೆಯೇ ವೈಜ್ಞಾನಿಕ ಕುತೂಹಲವೂ ಉಂಟಾಯ್ತು.

ಶಾಂತಪ್ಪ ಮೊಳಕಾಲುದ್ದ ಆಳವಿದ್ದ ಆ ನೀರಿನಲ್ಲಿಯೇ ವಾಹಿನಿಗೆದು ರಾಗಿ ನಡೆದುಕೊಂಡು ಹೋದ. ಅಲ್ಲಿದ್ದುದೆಲ್ಲಾ ಸುಣ್ಣಕಲ್ಲು ಪದರ (Limestone Beds) ಗಳೇ ಆಗಿದ್ದುವು. ಆ ಕಲ್ಲಿನ ಪೊಟ್ಟರೆ ರಂಧ್ರಗಳ ಒಳಗಿ ನಿಂದ ಭೂಗರ್ಭದಿಂದ ಜಲವುಕ್ಕಿ ಬರುತ್ತಿದ್ದಿತು. ಆ ಸಿಹಿ ನೀರನ್ನು ಸ್ವಲ್ಪ ಕುಡಿದು, ತನ್ನ ಕಾರ್ಯವನ್ನು ಕುರಿತು ಹೊರಟ.

ರತ್ನಗುಡ್ಡದ ಸುತ್ತಲಿದ್ದ ಗುಡ್ಡಗಳಲ್ಲಿಯೇ ಅದಿರಿನ ಗಣಿಗಳಿದ್ದುದು, ಹಲವಾರು ವರ್ಷಗಳ ಹಿಂದೆ ಯಾವುದೋ ಬ್ರಿಟಿಷ್ ಕಂಪೆನಿಯೊಂದು ಅಲ್ಲಿಯೇ ಅದಿರನ್ನು ತೆಗೆದುದೂ ಅದನ್ನು ದೊಡ್ಡ ದೊಡ್ಡ ಗೂಡುಗಳನ್ನು ನಿರ್ಮಿಸಿ ಅಲ್ಲಿಯೇ ಕರಗಿಸಿದ್ದುದು ಕಾಣುತ್ತಿದ್ದಿತು. ಸಹಸ್ರಾರು ರೂಪಾಯಿ ವೆಚ್ಚಮಾಡಿ ಅದಿರನ್ನು ಹುಡುಕುವ ಸಲುವಾಗಿ ಒಂದೆರಡು ಮೈಲಿಗಳ

ಉದ್ದಕ್ಕೆ ಹಳ್ಳವನ್ನೇ ಅಗೆಸಿದ್ದರು. ಅಲ್ಲಿ ತೆಗೆದೆಸೆದ ಮಣ್ಣು ಉದ್ದಕ್ಕೆ ಗುಡ್ಡ ದಂತೆಯೇ ಬಿದ್ದಿದ್ದಿತು. ಗುಡ್ಡವನ್ನೇರುತ್ತಿದ್ದಂತೆಯೇ ಶಾಂತಪ್ಪನಿಗೆ ಅಲ್ಲಿ ಹಳದಿ ಮಣ್ಣಿನ ಕುಳಿಗಳು ಕಾಣಿಸಿದುವು, ಭೂಮಿಯ ಮೇಲೆ ಹಳದಿಯ ದಿಂಡು ಹಾದು ಹೋದುದೂ, ದೂರದಲ್ಲಿದ್ದ ಎರಡನೆಯ ಗುಡ್ಡದಲ್ಲಿ, ಚನ್ನ ಯ್ಯನ ಆಳುಗಳು ಕೆಲಸಮಾಡುತ್ತಿದ್ದುದೂ ಕಾಣಿಸುತ್ತಿದ್ದಿತು; ಅವರು ಓಡಾ ಡುವ ಬೊಂಬೆಗಳಂತೆ ಕಾಣುತ್ತಿದ್ದರು. ಚನ್ನಯ್ಯ ಇಲ್ಲಿಯೇ ಶಿವಮ್ಮನ ಗಂಡ ಬಸಪ್ಪನನ್ನು ಮುಖ್ಯ ಮೇಸ್ತ್ರಿಯಾಗಿ ನಿಯಮಿಸಿದ್ದುದು, ಅವನು ಎದುರು ಬಂದು ಶಾಂತಪ್ಪನನ್ನು ಅರ್ಧ ಮಾರ್ಗದಲ್ಲಿಯೇ ಭೇಟಿಮಾಡಿದಾಗ ಅರಿವಾಯ್ತು.

ಬಸಪ್ಪ ತಲೆಗೊಂದು ಟವಲು ಸುತ್ತಿದ್ದ, ಮ್ಯಾಂಗನೀಸ್ ಅದಿರನ್ನು ಮುಟ್ಟಿದ ಕೈನಿಂದಲೇ ಆಗಾಗ್ಗೆ ಮುಟ್ಟಿದ್ದರಿಂದ ಅದು ಕಪ್ಪಾಗಿದ್ದಿತು. ಭುಜದ ಮೇಲೆ ಹಿಸಿದುಹೋದ ಷರಟೊಂದನ್ನು ಧರಿಸಿದ್ದು, ತಾನು ಮಹಾ ಜಿಪುಣ ನೆಂದೇ ಪ್ರದರ್ಶಿಸಿಕೊಳ್ಳುತ್ತಿದ್ದ. ಮಂಡಿಯವರೆಗೊಂದು ಚೌಕವನ್ನು ಸುತ್ತಿ ಕೊಂಡಿದ್ದ. ಕಾಲಿನ ಮೀನಖಂಡದ ನರಗಳೆಲ್ಲವೂ ಉಬ್ಬಿಕೊಂಡು ಕಾಣು ತ್ತಿದ್ದುವು. ಅವನ ಮುಖದ ಮೇಲೆ ವೃದ್ಧಾಪ್ಯದ ಸ್ಪಷ್ಟರೇಖೆಗಳಿದ್ದುವು. ಅವನು ನಗಲು ಬಾಯ್ತೆರೆದಾಗ ವಸಡಿಗೆ ಅಂಟಿಕೊಂಡಿದ್ದ ನಾಲ್ಕೈದು ಹಲ್ಲು ಗಳು ಕಂಡುವು. ತಕ್ಷಣ ಶಾಂತಪ್ಪನಿಗೆ, ಬುದ್ಧನು ಕಂಡ ಮೊದಲ ಮುದು ಕನ ಚಿತ್ರದ ನೆನಪಾಯ್ತು. ಕಾಡಿನ ಕರೆ ಆಗಲೇ ಅವನ ಕಿವಿಗೆ ಅನೇಕ ಬಾರಿ ಕೇಳಿಬಂದಂತೆ ತೋರುತ್ತಿದ್ದಿತು. ಅವನು ಸತ್ವಹೀನನೆಂದು ಸ್ಪಷ್ಟ ವಾಗಿಯೇ ಕಾಣುತ್ತಿದ್ದಿತು. ಆದರೆ—

ಶಿವಮ್ಮ ಆಗಿನ್ನೂ ಜೀವನದ ವಸಂತದಲ್ಲಿ ಕಾಲಿಟ್ಟಿದ್ದ ಸುಪುಷ್ಟ ಹಕ್ಕಿ. ಅವಳಿಗೆ ಹೂವು ಬೇಕಿದ್ದಿತು, ಹಸಿರು ಬೇಕಿದ್ದಿತು, ರಸಭರಿತ ಫಲಗಳ ರುಚಿ ಬೇಕಿದ್ದಿತು. ಆ ವನರಾಗದಲ್ಲಿ ಹಾರಾಡುವ ಚಿಟ್ಟೆಯಂತಿದ್ದ ಯೌವನಸ್ಥೆಗೆ ಈ ಮುದುಕ ಗಂಡನಾದರೆ ಅವಳು ತಾನೇ ನಿಸರ್ಗ ನಿಯಮವನ್ನು ಹೇಗೆ ಮೀರಿಯಾಳು ? ವಿಧುರನು ಕನ್ಯೆಯನ್ನೇ ಮದುವೆಯಾಗಬೇಕೆಂದು ನಮ್ಮ ಸಮಾಜ ನಿಯಮ ವಿಧಿಸಿದೆ. ಆದರೆ ಯೌವನ ಸಹಜ ಪ್ರವೃತ್ತಿಗಳನ್ನು ನಿಯಂತ್ರಣಗೊಳಿಸಿಲ್ಲವಲ್ಲ ! ಈ ಪೂರ್ವ ಪದ್ಧತಿಯನ್ನನುಸರಿಸಿಯೇ ನಮ್ಮ ಸಮಾಜದಲ್ಲಿ ಅನೇಕ ಅನೀತಿಯನ್ನು ಅನುಸರಿಸುತ್ತಿರುವರು. ಬಸಪ್ಪನಂತಹ

ವಯಸ್ಕನು ಶಿವಮ್ಮನನ್ನಾಳಲು ಸಾಧ್ಯವಿಲ್ಲದ್ದರಿಂದಲೇ ಅವಳನ್ನು ರಾಮ ನಾಯ್ಕನಹಳ್ಳಿಯನ್ನು ಬಿಟ್ಟು ಅವನು ಏಳೆಂಟುಮೈಲಿ ದೂರದ ಈ ಗುಡ್ಡಕ್ಕೆ, ಚನ್ನಯ್ಯನ ಕೆಲಸಗಾರನಾಗಿ ಬಂದಿರುವನು. ಇಷ್ಟೊಂದು ಆಸ್ತಿಯಿದ್ದರೂ ಈ ಸಂಪಾದನೆಗೆಂದು ಬಂದಿರುವ ಜಿಪುಣನಿವನು, ಎಂದು ಶಾಂತಪ್ಪ ಚಿಂತಿಸಿದ.

"ತಾವು ಇಷ್ಟು ದೂರ ನಡೆದು ಬಂದುಬಿಟ್ಟಿರಾ ?" ಬಸಪ್ಪ ಕೇಳಿದ.

"ಹೌದಪ್ಪ....ಇಲ್ಲಿ ರಸ್ತೆಯೇ ಇಲ್ಲವಲ್ಲ, ಕಾರಿನಲ್ಲಿ ಬರೋಣವೆಂದರೆ."

"ತಾವು ಸಾವಕಾರ್‍ರಿಗೆ ಹೇಳಿದರೆ ಅವರು ಏನು ಬೇಕಾದರೂ ಕಳಿಸಿ ಬಿಡ್ತಾರೆ ಸಾರ್" ಎಂದು ಬಸಪ್ಪ ಹಲ್ಲುಕಿರಿದ.

ಶಾಂತಪ್ಪ ಗಣಿಗಳ ಬಳಿಗೆ ನಡೆದ. ಏಳೆಂಟು ಕುಣಿಗಳನ್ನು ತೋಡಿದ್ದರೂ ಮೂರು ನಾಲ್ಕು ಮಾತ್ರ ಆಶಾದಾಯಕವಾಗಿ ಕಾಣುತ್ತಿದ್ದುವು. ಉಳಿದುವುಗಳಲ್ಲಿ ಆಳುಗಳು ಅಗೆದಗೆದು ಕಲ್ಲುಮಣ್ಣನ್ನೇ ತೆಗೆಯುತ್ತಿದ್ದರು ; ಅವುಗಳಲ್ಲಿ ಕೆಲಸ ನಿಲ್ಲಿಸುವಂತೆ ಶಾಂತಪ್ಪ ಹೇಳಿದುದಕ್ಕೆ ಗೋಪಾಲಯ್ಯನೂ ಹೂಗುಟ್ಟಿದ.

ಆ ಮೂರು ನಾಲ್ಕು ಕುಣಿಗಳೂ ಇಪ್ಪತ್ತು ಮೂವತ್ತು ಅಡಿ ಆಳವಿಳಿದಿದ್ದುವು. ಅಲ್ಲಿ ಆಗಲೇ ಸುಮಾರು ಮೂವತ್ತು ಟನ್ ಅದಿರು ತೆಗೆದು ರಾಶಿ ಹಾಕಿದ್ದರು. ಹತ್ತು ಹದಿನೈದು ಹೆಂಗಸರು ಬಿಸಿಲಿನಲ್ಲಿ ಒಂದೆಡೆ ಕುಳಿತು ಅದಿರನ್ನೊಡೆಯುತ್ತಿದ್ದರು. ಅವರಲ್ಲಿ ಒಬ್ಬಳು ಆರೇಳು ತಿಂಗಳ ಮಗುವೊಂದನ್ನು ಎದೆಗೆ ಬಿಗಿದುಕೊಂಡೇ ಕೆಲಸ ಮಾಡುತ್ತಿದ್ದಳು. ಆ ಮಗುವು ಬಾಯ ಬಳಿಯೇ ಇದ್ದ ಮೊಲೆಯನ್ನು ಬೇಕೆಂದಾಗ ಚೀಪುತ್ತಿದ್ದಿತು. ಒಬ್ಬಳು ಹನ್ನೆರಡು ವರ್ಷಗಳ ಬಾಲಕಿ ತಲೆಗೊಂದು ಹರಳು ಗಿಡದ ಎಲೆಯನ್ನು ಕಟ್ಟಿಕೊಂಡಿದ್ದಳು. ದುಡಿಯಬೇಕು....ದುಡಿದು ತುತ್ತಿನ ಚೀಲವನ್ನು ತುಂಬಿಕೊಳ್ಳಬೇಕು- ಬಿಸಿಲಾಗಲಿ ಮಳೆಯಾಗಲೀ ಶ್ರಮಿಸಲೇ ಬೇಕು....ಬೆಳಗಿನಿಂದ ಸಂಜೆಯವರೆಗೆ ಶ್ರಮಿಸಿದರೇ ದಿನಕ್ಕೆ ಹನ್ನೆರಡು ಆಣೆಗಳ ಪ್ರತಿಫಲ, ಇಲ್ಲದಿದ್ದರೆ ಉಪವಾಸ....ಈ ವನವಾಸದಿಂದಲೇ ಆ ಉಪವಾಸ ನೀಗುವುದು ಇದು ಅವರ ನಿತ್ಯಮಂತ್ರವೆನ್ನಿಸಿತು ಶಾಂತಪ್ಪನಿಗೆ.

ಆದರೆ ಈ ಶ್ರಮಜೀವಿಗಳ ಮಧ್ಯೆಯೇ ಸೋಮಾರಿಗಳಿದ್ದರು. ಬೇರೆಯವರು ಕೆಲಸಮಾಡುವಾಗ ತಾವು ಬೀಡಿ ಸೇದುತ್ತಲೋ ಅಡಿಕೆಲೆ ಮೆಲ್ಲುತ್ತಲೋ ಕಾಲ ಕಳೆಯುತ್ತಿದ್ದರು. ಅದೇ ಅವರ ನಿತ್ಯ ಕೆಲಸ. ಅವರು

ದುಡಿಯುತ್ತಲೇ ಇರಲಿಲ್ಲ. ಒಂದೆಡೆ, ಅಲ್ಲಿ ಹತ್ತಾರು ಜನ ಪಿಕಾಸಿ ಗುದ್ದಲಿಗಳಿಂದ ಭೂಮಿಯನ್ನಗೆಯುತ್ತಾ ದುಡಿಯುತ್ತಿರುವಾಗ ಒಬ್ಬ ಬೀಡಿ ಸೇದುತ್ತಾ ಸುಮ್ಮನೇ ನಿಂತಿದ್ದ. ತಾನು ಅಲ್ಲಿಗೆ ಬಂದಾಗಿನಿಂದಲೂ ಅವನು ಹಾಗೆಯೇ ನಿಂತು ಎರಡು ಮೂರು ಬೀಡಿಗಳನ್ನು ಸೇದಿ ಮುಗಿಸಿದ್ದುದನ್ನು ಶಾಂತಪ್ಪ ಗಮನಿಸಿದ್ದ.

"ಬಸಪ್ಪ!....ಇವನಿಗೇನು ಕೆಲಸ ಕೊಟ್ಟಿದ್ದೀಯ?" ಶಾಂತಪ್ಪ ಕೇಳಿದ.

"ಇವನಿಗೆ....ಇವನಿಗೆ.... ಇಲ್ಲೆ ಪಿಕಾಸಿ ಕೆಲಸ ಸಾರ್" ಬಸಪ್ಪನೆಂದ ಅಂಜುತ್ತಾ.

"ಮತ್ತೆ, ಇವನೇಕೆ ಸುಮ್ಮನೆ ನಿಂತಿದ್ದಾನೆ ಈವತ್ತು ಇವನಿಗೆ ಗೈರು ಹಾಜರಿ ಬರೆದುಕೋ" ಎಂದು ಶಾಂತಪ್ಪ ಮುಂದೆ ಹೊರಟುಹೋದ. ಆ ಕೆಲಸಗಾರನ ನೋಟದಲ್ಲಿದ್ದ ಗರ್ವವನ್ನು ಶಾಂತಪ್ಪ ಗಮನಿಸಿದ್ದ. ಹತ್ತಾರು ಹೆಜ್ಜೆ ಮುಂದೆ ಹೋದ ನಂತರ ಬಸಪ್ಪ ಮೆಲ್ಲನೆಂದ,

"ಸಾರ್....ಅವನು ಪಕ್ಕದ ಹಳ್ಳಿಯ ಪಟೇಲರ ಮಗ ಸಾರ್!"

"ಪಟೇಲರ ಮಗನಾದರೆ ಕೂಲಿಗೇಕೆ ಬರಬೇಕು?....ಕೂಲಿಗೆ ಬಂದ ಮೇಲೆ ಕೆಲಸ ಮಾಡಲೇಬೇಕು. ಸುಮ್ಮನೆ ನಿಂತಿರೋದಾದರೆ ಅವನು ಬರೋದೇ ಬೇಕಾಗಿಲ್ಲ."

"ಅದು ಸರಿ ಸಾರ್....ಆದರೆ ಚನ್ನಯ್ಯನೋರು ಹೇಳವ್ರೆ."

"ಏನು, ಚನ್ನಯ್ಯ ಕೆಲಸ ಮಾಡದಿದ್ದವರಿಗೆಲ್ಲಾ ಕೂಲಿ ಕೊಡೋದಿಕ್ಕೆ ಹೇಳಿದಾನೇನು?"

"ಹಾಗಲ್ಲ ಸಾರ್, ಇವನ ವಿಷಯ ಬೇರೆ!" ಎಂದು ಅರ್ಥಪೂರ್ಣವಾಗಿ ನುಡಿದ.

"ಏನು ಇವನ ವಿಷಯ?"

"ಇವನ ಅಕ್ಕ....", ಎಂದು ಬಸಪ್ಪ ಪ್ರಾರಂಭಿಸುತ್ತಿದ್ದಂತೆಯೇ ಆ ಮಾತನ್ನು ಕೇಳುವುದಕ್ಕೆ ಅಸಹ್ಯವಾದಂತೆ, ತಕ್ಷಣ ಶಾಂತಪ್ಪನೆಂದ,

"ಹಾಳಾಗಿಹೋಗಲಿ....ಆ ಮಾತು ನಂಗೆ ಬೇಡ. ಇಂಥ ಅಯೋಗ್ಯರಿಂದಲೇ ನಮ್ಮ ಗಣೀಗೇ, ನಮ್ಮ ಕಂಪೆನಿಗೇ ಕೆಟ್ಟ ಹೆಸರು ಬಂದಿರೋದು" ಶಾಂತಪ್ಪನ ಉಗ್ರತೆಯನ್ನು ನೋಡಿದ ಬಸಪ್ಪನಿಗೇ ಅಲ್ಲದೆ ಗೋಪಾಲಯ್ಯನಿಗೂ ಅಂಜಿಕೆಯಾಯಿತು.

ಗಣಿಗಳೆಲ್ಲವನ್ನೂ ನೋಡಿ ಕೆಲವು ಸಲಹೆಗಳನ್ನಿತ್ತು ಶಾಂತಪ್ಪ ಅಲ್ಲಿಯೇ ನಿಂತುಕೊಂಡು ಸುತ್ತಲೂ ನೋಡಿದ. ಎಡಗಡೆ ಸುಮಾರು ಹದಿನೈದು,ಹದಿನಾರು ಮೈಲಿ ದೂರದಲ್ಲಿ ಹಳೆಯ ದುರ್ಗದ ಗುಡ್ಡ ಕಾಣು ತ್ತಿದ್ದಿತು. ರಾಮನಾಯ್ಕನ ಹಳ್ಳಿಯಿಂದ ಅವರು ನಿಂತ ಗುಡ್ಡಗಳನ್ನು ಬಳಸಿ ದೂರದಲ್ಲಿ ಹಳೆಯದುರ್ಗಕ್ಕೆ ಸಾಗಿದ್ದ ರಸ್ತೆಯ ಪಕ್ಕದ ಮರಸಾಲುಗಳು ವಕ್ರವಕ್ರವಾಗಿ ಹೋಗಿದ್ದುದು ಕಾಣಿಸುತ್ತಿದ್ದಿತು. ಸುತ್ತಲಿನ ಬಯಲಿನಲ್ಲಿ ಬರೀ ತೆಂಗಿನ ತೋಟಗಳೇ ಕಾಣುತ್ತಿದ್ದವು. ಬಲಗಡೆ ನೋಡಿದಾಗ ಅಲ್ಲಿ ಮೂವತ್ತು ನಲವತ್ತು ಗುಡ್ಡಗಳ ಶಿಖರಗಳು, ಅವುಗಳ ಮಧ್ಯದ ಇಳಿಜಾರು ಗಳೂ, ಕಣಿವೆಗಳೂ ಕಾಣುತ್ತಿದ್ದುವು. ಅತ್ತಲಿಂದ ಬೀಸಿ ಬರುತ್ತಿದ್ದ ಗಾಳಿ ಯಲ್ಲಿ ಒಮ್ಮೊಮ್ಮೆ ಜಾಲಿ ಮರದ ಹೂವುಗಳ ಪರಿಮಳ ತುಂಬಿಕೊಂಡು ಬರುತ್ತಿದ್ದಿತು. ಶಾಂತಪ್ಪ ಆ ರಮ್ಯದೃಶ್ಯವನ್ನು ನೋಡಿ ಮೈಮರೆತಿದ್ದ.

ಹತ್ತಾರು ನಿಮಿಷಗಳ ನಂತರ ಶಾಂತಪ್ಪನೇ ಅತ್ತ ತಿರುಗಿ ಹೊಸದಾಗಿ ತೆಗೆದ ಅದಿರನ್ನು ನೋಡತೊಡಗಿದ. ಆ ಪ್ರದೇಶದ ಅದಿರು ಉತ್ತಮವಾಗಿ ದ್ದಿತು. ಉದ್ದುದ್ದವಾದ, ಸೂಜಿಯಾಕಾರದ, ಪೈರೋಲೂಸೈಟ್ ಹರಳು ಗಳು ಬಿಸಿಲಿನಲ್ಲಿ ಪಳಪಳನೆ ಹೊಳೆಯುತ್ತಿದ್ದುವು. ಆ ಹರಳುಗಳೊಡನೆಯೇ ಬೆಣಚುಕಲ್ಲು ಮರಳಿನ ಚೂರುಗಳೂ ಸೇರಿಕೊಂಡು ಸಕ್ಕರೆಯಂತೆ ಬೆಳ್ಳಗೆ ಕಾಣುತ್ತಿದ್ದುವು. ಕಬ್ಬಿಣದ ರೇಖೆಗಳು ಹೆಚ್ಚು ಕಾಣದಿದ್ದ, ಬೆಣಚುಕಲ್ಲು ಹೆಚ್ಚಾಗಿದ್ದ, ಆ ಅದಿರು ಉತ್ತಮ ಮ್ಯಾಂಗನೀಸ್ ದೊರಕುವ ಚಿಹ್ನೆಯೆಂದ ವನಿಗರಿವಿದ್ದಿತು. ಸಂಪದ್ಯುಕ್ತವಾದ ಆ ನಾಲ್ಕಾರು ಗುಡ್ಡಗಳಲ್ಲಿ ಹೆಚ್ಚು ಬಂಡವಾಳ ಹಾಕಬಹುದು, ಉತ್ಪನ್ನ ಹೆಚ್ಚಿಸಬಹುದು, ಆದರೆ ಈ ವೆಚ್ಚ ದಿಂದ, ಇಷ್ಟು ದೂರದ ಪ್ರದೇಶದಲ್ಲಿ ಬಂಡವಾಳ ಹಾಕುವುದರಿಂದ ಲಕ್ಷ್ಮಿ ಗಣಿಗಿಂತ ಹೆಚ್ಚಿನ ಉಪಯೋಗವುಂಟೆ ಇಲ್ಲಿ ಎಂದು ಯೋಚಿಸ ತೊಡಗಿದ.

ರಾಮನಾಯ್ಕನಹಳ್ಳಿಯಿಂದ ರತ್ನಗುಡ್ಡಕ್ಕೆ ಸಂಚಾರ ವ್ಯವಸ್ಥೆ ಇರಲಿಲ್ಲ. ಅಲ್ಲಿಗೆ ರಸ್ತೆ ನಿರ್ಮಿಸಬೇಕಾದರೆ ಹಲವಾರು ಗುಡ್ಡಗಳನ್ನು ಬಳಸಿಕೊಂಡು ಹೋಗುವಂತೆ ರಸ್ತೆಯಾಗಬೇಕಾಗಿದ್ದಿತು. ಅದೂ ಸಹ ರಸ್ತೆಯ ಮಧ್ಯೆ ಹಳ್ಳದಿಣ್ಣೆಗಳು ಹಲವಿದ್ದುವು, ಏರು ಹೆಚ್ಚಾಗಿರುವುದರಿಂದ ಲಾರಿಯು ಮುಂದೆ ಸರಿಯುವುದು ತೊಂದರೆಯಾಗಿದ್ದಿತು. ಅದಕ್ಕಾಗಿ ಏನಿಲ್ಲವೆಂದರೂ ಮೊದಲು ಹತ್ತು ಸಾವಿರ ರೂಪಾಯಿಗಳ ವೆಚ್ಚವಾಗುತ್ತಿದ್ದಿತು. ಇದರೊಡನೆಯೇ

ಗಣಿಗಳನ್ನು ಹೆಚ್ಚು ಆಳವಿಳಿಸಿ, ಒಳಗಿರಬಹುದಾದ ಅದಿರಿನ ಸೆಲೆಗಳನ್ನು ಅನುಸರಿಸಿ ಹೋಗಬೇಕಾಗಿದ್ದಿತು. ವೈಜ್ಞಾನಿಕವಾಗಿ ಕಾರ್ಯಕ್ರಮ ನಡೆಸ ಬೇಕಾಗಿದ್ದ ಈ ಗಣಿಗಳಿಗೆ ಏನಿಲ್ಲವೆಂದರೂ ಐದಾರು ಸಾವಿರ ರೂಪಾಯಿ ವೆಚ್ಚವಾಗುತ್ತಿದ್ದಿತು. ಈ ಗಣಿಗೆ ಒಂದೆರಡು ಮೈಲು ಹತ್ತಿರವಿರುವ ಹಳ್ಳಿ ಯಲ್ಲಿಯೇ ಬಿಡಾರ ಮಾಡಿಕೊಂಡು ವಾಸಿಸುವ ಒಬ್ಬನನ್ನು ಇಲ್ಲಿನ ಕಾರ್ಯ ನೋಡಿ ಕೊಳ್ಳಲು ನಿಯಮಿಸಬೇಕಿದ್ದಿತು. ಅವನ ವೇತನ ಬೇರೆ. ಸಾಹುಕಾ ರರು ಇಷ್ಟು ಹಣವನ್ನು ಈ ಹೊಸಸ್ಥಳದಲ್ಲಿ ವ್ಯಯಿಸುವರೆ ? ವ್ಯಯಿಸಿದರೂ ಪ್ರತಿಫಲ ಗಣನೀಯವಾದುದೆ ?

ಭೂಗರ್ಭ ಶಾಸ್ತ್ರವು ಇತರ ವಿಜ್ಞಾನಗಳಂತಲ್ಲ. ಈ ಶಾಸ್ತ್ರದಲ್ಲಿ ಊಹೆಯೇ ಹೆಚ್ಚು. ಭೂಗರ್ಭದ ಒಳಗಿನ ಸಂಪತ್ತನ್ನು ಗೊತ್ತುಪಡಿಸ ಬೇಕಾದರೆ ನೆಲದ ಮೇಲಿನ ಕುರುಹುಗಳನ್ನನುಸರಿಸಿಯೇ ಹೋಗಬೇಕು; ಅನುಸರಿಸಿದ ನಂತರ ಊಹಿಸಬೇಕಾಗುತ್ತಿದ್ದಿತು. ಇದನ್ನುಳಿದರೆ ಬೇರಾವ ಪಾರಿಭಾಷಿಕ ವಿಧಾನವನ್ನೂ ಶಾಂತಪ್ಪನಿಗೆ ಕಾಲೇಜಿನಲ್ಲಿ ಹೇಳಿರಲಿಲ್ಲ; ಅವನು ತಿಳಿದಂತೆ ಯಾವೆಡೆಯಲ್ಲಿಯೂ ಯಾಂತ್ರಿಕ ತಂತ್ರವನ್ನುಪಯೋಗಿಸಿ ಈ ಅದಿರಿನ ನೆಲೆ ಬೆಲೆಗಳನ್ನು ಪತ್ತೆಮಾಡುತ್ತಿರಲಿಲ್ಲ. ಅವನು ಆ ವೇಳೆ ಗಾಗಲೇ ಹಲವಾರು ಪುಸ್ತಕಗಳನ್ನು ತರಿಸಿಕೊಂಡು ಓದಿದ್ದ, ಗಣಿ-ಅದಿರು ಗಳ ವಿಷಯಗಳನ್ನು ಹೆಚ್ಚು ಮನನ ಮಾಡಿಕೊಂಡಿದ್ದ. ಆದರೆ ಎಲ್ಲಿಯೂ ಸ್ಪಷ್ಟವಾದೊಂದು ನಿಯಮವನ್ನು ಹೇಳಿರಲಿಲ್ಲ. ಆದ್ದರಿಂದಲೇ ಎಂತಹ ವಿದ್ಯಾವಂತನಾದರೂ ಗಣಿಗಳಲ್ಲಿ ಬಂದು ನಿಂತಾಗ ಕಣ್ಣು ಕಣ್ಣು ಬಿಡಬೇಕಾಗು ತ್ತಿದ್ದಿತು. ಶಾಂತಪ್ಪನೂ ಇದನ್ನೇ ಯೋಚಿಸುತ್ತಿರುವಾಗಲೇ,

"ಸಾರ್....ಇಲ್ಲಿ ಡೈಯಾಕ್ಸೈಡ್ ಪುಡಿ ಸಿಕ್ಕುತ್ತದಂತಲ್ಲ ಸಾರ್" ಎಂದು ಬಸಪ್ಪನೆಂದ.

"ಎಲ್ಲಿ ಸಿಕ್ಕುತ್ತಪ್ಪ ? ಯಾರು ಹೇಳಿದ್ರು ?"

" ನಮ್ಮ ಚನ್ನಯ್ಯನೋರು ಹೇಳಿದ್ರು ಸಾರ್. ಅವ್ರೇ ಜಾಗ ನೋಡವ್ರಂತೆ. ನಂಗೊತ್ತಿಲ್ಲ."

"ಸರಿ ಹಾಗಾದ್ರೆ....ಚನ್ನಯ್ಯನ ಜೊತೇಲೇ ಒಂದಿನಾ ಒರೋಣ" ಎಂದ ಶಾಂತಪ್ಪ.

ಅದಿರಿನ ಎರಡರಷ್ಟು ಬೆಲೆ ಅದಿರಿನ ಈ ಪುಡಿಗಿದ್ದುದರಿಂದ ಅದು

ದೊರೆಯುವುದಾದರೆ ಇಲ್ಲಿ ಕೆಲಸ ಪ್ರಾರಂಭಿಸಬಹುದು, ಒಂದು ಟನ್‌ಗೆ ನೂರಾರು ರೂಪಾಯಿ ಲಾಭ ದೊರಕುವಾಗ ಅದನ್ನು ಇಲ್ಲಿ ತೆಗೆಸಬಹುದು. ವಿದೇಶೀಯರು ಹೆಚ್ಚು ಹಣ ಕೊಟ್ಟು ಈ ಪುಡಿಯನ್ನೇ ಕೊಳ್ಳಲು ಅಪೇಕ್ಷಿಸು ತ್ತಾರೆ.

"ನಾವು ಹೊರಡ್ತೀವಪ್ಪಾ....ಸ್ವಲ್ಪ ಹುಷಾರಾಗಿ ನೋಡಿಕೋ........ ಆ ಹೆಂಗಸಿಗೆ ಒಂದು ಮರದ ನೆರಳಲ್ಲಿ ಬಟ್ಟೆ ಹಾಸಿ ಆ ಮಗುವನ್ನ ಮಲಗಿಸು ವಂತೆ ಹೇಳು, ಕಣ್ಣಿಗೆ ಕಲ್ಲುಗಿಲ್ಲು ಹಾರೀತು........ಈ ಜಾಗದಲ್ಲಿ ಒಳಗಿಳಿದು ಹೋಗೋಕೆ ಮೆಟ್ಟಲು ಮಾಡಿಸು....ಅಗೋ ಆ ದೊಡ್ಡ ಕಲ್ಲು ಮೊದಲು ತೆಗೆಸಿ ದೂರ ಹಾಕಿಸು, ಯಾರ ತಲೆಯಮೇಲಾದ್ರೂ ಉರುಳಿಕೊಂಡೀತು. ನೋಡು ಆ ಹುಡುಗಿ ಒಳ್ಳೆ ಅದಿರನ್ನೆಲ್ಲಾ ಬಿಸಾಕಿ, ಬರೀ ಬೆಣಚುಕಲ್ಲು ಬಾಂಡಲೀಲಿ ತುಂಬ್ತಿದೆ, ಸರಿಯಾಗಿ ಹೇಳಿಕೊಡು" ಎಂದು ಸೂಚಿಸಿ ಶಾಂತಪ್ಪ ಹೊರಟ.

" ಸರಿ ಸಾರ್....ಒಂದೆರಡು ಎಳನೀರು ಕುಡಿದುಹೋಗಿ ಸಾರ್.... ಇಲ್ಲೇ ಕೊಚ್ಚುತ್ತಿದ್ದಾನೆ " ಎಂದು ಬಸಪ್ಪನೆಂದ.

" ಉಹು....ಎಳನೀರು ಗಿಳನೀರು ಏನು ಬೇಡ" ಎಂದು ಶಾಂತಪ್ಪ ಮುಂದೆ ಹೊರಟದ್ದನ್ನು ನೋಡಿ ಬಸಪ್ಪ ನಿರಾಶನಾದ. ಬಿಸಿಲು ರಣ ರಣ ಸುಡುತ್ತಿದ್ದುದರಿಂದ ಬಾಯೊಣಗಿ, ಎಳನೀರನ್ನು ಕುಡಿಯ ಬೇಕೆನಿಸಿದ್ದಿತು ಗೋಪಾಲಯ್ಯನಿಗೆ. ಆದರೆ ಮೇನೇಜರೇ ಬೇಡವೆಂದುದರಿಂದ ತಾನು ಸುಮ್ಮನಿರಬೇಕಾಯಿತು. ಹತ್ತಿರದಲ್ಲಿ ಆಳೊಬ್ಬನು ಕಾಯನ್ನು ಕೊಚ್ಚುತ್ತಿದ್ದು ದನ್ನು ಕಂಡ, ಅತ್ತಕಡೆಯಿಂದ ಅದರ ವಾಸನೆಯೂ ಬರುತ್ತಿದ್ದಿತು. ತಂಪಾಗಿ ಕಾಣುತ್ತಿದ್ದ ಅದನ್ನು ನೋಡಿ ನೋಡಿ ಶಾಂತಪ್ಪ ತಡೆಯಲಾಗಲಿಲ್ಲ.

"ಬಿಸಿಲು ಸಾರ್....ತಾವು ಒಂದನ್ನಾದರೂ ಕುಡಿದು ಹೋಗಿ" ಎಂದು ಬಸಪ್ಪನೆಂದುದರಿಂದ ಗೋಪಾಲಯ್ಯನೂ,

"ಪಾಪ....ಅವನು ಅಷ್ಟು ಹೇಳ್ತಾನೆ. ಕುಡಿದೇ ಹೋಗೋಣ ಸಾರ್" ಎಂದ.

ಗೋಪಾಲಯ್ಯನನ್ನು ಕುಡಿಯಹೇಳಿ ಶಾಂತಪ್ಪ ಅಲ್ಲಿಯೇ ಮರವೊಂದರ ನೆರಳಿನಲ್ಲಿ ಕುಳಿತ. ಅಲ್ಲಯೇ ಕೆಲಸ ಮಾಡುತ್ತಿದ್ದ ಹತ್ತು ವರ್ಷದ ಬಾಲಕ ನೊಬ್ಬ ಗೋಪಾಲಯ್ಯನು ಎಳನೀರನ್ನೆತ್ತಿ ಬಾಯಿಗೆ ಸುರಿದುಕೊಳ್ಳುವುದನ್ನೇ

ಹಸಿದ ಕಣ್ಣುಗಳಿಂದ ನೋಡುತ್ತಿದ್ದ. ಆ ಆಶೆಪೂರ್ಣ ಕಂಗಳನ್ನು ನೋಡಿ ಶಾಂತಪ್ಪನಿಗೆ ಮರುಕ ಬಂದಿತು. ಹಾಗೆ ನೋಡುತ್ತಿದ್ದ ಆ ಬಾಲಕನ ತಂದೆಯು ಅವನನ್ನು "ಅಲ್ಲೇನೋ ನೋಡ್ತೀಯಾ ಮುಕ್ಕೀನಾ....ಹಂಗೆಲ್ಲಾ ದೊಡ್ಡೋರು ತಿನ್ನೋದು ಕುಡ್ಯೋದು ನೋಡಬಾರ್ದು, ಇತ್ತ ತಿರಿಕ್ಕೊ" ಎಂದು ಮೆಲ್ಲನೆ ಗದರಿಸಿಕೊಳ್ಳುತ್ತಿದ್ದ.

ಶಾಂತಪ್ಪ ನಿರಾಕರಿಸಿದರೂ ಎರಡು ಕೊಚ್ಚಿದೆಳನೀರನ್ನು ಬಸಪ್ಪ ತಂದು ಅವನಿಗೆ ಕೊಟ್ಟ. ಶಾಂತಪ್ಪನು ಸ್ವೀಕರಿಸಲೇಬೇಕಾದುದರಿಂದ ಅವೆರಡನ್ನೂ ತೆಗೆದುಕೊಂಡು ಒಂದನ್ನು ಆ ಬಾಲಕನಿಗಿತ್ತು ಒಂದನ್ನು ತಾನು ಕುಡಿದಿಟ್ಟ.

"ಕಾಯಿ ತಿನ್ನೋದಿಲ್ಲವೆ ಸಾರ್?"

"ಬೇಡಪ್ಪ ಸಾಕು" ಎಂದು ಶಾಂತಪ್ಪ ಎದ್ದುನಿಂತ.

ಗೋಪಾಲಯ್ಯನೊಡನೆ ಅವನು ಹೊರಟು ಪುನಃ ನೀರಿನ ಜರಿಯ ಬಳಿ ಬಂದು ಕುಳಿತು ಒಂದೆರಡು ಬೊಗಸೆ ನೀರು ಕುಡಿದ. ನಂತರ ಹಾಗೆಯೇ ಸುತ್ತಲಿನ ನಿಸರ್ಗದ ರಮಣೀಯತೆಯಲ್ಲಿ ತಲ್ಲೀನನಾದ. ಆ ನೀರು ಗುಡ್ಡದ ಕಲ್ಲನ್ನು ಕೊರೆದುಕೊಂಡು ತನ್ನ ಪಾತ್ರವನ್ನು ತಾನೇ ನಿರ್ಮಿಸಿಕೊಂಡಿತ್ತು ನೀರಿನ ಉದ್ದಕ್ಕೂ ಸಣ್ಣ ಗಿಡಗಳು ರಂಜಿಸುತ್ತಿದ್ದುವು. ದೂರದಲ್ಲಿ ತೆಂಗಿನ ಮರಗಳ ಲಕ್ಷೋಪಲಕ್ಷ ಗರಿಗಳು ಬಿಸಿಲಿನಲ್ಲಿ ಹೊಳೆಯುತ್ತಿದ್ದುವು. ಆ ಗರಿ ಸಮುದ್ರದ ಅತ್ತಕಡೆ ಹಳೆಯದುರ್ಗದ ಗುಡ್ಡದ ನೀಲವರ್ಣ ಕಾಣುತ್ತಿದ್ದಿತು. ಎದುರಿಗೆ ನಿಂತಿದ್ದ ರತ್ನಗುಡ್ಡದ ಮೆಟ್ಟಲುಗಳು ಹಾವು ಹರಿದಂತೆ ಮೇಲಕ್ಕೆ ಹರಿದುಹೋಗಿದ್ದುವು, ಮೇಲೆ ದೇಗುಲದ ಬಿಳಿ ಗೋಡೆಗಳು ಕಾಣುತ್ತಿದ್ದುವು.

"ಈ ದೇವಸ್ಥಾನದಲ್ಲಿ ಯಾವಾಗಲೂ ಕರಡಿಗಳಿರುತ್ವೆ ಸಾರ್........"

"ಓ....ಹಾಗೇನು?" ಎಂದ ಶಾಂತಪ್ಪ ಮೇಲೆ ಕಾಣುತ್ತಿದ್ದ ಬಿಲ್ವಪತ್ರೆ ಮರವನ್ನೇ ನೋಡುತ್ತಾ.

"ಮೇಲೆ ದೇವರೂ ಸಹ ಮ್ಯಾಂಗನೀಸು ಕಲ್ಲಿನಲ್ಲೇ ಉದ್ಭವಿಸಿದೆ ಸಾರ್" ಎಂದ ಗೋಪಾಲಯ್ಯ.

ಶಾಂತಪ್ಪ ಎಡಗಡೆ ಇದ್ದ ಗುಡ್ಡಸಾಲುಗಳನ್ನೇ ನೋಡುತ್ತಿದ್ದ. ಅವುಗಳ ಪೈಕಿ ಒಂದು ಹೆಬ್ಬುಗೆಗುಡ್ಡದ ಬೆನ್ನಿನಂತೆಯೇ ಕಂಡಿತು, ಹೆಬ್ಬುಗೆ ಗುಡ್ಡದಿಂದ ರತ್ನಗುಡ್ಡಕ್ಕೆ ಕಾಲುಹಾದಿ ಒಂದಿದೆಯೆಂದೂ, ಸುಮಾರು ಒಂದು ಮೈಲು ಮಾತ್ರವಿದೆಯೆಂದೂ ಯಾರೋ ಅವನಿಗೆ ತಿಳಿಸಿದ್ದರು. ಆಹಗಲೆನ್ನೇ

ರಡು ಗಂಟೆಯಾಗಿ ಹೋದದ್ದರಿಂದ, ಶಾಂತಪ್ಪನಿಗೆ ಹಸಿವಾಗತೊಡಗಿದ್ದಿತು.

"ಇದು ಹೆಬ್ಬುಗೆ ಗುಡ್ಡದ ಹತ್ತಿರದ ರಸ್ತೇಂತ ಕಾಣುತ್ತೆ, ಈ ಮಾರ್ಗವಾಗೇ ಹೋದರೆ ಊರಿಗೆ ನಾಲ್ಕೇ ಮೈಲಿಯಾಗುತ್ತೆ, ನೀವು ಬಂದ ಕಡೆಯಿಂದ ಏಳು ಮೈಲಿಯಾಗುತ್ತೆ" ಶಾಂತಪ್ಪನೆಂದ.

"ನಂಗೂ ಆಗ್ಲೇ ಅನ್ನಿಸ್ತು ಸಾರ್...........ಹೀಗೇ ಹತ್ತಿರದಿಂದ್ಲೇ ಹೋಗೋಣ" ಗೋಪಾಲಯ್ಯನೂ ಹೇಳಿದ.

ರಸ್ತೆ ಸರಿಯಾಗಿ ಗೊತ್ತಿಲ್ಲದಿದ್ದರೂ ಎದುರಿಗಿರುವುದೇ ಹಬ್ಬುಗೆ ಗುಡ್ಡವೆಂಬ ಧೈರ್ಯದಿಂದ ಅವರಿಬ್ಬರೂ ಮುಂದೆ ಹೊರಟರು. ಆ ಗುಡ್ಡಗಳ ನಡುವೆ ಕಣಿವೆಯಂತಿದ್ದ ಮಾರ್ಗದ ಪಕ್ಕದಲ್ಲಿಯೇ ಹಳ್ಳವೊಂದು ಹರಿದು ಹೋಗಿದ್ದಿತು. ಅವರು ಹಳ್ಳವನ್ನೇ ಅನುಸರಿಸಿ ಹೊರಟರು. ಆ ಕಣಿವೆಯನ್ನು ಪ್ರವೇಶಿಸಿದಾಗ, ಅಲ್ಲಿನ ಗುಡ್ಡಗಾಡಿನ ಗರ್ಭವನ್ನೇ ಹೊಗುತ್ತಿರುವಂತೆ ಭಾಸವಾಯಿತವರಿಗೆ. ಏಕೆಂದರೆ ಅಲ್ಲಿ ಕಾಣುತ್ತಿದ್ದುದವರಿಗೆ, ಹತ್ತಾರು ಶಿಖರಗಳ ಮಧ್ಯೆ ನುಸುಳಿದ್ದ ಆ ಹಳ್ಳದ ಹಾದಿ ಮಾತ್ರ.

ಅಲ್ಲಿನ ಗುಡ್ಡಗಳೆಲ್ಲ ಎರಡು-ಮೂರು ರೇಖೆಗಳನ್ನನುಸರಿಸಿ ಸಾಲುಗಟ್ಟಿ ಹಬ್ಬಿದ್ದುವು. ಅಲ್ಲಿಯೇ ಒಂದು ಸಾಲು, ಒಂದು ದೊಡ್ಡ ಬೆಟ್ಟದ ತಲೆಯನ್ನೇ ಏಳು ಬಾರಿ ಅದುಮಿದಂತೆ, ಏಳು ಸಣ್ಣ ಗುಡ್ಡಗಳಾಗಿದ್ದು ಅವು ಸರ್ಪವೊಂದರ ಏಳು ಹೆಡೆಗಳಂತೆಯೇ ಕಾಣುತ್ತಿದ್ದುವು. ಈ ಸಾಲೇ ಏಳು ಹೆಡೆ ಬೆಟ್ಟ. ಇವಕ್ಕೆ ಉದ್ದವಾದ ಒಂದು ಉದ್ದನೆಯ ಬೆಟ್ಟವಿದ್ದಿತು. ಈ ಸಾಲಿಗೆ ಅಡ್ಡಗೋಡೆ ನಿರ್ಮಿಸಿದಂತೆ ಇದ್ದುದರಿಂದ ಇದಕ್ಕೆ ಅಡ್ಡ ಬೆಟ್ಟವೆಂದೇ ಹೆಸರಾಗಿದ್ದಿತು. ದೂರದಲ್ಲಿ ಎಲ್ಲಕ್ಕಿಂತ ಎತ್ತರವಾದ ಹಕ್ಕಿಕಲ್ಲುಗುಡ್ಡ ಕಾಣುತ್ತಿದ್ದಿತು. ಆ ನಿಸರ್ಗದ ರಾಗವನ್ನು ನೋಡಿದ ಶಾಂತಪ್ಪನಿಗೆ ಕಾಶ್ಮೀರದ ಪ್ರಕೃತಿ ಚಿತ್ರದ ರಮಣೀಯತೆಯನ್ನವನು ಚಲನಚಿತ್ರದಲ್ಲಿ ನೋಡಿದ ನೆನಪಾಯಿತು. ಅದೇ ಗಿರಿಗಹ್ವರಗಳು, ಮೇಲೆ ತೇಲುತ್ತಿದ್ದ ಜಲಹೀನ ಮುಗಿಲುಗಳು, ಗಿಡದಿಂದ ಗಿಡಕ್ಕೆ ಒಮ್ಮೊಮ್ಮೆ ಹಾರಿಹೋಗುತ್ತಿದ್ದ ಕಾಡುಹಕ್ಕಿಗಳು, ಸರ್‍ರನೆ ಎದುರಿಗೇ ಓಡಿಹೋಗಿ ಹುತ್ತವನ್ನು ಸೇರುತ್ತಿದ್ದ ಉಡಗಳು; ನೋಡಿದಷ್ಟೂ ಪುನಃ ನೋಡಬೇಕೆನ್ನಿಸುವ ಪಟ್ಟಣಿಗನ ಆಸೆಯೇ ಶಾಂತಪ್ಪನಲ್ಲಿಯೂ ಉದ್ಭವಿಸುತ್ತಿದ್ದಿತು. ಆದರೆ ಹಲವು ಬಾರಿ ಗುಡ್ಡಗಾಡುಗಳಲ್ಲಿ ಸುತ್ತಿದ್ದ ಗೋಪಾಲಯ್ಯನಿಗಿದು ಅಷ್ಟು ಆಶಾಜನಕವಾಗಿರಲಿಲ್ಲ.

ಒಂದೆರಡು ಗಂಟೆಗಳ ತನಕ ನಡೆದರೂ ಅವರಿಗೆ ಆ ಗುಡ್ಡಗಾಡಿನಿಂದ ಬಯಲು ಮಾತ್ರ ಕಾಣಲೇ ಇಲ್ಲ. ಒಂದು ದಿಣ್ಣೆಯನ್ನೇರಿ ಇಳಿದರೆ ಎದುರಿಗೆ ಬೇರೊಂದು ಗುಡ್ಡವೇ ಕಾಣುತ್ತಿದ್ದಿತು. ಬರಬರುತ್ತಾ, ಅವರಿಗೆ ಅದು ವರೆಗೂ ಕಾಣುತ್ತಿದ್ದ ಹಬ್ಬುಗೆಗುಡ್ಡದ ರೂಪವೇ ಬೇರೆಯಾಗಿ ಅದು ಬೇರೊಂದು ಗುಡ್ಡವೆಂಬುದರಿವಾಯಿತು. ಅವರು ನಡೆದುಬಂದಿದ್ದ ಸುತ್ತು ಬಳಸಿನ ಹಾದಿಯೂ ಸವೆದು ಹೋಗಿ ಕೊನೆಗೆ ಯಾವ ಹಾದಿಯೂ ಇಲ್ಲ ವಾಗಿತ್ತು. ಎತ್ತಲೂ ಬರಿ ಗುಡ್ಡಗಳ ತಲೆಗಳೇ. ಒಂದನ್ನು ಹತ್ತಿ ಇಳಿದು ಎದುರಿಗೆ ಬಯಲು ಕಾಣುವುದೇನೋ, ಪರಿಚಿತವಾದೊಂದು ಗಿರಿಯು ಕಾಣು ವುದೇನೋ ಎಂದು ನಿರುಕಿಸಿದರೆ ಯಾವುದೋ ಗಿರಿಯ ಹೊಸಮುಖವೊಂದು ಕಾಣುತ್ತಿದ್ದಿತು, ಶಾಂತಪ್ಪನಿಗೆ ನಡೆನಡೆದು ಕಾಲು ನೋವು ಬಂದಿತು, ಅವನ ಹೊಟ್ಟೆಯಲ್ಲಿ ಬಲವಾದ ತಾಳ ಹಾಕಲಾರಂಭವಾಗಿದ್ದಿತು.

ಆ ನಾಲ್ಕಾರು ಗುಡ ಗಳನ್ನು ದಾಟಿ ಬರುವಾಗ ಅಲ್ಲಿನ ಖನಿಜ ಸಂಪದ ವನ್ನು ನೋಡಿ ಅವರಿಬ್ಬರಿಗೂ ಬಹಳ ಆಶ್ಚರ್ಯವಾಗಿದ್ದಿತು. ಆ ಗುಡ್ಡ ಗಳೆಲ್ಲವೂ ಪೂರ್ಣವಾಗಿ ಕಬ್ಬಿಣದ ಅದಿರಿನಲ್ಲಿ ಮಾಡಿಟ್ಟುವೋ ಎಂಬಂತೆಯೇ ಕಾಣುತ್ತಿದ್ದುವು. 'ಹೆಮಟೈಟು' ಅದಿರಿನ ಬೆಳ್ಳಿಯಂತೆ ಹೊಳೆವ ಹರಳು ಮುಖಗಳನ್ನು ನೋಡಿ ನೋಡಿ ತಣಿದ ಅವರು ಹಸಿವನ್ನೇ ಮರೆತಿದ್ದರು.

"ಒಂದು ಲಕ್ಷ ಟನ್ನು ಕಬ್ಬಿಣ ಬೇಕಾದರೂ ಸಿಕ್ಕುತ್ತೆ ಸಾರ್ ಇಲ್ಲಿ...... ಏನಿಲ್ಲ ದೊಡ್ಡ ಸುತ್ತಿಗೀಲಿ ಒಡೆದು ಲಾರಿಗೆ ತುಂಬೋದೆ ಕೆಲಸ. ಅಷ್ಟೆ" ಎಂದ ಗೋಪಾಲಯ್ಯ.

"ಏನು ಶೇಕಡಾ ಎಂಭತ್ತು, ಎಂಭತ್ತೈದು ಕಬ್ಬಿಣ ಬರಬಹುದು ಅಲ್ವೆ?"

"ಹೌದು ಸಾರ್....ಧಾರಾಳವಾಗಿ ಬರುತ್ತೆ. ಸಾವಕಾರ್‍ರಿಗೆ ಮೊದಲು ಇಲ್ಲಿ ಕೆಲಸ ಮಾಡಿಸೋಕೆ ನಾನು ಹೇಳ್ತೀನಿ. ಲಕ್ಷಾಂತರ ಟನ್ ಕಬ್ಬಿಣ ಸಿಕ್ಕೋವಾಗ ಯಾಕೆ ಬಿಡಬೇಕು ?"

"ಮೊದಲು ಊರಿಗೆ ಹೋದಮೇಲೆ ತಾನೇ ಸಾಹುಕಾರರಿಗೆ ಹೇಳೋದು" ಎಂದ ಶಾಂತಪ್ಪ ನಗುತ್ತಾ.

ಆ ಮಾತು ಕೇಳಿ ಗೋಪಾಲಯ್ಯ ಜೋಲುಮುಖ ಹಾಕಿದ. ಆ ವೇಳೆ ಗಾಗಲೇ ಬೀಡಿ ಮುಗಿದುಹೋಗಿ ಅವನು ಚಡಪಡಿಸುತ್ತಿದ್ದ. ಹಸಿವಾಗಿದ್ದು ದರಿಂದ ಅವನ ಮುಖದಲ್ಲಿ ಕಳೆಯೇ ಇರಲಿಲ್ಲ. ಜೊತೆಗೆ ದಾರಿ ತಪ್ಪಿದುದ

ರಿಂದ ಊರು ಸೇರುವೆವೋ ಇಲ್ಲವೋ ಎಂಬ ಭಯದಿಂದಾಗಿ ಅವನ ಕಂಗೆಟ್ಟ ಮುಖವನ್ನು ನೋಡಿದ ಶಾಂತಪ್ಪನಿಗೆ ಅವನಲ್ಲಿ ಮರುಕವುಂಟಾಯಿತು.

ಬಹುಶಃ ಅದುವರೆಗೂ ಆ ಜಾಗದಲ್ಲಿ ಯಾವ ಮಾನವಪ್ರಾಣಿಯೂ ಓಡಾಡಿರಲಿಲ್ಲ. ಅವರಿಗಿಂತ ಎತ್ತರವಾಗಿ ಬೆಳೆದಿದ್ದ ಹಂಚಿಕಡ್ಡಿ ಗಿಡಗಳು ಎಲ್ಲೆಲ್ಲಿಯೂ ಕಾಣಿಸುತ್ತಿದ್ದುವು. ಒಂದೆಡೆಯಲ್ಲಿಯೂ ಗಿಡದ ಬೆಳೆವಣಿಗೆಗೆ ಕುಂದುಂಟುಮಾಡುವ ಯಾವ ಪ್ರಾಣಿಯೂ ಓಡಾಡಿದ ಗುರುತು ಕಾಣಲಿಲ್ಲ ಅಲ್ಲಿ. ಒಂದೆಡೆ ಕರಡಿಯೊಂದು ಆಗಿನ್ನೂ ಅಲ್ಲಿಯೇ ಹಾದುಹೋದುದರ ಕುರುಹಾಗಿ ಉಗುರುಗಳಿಂದ ಅದು ನೆಲವನ್ನು ಕೆರೆದು ಮಣ್ಣನ್ನು ಬಿಸುಟುದೂ, ಹತ್ತಿರದಲ್ಲಿಯೇ ಅದು ಬಹಿರ್ದೇಶಕ್ಕೆ ಹೋಗಿದ್ದುದೂ ಕಾಣಿಸಿತು. ಅದನ್ನು ನೋಡಿದ ಗೋಪಾಲಯ್ಯನ ಜಂಘಾಬಲವೇ ಉಡುಗಿಹೋಯಿತು.

"ಅದು ...ಅದು ನೋಡಿ ಸಾರ್!" ಎಂದ ತೊದಲುತ್ತಾ.

ಶಾಂತಪ್ಪನಿಗೂ ಭಯವಾಗಿತ್ತು. ಇದರೊಡನೆಯೇ ದಿಕ್ಕುಗಾಣದೆ ನಡೆಯುತ್ತಿರುವ ತಾವು ಹೀಗೆಯೇ ಎಷ್ಟು ಕಾಲ, ಎಲ್ಲಿ ನಡೆಯುವುದು ಎಂದುಕೊಂಡು ಗಡಿಯಾರ ನೋಡಿಕೊಂಡ. ಆಗಲೇ ಮೂರು ಗಂಟೆಯಾಗಿದ್ದಿತು. ನಡೆದಷ್ಟು ಸುತ್ತಲೂ ಬರಿ ಗುಡ್ಡಗಳೇ ಆವೃತವಾಗಿದ್ದುವು. ಹಿಂದಿರುಗಿ ನೋಡಿದರೆ, ನಡೆದುಬಂದ ಹಾದಿಯು ಸಹ ಕಾಣುತ್ತಿರಲಿಲ್ಲ. ಅವರು ಬಂದುದೂ ಗುಡ್ಡಗಳನ್ನು ಏರಿಳಿದೇ. ದೃಷ್ಟಿ ಹೋಗುವ ತನಕ ಗುಡ್ಡಗಳ ಕಲ್ಲಲೆಗಳು, ಹಂಚಿಕಡ್ಡಿ ತುಂಬಿದ ಕಾಡು, ಮಧ್ಯೆಮಧ್ಯೆ ನಡುವಯಸ್ಸಿನ ತಲೆಗಳ ನರೆಗೂದಲಂತೆ, ಅಲ್ಲಲ್ಲಿ ಒಂದು ಚಿಕ್ಕ ಕಾಯಿಯ ಗಿಡಗಳು ಕಾಣುತ್ತಿದ್ದುವು.

ಒಂದು ಪ್ರದೇಶದಲ್ಲಿ ಜಿಂಕೆಯ ಹಿಂಡು ಓಡಿಹೋದುದರ ಗುರುತಾಗಿ ಅಲ್ಲಲ್ಲಿಯೇ ಅವುಗಳ ಕೊಳಕು ಕಾಣುತ್ತಿದ್ದುವು. ಗೋಪಾಲಯ್ಯನು ಅದನ್ನು ನೋಡಿ,

"ನಾವು ಕಾಡಿನ ಮಧ್ಯದಲ್ಲೇ ಇದೀವಪ್ಪ, ಈವೊತ್ತು ನಾವು ಊರು ಸೇರೊಲ್ಲ" ಎಂದೆನ್ನುತ್ತಾ ಅಲ್ಲಿಯೇ ಕುಳಿತ.

ಶಾಂತಪ್ಪನಿಗೂ ಹಸಿವು ನಿರಾಶೆಗಳು ತುಂಬಿದ್ದರೂ, ಗೋಪಾಲಯ್ಯನ ಕನಿಕರ ಜನಕ ಮುಖವನ್ನು ನೋಡಿ ನಗು ಬರುತ್ತಿದ್ದಿತವನಿಗೆ. ನಗುತ್ತಾ ಶಾಂತಪ್ಪನೆಂದ,

"ಹೋಗಲಿ ಬಿಡಿ ಗೋಪಾಲಯ್ಯ. ಹೇಗಿದ್ದರೂ ಇಲ್ಲಿ ಜಿಂಕೆಗಳೇ ಇವೆ. ಒಂದನ್ನ ಹೊಡೆಯೋದು, ಈ ಹಂಚಿಕಡ್ಡಿಯನ್ನೇ ಬೆಂಕಿ ಮಾಡಿ, ಜಿಂಕೇನ ಸುಟ್ಟು ತಿನ್ನೋದು. ಹೇಗಿದ್ರೂ ನಿಮ್ಮ ಹತ್ರ ಬೆಂಕಿಕಡ್ಡಿಯಿದೆ" ಎಂದು, ಗೋಪಾಲಯ್ಯನಿಗೆ ಪುನಃ ಮುಗಿದುಹೋದ ಬೀಡಿಯ ನೆನಪು ಮಾಡಿದ.

"ಸುಮ್ಮನಿರೀಪ್ಪ ಸಾಕು. ನೀವು ಪಕ್ಕಾ ಬ್ರಾಹ್ಮಣರು. ಬೇರೆಯವರು ಒಂದು ಎಳನೀರು ಕೊಟ್ರೆ ಕುಡಿಯೋದಿಲ್ಲ. ಪರಸ್ತ್ರೀಯರನ್ನ ತಲೆಯೆತ್ತಿ ನೋಡೋಲ್ಲ. ಇನ್ನು ಮಾಂಸ ತಿನ್ನುತ್ತಾರಂತೆ" ಎಂದ ಗೋಪಾಲಯ್ಯ.

ತಾನು ಬ್ರಾಹ್ಮಣನಲ್ಲ, ವೀರಶೈವ ಎಂದೆನ್ನಬೇಕೆಂದುಕೊಂಡ ಶಾಂತಪ್ಪನ ಮಾತು ತುಟಿಯವರೆಗೆ ಬಂದು ಹಿಂದಿರುಗಿಹೋಯಿತು. ಮನಸ್ಸಿನಲ್ಲಿಯೇ ನಕ್ಕು ಸುಮ್ಮನಾದ.

"ನೀವು ಆಗ ತಂಟೆ ಮಾಡಿದ್ದರಿಂದ ನಾನೂ ಸಹ ಮರ್ಯಾದೆಯಿಂದಿರಬೇಕಾಯ್ತು. ಇಲ್ಲದಿದ್ದರೆ ಏನಿಲ್ಲಾಂದ್ರೂ ಏಳೆಂಟು ಎಳನೀರು ಹೊಡೆದು ಬಿಡ್ತಿದ್ದೆ. ನಿಮ್ಮದು ಯಾವಾಗಲೂ ಒಂದೇ ಸಿಸ್ಟಮ್ಮು" ಎಂದು ಗೋಪಾಲಯ್ಯ ಅಸಮಾಧಾನದಿಂದಲೇ ನುಡಿದ.

ಶಾಂತಪ್ಪನಿಗೂ ಹಾಗೆಯೇ ಎನಿಸಿದ್ದಿತು. ಹಸಿವಾದಾಗ ನಿಯಮ ನೀತಿಗಳೆಲ್ಲ ಗಾಳಿ ಪಾಲಾಗುವುದೆಂಬುವಕ್ಕೆ ಇದೇ ನಿದರ್ಶನ. ಆ ಗುಡ್ಡಗಳ ಮೇಲೆಲ್ಲಾ ನೆಲ್ಲಿಕಾಯಿ, ಬಿಕ್ಕೆ ಹಣ್ಣು, ಕಾರೆ ಹಣ್ಣು; ಬೇಲದ ಹಣ್ಣುಗಳ ಮರಗಳು ಅಲ್ಲಲ್ಲೇ ಗೋಚರವಾಗುತ್ತಿದ್ದುವು. ಆದರೆ ಇಲ್ಲಿ ಬೇಕೆಂದರೂ ಒಂದೂ ಕಾಣಲಿಲ್ಲ, ಅರಸಿದರೂ ಗೋಚರವಾಗಲಿಲ್ಲ. ಇದ್ದ ಒಂದೊಂದು ಚಿಕ್ಕ ಗಿಡಗಳಿದ್ದರೂ ಎಲ್ಲ ಕಾಯಿ ಆಗಿದ್ದುವು. ಇದೊಂದು ತಮ್ಮ ಪರೀಕ್ಷಾ ಸಮಯ.

"ನಾವು ಈವತ್ತು ಎದ್ದ ಹೊತ್ತು ಚೆನ್ನಾಗಿಲ್ಲಪ್ಪ....ಎಲ್ಲಾ ನಮ್ಮ ಗ್ರಹಚಾರ" ಗೋಪಾಲಯ್ಯ ಗೊಣಗಾಡಿದ.

ಅವರೆದ್ದು ಪುನಃ ನಡೆದರು. ದಟ್ಟವಾಗಿ ಬೆಳೆದಿದ್ದ ಆ ಹಂಚಿಕಡ್ಡಿಗಳ ಕಾಡು ಕಡಿಮೆಯಾಗತೊಡಗಿತು. ಒಂದೊಂದು ಗಿಡಗಳು ಹೆಚ್ಚಾಗತೊಡಗಿದುವು. ಒಂದೆಡೆ ನೀರು ಹರಿವ ಹಳ್ಳವೊಂದೂ ಕಂಡುಬಂದಿತು. ಹಳ್ಳವನ್ನನುಸರಿಸಿಕೊಂಡು ಹೋದರೆ ಎಲ್ಲಾದರೂ ಬಯಲು ಕಾಣುತ್ತದೆಯೆನಿಸಿತವರಿಗೆ.

ಕೊನೆಗೆ ಒಂದೆಡೆ ಎತ್ತಿನ ಗಾಡಿಯು ಎಂದೋ ಅಲ್ಲಿ ಬಂದು ಹಿಂದಿರುಗಿ ಹೋದ ಗಾಲಿಯ ಗುರುತುಗಳು ಕಂಡು ಜೀವ ಹಿಂದಿರುಗಿ ಬಂದಂತಾಯ ವರಿಗೆ.

"ಊರು ಸಿಕ್ಕಿತಪ್ಪ ಇನ್ನೇನು" ಎಂದು ಗೋಪಾಲಯ್ಯ, ಒಣಗಿದ ತುಟಿಯನ್ನೊರಸಿಕೊಂಡ.

ದೂರದಲ್ಲಿ ಸೌದೆ ಹೊಡೆಯುತ್ತಿದ್ದವರ ಗುಂಪೊಂದು ಕಾಣಿಸಿತು, ಅವರ ಬಳಿಯಲ್ಲಿಯೇ ಎತ್ತಿನಗಾಡಿಯೂ ಕಾಣುತ್ತಿದ್ದಿತು. ಶಾಂತಪ್ಪ, ಗೋಪಾಲಯ್ಯ ಬಂದುದನ್ನು ನೋಡಿ ಅವರು ಹೆದರಿ ಓಡಿಹೋಗುತ್ತಿದ್ದುದೂ ಕಾಣಿಸಿತ್ತು, ಶಾಂತಪ್ಪನು ಧರಿಸಿದ್ದ ಖಾಕಿ ಬಟ್ಟೆಗಳನ್ನು ನೋಡಿ ಆವನು ಅರಣ್ಯ ಇಲಾಖೆಯ ಅಧಿಕಾರಿ ಇರಬೇಕೆಂದವರು ಭಾವಿಸಿ, ಲೈಸನ್ಸ್ ಇಲ್ಲದೆ ತಾವು ಸೌದೆಗಾಗಿ ಮರಗಳನ್ನು ಕತ್ತರಿಸುವುದನ್ನು ಕಂಡು ತಮ್ಮನ್ನು ಅಧಿಕಾರಿ ಹಿಡಿದುಬಿಟ್ಟರೆ ತಾವು ಸೆರೆಮನೆಯ ವಾಸ ಮಾಡಬೇಕಾದೀತೆಂದವರಿಗೆ ಭಯವಾಗಿರಬೇಕು, ಎಂದೆನಿಸಿದಾಗ ಶಾಂತಪ್ಪನಿಗೆ ಹಳ್ಳಿಗರ ಇಂತಹ ಅಪರಾಧದ ಅಂಜಿಕೆಗಳಿಗಾಗಿ ನಗು ಬಂದಿತು. ಅವರು ಒಂದೆರಡು ಗುಡ್ಡವಿಳಿದು ಬರುವಲ್ಲಿ ದೂರದ ಗುಡ್ಡಸಾಲಿನ ಹಿಂದೆ ಸೂರ್ಯಾಸ್ತವಾಗುತ್ತಿದ್ದುದು ಕಾಣುತ್ತಿದ್ದಿತು. ಸುಮಾರು ಮೂರು-ನಾಲ್ಕು ಮೈಲಿ ದೂರದಲ್ಲಿ ; ತಮ್ಮ ಗಣಿಯಿಂದ ರಾಮನಾಯ್ಕಹಳ್ಳಿಗೆ ಹೋಗುವ ಮಾರ್ಗವೂ ಕಾಣುತ್ತಿದ್ದಿತು. ಇನ್ನು ಐದಾರು ಮೈಲಿಗಳು ನಡೆದರೆ, ಕೊನೆಗಾದರೂ ಊರು ಕಾಣುವೆನೆಂಬ ಧೈರ್ಯ ಬಂದುದರಿಂದ ಸ್ವಲ್ಪ ಧೈರ್ಯವಾಯ್ತುವರಿಗೆ.

ಆ ಸಮಾಧಾನದಿಂದಲೇ ಅವರು ಅಲ್ಲಿಯೇ ಅರ್ಧ ಗಂಟೆ ಕುಳಿತುಕೊಂಡು ವಿಶ್ರಮಿಸಿಕೊಂಡರು. ಪುನಃ ಎದ್ದು ನಡೆಯಬೇಕೆಂದುಕೊಂಡಾಗ ಅವರಿಗೆ ಮೇಲೇಳಲು ಮನಸ್ಸಾಗಲೇ ಇಲ್ಲ. ತೊಡೆ ಕಾಲುಗಳ ಮಾಂಸಖಂಡಗಳು ನೋಯುತ್ತಿದ್ದುವು, ಮೀನಖಂಡದ ನರಗಳು ನೋವಿನಿಂದ ಮಿಡಿಯುತ್ತಿದ್ದುವು. ಬಿಸಿಲಿನಲ್ಲಿಯೇ ಬಂದುದರಿಂದ ತಲೆ ಸುಡುತ್ತಿತ್ತು. ಆದರೂ ಹೋಗಲೇಬೇಕಿತ್ತು. ಹೊಟ್ಟೆಯ ತಗಾದೆ ನಿಮಿಷ ನಿಮಿಷಕ್ಕೂ ಹೆಚ್ಚುತ್ತಿತ್ತು; ಬೆಳಗಿನಿಂದ ಒಂದೇ ಸಮನೆ ನಡೆದದ್ದರಿಂದ ಬೂಟಿನ ಒಳಗಡೆ ಪಾದಗಳು ಬೆಂದ ಗೆಣಸುಗಳಂತಾಗಿದ್ದುವು.

ಅವರು ಹಾಗೆಯೇ ನಡೆದು ಊರು ಸೇರಿದಾಗ ರಾತ್ರಿ ಎಂಟೂವರೆ

ದಾಟಿ, ಗಡಿಯಾರದ ಮುಳ್ಳು ಒಂಭತ್ತರ ಸಮೀಪಕ್ಕೆ ಬಂದಿದ್ದಿತು. ಆ ವೇಳೆಗಾಗಲೇ ರಾಮನಾಯ್ಕನ ಹಳ್ಳಿಯೆಲ್ಲಾ ಮಲಗಿದಂತೆ ದಟ್ಟವಾದ ಮೌನ ತುಂಬಿಕೊಂಡಿದ್ದಿತು. ಮಾಣಿಕ್ಯಂ ದೀಪವಾರಿಸಿ ಮಲಗಿದ್ದ. ಅಡಿಗೆಯವನು ಜಗಲಿಯ ಮೇಲೆ ಮುಸುಕು ಹಾಕಿಕೊಂಡು, ಅದರ ಒಳಗೆ ಮುದುರಿಕೊಂಡು ಮಲಗಿದ್ದ. ಬಾಗಿಲು ತಟ್ಟಿ ಮಾಣಿಕ್ಯಂನನ್ನು ಎಚ್ಚರಗೊಳಿಸಿದಾಗ ನಿಧಾನವಾಗಿ ಬಾಗಿಲು ತೆರೆಯಿತು, ದೀಪ ಉರಿಯುತ್ತಿರಲಿಲ್ಲ ಒಳಗೆ.

ಅವರಿಬ್ಬರೂ ಒಳಗೆ ಹೊಕ್ಕಾಗ, ಸರ್ರನೆ ಒಳಗಿನಿಂದ ಬಾಗಿಲಿನಾಚೆಗೆ ಹೆಂಗಸೊಬ್ಬಳು ಹೊರಟುಹೋದಳು. ಆ ಅಸ್ಪಷ್ಟ ವ್ಯಕ್ತಿಯು ರತ್ನಮ್ಮನೆಂಬುದು ಸ್ಪಷ್ಟವಾಗಿಯೇ ತಿಳಿದುದು, ಪಕ್ಕದ ಮನೆಯ ಬಾಗಿಲು ಕಿರ್ರೆಂದುಕೊಂಡು ತೆಗೆದು, ಧಡಾರನೆ ಮುಚ್ಚಿದಾಗ. ಮಾಣಿಕ್ಯಂ ಮಾತನಾಡದೇ ದೀಪ ಹಚ್ಚಿಸುತ್ತಿದ್ದ. ಶಾಂತಪ್ಪ ಈ ದೃಶ್ಯವನ್ನು ನೋಡಿದಾಗಿನಿಂದಲೂ ಕೋಪವು ಬೆಂಕಿಯಂತೆ ಉರಿಯತೊಡಗಿತ್ತವನಲ್ಲಿ. ಮಾತನಾಡಿವರೆ ಮೇನೇಜರು ಇನ್ನೆಲ್ಲಿ ತರಾಟೆಗೆ ತೆಗೆದುಕೊಳ್ಳುವರೋ ಎಂದು ಹೆದರಿದ್ದ ಮಾಣಿಕ್ಯಂ ತಲೆ ತಗ್ಗಿಸಿಕೊಂಡೇ ಕುಳಿತಿದ್ದ. ಶಾಂತಪ್ಪನ ಕೆಂಡದಂತಹ ಕಣ್ಣುಗಳನ್ನು ನೋಡಿದ ಗೋಪಾಲಯ್ಯ ಏನಾದರೂ ಅನಾಹುತವಾದೀತೆಂದುಕೊಂಡು, ಕಣ್ಣು ಸಂಜ್ಞೆ ಮಾಡಿಕೊಂಡು ಮಾಣಿಕ್ಯಂ ಹೊರಗೆದ್ದುಹೋಗುವಂತೆ ಸೂಚಿಸಿದ.

"ಇಂತಹ ನಡತೆಗೆಟ್ಟವರು ಸೇರಿಕೊಂಡು ಕಂಪೆನಿಯವರಿಗೆಲ್ಲಾ ಕೆಟ್ಟ ಹೆಸರು ತರ್ತಾರಲ್ಲ ಗೋಪಾಲಯ್ಯ" ಎಂದು ಶಾಂತಪ್ಪ ಕನಲಿದ.

"ಹಾಳಾಗಿಹೋಗಲಿ ಸುಮ್ಮನಿದ್ದುಬಿಡಿ ಸಾರ್".

"ಎದುರಿಗೇ ನೋಡಿದಾಗ ಹೇಗೆ ಸುಮ್ಮನಿರೋದು. ಅವನನ್ನ ಇನ್ನು ಕಂಪೇನೀಲಿರೋದಕ್ಕೆ ಬಿಡಬಾರದು."

ಇವತ್ತೊಂದು ದಿನ ಸುಮ್ಮನಿದ್ದುಬಿಡಿ ಸಾರ್ ದಯವಿಟ್ಟು. ನಾಳೆ ನಾನು ಅವನಿಗೆ ಉಗಿದು ಬುದ್ಧಿ ಹೇಳ್ತೀನಿ."

ಶಾಂತಪ್ಪನು ಸುಮ್ಮನಾಗಲೇಬೇಕಾಯ್ತು. ಅವನೆದ್ದು ಒಳಹೋಗಿ ನೀರು ತಂದು ಕೈಕಾಲು ತೊಳೆದುಕೊಂಡ. ಅಡಿಗೆಯವನನ್ನೆಬ್ಬಿಸುವುದು ಬೇಡವೆಂದು, ತಾನೇ ಹೋಗಿ ಎಲೆಗಳನ್ನು ಹಾಕಿ ಪಾತ್ರೆಗಳನ್ನು ತೆರೆದ. ಅವೂ ಸಹ ಬರಿದಾಗಿದ್ದುವು! ಶಾಂತಪ್ಪನಿಗೆ ಒಂದೇ ಬಾರಿಗೆ ಕೋಪವುಕ್ಕಿ

ಬಂದಿತು, ಪಾತ್ರೆಯನ್ನು ರೊಯ್ಯನೆ ಮೂಲೆಗೆಸೆದ. ಆ ಶಬ್ದ ಕೇಳಿ ಗೋಪಾಲಯ್ಯ ಓಡಿಬಂದು ಪರಿಸ್ಥಿತಿಯನ್ನು ನೋಡಿದ, ಅವನಿಗೂ ಅರ್ಥವಾಯಿತು. ಆದರೆ ಆ ಹೊತ್ತಿನಲ್ಲಿ ಹಳ್ಳಿಯಲ್ಲಿ ಎಲ್ಲಿಯೂ ಏನೂ ದೊರೆಯುವಂತಿರಲಿಲ್ಲ. ಅಲ್ಲದೆ ರಾತ್ರಿಯಲ್ಲಿ ಹೋಗಿ ಏನಾದರೂ ಕೊಂಡು ತರುವುದಾಗಲೀ, ಕೇಳಿ ತರುವುದಾಗಲೀ ಗೌರವವಲ್ಲವೆಂಬ ಭಾವನೆಯಿಂದ ಸುಮ್ಮನೆ ಮಲಗಬೇಕಾಯಿತು. ಗೋಪಾಲಯ್ಯ ಹೊರಗೆ ಹೋಗಿ, ಸಿಗರೇಟು ಸೇದುತ್ತಾ ನಿಂತಿದ್ದ ಮಾಣಿಕ್ಯಂನನ್ನು ಕೇಳಿದ,

"ಏನಯ್ಯಾ ಮಾಣಿಕ್ಯಂ. ಇದೇನಿದು ನಿನ್ನ ಅವಾಂತರ. ರಾತ್ರಿಗೆ ಅಡಿಗೇನಾದರೂ ಮಾಡಿಸಿಡಬಾರದಾಗಿತ್ತೇನು ?"

"ನಾನೇನು ಮಾಡಲಿ ಗೋಪಾಲಯ್ಯ. ನೀವು ಮಠಕ್ಕೆ ಹೋಗಿಬಿಟ್ಟರೀಂತ ತಿಳಕೊಂಡು ನಾನು ಎಲ್ಲಾನೂ ಕೊಟ್ಟುಬಿಟ್ಟೆ."

"ಯಾರಿಗೆ ಕೊಟ್ಟುಬಿಟ್ಟೆ ?"

"......................!"

"ನೀವೆಲ್ಲ ಹೀಗೆ ಮಾಡೋದರಿಂದಲೇ ಮ್ಯಾನೇಜರು ಬೆಂಕಿಯಾಗ್ತಾರೆ. ನಿಂಗೆ ಸ್ವಲ್ಪಾನೂ ನಡತೇನೆ ತಿಳಿಯೊಲ್ಲಾ."

ಶಾಂತಪ್ಪ ಹಾಸಿಗೆ ಹಾಸಿಕೊಂಡು ತನ್ನ ರಗ್ಗು ಹೊದ್ದುಕೊಂಡು ಮಲಗಿಬಿಟ್ಟ. ಮಾರನೇ ದಿನ ಬೆಳಗ್ಗೆಯೆದ್ದು ಅವರಿಬ್ಬರೂ ಭಟ್ಟರ ಹೊಟೇಲಿಗೆ ಹೋದಾಗ ಭಟ್ಟರೆಂದರು,

"ಏನು ಸ್ವಾಮಿ, ನಿನ್ನೆಯೆಲ್ಲಾ ಊಟಾನೇ ಇಲ್ಲವಂತೆ ನಿಮಗೆ. ರಾತ್ರೇ ಬಂದು ಎಚ್ಚರ ಮಾಡಿದ್ರೆ ನಾನು ಉಪ್ಪಿಟ್ಟನ್ನಾದರೂ ಮಾಡಿ ಕೊಡ್ತಿದ್ದೆ."

"ಅರೆ! ನಿಮಗೆ ಹೇಗೆ ಗೊತ್ತಾಯಿತು ಇದು ?"

'ನನಗೇನು........ಊರಿಗೆಲ್ಲಾ ಗೊತ್ತಾಗಿಬಿಟ್ಟಿದೆ. ರಾತ್ರಿ ನೀವು ಬರೋಹೊತ್ತಿಗೆ ಅವರಿಬ್ಬರ ಲೀಲೆ ನಡೀತಿತ್ತಂತೆ" ಎಂದು ಭಟ್ಟ ನಕ್ಕ. ಅವನ ಸ್ಪಷ್ಟ ನುಡಿಗಳ, ನಿಷ್ಕಳಂಕ ಸ್ವಭಾವದ ಪರಿಚಯವಿದ್ದ ಶಾಂತಪ್ಪನೂ ನಕ್ಕು ಸುಮ್ಮನಾದ.

"ಈ ಊರು ಮಹಾ ಹರಾಮಿ ಊರು ಸ್ವಾಮಿ. ನಿಮ್ಮ ವಿಷಯ ನಿಮಗೇ ತಿಳಿಯೋಕೆ ಮುಂಚೆ ಈ ಊರಿನಲ್ಲಿ ಹರಡಿಹೋಗಿರುತ್ತೆ" ಎಂದ ಭಟ್ಟ ಇಡ್ಲಿ ತಟ್ಟೆಯನ್ನು ಅವರ ಕೈಗೆ ಕೊಡುತ್ತಾ.

# ೮

# ಸ್ವಾಮಿಗಳ ಸರಸ - ಕೃಷ್ಣನ ವಿರಕ್ತಿ !

ಆ ದಿನ ಶಾಂತಪ್ಪ ಈಶ್ವರ ಗುಡ್ಡ, ರಾಕ್ಷಸ ಬೆಟ್ಟಗಳನ್ನು ನೋಡಿ ಬರಲು ಹೊರಟಿದ್ದ. ಅದೇ ದಿನವೇ ಗೋಪಾಲಯ್ಯನು ಕೋಣ ಸಂದ್ರಕ್ಕೆ ಹೊರಟಿದ್ದ. ಅಲ್ಲಿಗೆ ಹೋಗಿ 'ಸ್ಯಾಂಪಲಿಂಗ್' ಕೆಲಸವನ್ನು ನೋಡಿಕೊಳ್ಳುವಂತೆ ಸಾಹುಕಾರರು ಅವನಿಗೆ ತಿಳಿಸಿ ಬರೆದಿದ್ದರು. ಗಣಿಯಿಂದ ಕೋಣಸಂದ್ರಕ್ಕೆ ಹಿಂತಿರುಗುವ ಲಾರಿಯಲ್ಲಿ ಕುಳಿತು ಇಬ್ಬರೂ ಹೊರಟರು. ಒಂದು ಹಳ್ಳಿಯ ಬಳಿ ಇಳಿದು, ಶಾಂತಪ್ಪ ಕರಡಿ ಮರವನ್ನು ಹೊಕ್ಕು ಅಪರೆದುರಿಗೆ ಇದ್ದ ಈಶ್ವರ ಗುಡ್ಡಕ್ಕೆ ಹೋಗಬೇಕಿತ್ತು. ಲಾರಿಯಿಂದ ಇಳಿದು ಆ ಹಳ್ಳಿಯ ಬಳಿ ಹೋಗುವಾಗ ಶಾಂತಪ್ಪನಿಗೆ ಗೋಪಾಲಯ್ಯನನ್ನು ಬಿಡುವ ಮನಸ್ಸೇ ಬರಲಿಲ್ಲ. ಆ ಹಲವುದಿನಗಳಲ್ಲಿ ಹೊಸದಾಗಿ ಉಂಟಾದ ಪರಿಚಯು, ಗಾಢ ಸ್ನೇಹವಾಗಿ ಮಾರ್ಪಟ್ಟಿತು. ತಾನು ವಿದ್ಯಾವಂತನೆಂಬ ಗರ್ವವನ್ನು ಬಿಟ್ಟು ಶಾಂತಪ್ಪನೂ, ತಾನು ಅನುಭವಿಯೆಂಬ ಹೆಮ್ಮೆಯನ್ನು ತೊರೆದು ಗೋಪಾಲಯ್ಯನೂ ಸ್ನೇಹಿತರಾಗಿದ್ದರು. ಗೋಪಾಲಯ್ಯನಂತಹರು ಹಲವರು ಅವಿದ್ಯಾವಂತರು, ಅಶಿಕ್ಷಿತರು, ಕೇವಲ ತಮ್ಮ ಅನುಭವದಿಂದಲೇ ಎಲ್ಲ ಗಣಿ ಮಾಲೀಕರ ಬಳಿಯೂ ತಾವು "ಮೈನಿಂಗ್ ಇಂಜನಿಯರು"ಗಳೆಂದು ಹೇಳಿ ಕೊಂಡು ತಿರುಗಾಡುತ್ತಿದ್ದುದು ತಿಳಿದು ಶಾಂತಪ್ಪನು ಅಂತಹ ಸುಳ್ಳು ಹೇಳುವವರ ಮೇಲೆ ಖತಿಗೊಂಡಿದ್ದ; ಒಂದು ದಿನ ಗೋಪಾಲಯ್ಯನಿಗೆ, ಅವನಿನ್ನೂ ತನ್ನ ಗಾಂಭೀರ್ಯದಲ್ಲೇ ಇದ್ದಾಗ, ಹೇಳಿದ್ದ,

"ಗೋಪಾಲಯ್ಯನೋರೇ, ಸರ್ಕಾರದಲ್ಲಿ ಒಂದು ಕಾನೂನಿದೆ. ಯಾವನಾದರೂ ತಾನು ಪಡೆಯದೇ ಇರುವ [illegible]ನ್ನು ತಾನು ಪಡೆದಿದ್ದೇನೆಂದು ಹೇಳಿ ಕೊಳ್ತಾನೋ, ಹಾಗೆ ಬರೆದು ಕೊಳ್ತಾನೋ ಅವನಿಗೆ ಶಿಕ್ಷೆ ವಿಧಿಸ್ತಾರೆ. ಅದೊಂದು ದೊಡ್ಡ ಅಪರಾಧ!" ಎಂದು.

ಗೋಪಾಲಯ್ಯನು ತಾನು 'ಮೈನಿಂಗ್ ಇಂಜನಿಯರು' ಎಂದು ಪರಿಚಯ ಪತ್ರದಲ್ಲಿ ಅಚ್ಚು ಹಾಕಿಸಿಕೊಂಡುದೂ, ಹಾಗೆಯೆ ಕೆಲವು ಗಣಿ

ಮಾಲೀಕರಿಗೆ ಬರೆದು ಕೊಟ್ಟುದೂ ನೆನಪಾಯಿತು. ಶಾಂತಪ್ಪನಂತಹ ವಿದ್ಯಾವಂತನೆದುರು ತನ್ನದೇನು ಬಿಂಕ ಎಂದು ಕೊಂಡು, ತನ್ನ ನಿಜ ಚಿತ್ರವನ್ನು ತೋರಿಸಿ ಕೊಂಡಿದ್ದ. ಶಾಂತಪ್ಪನೂ ಹಾಗೆಯೇ, ಹಲವು ಪದವೀಧರರಂತೆ ತಾವು ಪದವಿ ಪಡೆದ ಮಾತ್ರಕ್ಕೇ, ಸರ್ವಜ್ಞನೆಂಬ ಭಾವನೆಯಿಂದ ತಮಗೆಲ್ಲಾ ತಿಳಿದಿದೆಯೆಂದು ಬಡಾಯಿ ಕೊಚ್ಚಿಕೊಳ್ಳುವ ಕೃತಿಗಿಳಿಯದೆ, ತಾನು ಅದಿರಿನ ವಿಷಯ ಹೆಚ್ಚು ತಿಳಿಯದವನಲ್ಲವೆಂದೇ ಹೇಳಿಕೊಂಡಿದ್ದ.

ಸ್ಪಷ್ಟ ನುಡಿ, ಸತ್ಯ ನುಡಿಗಳೇ ಸ್ನೇಹವನ್ನು ಗಾಢವಾಗಿ ಹಲವು ವೇಳೆ ಹೆಣೆಯುವುವು. ಇವರಿಬ್ಬರ ಸ್ನೇಹವೂ ಹೀಗಾಗಿದ್ದಿತು. ಆದ್ದರಿಂದಲೇ ಆ ಹಳ್ಳಿಯ ಬಳಿ ಲಾರಿಯಿಂದಿಳಿದಾಗ ಶಾಂತಪ್ಪನಿಗೆ ಗೋಪಾಲಯ್ಯನು ದೂರದ ಯಾವುದೋ ಒಂದೂರಿಗೆ ಅವನು ಹೊರಟುಬಿಡುವನೆಂಬಂತೆ ಭಾಸವಾಯ್ತು. ಗೋಪಾಲಯ್ಯನಿಗೂ ಹಾಗೆಯೇ. ತನ್ನ ಆತ್ಮೀಯನೊಬ್ಬನು ದೂರ ಹೊರಟುಹೋಗುವನೆಂದು ಭಾಸವಾಗಿತ್ತು.

"ಆಗಾಗ್ಗೆ ಬರುತ್ತಿರಿ ಗೋಪಾಲಯ್ಯ" ಶಾಂತಪ್ಪನೆಂದ.

"ಖಂಡಿತಾ. ಈ ಬಟವಾಡೆ ದಿನ ಸಾವಕಾರ್ರ ಕಾರಲ್ಲಿ ಕೋಣಸಂದ್ರಕ್ಕೆ ಬಂದು ಬಿಡ್ತೀನಿ" ಎಂದು ಗೋಪಾಲಯ್ಯನೆಂದ. ಇಬ್ಬರೂ ಪರಸ್ಪರ ವಂದಿಸಿದರು.

"ನೀವು ಹೆಚ್ಚಿಗೆ ತಿರುಗಬೇಡಿ ಸಾರ್. ದಿನಾ ಗಣೀಗೆ ನಡೀ ಬೇಡಿ. ಯಾರನ್ನೂ ಎದುರು ಹಾಕಿಕೊಳ್ಳಬೇಡಿ. ಇಲ್ಲೆಲ್ಲಾ ಎಷ್ಟು ಕಷ್ಟಪಟ್ಟು ಕೆಲಸಮಾಡಿದರೂ ಬೆಲೆ ಬರೋಲ್ಲ. ಸಾಹುಕಾರರುಗಳ ಬಳಿಯ ಕೆಲಸಗಳೇ ಇಷ್ಟು. ಹೆಚ್ಚು ದುಡೀಬೇಡಿ." ಎಂದು ಗೋಪಾಲಯ್ಯ ಹೊರಡುವಾಗ ಹೇಳಿದ್ದ.

* * *

"ಸಾಹುಕಾರರ ಬಳಿ ಕೆಲಸಗಳೇ ಇಷ್ಟು....ಹೆಚ್ಚು ದುಡೀಬೇಡಿ.... ಎಷ್ಟು ಕಷ್ಟಪಟ್ಟು ಕೆಲಸ ಮಾಡಿದರೂ ಬೆಲೆ ಬರೋಲ್ಲ....ಬೆಲೆ ಬರೋಲ್ಲ...." ಈ ಮಾತುಗಳು ವಿದ್ಯುದಲೆಗಳಂತೆ ಅವನ ತಲೆಯಲ್ಲಿ ವಿಸ್ತೃತವಾಗತೊಡಗಿದುವು. ಹಬ್ಬುಗೆ ಗುಡ್ಡದ ಪ್ರತಿಧ್ವನಿಗಳಂತೆ ಅವೇ ಪುನಃ ಪುನಃ ಪ್ರತಿಧ್ವನಿಸಿದುವು. ಸುಬ್ಬಣ್ಣ, ಮಾಣಿಕ್ಯಂರ ನೆನಪಾಯಿತವನಿಗೆ.

ಸುಬ್ಬಣ್ಣ—ಮಾಣಿಕ್ಯಮ್—ಚನ್ನಯ್ಯ.

ಲಂಚ—ವ್ಯಭಿಚಾರ—ದ್ರೋಹ.

ದ್ರೋಹ—ಲಂಚ—ವ್ಯಭಿಚಾರ.
ವ್ಯಭಿಚಾರ—ದ್ರೋಹ—ಲಂಚ.

ಈ ಮೂರು ಶಬ್ದಗಳು ತ್ರಿಕೋಣಾಕಾರವಾಗಿ ಬಿಂದುವಿನಿಂದ ಬಿಂದುವಿಗೆ ಓಡಾಡತೊಡಗಿದುವು, ಅವನ ಚಿತ್ತದಲ್ಲಿ. ಬೆಂಕಿಯ ಈ ತ್ರಿರೇಖೆಗಳ ನಡುವೆ ತಾನು ಸಿಕ್ಕಿರುವನೆಂದು ಭಾಸವಾಯಿತವನಿಗೆ. ಈ ಬೆಂಕಿಯ ತ್ರಿಕೋಣ ಈ ವಿಷವೃತ್ತದಿಂದ ಹೊರಗಿರಲು ಸಾಧ್ಯವೇ ಇಲ್ಲವೇ? ಸಾಧ್ಯವೇ ಇಲ್ಲವೇ? ಧ್ಯೇಯವಾದಿಯಾಗಿ ದುರಾಚಾರದಿಂದ ದೂರವಿರೋಣವೆಂದುಕೊಂಡರೆ ಹುಳುವಿಗೇ ಅರಿವಾಗದಂತೆ ಜೇಡ ಬಂದು ಸುತ್ತಲೂ ಬಲೆಗಟ್ಟುವಂತೆ ತನ್ನ ಸುತ್ತಲೂ ಬಲೆ ನಿರ್ಮಿತವಾಗುತ್ತಿದೆ. ತಾನೊಬ್ಬ ಬಲಿಷ್ಠ ದುಂಬಿಯಂತೆ ಬಾರಿ ಬಾರಿಯೂ ಆ ಬಲೆಯಿಂದ ಹಾರಿಬರುತ್ತಿರುವನು; ಈ ನಡುವೆಯೇ ಮತ್ತೊಂದು ಅಪಸ್ವರ—

ಎಷ್ಟು ಕಷ್ಟಪಟ್ಟರೂ ಬೆಲೆ ಬರುವುದಿಲ್ಲ. ಆದ್ದರಿಂದ ಕಷ್ಟವೇಕೆ ಪಡಬೇಕು? ಎಷ್ಟು ನಿರ್ಲಿಪ್ತವಾಗಿದ್ದರೂ ಅದಕ್ಕೆ ಮನ್ನಣೆ ದೊರೆಯದಿದ್ದರೆ ನಿರ್ಲಿಪ್ತಯೇಕೆ? ಒಳ್ಳೆಯವನಾಗಿರುವುದೇ ಅಸಾಧ್ಯವೇ ಈ ಹಾಳು ಬಾಳಿನಲ್ಲಿ? ಒಂದು ದಿನ ಹೋಟೆಲು ಭಟ್ಟ ಹೇಳಿದ್ದ,

“ ನಿಮಗೆ ಗೊತ್ತಿಲ್ಲ ಸಾರ್. ಸಾಹುಕಾರರು ನಿಜವಾಗಿಯೂ ದೇವರಿಗೆ ಇಷ್ಟೊಂದು ದುಡ್ಡು ಖರ್ಚು ಮಾಡೋದಿಕ್ಕೆ ಇಷ್ಟಪಡೋದಿಲ್ಲ. ಆದರೆ ಈ ಸುತ್ತಮುತ್ತಲೆಲ್ಲಾ ಇರೋರು ಕೂಲಿಯೋರು, ಜಮೀನ್‌ದ್ದಾರರು ಎಲ್ಲಾ ಲಿಂಗಾಯಿತರೇ. ಆದ್ದರಿಂದಲೇ ಅವರ ವಿಶ್ವಾಸ ಸಂಪಾದಿಸೋಕೆ, ಅವರಿಂದ ಭೇಷ್ ಅನ್ನಿಸಿಕೊಳ್ಳೋಕೆ ಅವರ ದೇವಸ್ಥಾನಕ್ಕೆ ಅವರ ಮಠಕ್ಕೆ ದುಡ್ಡು ಕೊಡೋದು. ಅವರ ಸ್ವಾಮಿಗಳಿಗೆ ಗೌರವ ಕೊಡೋದು. ಅವರು ಒಳ್ಳೆ ವರ್ತಕರು! ”

”ಲಿಂಗಾಯಿತರ ವಿಶ್ವಾಸದಿಂದ ಏನಾಗಬೇಕು?” ಶಾಂತಪ್ಪನಿಗೆ ಅರ್ಥವಾಗಿರಲಿಲ್ಲ.

“ ಇದೇನು ಸಾರ್ ಹೀಗೆ ಹೇಳ್ತೀರಿ!....ಈ ಸುತ್ತಮುತ್ತಲಿರೋರೆಲ್ಲಾ ಅವರೇ ಆದಮೇಲೆ ಅವರ ಪ್ರೀತಿ ಸಂಪಾದಿಸಬೇಡವೇ. ಅವರು ಹಾಗಿರೋದರಿಂದಲೇ ಇಷ್ಟೊಂದು ಜನ ಸ್ಥಳದ ಲಿಂಗಾಯಿತರು ಅವರ ಗಣಿಗೆ ಹೋಗೋದ್ದು ....ಅವರು ಭಾಳ ಬುದ್ಧಿವಂತರು” ಎಂಬ ಭಟ್ಟನ ಮಾತು ಶಾಂತಪ್ಪನಿಗೂ

ಒಂದು ರೀತಿಯಲ್ಲಿ ಸರಿಯೆನಿಸಿತ್ತು. ಸಾಹುಕಾರರು ವೀರಶೈವಕುಲದವನಾದ ಆ ಪ್ರಾಂತ್ಯದ ಕಾಡಿನ ಕಾವಲುಗಾರನಿಗೆ, ಅವನು ಸರ್ಕಾರಿ ನೌಕರನಾದರೂ ವಾರವಾರವೂ ನಾಲ್ಕು ರುಪಾಯಿ 'ಮಾಮೂಲು' ಕೊಡುತ್ತಿದ್ದರು.

ಹಾಗಾದರೆ ಇದು ಸಹ ಚೋರಿಕೆ !

ಸಾಹುಕಾರರ ವಿಶ್ವಾಸ ಬರೀ ನಾಟಕ !

ಕೆಲಸಗಾರರು ಚೆನ್ನಾಗಿ ದುಡಿಯಲೆಂದು, ಅವರಲ್ಲಿ ಆತ್ಮೀಯತೆಯ ನಟನೆ—ವಣಿಕತಂತ್ರ !

ಹಾಗಾದರೆ ತಾನು ಅವರನ್ನು ತನ್ನ ಅಣ್ಣನಂತೆ ಭಾವಿಸಿದುದು ಮೂರ್ಖತನ !

ಶಾಂತಪ್ಪನಿಗೆ ಒಂದು ಬಗೆಯ ಸಂಕಟವಾಯಿತು. ತಲೆ ಗಿರ್ರನೆ ಸುತ್ತ ತೊಡಗಿತು. ಹಾಗೆಯೇ ಯಾವ ಯಾವ ಯೋಚನೆಗಳವನ ತಲೆಯಲ್ಲೇಳು ತ್ತಿದ್ದುವೋ ? ಆದರೆ ಅಷ್ಟರಲ್ಲಿ ಎದುರಿಗೇ ಬರುತ್ತಿದ್ದ ಈಶ್ವರಗುಡ್ಡದ ಗಣಿಯ ಕಂಟ್ರಾಕ್ಟರು ಗಂಗಯ್ಯ ಮಾತನಾಡಿಸಿದ—

"ಏನು ಸಾರ್....ನಡೆದುಕೊಂಡೇ ಬರ್ತಿದ್ದೀರಿ ?"

"ನಿಮ್ಮ ಗಣೀಗೇ ಬರ್ತಿದ್ದೆನಪ್ಪ. ಏನು ಸಮಾಚಾರ, ಕೆಲಸವೆಲ್ಲಾ ಸರಿಯಾಗಿ ನಡೀತಿದೆಯೋ ?"

"ಓಹೋ ಎಲ್ಲಾ ಸರಿಯಾಗಿದೆ ಸಾರ್. ನಾಲ್ಕೈದು ದಿನದ ಹಿಂದೆ ಸುಬ್ಬಣ್ಣೋರು ಬಂದಿದ್ರು ಇಲ್ಲೇ ಎರಡು ದಿನಾ ಇದ್ದು ಹೋದ್ರು."

ಕೋಣನಸಂದ್ರದಿಂದ ತಾನು ನಾಗೇನಹಳ್ಳಿಗೆ ಬರುವ ಮಾರ್ಗದಲ್ಲಿಯೇ ಬಂದು, ಹಳ್ಳಿಗೆ ಮೂರು ಮೈಲಿಗಳ ಹಿಂದೆಯೇ ಬೇರೆ ಮಾರ್ಗ ಹಿಡಿದು ಮಠಕ್ಕೂ, ಈಶ್ವರ ಗುಡ್ಡಕ್ಕೂ ಹೋಗಬಹುದಿತ್ತು.

"ಹಾಗಾದರೆ ಸರಿ....ಅವರು ಎಲ್ಲಾ ಸರಿಯಾಗಿ ಹೇಳಿ ಹೋಗಿರ್ತಾರೆ," ಶಾಂತಪ್ಪನೆಂದ.

"ತಾವೇಕೆ ನಡೆಸ್ಕೊಂಡೇ ಬರ್ತೀರಿ ಸಾರ್. ಅವರೆಲ್ಲಾ ಯಾವಾಗಲೂ ಕಾರಿನಲ್ಲೋ ಲಾರೀಲೋ ಬರ್ತಾರೆ. ನೀವು ಮಾತ್ರ ಯಾವಾಗಲೂ ನಡೆದು ಕೊಂಡೇ ಬರ್ತೀರಿ."

"ಅವರೆಲ್ಲ ಅಂದರೆ ಯಾರು ?"

"ಮಾಣಿಕ್ಯಂ....ಸುಬ್ಬಣ್ಣ ಎಲ್ಲಾ...."

"ನಾನು ಕಾರು ಲಾರೀಗೋಸ್ಕರ ಕಾಯೋದಿಲ್ಲ. ಈವಾಗ ಸಹಾ ಲೋಡು ಮಾಡಿದ್ದ ಲಾರೀಲೇ ಬಂದೆ. ರಸ್ತೇಲಿ ಇಳಿದು, ಲಾರೀನ ಅತ್ತ ಕಡೇಗೆ ಕಳಿಸಿ ನಾನು ಹೀಗೆ ಬಂದೆ."

"ಏನೋ ಸಾರ್....ನೀವು ಹೀಗೆಲ್ಲಾ ನಡೀಬಾರದು. ಗುಡ್ಡದ ಹವ ನಿಮಗೆ ಇನ್ನೂ ಗೊತ್ತಿಲ್ಲ. ಜ್ವರ ತಲೆನೋವು ಬಂದರೆ ತಡೆಯೋಕಾಗೋಲ್ಲ. ಜ್ವರ ಬಂದರೆ ಯಾರೂ ನಿಮ್ಮನ್ನ ಕೇಳುಲ್ಲ."

ಶಾಂತಪ್ಪ ನಾಲ್ಕಾರು ನಿಮಿಷ ಮೌನವಾಗಿಯೇ ನಡೆದ. ಪುನಃ ಗಂಗಯ್ಯನೆಂದ,

"ನಮಗೂ ಈ ಕೊಂಗನ ಹತ್ತಿರ, ಸುಬ್ಬಣ್ಣೋರ ಹತ್ತಿರ ಏಗಿ ಸಾಕಾಗಿತ್ತು. ತಾವು ಬಂದದ್ದು ನಮಗೆ ತುಂಬಾ ಸಹಾಯವಾದಂತಾಯ್ತು."

"ಯಾಕಪ್ಪ ಹಾಗೆ ಹೇಳ್ತಿ. ನಾನಿನ್ನೂ ಗಣೀಗೆ ಹೊಸಬ. ಅವರಿಬ್ಬರೂ ಒಳ್ಳೆ ಅನುಭವಸ್ಥರು. ಅವರಿಂದ ನೀವು ಬೇಕಾದಷ್ಟು ಗಣಿ ಕೆಲಸ ಕಲಿಯಬಹುದು."

"ಬಿಡಿ ಸಾರ್....ಆ ಸುಬ್ಬಣ್ಣ ಸದಾ ಈ ಮಠದಲ್ಲೇ ಸಾಯ್ತಿರ್ತಾನೆ. ಮಠದ ಅಂಗಳದಲ್ಲಿ ಸಾವಕಾರ್ರು ನಾಲ್ಕೈದು ಗುಡಿಸಲು ಹಾಕಿಸಿದಾರೆ. ಆ ಗುಡಿಸಲಲ್ಲಿ ಅವನ ಆಡಿದ್ದೇ ಆಟ."

"ಹಾಗಂದ್ರೆ ?"

"ಈ ಗಣೀಲಿ ಲಕ್ಕಮ್ಮಾಂತ ಒಬ್ಬಳಿದಾಳೆ. ಸುಮಾರು ಇಪ್ಪತ್ತೈದು ವರ್ಷ ಇರಬಹುದು. ಅವಳಿಗೂ ಗಂಡ ಇಲ್ಲ. ಸುಬ್ಬಣ್ಣ ಬಂದ ದಿನಾ ಅವಳೂ ಆ ಗುಡಿಸಲಲ್ಲಿ ಹಾಜರ್ !"

"ಛೆ! ಛೆ! ಇದೇನು ಮಾತು ಹೇಳ್ತಿ ಗಂಗಯ್ಯ. ಮಠದಲ್ಲಿ ಇಂಥದೆಲ್ಲಾ ಸಾಧ್ಯವೇ ?"

"ತಾವೇ ಬಂದು ನೋಡಿ ಸಾರ್. ಗೊತ್ತಾಗುತ್ತೆ."

"ಇದರ ಮೇಲೆ ವಾರವಾರವೂ ಸುಬ್ಬಣ್ಣಂಗೆ ಟನ್ನಿಗೆ ಎರಡು ರೂಪಾಯಿ ಲಂಚ ಕೊಡಬೇಕಂತೆ. ಇದು ಎಲ್ಲಿ ನ್ಯಾಯ ಸಾರ್ ? ನಾವು ಇವರಿಗೆ ಲಂಚ ಕೊಡಬೇಕು, ಸಾವಕಾರರಿಗೂ ಅದನ್ನ ತಿಳಿಸದೆ ಗುಟ್ಟಾಗಿಟ್ಟಿರಬೇಕು. ಕೊಡದಿದ್ದರೆ ಅಳತೆ ಕಮ್ಮಿ ಇದೇಂತಾರೆ, ಕಲ್ಲು ಚೆನ್ನಾಗಿಲ್ಲಾಂತಾರೆ. ಸಾವಕಾರ್ರಿಗೆ ಹಾಗೇ ಹೇಳಿ ಕಮ್ಮಿ ಹಣ ಕೊಡಿಸಿಬಿಡ್ತಾರೆ. ನಾವು ಈ ಕಿರುಕುಳ ತಡೆಯೋಕಾಗೋಲ್ಲ ಸಾರ್."

"ನೀವು ಸತ್ಯವಾಗಿದ್ದರೆ ನಿಮಗೆ ಯಾರಿಗೂ ತೊಂದರೆಯೇ ಆಗೋಲ್ಲ ಗಂಗಯ್ಯ," ಶಾಂತಪ್ಪನೆಂದ. ಅವನಿಗೆ ಗಂಗಯ್ಯನ ಮಾತಿನಲ್ಲಿ ನಂಬಿಕೆ ಯಿರಲಿಲ್ಲ. ಚನ್ನಯ್ಯನಂತಹ ಕಂಟ್ರಾಕ್ಟರುಗಳನ್ನು ನೋಡಿದ್ದವನಿಗೆ, ಎಲ್ಲ ಕಂಟ್ರಾಕ್ಟರುಗಳೂ ಒಂದೇ ಎಂಬ ನಂಬಿಕೆ ದೃಢವಾಗಿದ್ದಿತು.

"ನೀವು ನನ್ನ ಬಾಕಿ ಕಂಟ್ರಾಕ್ಟರುಗಳ ಹಂಗೇಂತ ತಿಳೀಬೇಡಿ ಸಾರ್. ನಾನು ತುಂಬಾ ಸೀದಾ ಮನುಷ್ಯ. ನಾನು ಯಾರಿಗೂ ಲಂಚಾನೂ ಕೊಡೋಲ್ಲ, ಯಾರಿಗೂ ಹೆಂಗಸರನ್ನೂ ಒದಗಿಸೋಲ್ಲ. ಆದರೆ ನನ್ನ ಹಣ ಮಾತ್ರ ನಾನು ಬಿಡೋಲ್ಲ. ನ್ಯಾಯವಾಗಿ ನಂಗೆ ಬರಬೇಕಾದ್ದಕ್ಕೂ ಖೋತ ಮಾಡ್ತಾರೆ ಸಾರ್ ಇವರಿಬ್ಬರೂ ಸೇರಿಕೊಂಡು."

ಶಾಂತಪ್ಪನ ನಂಬಿಕೆ ಸಡಿಲವಾಗತೊಡಗಿತು. ಗಂಗಯ್ಯನ ಸ್ಪಷ್ಟ ನುಡಿಗಳನ್ನು ಕೇಳಿ ಅವನ ಮಾತಿನಲ್ಲಿ ಸತ್ಯಾಂಶವಿರಬಹುದೆಂದುಕೊಂಡ. ಆದರೂ ಕಂಪೆನಿಯವರನ್ನು ಗಂಗಯ್ಯನ ಮುಂದೆ ಬಿಟ್ಟುಕೊಡಬಾರದು! ಬೇರೆ ಮಾತನ್ನಾಡಿದ.

"ಏನೋ ನೋಡೋಣ."

"ನೋಡಿ ಸಾರ್ ಬೇಕಾದ್ರೆ, ನೀವೇ ಬಂದು ಈ ವಾರದ ಕಲ್ಲು ಹೇಗಿದೇಂತ, ಅದನ್ನು ಅಳತೇನೂ ಮಾಡಿಕೊಳ್ಳಿ ಎಷ್ಟಿದೇಂತ, ಆಮೇಲೆ ಹೇಳಿ. ಸುಬ್ಬಣ್ಣ ಹೇಳಿರೋದನ್ನ ನೀವು ಹೇಳಿದೋದಕ್ಕೆ ಹೋಲಿಸಿ ನೋಡಿ. ನನ್ನ ಮಾತೇನಾದರೂ ಸುಳ್ಳಾದರೆ ತಾವು ಬೂಡ್ಸಿನಲ್ಲಿ ಹೊಡೀರಿ, ಹೊಡೆಸಿ ಕೊಳ್ತೀನಿ."

"ಛೆ!....ಛೆ! ಅಂಥ ಮಾತು ಆಡಬೇಡಪ್ಪ." ಎಂದ ಶಾಂತಪ್ಪನಿಗೆ ಗಂಗಯ್ಯನ ಸ್ಪಷ್ಟ ನುಡಿಗಳು ತುಂಬಾ ಪ್ರಿಯವಾದುವು. ಮೌನವಾಗಿಯೇ ನಾಲ್ಕಾರು ನಿಮಿಷ ನಡೆದ ನಂತರ ಗಂಗಯ್ಯನೆಂದ. ಪುನಃ,

"ತಾವು ಇವತ್ತು ಬಂದಿದ್ದು ಒಳ್ಳೇದೇ ಆಯ್ತು ಸಾರ್."

"ಅದೇಕಪ್ಪ ?"

"ತಾವು ಮೊನ್ನೆ ದಿನಾ ಗಣೀಗೆ ಹೋಗದೆ, ಗೋಪಾಲಯ್ಯನವರ ಜೊತೆ ಎಲ್ಲಿಯೋ ಸುತ್ತೋಕೆ ಹೋಗಿದ್ದಿರಿ. ತಾವು ಈಶ್ವರ ಗುಡ್ಡದ ಗಣೀಗೆ ಬಂದೇ ಇಲ್ಲಾಂತ, ಸಾಹುಕಾರ್ರ ಹತ್ರ ಸುಬ್ಬಣ್ಣ ಕಂಪ್ಲೇಂಟು ಕೊಟ್ಟಿದಾನೆ ಸಾರ್," ಎಂದ ಗಂಗಯ್ಯನ ಮಾತು ಕೇಳಿ ಶಾಂತಪ್ಪನಿಗೆ ಒಂದು ನಿಮಿಷ ಯಾರೋ

ಕರುಳನ್ನು ಕೊರೆದಂತಾಯಿತು. ಸುಬ್ಬಣ್ಣನ ಬಗೆಗೆ ದ್ವೇಷದ ದಳ್ಳುರಿ ಭುಗ್ಗನೆದ್ದಿತು ಅವನ ಮನದಲ್ಲಿ. ತನ್ನ ಮೇಲೆ ಸಲ್ಲದ ಅಪವಾದ ಹೊರಿಸಿದನೇ ಸುಬ್ಬಣ್ಣ. ರಾಮನಾಯ್ಕನ ಹಳ್ಳಿಗೆ ಬಂದಾಗ ಅವನಿಗೆ ತನ್ನ ಕೈಯಿಂದಲೇ ಹಣ ವೆಚ್ಚಮಾಡಿ ಆತಿಥ್ಯ ನಡೆಸಿದ್ದನಲ್ಲ. ಕಂಪನಿಯ ಕೆಲಸ, ತನ್ನ ಕರ್ತವ್ಯವೆಂದು ನಿಮಿಷ ನಿಮಿಷವೂ ಹೇಳಿಕೊಂಡು ಮಾಡಿದುದಕ್ಕೇ ಈ ಪ್ರತಿಫಲ? ತಾನು ದಾರಿ ತಪ್ಪಿ ಕಾಡುಮೇಡಿನಲ್ಲಿ ಬಿಸಿಲಿನಲ್ಲಿ ಆ ದಿನ ಅಲೆಯುತ್ತಿದ್ದಾಗ, ಗಣಿಗೇ ಬರದೆ ರತ್ನವ್ವನೊಡನೆ ವಿಲಾಸವಾಡುತ್ತಾ ಹಳ್ಳಿಯಲ್ಲಿದ್ದ ಮಾಣಿಕ್ಯಂನನ್ನು ಸುಮ್ಮನೆ ಬಿಟ್ಟಿದ್ದಕ್ಕೆ ಈ ಪ್ರತಿರೂಪವೀಗ!

ಆದರೂ. ಸುಬ್ಬಣ್ಣ ಮಾಣಿಕ್ಯಂರಿಗೇಕೆ ತನ್ನ ಮೇಲೆ ದ್ವೇಷ? ಅವರ ದುಷ್ಟ ಪ್ರವೃತ್ತಿಗಳನ್ನೆಲ್ಲ ತಿಳಿದೂ ತಿಳಿಯದಂತೆ ಸುಮ್ಮನಿದ್ದರೂ, ಅವರಿಗೆ ಅಡ್ಡಬಾರದಿದ್ದರೂ ಅವರಿಗೇಕೆ ಈ ಬುದ್ಧಿ? ವೃತ್ತಿ ಜೀವನದಲ್ಲಿ ದ್ವೇಷದ ಕುಡಿ ಹೇಗೆ ಒಡೆಯುತ್ತದೋ, ಯಾವ ಕುತ್ತು ಹೇಗೆ ಬರುತ್ತದೋ ಅರಿಯುವುದೇ ಕಷ್ಟ. ಒಟ್ಟಿನಲ್ಲಿ ಶ್ರೀಮಂತರ ಬಳಿ ನೌಕರಿಗೆ ಹೋಗುವುದು ಉರುಲಿನಲ್ಲಿ ಕತ್ತನ್ನೇ ಇಟ್ಟಂತೆ, ಎಂದು ರಾಂತಪ್ಪ ಚಿಂತಿಸಿದ.

ಇಂತಹ ಕಟುಸತ್ಯಗಳು, ಬಿಸಿಲಿನ ಬೇಗೆಯು ಭೂಮಿಯಿಂದ ಮುಖಕ್ಕೆ ರಾಚುವಂತೆ, ರಾಂತಪ್ಪನ ಮುಖದ ಮುಂದೆ ಬಂದು ಬಂದು ಮುಖವನ್ನು ರಾಚಿ ಹೋಗುತ್ತಿದ್ದುವು. ಬಾಲ್ಯದ ಕಾಲೇಜಿನ ಪಕ್ಷಿ ಜೀವನದಿಂದ ಅದೇ ತಾನೇ ವೃತ್ತಿಜೀವನಕ್ಕೆ ಕಾಲಿಟ್ಟಿದ್ದ ಅವನಿಗೆ ಈ ಒಂದೊಂದೂ ಘಟನೆಯು ಒಂದೊಂದು ಪರ್ವತದಂತೆ ಕಾಣತೊಡಗಿದುವು. ಬಂದ ಎಡರನ್ನು ಆಸಡ್ಡೆಯಿಂದಲೇ ನೋಡಿ ಮರೆಯುವಷ್ಟು ವಯಸ್ಸು ಆಗಿರಲಿಲ್ಲ, ಅಂತಹ ಅನುಭವವೂ ತುಂಬಿರಲಿಲ್ಲ ಅವನಲ್ಲಿ. ಜೀವನದ ಬಯಲಿನಲ್ಲಿ ಚುಚ್ಚಿಕೊಂಡ ಒಂದೊಂದು ಮುಳ್ಳೂ ಅವನಿಗೆ ಅಸಾಧ್ಯವಾದ ಯಾತನೆಯನ್ನು ಕೊಡುತ್ತಿದ್ದುವು. ಜೀವನವೇ ಒಂದು ಮುಳ್ಳಿನ ಮೈದಾನವೇನೋ ಎಂಬ ಭಯವುಂಟಾಯಿತವನಿಗೆ. ಮುಳ್ಳಿನ ನೋವಿನ ಈ ಪರೀಕ್ಷೆಯಿಂದಲೇ ಮುಂದುವರೆದಾಗ ಮುಳ್ಳು ಹರಡಿದ ಭೂಮಿಯ ಮಧ್ಯೆ ಹಸುರು ಹುಲ್ಲಿನ ಮೃದು ತೇಪೆಯು ಅಲ್ಲಲ್ಲಿ ಕಂಡುಬಂದಾಗ ಉಂಟಾಗುವಂತಹ ಕ್ಷಣ ಸಂತಸವುಂಟಾಗಿದ್ದಿತವನಿಗೆ ಗೋಪಾಲಯ್ಯ, ಹೋಟೆಲು ಭಟ್ಟ ಇವರನ್ನು ಕಂಡಾಗ. ಇದರ ಜೊತೆಗೆ ಈಗ ಗಂಗಯ್ಯನೂ ಸೇರಿಕೊಳ್ಳುತ್ತಿದ್ದ;

“ನಿಮಗೆ ಹೇಗೆ ತಿಳೀತು ಈ ಸಮಾಚಾರ ?” ಶಾಂತಪ್ಪ ಕೇಳಿದ.

“ನಾನು ಬೆಂಗಳೂರಿನೋನೇ ಸಾರ್. ಹೀಗೇ ಒಂದಿನಾ ಸಾವಕಾರ್ರ ಪರಿಚಯವಾಯ್ತು. ಈ ಗಣೀಲಿ ಕಂಟ್ರಾಕ್ಟು ಕೊಡ್ತೀನಿ ಬಾಂತ ಅಂದ್ರು. ನಾನೂ ನನ್ನ ಕೆಲಸಗಳನ್ನೆಲ್ಲ ಬಿಟ್ಟು ಬಂದುಬಿಟ್ಟೆ. ಇಲ್ಲಿ ನೋಡಿದರೆ ಈ ಮಾಮೂಲುಗಾರರ ಕಿರುಕುಳ ಅಸಾಧ್ಯವಾಗಿದೆ. ಮೊನ್ನೆ ನೋಡಿ ಸಾರ್, ಒಂದು ರಾಶೀನ ನಾನೇ ಅಳತೆ ಮಾಡಿದೀನಿ, ಅದು ಐವತ್ತಾರು ಟನ್ನಿದೆ. ಸುಬ್ಬಣ್ಣ ಅಳತೆಮಾಡಿಕೊಂಡು ಅದು ನಲವತ್ತೆಂಟು ಟನ್ನಿದೇಂತ ಹೇಳಿಬಿಟ್ಟ ಸಾರ್.”

“ಹೂ ...”

“ಒಂದೇ ಸಲ ಎಂಟು ಟನ್ನು ಕಡಿಮೆಯಾದ್ರೆ ನೂರ ಅರವತ್ತು ರೂಪಾಯಿ ಸಾರ್. ಪೂರ್ತಿ ಹೀಗೆ ಬಂದರೆ ನಂಗೆ ವಾರಕ್ಕೆ ಮೂವತ್ತು ನಲವತ್ತು ರೂಪಾಯಿ ಲಾಭ ಇಲ್ಲದಿದ್ದರೆ ಕೂಲಿಯೋರಿಗೆ ಅರ್ಧ ಕೂಲಿ ಕೊಟ್ಟು ನಾನು ಉಪವಾಸ ಇರಬೇಕು. ನಾನು ಉಪವಾಸವಿದ್ದರೂ ಚಿಂತೆಯಿಲ್ಲ ಸಾರ್. ನನ್ನನ್ನೇ ನಂಬಿಕೊಂಡು ಬೆಂಗಳೂರಿನಿಂದ ಬಂದ ಕೂಲಿಯವರ ಗತಿಯೇನು ಸಾರ್ ?”

ಗಂಗಯ್ಯನ ಮಾತೂ ಸಹ ಶಾಂತಪ್ಪನಿಗೆ ಒಪ್ಪಿಗೆಯೆನಿಸಿದುವು. ಅವನ ಮಾತಿನಲ್ಲವನಿಗೆ ಸತ್ಯದ ಎಳೆಗಳು ಕಾಣಿಸಿದ್ದುವು. ಗಂಗಯ್ಯನಂತೆ ಸ್ಪಷ್ಟವಾಗಿ ಮಾತನಾಡುವವರನ್ನು ನಂಬಬಹುದು, ಕಠಿನವಾದರೂ ಸತ್ಯವಾದ ಅಂತಹ ಮಾತುಗಳವನಿಗೆ ಪ್ರಿಯವಾಗಿದ್ದುವು. ಸಿಹಿ ಮಾತನಾಡಿದರೂ ಬೆನ್ನಿನಲ್ಲಿ ಬಗೆಯುವ ಸುಬ್ಬಣ್ಣ ಚನ್ನಯ್ಯನಂಥವರ ಬಗೆಗಿದ್ದ ತಾತ್ಸಾರವಿರಲಿಲ್ಲ ಗಂಗಯ್ಯನಲ್ಲಿ ಶಾಂತಪ್ಪನಿಗೆ. ಆದರೂ ಆ ನಂಬಿಕೆಯನ್ನು ಹೊರಪಡಿಸದೇ,

“ಅದಿರಲೀ......ಸುಬ್ಬಣ್ಣನವರು ಹೋಗಿ ಹಾಗೆ ಚಾಡಿ ಹೇಳಿದಾರೇಂತ ನಿನಗೆ ಹೇಗೆ ತಿಳೀತಪ್ಪ ?” ಎಂದ.

“ನಾನು ನೆನ್ನೆ ಬೆಂಗಳೂರಿಗೆ ಹೋಗಿಬಂದ್ದೆ ಸಾರ್, ಸಾವಕಾರ್ರನ್ನು ನೋಡಿದ್ದೆ. ನಿಮ್ಮ ವಿಷಯದಲ್ಲಿ ತುಂಬಾ ‘ರಾಂಗಾ’ಗಿದ್ದರು. ನಾನೇ ಸಮಾಧಾನ ಮಾಡಿದೆ. ಆಗ ಎಲ್ಲಾ ತಿಳೀತು.”

ಗಂಗಯ್ಯನ ಮಾತು ಕೇಳಿ ಶಾಂತಪ್ಪ ತಲೆ ತಗ್ಗಿಸಿಕೊಂಡು ನಡೆಯ

ತೊಡಗಿದ, ಅವನ ತಗ್ಗಿಸಿದ ತಲೆಯುಲ್ಲಿ ಚಿಂತನೆಗಳೇಳುತ್ತಿದ್ದುವು, ಧೂಳಿನ ರಸ್ತೆಯನ್ನೇ ನೋಡುವಂತಿದ್ದ ಆ ಕಣ್ಣುಗಳಲ್ಲಿ ಚಿಂತನೆಯ ಛಾಯೆಯಿದ್ದಿತಾದರೂ, ಗಂಗಯ್ಯನಿಗದು ಕಾಣಲಿಲ್ಲ.

"ತಾವು ಯಾವ ಪೈಕಿಯವರು ಸಾರ್?" ಗಂಗಯ್ಯ ಇದ್ದಕ್ಕಿದ್ದಂತೆ ಕೇಳಿದ.

ಯಾವ ಪೈಕಿ! ಇಲ್ಲಿಯೂ ಅದೇ ಪ್ರಶ್ನೆ, ಗಂಗಯ್ಯ ಬೆಂಗಳೂರಿನವನು, ಅವನಲ್ಲಿ ಜಾತಿಮತಗಳಲ್ಲಿ ನಂಬುಗೆ ಕಡಿಮೆಯಿರಬಹುದೆಂದುಕೊಂಡಿದ್ದರೆ ಅವನಲ್ಲಿಯೂ ಇದ್ದೇ ಇದೆ ಈ ಭಾವನೆ. ಬೆಂಗಳೂರಿನವನಾದರೇನು, ಬೊಂಬಾಯಿನವನಾದರೇನು ಜಾತೀಯತೆಗೆ ನಾಗರೀಕತೆಯ ಕಟ್ಟಿಲ್ಲ. ಆದರೆ ಪುನಃ ಅದೇ ಸುಳ್ಳು ಹೇಳಬೇಕಾಗಿದ್ದಿತು, ತಾನು ಬ್ರಾಹ್ಮಣನೆಂದು. ಅವನನ್ನು ಗಣಿಯವರಾದರೂ ಈ ಪ್ರಶ್ನೆಯನ್ನು ಕೇಳಿದಾಗ ಅವನಲ್ಲಿರುವ ಶಿವತ್ವ ಚೇತನಗೊಂಡಂತಾಗಿದ್ದಿತು ಆದರೆ ಒಮ್ಮೆ ಹೇಳಿದ ಸುಳ್ಳನ್ನು ಪಾಲಿಸಿಕೊಂಡೇಬರಬೇಕಾಗಿದ್ದಿತವನು.

"ನಾವೂ ಬ್ರಾಹ್ಮಣರು!" ಎಂದ. ಹಾಗೆ ಉತ್ತರಿಸುವುದೇ ಅವನಿಗೊಂದು ಮೋಜು.

"ಹಾಗಾದರೆ ಸರಿ........ಶಾಂತಪ್ಪ ಎಂದರೆ ಲಿಂಗಾಯಿತರ ಹೆಸರು ಇದ್ದ ಹಾಗೆ ಇದೆ. ಆದ್ದರಿಂದ ಕೇಳಿದ್ದು."

"ಅದು ಸರೀನೆ. ನನ್ನ ಮೊದಲಿನ ಹೆಸರು ಶಾಂತಾರಾಮ ಅಂತ. ಆದರೆ ಮೊದಲಿನಿಂದಲೂ ಶಾಂತ, ಶಾಂತಪ್ಪ, ಶಾಂತಣ್ಣ ಅಂತಾನೇ ನನ್ನ ಕರೀತಾಬಂದುಬಿಟ್ಟರು. ಅದಕ್ಕೇ ಶಾಂತಪ್ಪ ಅನ್ನೋ ಹೆಸರು ನಿಂತು ಹೋಯ್ತು" ತನ್ನ ಸುಳ್ಳಿನ ಸರಪಳಿಗಳಿಗೆ ತಾನೇ ಮನಸ್ಸಿನಲ್ಲಿ ನಗುತ್ತಾ ನುಡಿದ.

ಒಂದೆರಡು ನಿಮಿಷ ಹಾಗೆಯೇ ನಡೆದನಂತರ ರಂಗಯ್ಯ ಎದುರಿಗೆ ಬೆರಳು ತೋರಿಸುತ್ತಾ ಹೇಳಿದ,

"ಅದೇ ಸಾರ್ ಕರಡಿ ಮಠ........ಅದರ ಹಿಂದುಗಡೆ ಕಾಣುತ್ತೆ ನೋಡಿ ಅದೇ ಕರಡಿ ಗುಡ್ಡ."

ಎದುರಿನಲ್ಲಿ ರಸ್ತೆಯು ಕವಲೊಡೆದು ಕಾಲುಹಾದಿಯೊಂದು ಹೋಗಿದ್ದಿತು. ಆ ಕಾಲುಹಾದಿಯು ಮಠಕ್ಕೆ ಕರೆದೊಯ್ಯುತ್ತಿದ್ದಿತು. ಮಠದ

ಸುಣ್ಣ ಬಳಿದ ಬಿಳಿ ಗೋಡೆಗಳೂ, ಅದರ ಮೇಲೆ ಮಲಗಿದ್ದ ಬಿಳಿ ಬಸವನ ವಿಗ್ರಹವೂ ದೂರದಿಂದಲೇ ಗೋಚರವಾಗುತ್ತಿದ್ದಿತು. ಮಠದ ಎದುರಿದಲ್ಲಿ ಇಪ್ಪತ್ತು ಮೂವತ್ತು ಗಜ ದೂರದಲ್ಲಿ ಗುಡಿಸಲುಗಳು ನಾಲ್ಕಾರು ಕಾಣುತ್ತಿದ್ದುವು. ಮಠದ ಸುತ್ತಲೂ ನೂರಾರು ತೆಂಗಿನ ಮರಗಳೂ, ಹೊಲದಲ್ಲಿ ತೆನೆ ತೂಗಾಡುತ್ತಿದ್ದ ಜೋಳದ ಗಿಡಗಳೂ ಕಾಣುತ್ತಿದ್ದುವು.

"ಆ ಜಮೀನೆಲ್ಲಾ ಮಠದ್ದೇ ಸಾರ್....ಸುಮಾರು ಎಂಟುನೂರು ತೆಂಗು ಇದೆ" ಎಂದ ಗಂಗಯ್ಯ.

"ಎಂಟು ನೂರು ತೆಂಗು! ಅಂದರೆ ಸುಮಾರು ಎಂಭತ್ತು ಸಾವಿರ ರೂಪಾಯಿ ಆಸ್ತಿ ಆಂಸ್ತಲ್ಲಾ ಪರವಾಗಿಲ್ಲ ಈ ಸಣ್ಣ ಮಠಕ್ಕೆ ಅಷ್ಟೊಂದು ಆಸ್ತಿ."

"ಅಷ್ಟೇ ಅಲ್ಲ ಸಾರ್........ಇನ್ನೂರು ಮುನ್ನೂರು ಎಕ್ರೆ ಹೊಲ ಇದೆ."

"ಓ....ಹಾಗೋ."

"ಇನ್ನೂ ಬಹಳ ವಿಷಯಗಳಿವೆ ಸಾರ್, ನಿಧಾನವಾಗಿ ಹೇಳ್ತೀನಿ" ಎಂದು ಗಂಗಯ್ಯ ಅರ್ಥಗರ್ಭಿತವಾಗಿ ನಕ್ಕ.

ಅವರು ಮಠಕ್ಕೆ ಬಂದಾಗ, ಗುಡಿಸಲುಗಳು ದೊಡ್ಡವಾಗಿ ಒಳಗೆ ಮನೆಯಂತೆಯೇ ಓರಣವಾಗಿದ್ದುದೂ ಕಾಣಿಸಿತು. ಸಾಹುಕಾರರು ತಮಗಾಗಿಯೇ ನಿಯಮಿಸಿಕೊಂಡಿದ್ದ ಒಬ್ಬ ಅಡಿಗೆಯವನೂ, ಒಬ್ಬ ಘೂರ್ಖ ಕಾವಲುಗಾರನೂ ಇದ್ದ ಅಲ್ಲಿ. ಶಾಂತಪ್ಪ ಅಲ್ಲಿಗೆ ಬರುತ್ತಿದ್ದಂತೆಯೇ ಅಡಿಗೆಯವನು ಒಳಗಿನಿಂದ ಬಂದು ವಂದಿಸಿದ, ದೂರದಲ್ಲಿ ಜೋಳದ ಬೆಳೆಯ ಬಳಿಯಿದ್ದ ಘೂರ್ಖನೂ ಓಡುತ್ತಾ ಬಂದು 'ಮಿಲಿಟರಿ ಸಲಾಂ' ಹಾಕಿದ. ಶಾಂತಪ್ಪ ಅವರಿಬ್ಬರನ್ನೂ ಮಾತನಾಡಿಸಿದ:

"ನಮಸ್ಕಾರ....ನಿಮ್ಮ ಹೆಸರೇನಪ್ಪ?"

"ನನ್ನ ಹೆಸರು ಕೃಷ್ಣ."

"ನಿನ್ನ ಹೆಸರೇನಪ್ಪ?"

"ರಾಜಬಹದ್ದೂರ್ ಸಾರ್" ಎಂದ ಘೂರ್ಖ. ಅವನ ಕನ್ನಡದಲ್ಲಿ ಹಿಂದಿಯ ಶಬ್ದದ ರಾಗವಿದ್ದಿತು.

"ಬನ್ನಿ ಸಾರ್, ಏಳಿ ಊಟ ಮಾಡಿಬಿಡಿ" ಎಂದ ಕೃಷ್ಣ,

"ಇಲ್ಲಪ್ಪ. ಈಗ ಬೇಡ. ಮೊದಲು ಗಣೇಗೆ ಹೋಗಿಬರುತೀನಿ."

"ಛೆ, ಛೆ, ಎಲ್ಲಾದರೂ ಉಂಟೆ. ಮೊದಲು ಊಟ ಮಾಡಿಬಿಡಿ ಸಾರ್. ಆಮೇಲೆ ಗಣೀಗೆ ಹೋಗಿ ನಿಧಾನವಾಗಿ ಬರೋಣ" ಎಂದ ಗಂಗಯ್ಯ.

ಶಾಂತಪ್ಪ ಬಲವಂತ ಮಾಡಿ ಗಂಗಯ್ಯನಿಗೂ ಊಟ ಮಾಡಿಸಿದ ನಂತರ, ಅವನು, ಗಂಗಯ್ಯ, ರಾಜಬಹದ್ದೂರ್, ಮೂವರೂ ಗಣಿಗೆ ಹೊರಟರು. ಅವರು ಗುಡಿಸಿಲಿನಿಂದ ನಾಲ್ಕಾರು ಹೆಜ್ಜೆ ಮುಂದೆ ನಡೆದಿದ್ದಾಗ,

ಏನಪ್ಪಾ ಬಹದ್ದೂರ್. ಯಾರೋ ಹೊಸಬರು ಬಂದಂತಿದೆ" ಎಂಬ ಶಬ್ದ ಕೇಳಿ ಅವರು ಅಲ್ಲಿಯೇ ನಿಂತರು. "ಓ....ಅವರೇ ಸ್ವಾಮಿಗಳು" ಎಂದು ಮೆಲ್ಲನೆಂದ ಗಂಗಯ್ಯ.

ಸ್ವಾಮಿಗಳು ಹತ್ತಿರ ಬಂದಂತೆ ಅವರನ್ನೇ ಕೂಲಂಕಷವಾಗಿ ನೋಡಿದ ಶಾಂತಪ್ಪ. ಅವರಿಗೆ ಸುಮಾರು ಐವತ್ತು ವಯಸ್ಸಾಗಿದ್ದಿತು. ಕಾಲಿಗೆ ಪಾದುಕೆಗಳನ್ನು ಮೆಟ್ಟಿಕೊಂಡಿದ್ದರು. ಉದ್ದವಾದೊಂದು ಕಾವಿಯ ಕಫನಿಯನ್ನು ಧರಿಸಿದ್ದರು. ಕಂಠದಲ್ಲಿ ಕಾವಿಯ ವಸ್ತ್ರದಲ್ಲಿಯೇ ಅಡಗಿಸಿದ್ದ ಶಿವಲಿಂಗವನ್ನು ಬಿಗಿದಿದ್ದರು. ಬಿಳಿದಾದ ಆ ಮುಖದಲ್ಲಿ ಬೆಳೆದ ಕಪ್ಪುಗೂದಲಿನ ಗಡ್ಡ ಮೀಸೆಗಳಿದ್ದುವು. ತಲೆಯಲ್ಲಿಯೂ ಜಟೆಯಿದ್ದಿತು. ನವುರಾಗಿ ತಲೆಗೂದಲನ್ನು ಬಾಚಿದ್ದರು. ಮುಖದಲ್ಲಿ ವಿಭೂತಿಯ ಮೂರು ಪಟ್ಟಿಗಳಿದ್ದುವು. ಅವರನ್ನು ನೋಡುತ್ತಿದ್ದಂತೆಯೇ, ಆ ವಯಸ್ಸಿನಲ್ಲಿಯೇ ಸಂಸಾರ ಪರಿತ್ಯಾಗ ಮಾಡಿ ನಿರ್ಲಿಪ್ತರಾಗಿದ್ದ ಅವರ ಬಗ್ಗೆ ಗೌರವಭಾವವೊಂದು ಮೂಡಿಬಂದಿತು ಶಾಂತಪ್ಪನಲ್ಲಿ.

"ನಮಸ್ಕಾರ" ಎಂದು ಎರಡೂ ಕೈಯೆತ್ತಿ ನಮಸ್ಕರಿಸಿದ ಶಾಂತಪ್ಪ.

"ಇವರು ನಮ್ಮ ಹೊಸ ಮೇನೇಜರು ಸ್ವಾಮಿಗಳೇ" ಗಂಗಯ್ಯ ಪರಿಚಯ ಮಾಡಿಸಿದ.

"ಸಂತೋಷ....ಶಿವ ಒಳ್ಳೇದು ಮಾಡಲಿ" ಎಂದು ಶಾಂತಪ್ಪನ ಮುಖ ನೋಡಿದರು, ಹಸನ್ಮುಖಿಗಳಾಗಿ.

"ಈಗ ಗಣಿಗೆ ಹೋಗಿಬನ್ತೀನೆ ಸ್ವಾಮಿಗಳೇ. ಸಾಯಂಕಾಲ ತಮ್ಮ ದರ್ಶನಕ್ಕೆ ಬರ್ತೀನಿ. ಕ್ಷಮಿಸಿ" ಎಂದು ಪುನಃ ಕೈಮುಗಿದು ಶಾಂತಪ್ಪ ಅವರ ಅಪ್ಪಣೆ ಬೇಡಿದ.

"ಆಗಲಿ ಹೋಗಿಬನ್ನಿ" ಎಂದರು ಸ್ವಾಮಿಗಳು.

* * * *

ಶಾಂತಪ್ಪ ಗಣಿಯನ್ನೆಲ್ಲಾ ಪರಿಶೀಲಿಸುತ್ತಿದ್ದ. ಹಲವೆಡೆ ಗಣಿಗಳು ಅಸಮರ್ಪಕವಾಗಿದ್ದುವು. ಹಲವೆಡೆಗಳಲ್ಲಿ ಅಪಾಯಕರವಾಗಿದ್ದುವು. ಅದಿರಿನಲ್ಲಿಯೂ ಹಲವು ಅಸ್ವಚ್ಛ ಅದಿರನ್ನೇ ಸ್ವಚ್ಛವಾದುದೆಂದು ತೆಗೆದು ರಾಶಿಗಟ್ಟಿದ್ದರು. ಶುದ್ಧವಾದ ಉತ್ತಮ ದರ್ಜೆಯ ಅದಿರು ದೊರೆವ ಹಲವು ಪ್ರದೇಶಗಳನ್ನು ಅನುಪಯೋಗಿ ಎಂದು ಬಿಟ್ಟುಬಿಡಲಾಗಿತ್ತು. ಇವೆಲ್ಲಕ್ಕೂ ಉಚಿತ ಸಲಹೆಗಳನ್ನಿತ್ತ ಅವನು.

"ನೋಡಿ ಸಾರ್, ಇದೇ ಮೊನ್ನೆ ಸುಬ್ಬಣ್ಣನೋರು ಅಳತೆ ತೆಗೆದುಕೊಂಡ ರಾಶಿ," ಎಂದು ಗಂಗಯ್ಯ ಶಾಂತಪ್ಪನಿಗೊಂದು ಅದಿರಿನ ರಾಶಿಯನ್ನು ತೋರಿಸಿದ ಶಾಂತಪ್ಪ ಆ ರಾಶಿಯ ಅಳತೆ ತೆಗೆದುಕೊಂಡ. ಹಲವು ಭಾಗಗಳಲ್ಲಿ ಕೆಲವು ತುಣುಕುಗಳನ್ನು ತೆಗೆದುಕೊಂಡು ಅವರ ದರ್ಜೆಯನ್ನು ಪರಿಶೀಲಿಸಿದ. ನಾಲ್ಕಾರು ಬಾರಿ ಅಳತೆ ಮಾಡಿ ಗುಣಿಸಿ, ಹಲವು ಭಾಗಗಳಲ್ಲಿ ಅದಿರಿನ ತುಣುಕುಗಳನ್ನು ಪುನಃ ತೆಗೆದುಕೊಂಡು ನೋಡಿದ.

ಶಾಂತಪ್ಪನಿಗೆ ಆಶ್ಚರ್ಯವಾಯಿತು. ಗಂಗಯ್ಯ ಹೇಳಿದಷ್ಟೇ ಪ್ರಮಾಣದ ಅದಿರಿದ್ದಿತು, ಅದು ಉತ್ತಮ ದರ್ಜೆಯದೂ ಆಗಿದ್ದಿತು. ಆದರೆ ಸುಬ್ಬಣ್ಣ ಅದನ್ನು ಕಡಿಮೆ ಪ್ರಮಾಣದ, ಕಡಿಮೆ ದರ್ಜೆಯ ಅದಿರೆಂದು ಹೇಳಿ, ಹಣ ಕೊಟ್ಟಿದ್ದ. ಇದು ಅನ್ಯಾಯ, ದುರುದ್ದೇಶಪೂರ್ಣ ಕೃತಿಯೆಂದು ಸ್ಪಷ್ಟವಾಗಿದ್ದಿತು. ಸುಬ್ಬಣ್ಣ ಇಂತಹ ಕ್ಷುದ್ರಜಾತಿಯವನೆ, ಸಾಹುಕಾರರು ಎಷ್ಟೊಂದು ನಂಬಿಕೆಯಿಟ್ಟಿದ್ದಾರೆ ಅವನಲ್ಲಿ, ಆದರೂ ಈ ಅನ್ಯಾಯವೇ? ಇಂತಹ ಅನ್ಯಾಯವನ್ನು ಮಾಲೀಕರು ಗೌರವಿಸುತ್ತಾರಲ್ಲ. ಇದೇನಿದು ವಿಚಿತ್ರ ರಾಜಕೀಯ ಈ ಗಣಿಯಲ್ಲಿ? —ಶಾಂತಪ್ಪ ಮನಸ್ಸಿನಲ್ಲಿಯೇ ನೊಂದುಕೊಂಡರೂ,

"ನೋಡುವುದಕ್ಕೇನೋ ಉತ್ತಮವಾಗಿ ಕಂಡರೂ ಕೆಲವು ಅದಿರು ಬಹಳ ಕಡಿಮೆ ದರ್ಜೆಯವೇ ಆಗಿರುತ್ವೆ ಗಂಗಯ್ಯ" ಎಂದ.

"ಹಾಗೂ ಹೇಳಬಹುದು ಅಂತ ಅನುಮಾನ ಬಂದೇ ನಾನು ಸ್ವಲ್ಪ ಸ್ಯಾಂಪಲ್ ತಗೊಂಡು ಅನಲೈಸ್ ಮಾಡಿಸಿದೀನಿ ಸಾರ್" ಎಂದು ಗಂಗಯ್ಯ ತನ್ನ ಜೇಬಿನಿಂದ ರಸಾಯನಿಕ ಮಂದಿರವೊಂದರಿಂದ ಬಂದ ಪತ್ರ ಒಂದನ್ನು ತೆಗೆದು ತೋರಿಸಿದ. ಅದಿರಿನ ಆ ರಸಾಯನಿಕ ವಿಭಜನಾ ಪತ್ರ (Analytical Report) ವನ್ನು ನೋಡಿದ ಶಾಂತಪ್ಪನಿಗೆ ಬಾಯಿನಿಂದ ಮಾತೇ ಹೊರಡಲಿಲ್ಲ. ಮ್ಯಾಂಗನೀಸಿನ ಪ್ರಮಾಣವೇ ಹೆಚ್ಚಾಗಿದ್ದಿತಾ ಪತ್ರ

ದಲ್ಲಿ. ಗಂಗಯ್ಯನ ಒಂದೊಂದು ಶಬ್ದವೂ ಸತ್ಯವಾಗಿದ್ದಿತಾದ್ದರಿಂದ, ತನ್ನ ಕಂಪೆನಿಯ ಕೆಲಸಗಾರರೆಂಬ ಅಭಿಮಾನದಿಂದಲೇ ಅವರನ್ನು ಹುದುಗಿಸಿಟ್ಟು ಮಾತನಾಡುವುದವನಿಗೆ ಸಾಧ್ಯವಿಲ್ಲವಾಯಿತು.

"ಹೋಗಲಿ ಗಂಗಯ್ಯ, ಈ ರಾಶೀನ ಲಾರಿಗಳಿಗೆ ತುಂಬಿಸೋದಿಲ್ಲ. ಇದನ್ನ ಸಾವಕಾರ್ರು ಬಂದ ಮೇಲೆ ತೋರಿಸು. ಅವರೇ ಹೇಗೆ ತಿಳಿಯುತ್ತೋ ಹಾಗೆ ಹೇಳಲಿ. ನಂಗೇನೋ ಸುಬ್ಬಣ್ಣನೋರು ಹೇಳೋದು ಸರಿಯಾಗಿ ದೇಂತ ತೋರುತ್ತೆ" ಎಂದ ಶಾಂತಪ್ಪ.

"ಹೌದು ಸಾರ್....ನೀವು ಹಾಗೇ ಹೇಳಬೇಕು. ನೀವು ನಿಮ್ಮ ಕಂಪೆನಿಯವರನ್ನ ಬಿಟ್ಟುಕೊಡೋದಿಲ್ಲ. ನಿಮಗೆ ಸುಬ್ಬಣ್ಣನ ಮಾತು ಸುಳ್ಳು ಅನ್ನೋದು ಗೊತ್ತಿದ್ದರೂ ಅವರನ್ನ ಸರಿ ಅಂತೀರಾ........ಇರಲಿ ಸಾವಕಾರ್ರು ಬರ್ತಾರಲ್ಲ. ನೋಡೇಬಿಡ್ತೀನಿ" ಎಂದ ಗಂಗಯ್ಯ ಒಂದು ಕ್ಷಣ ಸುಮ್ಮನಿದ್ದು ಪುನಃ ಕೇಳಿದ,

"ಸಾರ್ ದಯವಿಟ್ಟು. ಕೈಮುಗಿದು ಕೇಳಿಕೊಳ್ತೀನಿ ಹೇಳಿ ಸಾರ್, ನಾನೇನಾದರೂ ಸುಳ್ಳು ಹೇಳಿದೀನ? ಸುಳ್ಳಾಗಿದ್ದರೆ ಇಲ್ಲೇ ಹೇಳಿಬಿಡಿ. ನಾನು ನಿಮ್ಮ ಮಾತು ನಂಬಿಕೊಂಡುಬಿಡ್ತೀನಿ. ಸಾವಕಾರ್ರ ಹತ್ರ ಹೋಗೋಲ್ಲ. ಅಳತೇನಾಗಲೀ, ಗ್ರೇಡಾಗಲೀ ಕಡಿಮೆಯಿದ್ರೆ ಕೆರ್ದಿಂದ ಹೊಡೀರಿ ಸಾರ್ ನಂಗೆ."

ಶಾಂತಪ್ಪನಿಗೆ ತನ್ನ ಹೃದಯವನ್ನೇ ಹೊಕ್ಕು ಗಂಗಯ್ಯ ಪರೀಕ್ಷಿಸುತ್ತಿರುವನೆನ್ನಿಸಿತು. ಅಡಿಕೆಗತ್ತರಿಯ ಮಧ್ಯೆ ಸಿಕ್ಕಿಕೊಂಡಂತಾಯ್ತು ಅವನ ಸ್ಥಿತಿ; ಒಂದೆಡೆ ಸ್ವಸಂಸ್ಥಾಭಿಮಾನ ಅವನನ್ನು ಹಿಡಿದಿದ್ದಿತು, ಮತ್ತೊಂದೆಡೆ ತಮ್ಮನ್ನೇ ಅವಲಂಬಿಸಿದವನ ಸತ್ಯತೆಯೂ ಒತ್ತುತ್ತಿದ್ದಿತು. ಯಾವೊಂದು ಭಾಗದಿಂದ ಮುಂದುವರೆದರೂ ಅವನ ಮನಸ್ಸಿಗೆ ಇಲ್ಲವೇ ಹೃದಯಕ್ಕೆ ತೊಂದರೆಯಾಗುತ್ತಿದ್ದಿತು. ಕೊನೆಗವನೆಂದ,

"ನನಗೊಂದೂ ಗೊತ್ತಿಲ್ಲ...........ಸಾಹುಕಾರ್ರ ಹತ್ತಿರ ಮಾತಾಡಬೇಕಾದ್ರೆ!" ಹಾಗೆಂದರೂ ಶಾಂತಪ್ಪ ಒಂದು ರೀತಿಯಲ್ಲಿ ತನ್ನ ನಿರ್ಣಯವನ್ನು ತಿಳಿಸಿದಂತೆಯೇ ಆಗಿತ್ತು.

"ಆ ಸುಬ್ಬಣ್ಣ ಇನ್ನೊಂದು ಸಲಾ ನನ್ನ ಗಣೀ ಹತ್ರ ಕಾಲಿಡಲಿ ಸಾರ್, ನೋಡಿ ಬೇಕಾದರೆ ಅವನ ಬುರ್ಡೆಗೆ ಬಿಸಿನೀರು ಕಾಯಿಸದಿದ್ದರೆ ನನ್ನ ಹೆಸರು ಗಂಗಯ್ಯನೇ ಅಲ್ಲ!" ಎಂದು ಗಂಗಯ್ಯ ಕೋಪಾವಿಷ್ಟನಾಗಿ ನುಡಿದ.

"ನಿನಗೆ ಜ್ಞಾನಗೀನ ನೆಟ್ಟಗಿದೇ ತಾನೆ?" ಶಾಂತಪ್ಪನೂ ಕೆರಳಿಯೇ ಕೇಳಿದ. ತನ್ನ ಕಂಪೆನಿಯವರ ವಿಷಯದಲ್ಲಿ ಹಾಗೆ ನುಡಿದವನು ತನ್ನ ವಿಷಯದಲ್ಲೂ ಹಾಗೆಯೇ ಮತ್ತೊಂದು ದಿನ ಹೇಳಬಹುದು. ತಮ್ಮ ಕಂಪೆನಿಯಲ್ಲಿಯೇ ಹಣ ಪಡೆದು ಜೀವಿಸುವ ಈತನು ಹೀಗೆ ನಾಲಿಗೆ ಸಡಿಲಿಸಿ ಮಾತನಾಡುವುದು ಅಸಹನೀಯವೆಂದವನೆಂದುಕೊಳ್ಳುತ್ತಿರುವಾಗಲೇ,

"ತಮಗೇನೋ ಕೋಪ ಬರೋದು ನಿಜ ಸಾರ್....ಆದರೆ ನಾನು ಬೆಂಗಳೂರು ಬಿಟ್ಟು ಸಾವಕಾರನ್ನೇ ನಂಬಿಕೊಂಡು ಬಂದೆ. ಬರುವಾಗ, ಅಲ್ಲಿ ಬಸವನಗುಡಿಯಲ್ಲಿ ಗಾರೆ ಕೆಲಸ ಮಾಡಿಸ್ತಿದ್ದೆ. ಅದನ್ನೆಲ್ಲಾ ಬಿಟ್ಟುಬಿಡು, ನಿನ್ನ ಆಳುಗಳನ್ನು ಕರಕೊಂಡು ಗಣೀಗೆ ಬಂದುಬಿಡು ಸಾವಿರ ರೂಪಾಯಿ ಲಾಭವಾಗುತ್ತೆ ಅಂತ ಸಾವಕಾರು ಹೇಳಿದರು, ಬಂದುಬಿಟ್ಟೆ ಇಲ್ಲೀಗೆ ಬರುವಾಗ ನನ್ನ ಹೆಂಡ್ತೀ ಕೈಸಲ್ಲಿದ್ದ ಬಳೆ ಮಾರಿ ಬಂದೆ, ಅವಳ ಕೈಲೂ ರಂಪಮಾಡಿಕೊಂಡು ಬಂದೆ. ಇಲ್ಲಿ ಬಂದು ಐದು ವಾರ ಆಯ್ತು ಸಾರ್, ಪ್ರತಿ ವಾರವು ಈ ಸುಬ್ಬಣ್ಣ ಹೀಗೇನೆ ಕಡಿಮೆ ಮಾಡ್ತಿದಾನೆ ಸಾರ್....ಪ್ರತಿವಾರಾನೂ ಕೂಲಿಯೋರಿಗೆ ನಾಲ್ಕು ದಿನ, ಐದು ದಿನದ್ದೇ ಕೂಲಿ ಕೊಟ್ಟಿರೋದು. ನನಗೆ ಹೊಟ್ಟೆ ಉರಿಯೋದಿಲ್ಲವೆ ಸಾರ್ ?"

ಶಾಂತಪ್ಪ ಸುಮ್ಮನೆ ಮಾತು ಕೇಳುತ್ತಾ ನಿಂತಿದ್ದ. ಗಂಗಯ್ಯ ಪುನಃ ಹೇಳಿದ.

"ತಾವು ನನ್ನ ಗುಡಿಸಲಿಗೆ ಬಂದು ನೋಡಿ ಸಾರ್ ಬೇಕಾದ್ರೆ, ನಿನ್ನೆಯಿಂದ ಅಡಿಗೆ ಮಾಡಿಲ್ಲ! "

"ಆ್ಞ!" ಶಾಂತಪ್ಪನಿಗೆ ಹೊಟ್ಟೆಯನ್ನು ಹಿಚುಕಿದಂತಾಯ್ತು.

" ಹೌದು ಸಾರ್. ಮರ್ಯಾದೆ ಉಳಿಸಿಕೊಳ್ಳೋಕೆ ಕೂಲಿಯೋರಿಗೆ ಈ ವಾರ ಪೂರ್ತಿ ಬಟವಾಡೆ ಮಾಡಿಬಿಟ್ಟೆ. ನನಗೆ ಒಂದಾಣೇನೂ ಉಳೀಲಿಲ್ಲ"

ಶಾಂತಪ್ಪನಿಗೂ ಸಂಕಟವಾಯಿತು. ಪುನಃ ಗಂಗಯ್ಯನೇ ಹೇಳಿದ.

" ನಾನು ಬಡವ ಸಾರ್, ಚನ್ನಯ್ಯನಷ್ಟು ಭಾರಿ ಕಂಟ್ರಾಕ್ಟರಲ್ಲ ಆದರೆ ನಾನು ಮರ್ಯಾದೇಗೆ ಪ್ರಾಣಬಿಡೋನು. ನನ್ನ ಮಗಳು ಒಂದು ಹುಡುಗಿಯಿದೆ, ಅದಕ್ಕೆ ಈ ವರ್ಷ ಮದ್ವೆ ಮಾಡಬೇಕೊ ಅಂತಿದ್ದೆ ಸಾರ್. ಅಷ್ಟೊತ್ತಿಗೆ ಸರಿಯಾಗಿ ಸಾವಕಾರ್ರು ಈ ಗಣಿ ಕಂಟ್ರಾಕ್ಟು ಕೊಡ್ತೀನಿ, ಕೆಲ

ಸಾನೆಲ್ಲ ಬಿಟ್ಟುಬಾಂತ ಹೇಳಿದ್ದಕ್ಕೆ ಬಂದೆ. ಸಾವಿರಾರುರೂ. ಸಂಪಾದನೆಯಾದರೆ ಆ ಹುಡುಗೀದು ಮದುವೆ ಮಾಡೋಣಾಂತ ಆಸೆಯಿತ್ತು. ಆದರೆ ಈಗ ನನಗೇ ಹಿಟ್ಟಿಲ್ಲ ಇಲ್ಲಿ....ಈ ಮುಖವನ್ನ ಹೆಂಡತಿ ಮಕ್ಕಳಿಗೆ ಹೇಗೆ ತೋರಿಸ್ಲಿ ಸಾರ್?"

ಗಂಗಯ್ಯ ಕೊನೆಯ ಮಾತನ್ನು ಹೇಳುತ್ತಿದ್ದಂತೆಯೇ ಅವನ ಮುಖದಲ್ಲಿ ಅಸಹ್ಯವಾದೊಂದು ಸಂಕಟದ ಛಾಯೆ ಕಾಣಿಸಿಕೊಂಡು ಫಳಕ್ಕನೆ ಕಣ್ಣಿನಲ್ಲಿ ನೀರು ತುಂಬಿ ಕೊಂಡಿತು. ಗಂಗಯ್ಯ ತಕ್ಷಣ ತಲೆತಗ್ಗಿಸಿಕೊಂಡ, ಕಣ್ಣೀರು ಶಾಂತಪ್ಪನಿಗೆ ಕಾಣದಿರಲೆಂದು. ಶಾಂತಪ್ಪನಿಗೂ ಸಹ ಗಂಗಯ್ಯನ ಆ ಪರಿಸ್ಥಿತಿಯನ್ನು ಕಂಡು ಸಂಕಟವಾಯಿತು. ಸತ್ಯ ಜೀವಿಯು ಸಂಕಟವನ್ನೇ ಅನುಭವಿಸಬೇಕು, ಆಘಾತವನ್ನೇ ಉಣಬೇಕು; ಅವನು ಸಿರಿವಂತಿಕೆಯ, ಸಹಸ್ರ ಸಂಪತ್ತಿನ, ಯಾವ ಆಸೆಯನ್ನೂ ಕಾಣಲಾರ, ಗಂಗಯ್ಯನೂ ಸಹ ಚನ್ನಯ್ಯನಂತೆ ಭಾರಿ ಕಂಟ್ರಾಕ್ಟರನಾಗಬೇಕಾಗಿದ್ದರೆ ಅವನೂ ಸಹ ದ್ರೋಹ, ವಂಚನೆ, ವ್ಯಭಿಚಾರಗಳ ಮಾಯಾಜಾಲವನ್ನೇ ಹೂಡಬೇಕಾಗಿದ್ದಿತು. ಆಗಲೇ ಅವನು ಬಡತನದ ಕಮರಿಯಿಂದ ಸಿರಿತನದ ಗುಡ್ಡವೇರುತ್ತಿದ್ದ. ಆದರೆ ಮರ್ಯಾದೆಯೆಂದುಕೊಂಡುದರಿಂದಲೇ ಅವನು ಬಡತನದ ಗುಡಿಸಿಲಿನಲ್ಲಿರುವುದು, ಮರ್ಯಾದೆಯನ್ನು ಮರೆತರೆ ತಾನೇ ಮಹಲು? ತಾನು ಸತ್ಯವಂತನಾದರೂ ತನಗೆ ಅನ್ಯಾಯವಾದರೆ ರೌದ್ರ ತಾನೇ ತಾನಾಗಿ ಉಕ್ಕೇರುವುದು ಸಹಜ, ಗಂಗಯ್ಯ ಸುಬ್ಬಣ್ಣನ ಬಗ್ಗೆ ದ್ವೇಷ ತಾಳಿದುದು, ಅದರಿಂದ, ಸಹಜವೇ, ಎಂದು ಶಾಂತಪ್ಪ ಯೋಚಿಸಿದ.

ಅವರು ಹಿಂದಿರುಗುವಾಗ ಬಿಸಿಲು ತಂಪಾಗುತ್ತಿದ್ದಿತು. ಎದುರಿನಲ್ಲಿ ದೂರದಲ್ಲಿ ದೈತ್ಯಾಕಾರವಾಗಿಯೇ ಕಾಣುತ್ತಿದ್ದ ರಾಕ್ಷಸ ಗುಡ್ಡವಿದ್ದಿತು, ಅದೊಂದಕ್ಕೇ ಸೇರಿದಂತಿದ್ದ ಹಲವಾರು ಗುಡ್ಡಗಳು ಉಬ್ಬಿದ್ದುವು. ಈಶ್ವರ ಗುಡ್ಡಕ್ಕೂ ಇತರ ಗುಡ್ಡಗಳಿಗೂ ಮಧ್ಯೆಯಿದ್ದ ಬಾಣಲೆಯಾಕಾರದ ಕಣಿವೆಯಲ್ಲಿ ಹಲವು ಗುಡಿಸಲುಗಳು ಸಣ್ಣ ಹಳ್ಳಿಯಂತೆ ಕಾಣುತ್ತಿದ್ದುವು. ಈಶ್ವರ ಗುಡ್ಡದ ಇಳಿಜಾರಿನ ಮೇಲೆಯೂ ಬಿಲ್ವಪತ್ರೆ ಗಿಡಗಳು ಸಾಲುಗಟ್ಟಿ ಬೆಳೆದಿದ್ದುವು. ಅವುಗಳ ಹಣ್ಣುಗಳು ಗುಂಡುಗಳಂತೆ ನೆಲದಮೇಲೆ ಬಿದ್ದು ಉರುಳುತ್ತಿದ್ದುವು. ಸುತ್ತಲೂ ಬೆಳೆದಿದ್ದ ನೇತ್ರಮಣಿ ಹುಲ್ಲಿನಮೇಲೆ ಬೀಸಿಬರುತ್ತಿದ್ದ ಗಾಳಿಯು ಹುಲ್ಲಿನ ಸುಗಂಧದೊಡನೆ ಮಿಳಿತವಾಗಿದ್ದಿತು. ಆದರೂ ಆ ಗಾಳಿಯಲ್ಲಿ ತುಂಬಿದ್ದ ಬಿಸಿಯು ಗುಡ್ಡಗಳ ಸಿಟ್ಟುಸಿರಿನಂತೆಯೇ ಇದ್ದಿತು. ತನ್ನಲ್ಲಿನ ಕೆಲಸಗಾರರ ಸಂಕಷ್ಟಜೀವನವನ್ನು ಕಂಡು ಅದು ಬಿಸುಸುಯ್ದಂತೆ ತೋರಿತು

ಶಾಂತಪ್ಪನಿಗೆ. ರಾಮುನಾಯ್ಕನ ಹಳ್ಳಿಯಾದರೂ ಗಣಿಗೆ ಎರಡು ಮೂರು ಮೈಲಿ ದೂರದಲ್ಲಿದ್ದಿತು, ಆದ್ದರಿಂದ ನೀರು ಸುಲಭವಾಗಿ ಹಳ್ಳಿಯ ಕೆರೆಯಲ್ಲಿ ದೊರೆಯುತ್ತಿದ್ದಿತು. ಆದರೆ ಈಶ್ವರಗುಡ್ಡದ ಗಣಿಯು ಮಾತ್ರಕ್ಕೆ ನಾಲ್ಕು ಮೈಲಿ ದೂರದಲ್ಲಿದ್ದಿತು ; ಹತ್ತಿರದ ಹಳ್ಳಿಯು ಆರೇಳು ಮೈಲಿ ದೂರದಲ್ಲಿಯೇ ಇದ್ದಿತು. ಆದ್ದರಿಂದಲೇ ಸುತ್ತಲಿನ ಪ್ರದೇಶದಲ್ಲಿ ಜಲ ದೊರೆಯುವುದು ತೊಂದರೆಯಾಗಿ ಕೆಲಸಗಾರರು ಒಂದು ಕೊಡ ನೀರನ್ನು ತಂದುಕೊಂಡು, ಅದರಲ್ಲಿ ಒಂದೊಂದು ಹನಿ ನೀರನ್ನೂ ಚಿನ್ನದ ಹನಿಯಾಗಿ ಭಾವಿಸುತ್ತಿದ್ದರು. ಇಲ್ಲಿನ ಗಣಿಯ ಕಾರ್ಮಿಕನ ಜೀವನವು ಕಷ್ಟ ಚಕ್ರದಲ್ಲಿ ಸಿಕ್ಕಿಕೊಂಡಂತಾಗಿದ್ದಿತು ; ಅದು ರಾಮುನಾಯ್ಕನ ಹಳ್ಳಿಯವರ ಜೀವನಕ್ಕೂ ಹೆಚ್ಚಿನ ದುಃಖಮಯವಾಗಿದ್ದಿತು.

ಶಾಂತಪ್ಪನ ಈ ಹೊಸ ಜೀವನವು ವೈಪರೀತ್ಯದ್ದಾಗಿದ್ದಿತು. ಒಂದೆಡೆ ಕೂಲಿಗಾರರ ಸಂಕಷ್ಟ ಬಾಳುವೆ ಪರ್ವತದಷ್ಟೇ ಹಿರಿದಾಗಿ ಕಣ್ಣೆದುರಿಗೇ ನಿಂತಿದ್ದಿತು. ಮತ್ತೊಂದೆಡೆ ಸಾಹುಕಾರರ ಸಂಪತ್ಸಾಮ್ರಾಜ್ಯವೂ ಪರ್ವತದಷ್ಟೇ ಹಿರಿದಾಗಿದ್ದಿತು. ಈ ಎರಡು ಪರ್ವತಗಳ ನಡುವಣ ಕಣಿವೆಯಂತೆ ಅವನ ಜೀವನವು ಎರಡೂ ತೆರನಾದ ಬಾಳಿಗಂಟಿಕೊಂಡಿದ್ದಿತು; ಕಣಿವೆಯ ನೆಲವು ನಿಧಾನವಾಗಿ ಏರಿ ಪರ್ವತವಾಗಿ ಏರುವಂತೆ ಅವನು ಎರಡೂ ಪರ್ವತಗಳಂತೆ ವರ್ತಿಸುತ್ತಿದ್ದನು, ಪರ್ವತದೊಡನೆ ತಾನೂ ಒಂದು ಶಿಲೆಯಾಗಿರುತ್ತಿದ್ದನು ಎರಡು ಭಾಗದಲ್ಲಿಯೂ ಈ ತನ್ಮಯತೆಯಿದ್ದುದರಿಂದಲೇ ಅವನು ಇತ್ತಂಡಗಳ ಪ್ರೀತಿಯನ್ನೂ ಗಳಿಸಿಕೊಂಡಿದ್ದನು. ಆದರೆ ಅದಾವುದೋ ಒಂದು ಅಂತಶ್ಶಕ್ತಿಯು ಅವನನ್ನು ಹೆಚ್ಚು ಹೆಚ್ಚಾಗಿ ದೀನ ಜನರಲ್ಲಿನ ಪ್ರೀತಿಯನ್ನು ಪರ್ವತವಾಗಿ ಬೆಳೆಸುತ್ತಿದ್ದಿತು. ಅವರನ್ನು ಒಂದೊಂದು ಬಾರಿ ನೋಡಿದಾಗಲೂ ಆ ಪರ್ವತವು ಒಂದೊಂದು ಮಟ್ಟ ಎತ್ತರ ಬೆಳೆಯುತ್ತಿದ್ದಿತು. ತನಗರಿಯದೇ ಪರ್ವತವು ಮುಗಿಲಿಗೆ ಬೆಳೆಯುವಂತೆಯೇ, ಆ ಪ್ರೀತಿ ಅವನಲ್ಲಿ ಬೆಳೆಯುತ್ತಿದ್ದಿತು. ಸಾಹುಕಾರರಲ್ಲಿನ ಭಕ್ತಿ, ಅವರು ನೀಡುವ ವೇತನಕ್ಕೆ ಪ್ರತಿಯಾಗಿ ತನ್ನ ಕರ್ತವ್ಯನಿಷ್ಠೆ, ಇವುಗಳನ್ನವನು ಸಂಪೂರ್ಣವಾಗಿ ಪಾಲಿಸುತ್ತಿದ್ದ; ಅದಕ್ಕಾಗಿ ಅವನು ಹಸಿವುಬಿಸಿಲುಗಳೆನ್ನದೇ, ನೋವುಶ್ರಮಗಳೆನ್ನದೇ ದುಡಿಯುತ್ತಿದ್ದನು. ಆದರೂ ಅವನ ಒಲವು ದೀನದಲಿತರತ್ತಲೇ ಇದ್ದಿತು. ಆದ್ದರಿಂದಲೇ ಅವನು ಗುಡ್ಡಗಾಡಿನ ಸೃಷ್ಟಿ ಸೌಂದರ್ಯವನ್ನು ನೋಡುತ

ನೋಡುತ್ತ ಪ್ರೈಮರೆಯುವಂತೆಯೇ, ಕುಡಿಯ್ಯಲು ನೀರಿಲ್ಲದೇ ಒಣಗಿದ ಗಂಟಲಿನಿಂದಲೇ ಶ್ರಮಿಸುವ ಆಳುಗಳನ್ನು ನೋಡಿ ತನ್ನ ನೀರಿನ ಶೀಶೆಯ ನೀರನ್ನವರಿಗೆ ಕೊಟ್ಟುಬಿಡುತ್ತಿದ್ದ; ಹಾಗೆಯೇ ಸಾಹುಕಾರರಿಗೆ, ಕಂಪೆನಿಗೆ ದ್ರೋಹಮಾಡುವವರನ್ನು ಕಂಡಾಗ ಭುಗ್ಗನೆ ಕೋಪಗೊಳ್ಳುತ್ತಿದ್ದ. ಇವೆರಡೂ ಭಾವನೆಗಳು ಬೇರೆ ಬೇರೆ ವಸ್ತುಗಳಲ್ಲಿದ್ದಂತೆ, ಮ್ಯಾಂಗನೀಸು ಬೆಣಚು ಕಲ್ಲುಗಳಂತೆ, ಒಂದರೊಡನೊಂದು ಹೊಂದಿ ಕೊಳ್ಳುತ್ತಿದ್ದಿಲ್ಲ, ಒಂದರೊಡನೊಂದು ಸಮನ್ವಯಗೊಂಡರೂ ಆ ಮಿಶ್ರಣವು ಬೆಲೆಗೆ ಬರುತ್ತಿರಲಿಲ್ಲ. "ಸಿಲಿಕಾ, ಮ್ಯಾಂಗನೀಸು ಎರಡೂ ಶತ್ರುಗಳಿದ್ದಂತೆ ಸಾರ್," ಎಂದು ಗೋಪಾಲಯ್ಯ ಒಮ್ಮೆ ಅವನಿಗೆ ಹೇಳಿದ್ದ; ಆ ಮಾತುಗಳು ಶಾಂತಪ್ಪನ ಜೀವನಕ್ಕೂ, ಅವನ ಭಾವನೆಗಳಿಗೂ ಅನ್ವಯಿಸಿದಂತೆಯೇ ಇದ್ದುವು.

'ನಿಂಗೇನು ಜ್ಞಾನಗೀನ ಇದೆಯೋ ಇಲ್ಲವೋ' ಎಂದು ಗಂಗಯ್ಯನ ಮೇಲೆ ರೇಗಿದ್ದ ಶಾಂತಪ್ಪನು ಗಂಗಯ್ಯನ ವೇದನಾಮಯ ಕಥೆಯನ್ನು ಕೇಳಿದಾಗ ತಾನೂ ಕಂಬನಿ ಮಿಡಿವ ಸ್ಥಿತಿಗೆ ಬಂದಿದ್ದ.

ಈ ನೀತಿನಿಯಮ ಹೀನ ಆಡಳಿತದ ಅರ್ಥವೇನು? ಈ ಪ್ರದೇಶದ ಸ್ಥಿತಿಗತಿಗಳನ್ನು ನೋಡಿದರೆ ಇಲ್ಲಿ ಆಡಳಿತ ನಡೆಸುವ ಸರ್ಕಾರವೇ ಇಲ್ಲವೇ.... ಇಲ್ಲಿನ ದುರಾಡಳಿತವೆಲ್ಲವೂ ವನರಕ್ಷಕ (ಫಾರೆಸ್ಟ್ ಗಾರ್ಡ್)ನದು ಇಲ್ಲವೇ ದೂರದ ಹಳ್ಳಿ ಪಟೇಲನದು....ಅವರಿಬ್ಬರೂ ತಮಗೆ ತೋರಿದಷ್ಟು ಲಂಚವನ್ನು ಹಿರಿದುಕೊಂಡು ಜನಗಳನ್ನು ಅವರ ಪಾಡಿಗೆ ಅವರನ್ನು ಬಿಟ್ಟು ಬಿಡುತ್ತಿದ್ದಾರೆ, ಅಷ್ಟೆ....ಇದನ್ನು ಳಿದರೆ ಈ ಪ್ರದೇಶದಲ್ಲಿ ಆಡಳಿತ ಯಂತ್ರ ಒಮ್ಮೆಯೂ ಚಲಿಸಿದಂತೆಯೇ ಕಾಣುವುದಿಲ್ಲ....ಹಾಗೆ ಚಲಿಸಿದ್ದರೆ ಈ ಅನಾಗರಿಕ ಪದ್ಧತಿಗಳಿರುತ್ತಿರಲಿಲ್ಲ ಎಂದು ಶಾಂತಪ್ಪ ಚಿಂತಿಸಿದ.

" ಮ್ಯಾನೇಜರು ಬಹಳ ಯೋಚನೇಲಿರೋ ಹಾಗಿದೆ," ಎಂದು ಗಂಗಯ್ಯ ಮಾತು ತೆಗೆದಾಗಲೇ ಶಾಂತಪ್ಪ ಚಿಂತನೆಯ ಸುಳಿಯಿಂದ ಹೊರ ಬಂದುದು.

"ಏನೂ ಇಲ್ಲಪ್ಪ....ಹೀಗೇ ಸುಮ್ಮನೆ ಇರುತ್ತಲ್ಲ ಯೋಚನೆಗಳು, ನಮ್ಮ ಮನೇದು, ಎಲ್ಲಾವೂ...." ಎಂದು ಶಾಂತಪ್ಪನೂ ಉತ್ತರ ಕೊಟ್ಟ. ಅವರಿಬ್ಬರ ಮಾತುಗಳನ್ನೆಲ್ಲವನ್ನೂ ರಾಜ ಬಹದ್ದೂರ್ ಕೇಳುತ್ತಲೇ ಇದ್ದ, ತಾನೂ ಅವರ ಹಿತಚಿಂತಕನಂತೆ ಒಮ್ಮೊಮ್ಮೆ ಮಧ್ಯೆ ಮಾತನಾಡುತ್ತಿದ್ದ,

ಮರುಕ್ಷಣವೇ ಹೊಸ ಮೇನೇಜರು ಏನು ತಿಳಿದುಕೊಂಡುಬಿಡುವರೋ ಎಂದು ಸುಮ್ಮನಾಗುತ್ತಿದ್ದ.

ಸಂಜೆ ಶಾಂತಪ್ಪ ಮಠದ ಬಿಡಾರದಲ್ಲಿಯೇ ಉಳಿದ. ಗಂಗಯ್ಯ ಹತ್ತಿರದ ಹಳ್ಳಿಯಲ್ಲಿದ್ದ ತನ್ನ ಬಿಡಾರಕ್ಕೆ ಹೋದ; ಅವನು ಹೊರಡುವಾಗ ಶಾಂತಪ್ಪ ಅವನಿಗೆ, ಬೇಕಾಗಿದ್ದಲ್ಲಿ ಉಪಯೋಗಿಸಿಕೊಳ್ಳಲೆಂದು ಹತ್ತು ರೂಪಾಯಿಗಳ ನೋಟೊಂದನ್ನು ಕೊಡಹೋದ.

"ಬೇಡ ಬೇಡ ಸಾರ್....ಪರಮೇಶ್ವರ ಇದ್ದಾನೆ, ನಂಗೇನೂ ಚಿಂತೆಯಿಲ್ಲ" ಎಂದ ಗಂಗಯ್ಯ.

"ಪರವಾಗಿಲ್ಲಪ್ಪ ಇದನ್ನ ತೊಗೋ........ನಿನಗೆ ಅನುಕೂಲವಾದಾಗ ವಾಪಸ್ಸು ಕೊಡು", ಶಾಂತಪ್ಪ ಬಲವಂತ ಮಾಡಿದ.

"ತಮ್ಮ ಹತ್ತಿರವೇ ಇರಲಿ ಸಾರ್, ನಾನು ಯಾರಿಗೋ ಸಾಲಕ್ಕೆ ಹೇಳಿದ್ದೀನಿ. ಅವರಿಂದ ಬರದಿದ್ದರೆ ನಾಳೆ ತೆಗೆದ್ಕೊತ್ತೀನಿ....ದಯವಿಟ್ಟು ಏನೂ ತಿಳಿದುಕೋಬೇಡಿ" ಎಂದು ಗಂಗಯ್ಯ ವಂದಿಸಿ ಹೊರಟುಹೋದ.

ಈ ಮನುಷ್ಯನು ತೊಂದರೆಯಲ್ಲಿರುವವನಾದರೂ ಇವನು ಅಭಿಮಾನಿ, ಎಂದುಕೊಂಡ ಶಾಂತಪ್ಪ.

* * *

ರಾತ್ರಿ ಇದ್ದಕ್ಕಿದ್ದಂತೆ ಶಾಂತಪ್ಪನಿಗೆ ಎಚ್ಚರವಾಯಿತು. ಕೈಗಡಿಯಾರ ನೋಡಿಕೊಂಡ, ಹನ್ನೊಂದೂವರೆ ಗಂಟೆಯಾಗಿದ್ದಿತು. ಅವನೂ ಅಡಿಗೆಯವನೂ ಮಲಗಿ ಎರಡೂವರೆ ಗಂಟೆಗಳು ಕಳೆದಿದ್ದುವು. ಪಕ್ಕದ ಗುಡಿಸಲಿನಲ್ಲಿ ಮಲಗಿದ್ದ ಫೋರ್ಮನ ಗೊರಕೆ ಶಬ್ದ ಕೇಳಿಬರುತ್ತಿದ್ದಿತು, ಅಡಿಗೆಯವನೂ ಸಹ ಗಾಢ ನಿದ್ರೆಯಲ್ಲಿದ್ದ, ಶಾಂತಪ್ಪನೆದ್ದು ಹಾಸಿಗೆಯ ಮೇಲೆ ಕುಳಿತುಕೊಂಡ, ಹಾಗೆಯೇ ಒಮ್ಮೆ ಹೊರಗೆ ಹೋಗೋಣವೆನ್ನಿಸಿತವನಿಗೆ, ಎದ್ದು ಹೊರಹೊರಟ.

ಹೊರಗೆ ವಿಶಾಲವಾದ ಬಯಲಿನಲ್ಲಿ ಎರಡು ಮೂರು ತೆಂಗಿನ ಮರಗಳು ದೊಡ್ಡದಾದ ನಾಲ್ಕು ಬಿಲ್ಪಪತ್ರೆ ಮರಗಳೂ, ಹತ್ತಾರು ಕಣಗಿಲೆ ಗಿಡಗಳು ಇದ್ದುವು. ಅವುಗಳ ಬದಿಯಲ್ಲಿ ಒಂದೆರಡು ಕುರ್ಚಿಗಳನ್ನಿಟ್ಟಿದ್ದರು. ಸಾಹುಕಾರರು ಬಂದಾಗ, ಮಧ್ಯಾಹ್ನ ಊಟವಾದನಂತರ ಅಲ್ಲಿಯೇ ಒಂದೆರಡು ಗಂಟೆಗಳು ಕುಳಿತುಕೊಳ್ಳುವರೆಂದು ಅಡಿಗೆಯವನು ಹೇಳಿದ್ದ. ಶಾಂತಪ್ಪನೂ

ಅಲ್ಲಿ ಹೋಗಿ ಒಂದು ಕುರ್ಚಿಯ ಮೇಲೆ ಕುಳಿತುಕೊಂಡ. ಸುತ್ತಲೂ ಬೆಳ ದಿಂಗಳು ತುಂಬಿಕೊಂಡಿದ್ದಿತು; ಮೇಲೆ, ಗಗನದಲ್ಲಿ ಚತುರ್ದಶಿಯ ಚಂದ್ರ ಬೆಳಗುತ್ತಿದ್ದ, ಶಾಂತಪ್ಪ ಕುಳಿತಿದ್ದ ಸ್ಥಳದಲ್ಲೆಲ್ಲಾ ದಟ್ಟವಾಗಿ ಮರದ ನೆಳಲು ತುಂಬಿಕೊಂಡಿದ್ದಿತು. ಎದುರಿನಲ್ಲಿ ಮೂವತ್ತು ನಲವತ್ತು ಗಜಗಳ ದೂರ ದಲ್ಲಿ ಮಠದ ಬಿಳಿ ಗೋಡೆಗಳು ಅದರ ಮೇಲಿನ ಬಸವನ ವಿಗ್ರಹವೂ ಬೆಳ್ದಿಂಗಳಿನಲ್ಲಿ ಇನ್ನೂ ಬೆಳ್ಳಗೆ ಕಾಣಿಸುತ್ತಿದ್ದುವು. ಶಾಂತಪ್ಪ ಪುನಃ ಆಕಾಶದತ್ತ ನೋಡಿದ. ಅದೇ ಚಂದ್ರ, ಒಂದು ಅಂಚು ಮಾತ್ರ ಗೆರೆ ಕುಯ್ದಂತೆ ಕಾಣುತ್ತಿದ್ದಿತು. ಇದೊಂದು ಕೇವಲ ಗ್ರಹ, ಇದನ್ನು ಈಶ್ವರನು ತಲೆಯಲ್ಲಿ ಧರಿಸುವುದು ಸಾಧ್ಯವೆ, ಇಷ್ಟೊಂದು ಭಾರವಾದ ಗ್ರಹವನ್ನು ತಲೆಯ ಮೇಲೆ ಹೊತ್ತರೆ ಅವನ ಗತಿಯೇನು....ಅಲ್ಲದೆ ಬ್ರಹ್ಮಾಂಡದಲ್ಲಿ ಸೌರವ್ಯೂಹದಲ್ಲಿ ತೂಗಾಡುವ ಈ ಭೂಮಿಯ ಹೊರೆಯನ್ನು ಶಿವ ಹೊರುವುದೆಂದರೇನು.... ಇದೆಂತಹ ಮೌಢ್ಯ! ಎಂದುಕೊಂಡ ಶಾಂತಪ್ಪನಿಗೆ ಫಕ್ಕನೆ ನಗು ಬಂದಿತು. ಆದರೆ ಆ ಕ್ಷಣದಲ್ಲಿಯೋ—

ದೂರದಲ್ಲಿ ಬಳೆಗಳ ಜಣತ್ಕಾರವೊಂದು ಕೇಳಿಬಂದು ಶಾಂತಪ್ಪ ಅತ್ತ ತಿರುಗಿನೋಡಿದ. ಮಠದ ಹಿಂದಿನ ಜೋಳದ ತೆನೆಗಳ ನಡುವೆ ಹೆಂಗು ಸೊಬ್ಬಳು ನಿಂತಿದ್ದಳು. ಅವಳ ಕೈನಲ್ಲಿದ್ದ ಪಾತ್ರೆಯೊಂದು ಹೊಳೆಯುತ್ತಿದ್ದಿತು. ಆಗಲೇ, ಮಠದ ಹಿಂದಿನ ಬಾಗಿಲು ತೆಗೆದುಕೊಂಡು ಸ್ವಾಮಿಗಳು ಹೊರ ಬಂದರು. ಅವರು ಹೊರಬಂದೊಡನೆಯೇ ಆ ಹೆಣ್ಣಿನತ್ತ ತಿರುಗಿ,

"ಯಾರು....ಶಿವಗಂಗಾ?"

"ಹೌದು ಸ್ವಾಮಿ...."

"ಇದೇನು ಶಿವಗಂಗೂ ಇಷ್ಟುಹೊತ್ತಿನಲ್ಲಿ ಹೊರಬಂದಿದ್ದಿ?"

"ಆಚೆ ಹೋಗಿದ್ದೇರಿ."

"ಎಲ್ಲಾ ಆಯ್ತೇನು?"

"ಆಯ್ತು."

"ಹಾಗಾದರೆ ಒಳಗೆ ನಡಿ....ಹೋಗು...."

"ಏನೋ ಬೆಳ್ದಿಂಗಳು ಚೆನ್ನಾಗಿತ್ತು ನೋಡ್ತಾ ನಿಂತುಕೊಂಡೆ. ನೀವು ಹೋಗಿ, ನಾನು ಇಲ್ಲೇ ಇನ್ನೂ ಸ್ವಲ್ಪ ಹೊತ್ತು ಇರ್ತೀನಿ" ಎಂದಳು ಶಿವಗಂಗಮ್ಮ, ಬೆಳ್ದಿಂಗಳನ್ನೇ ನೋಡುತ್ತಾ.

"ನೀನೇ ಒಂದು ಬೆಳ್ದಿಂಗಳು ಶಿವಗಂಗೂ........ಇನ್ನು ಅದನ್ನೇನು ನೋಡ್ತಿ?" ಎಂದು ಸ್ವಾಮಿಗಳು ಶಿವಗಂಗಮ್ಮನ ಹತ್ತಿರ ಬಂದರು.

"ಯಾರಾದರೂ ಕೇಳಿಬಿಟ್ಟಾರು ಸುಮ್ಮನಿರ್ರಿ, ಹಾಗೆಲ್ಲಾ ಮಾತಾಡ ಬ್ಯಾಡ್ರೀ."

"ಈಗ ಕೇಳೋಕೆ ಯಾರು ಬರಬೇಕು ಇಲ್ಲಿ?" ಎಂದು ಸ್ವಾಮಿಗಳು ಮುಂದುವರೆದು ಶಿವಗಂಗಮ್ಮನ ಕೈಹಿಡಿದರು.

"ಯಾರಾದರೂ ನೋಡಾರು ಕೈಬಿಡ್ರಿ" ಎಂದಳು ಶಿವಗಂಗಮ್ಮ, ತನ್ನ ಕೈಯನ್ನು ಸ್ವಾಮಿಗಳ ಕೈನಿಂದ ಬಿಡಿಸಿಕೊಳ್ಳದೆಯೇ!

"ನೋಡೋಕೆ ಯಾರು ಬರ್ತಾರೆ........ಇಷ್ಟುಹೊತ್ತಿನಲ್ಲಿ" ಸ್ವಾಮಿಗ ಳೆಂದರು.

"ಗಣಿಯೋರು ಇದಾರಲ್ರೀ."

"ಅವರೆಲ್ಲ ಮಲಗಿ ಎಷ್ಟೋ ಹೊತ್ತಾಯ್ತು. ನಿದ್ರೆ ಮಾಡ್ತಿದಾರೆ........ ನಾನೂ ಮಲಗಿ ಎಷ್ಟೋ ಹೊತ್ತಾದ್ರೂ ನಿದ್ರೇನೇ ಬರಲಿಲ್ಲ. ನೀನೂ ಎಲ್ಲೋ ಹೋಗಿ, ಅರ್ಧ ಗಂಟೆ ಮೇಲಾದರೂ ಬರಲಿಲ್ಲವಲ್ಲಾಂತ ನಾನು ಚಿಂತಿಸಿದ್ದೆ."

"ನಾನು ಬರಲಿಲ್ಲಾಂತ ಚಿಂತೆ ಯಾಕ್ರೀ?" ಶಿವಗಂಗಮ್ಮ ತುಂಟನಗೆ ಬೀರುತ್ತಾ, ತನ್ನ ಕಣ್ಣ ಕುಡಿಯಿಂದ ಸ್ವಾಮಿಗಳನ್ನೇ ನೋಡುತ್ತಾ ಕೇಳಿದಳು.

"ನೀನು ಒಂದು ನಿಮಿಷ ದೂರ ಇದ್ದರೆ ನನಗೆ ಹೇಗೆ ಹೇಗೋ ಆಗುತ್ತೆ ಚಿನ್ನಾ....ನನ್ನನ್ನ ನೀನು ಪರೀಕ್ಷಿಸ್ತಿಯಲ್ಲ."

"ನೀವು ಸ್ವಾಮಿಗಳಲ್ಲವೇನ್ರಿ....ಸನ್ಯಾಸಿಗಳಲ್ಲವಾ?"

"ಹ....ಹ....ಹ....ಅದೆಲ್ಲ ನನ್ನ ಜೀವನಕ್ಕೆ....ನಾನು ಸನ್ಯಾಸಿಯಾಗಿದ್ದ ರಿಂದ ತಾನೇ ನಿಂಗೂ ಬೇಕಾದಷ್ಟು ಚಿನ್ನ, ಹಣ ಬಂದದ್ದು....ಅಲ್ಲವೇ ಚಿನ್ನ?"

"ಹೌದ್ರಿ....ನಿಮ್ಮ ದಯಾ."

"ನಿಂಗೋಸ್ಕರ ನಾನು ಏನು ಬೇಕಾದ್ರೂ ಕೊಡ್ತೀನಿ ಶಿವಗಂಗೂ"

"ಏನು ಕೊಡ್ತೀರ್ರಿ?" ಶಿವಗಂಗಮ್ಮ ತುಂಟತನದಿಂದ ನೋಡುತ್ತಾ ಕೇಳಿದ್ದಳು.

"ಏನು ಕೊಡ್ತೀನೆ........ನೋಡು?" ಎಂದು ಸ್ವಾಮಿಗಳು ಮುಂದು ವರೆದರು.

"ಥೂ ಬಿಡ್ರಿ ಯಾರಾದ್ರೂ ಬಂದಾರು ಒಳಗೆ ಹೋಗ್ಹೋಣ" ಎಂದು ಶಿವಗಂಗಮ್ಮನೆಂದಾಗ ಸ್ವಾಮಿಗಳನ್ನು ಅವಳನ್ನು ಒಳಗೆ ಕರೆದೊಯ್ದರು.

ಒಳಗೆ ಹೋಗುವಾಗ, ಉಪ್ರೇಕ್ಷಿತರಾದ ಸ್ವಾಮಿಗಳ ವಿಕಾರ ರೂಪವು ಶಾಂತಪ್ಪನ ಕಣ್ಣಿಗೆ ಕಟ್ಟಿದಂತಿದ್ದಿತು; ಇದರ ಜೊತೆಗೆ ಎದುರಿನಿಂದ ಗಾಳಿ ಜೋರೆ ಬೀಸಿ ಬಂದು ಅವರ ಕಾಷಾಯಾಂಬರವನ್ನು ಹಿಂದಕ್ಕೆ ತಳ್ಳುತ್ತಿದ್ದಿತು. ಇದನ್ನೆಲ್ಲ ನೋಡಿ ಶಾಂತಪ್ಪ ಬಾರಿಬಾರಿಗೂ ಅಸಹ್ಯಗೊಂಡು, ನಿಧಾನವಾಗಿ ಆ ನೆರಳಿನಿಂದ ಎದ್ದು ಹೋದ.

ಅವನು ಮಲಗಿ ಎಷ್ಟೋಹೊತ್ತಿನತನಕವೂ ಸ್ವಾಮಿಗಳ ಆ ದುರ್ವರ್ತನೆ ಆ ಅಸಹ್ಯ ರೂಪು ಕಣ್ಣೆದುರಿನಿಂದ ಮರೆಯಾಗಲೇ ಇಲ್ಲ.

*　　*　　*

ಮಾರನೆಯ ದಿನ ಬೆಳಗ್ಗೆ ಎದ್ದಾಗ ಮಠದಲ್ಲಿನ ಘಂಟಾನಾದ ಕೇಳಿ ಬರುತ್ತಿದ್ದಿತು. ಅವನೂ ಎದ್ದು ಹೋಗಿ ಸ್ನಾನ ಮಾಡಿಕೊಂಡು ಬಂದು, ಅಡಿಗೆ ಯವನಿಂದ, ಒಗೆದಿದ್ದ ಪಂಚೆಯೊಂದನ್ನು ತೆಗೆದು ಉಟ್ಟುಕೊಂಡು ಮಠಕ್ಕೆ ಹೊರಟ. ಮಠಕ್ಕೆ ನಡೆಯುವಾಗ ಒಂದೆರಡು ನಿಮಿಷಗಳು ಅವನು ರಾತ್ರಿ ಕಂಡ ದೃಶ್ಯವನ್ನೇ ನೆನೆಯುತ್ತಿದ್ದ. ಇವೇನು ಕನಸೇ ಎಂದು ಶಂಕಿಸುವಂತಿದ್ದಿತು, ಕಳೆದ ದಿನ ಬೆಳಗ್ಗೆ ಸ್ವಾಮಿಗಳನ್ನು ಕಂಡಾಗ ಅವರ ಬಗೆಗೆ ಎಂತಹ ಭಕ್ತಿಭಾವವುದಯವಾಗಿದ್ದಿತು. ಆದರೆ ಅದೇ ದಿನ ರಾತ್ರೆ ಅವರು ಎಂತಹ ಭ್ರಷ್ಟರಂತೆ ಕಂಡರು, ಇವೇನು ನಿಜವೇ ಎಂದು ಪುನಃ ಪುನಃ ಶಂಕಿಸಿದಾಗ ಗುರುಮೂಲ, ನದಿಮೂಲಗಳನ್ನು ಹುಡುಕಬಾರದು, ಎಂದು ಅವನ ಬ್ರಾಹ್ಮಣ ಗೆಳೆಯನೊಬ್ಬನ ಮನೆಯಲ್ಲಿ ಒಂದು ದಿನ ಕೇಳಿದ ಮಾತು ನೆನಪಾಯ್ತು. ಹೌದು....ಹೌದು....ಇಂತಹ ವಿಷಯಕ್ಕಾಗಿಯೇ ಆ ಮಾತುಗಳು ಪೂರ್ವಿಕರು ಹೇಳಿರಬೇಕು!

ಅವನು ಮಠವನ್ನು ಹೊಕ್ಕಾಗ ಒಳಗಿನ ಶಿವಮಂದಿರದಲ್ಲಿ ಸ್ವಾಮಿಗಳು ಮಂಗಳಾರತಿಯೆತ್ತುತ್ತಿದ್ದರು. ಶಿವಗಂಗಮ್ಮನು, ಛಾವಣಿಗೆ ತೂಗುಹಾಕಿದ್ದ ಗಂಟೆಯನ್ನು ಬಡಿಯುತ್ತಿದ್ದಳು, ಗಂಧದ ಹೊಗೆ ಒಳಗೆಲ್ಲ ತುಂಬಿದ್ದಿತು, ಕೃಷ್ಣವರ್ಣ ಶಿಲೆಯ ಶಿವಲಿಂಗವು ದೀಪದ ಬೆಳಕಿನಲ್ಲಿ ಕನ್ನಡಿಯಂತೆ ಹೊಳೆಯುತ್ತಿದ್ದಿತು; ಅದಕ್ಕೆ ಬಳಿದಿದ್ದ ವಿಭೂತಿಯ ಎಳೆಗಳು, ತಲೆಯಮೇಲಿಟ್ಟಿದ್ದ ಕಣಗಿಲೆ, ತುಂಬೆ ಹೂವುಗಳು ಎಲ್ಲವನ್ನೂ ನೋಡಿ ನೋಡಿ ಶಾಂತಪ್ಪನಿಗೆ

ಭಕ್ತಿಯುದ್ಭವಿಸಿ ಬಂದಿತು. ಅವನು ಕೈಮುಗಿದುಕೊಂಡು ಮಂಗಳಾರತಿಯಾಗುವವರೆಗೂ ನಿಂತಿದ್ದ. ಮಂಗಳಾರತಿಯಾದನಂತರ ಶಿವಗಂಗಮ್ಮ ಹೋಗಿ ಮಂಗಳಾರತಿ ತೆಗೆದುಕೊಂಡಳು, ನಂತರ ಅವಳು ಆ ತಟ್ಟೆಯನ್ನು ತೆಗೆದುಕೊಂಡು ಹಜಾರದಲ್ಲಿದ್ದ ಕಾಣಿಕೆಯ ಕೊಡದ ಬಳಿಯಿಟ್ಟಳು.

"ಮಂಗಳಾರತಿ ತೆಗೆದುಕೊಳ್ರೀ, ಶಾಂತಪ್ಪನವರೆ", ಸ್ವಾಮಿಗಳೆಂದರು.

ಶಾಂತಪ್ಪ ಮಂಗಳಾರತಿ ತೆಗೆದುಕೊಂಡು, ಕೊಡದ ಒಟ್ಟೆ ಬಾಯಿಗೆ ಒಂದು ರೂಪಾಯಿನ ನಾಣ್ಯವೊಂದನ್ನು ಹಾಕಿ ಸ್ವಾಮಿಗಳ ಮುಂದೆ ನಿಂತು ಪ್ರಸಾದವನ್ನು ಬೇಡಿದ. ಅವರು ಪ್ರಸಾದವನ್ನಿತ್ತು, ಒಳಗಿನಿಂದ ತೆಂಗಿನ ಕಾಯಿ, ಬಾಳೆಹಣ್ಣು, ಸಕ್ಕರೆ, ನೆನಸಿದ ಹೆಸರುಕಾಳುಗಳನ್ನಿಟ್ಟಿದ್ದ ತಟ್ಟೆಯೊಂದನ್ನು ಅವನ ಕೈಗೆ ಕೊಟ್ಟು "ಪ್ರಸಾದವನ್ನು ತೆಗೆದುಕೊಳ್ಳಿ" ಎಂದರು. ಶಾಂತಪ್ಪ ಅದನ್ನು ತೆಗೆದುಕೊಂಡು, ಬೆಳ್ಳಿ ತಗಡು ಬಡಿಯಲ್ಪಟ್ಟಿದ್ದ ಹೊಸ್ತಿಲ ಮೇಲಿಟ್ಟು, ದೇವರಿಗೊಮ್ಮೆ ಅಡ್ಡಬಿದ್ದೆದ್ದು, ತಟ್ಟೆಯನ್ನು ತೆಗೆದುಕೊಂಡು ಸ್ವಾಮಿಗಳ ಅಪ್ಪಣೆ ಕೇಳಿದ.

"ಒಳ್ಳೇದು ಹೋಗಿಬನ್ನಿ........ಒಂದರ್ಧ ಗಂಟೆ ಬಿಟ್ಟುಕೊಂಡು ಪುನಃ ಬನ್ನಿ."

"ಆಗಲಿ" ಎಂದು ಶಾಂತಪ್ಪ ಹೊರಟ.

ಅವನು ಹೊರಡುವಾಗೊಮ್ಮೆ, ಕಂಬವನ್ನೊರಗಿಕೊಂಡು ನಿಂತಿದ್ದ ಶಿವಗಂಗೆಯನ್ನು ನೋಡಿದ. ಅವಳೇನೂ ಅನುಪಮ ಸುಂದರಿಯಲ್ಲದಿದ್ದರೂ ಸುಮಾರು ಇಪ್ಪತ್ತು-ಇಪ್ಪತ್ತೆರಡು ವರ್ಷ ವಯಸ್ಸಾಗಿದ್ದ ಅವಳ ಸುಪುಷ್ಟವಾದ ಅಂಗಾಂಗಗಳು ಆಹ್ವಾನಿಸುವಂತಿದ್ದುವು. ಸ್ವಾಮಿಗಳು ಇವಳನ್ನು ನೋಡಿ ಮುಚ್ಚರಾದುದೇನೂ ಆಶ್ಚರ್ಯವಲ್ಲವೆಂದುಕೊಂಡನು.

ಅವನು ತನ್ನ ಬಿಡಾರವನ್ನು ಹೊಕ್ಕಾಗ ಕೃಷ್ಣ ಉಪ್ಪಿಟ್ಟು ಕಾಫಿಗಳನ್ನು ತಯಾರಿಸಿ ಅವನಿಗಾಗಿ ಕಾದಿದ್ದ. ಶಾಂತಪ್ಪ ಸ್ವಲ್ಪ ಪ್ರಸಾದವನ್ನು ತೆಗೆದುಕೊಂಡು ನಂತರ ಉಪ್ಪಿಟ್ಟನ್ನು ತಿಂದ. ಅವನು ಕೃಷ್ಣನೊಡನೆ ಮಾತನಾಡುವಾಗ ಒಮ್ಮೆ,

"ಈ ಮಠದಲ್ಲಿ ಯಾರ್‍ಯಾರಿದ್ದಾರೆ?" ಎಂದು ಕೇಳಿದ.

"ಸ್ವಾಮಿಗಳು, ಅವರ ಅಡಿಗೆ ಮಾಡೋಕೆ ಶಿವಗಂಗಮ್ಮ. ಇಬ್ಬರೇ."

"ಆ ಶಿವಗಂಗಮ್ಮ ಯಾರು?"

"ಅವಳು ಇಲ್ಲೇ ಒಂದು ಹದಿನೈದು ಇಪ್ಪತ್ತು ಮೈಲಿ ದೂರದ ಒಂದು ಹಳ್ಳಿಯವಳು ಸಾರ್. ಅವಳನ್ನ ಗಂಡ ಬಿಟ್ಟುಬಿಟ್ಟಿದ್ದಾನೆ. ಒಂದು ಸಲ ಶಿವದರ್ಶನಕ್ಕೇಂತ ಮಠಕ್ಕೆ ಬಂದಾಗ ದೇವರನ್ನು ನೋಡಿ ತುಂಬಾ ಭಕ್ತಿ ಬಂದು ಇಲ್ಲೇ ಇರ್ತೀನ್ಸೀಂತಂದಳು. ಏನೋ ವೈರಾಗ್ಯವುಂಟಾಗಿ ಇಲ್ಲೇ ಇದ್ದುಬಿಟ್ಟಿದಾಳೆ"—ಕೃಷ್ಣ ಗಂಭೀರನಾಗಿ ಹೇಳಿದ.

"ಅಂಥದೇನಪ್ಪ ವೈರಾಗ್ಯ?"

"ಗಂಡ ಬಿಟ್ಟುಬಿಟ್ಟಮೇಲೆ ಅವಳಿಗೆ ಜೀವನದಲ್ಲೇ ಜಿಗುಪ್ಸೆ ಬಂದು ಬಿಡ್ತಂತೆ."

"ಅದೇನೋ ಸರಿ....ಈ ಮಠದಲ್ಲೇ ಸ್ವಾಮಿಗಳ ಸೇವೆ ಮಾಡಿ ಉಂಡಿರ ಬೇಕಾದಂಥ ಭಕ್ತಿ ಏನು?"

"ಏನೋ....ಹೀಗೇ 'ಭಕ್ತಿ'!" ಎಂದು ಕೃಷ್ಣನೆಂದಾಗ ಅದುವರೆಗೂ ಅವನು ತಡೆದುಹಿಡಿದಿದ್ದ ನಗು ಫಕ್ಕನೆ ತುಟಿಯೊಡೆದು ಬಂದಿತು. ಶಾಂತಪ್ಪ ನಿಗೂ ನಗೆ ಬಂದಿತು.

"ಸನ್ಯಾಸಾಶ್ರಮ ಪಾಲಿಸುವಷ್ಟು ಯೋಗ್ಯತೆಯಿಲ್ಲದವರು ಯಾಕೆ ಸನ್ಯಾಸಿಗಳಾಗಬೇಕೋ," ಎಂದ ಕೊನೆಗೊಮ್ಮೆ ಶಾಂತಪ್ಪ.

"ಏನು ಮಾಡೋಮು ಸಾರ್ ಸಹಜವಾದ ದೇಹದ ಬಯಕೆಗಳು ಅವು. ಅವನ್ನೆಲ್ಲಾ ದಮನ ಮಾಡೋವಷ್ಟು ಶಕ್ತಿಬೇಕಲ್ಲ ಎಲ್ಲಾರಿಗೂ. ಈಗೇನು ಎಲ್ಲಿ ನೋಡಿದರೂ ಸನ್ಯಾಸಿಗಳು, ಸ್ವಾಮಿಗಳು, ಬೈರಾಗಿಗಳು ತುಂಬಿಹೋಗಿದಾರೆ. ಇವರು ನಿಜವಾಗಿ ವಿರಕ್ತರೇ? ಅಥವಾ ಅದೂ ಒಂದು ಸಂಪಾದನೆ ಮಾರ್ಗ ವೆಂತ ಸನ್ಯಾಸಾಶ್ರಮ ಸ್ವೀಕರಿಸಿನೋರೋಂತ ನಾವು ನೋಡಬೇಕು ಸಾರ್."

ಕೃಷ್ಣನ ಮಾತುಗಳು ಉತ್ತಮುಮುಟ್ಟಿದಿಂಳಿದುಬರುವ ಗಂಗೆಯಂತಿ ದ್ದುವು. ಕೃಷ್ಣ ಪುನಃ ಹೇಳಿದ,

"ಕಾವಿ ಧರಿಸಿದವರೆಲ್ಲ ಸನ್ಯಾಸಿಗಳಲ್ಲ ಸಾರ್....ಲಿಂಗ ಕಟ್ಟಿದವರೆಲ್ಲ ಶಿವಭಕ್ತರಲ್ಲ, ಹಾಗೆಯೇ ಜನಿವಾರ ಹಾಕಿದವರೆಲ್ಲ ಬ್ರಾಹ್ಮಣರೂ ಅಲ್ಲ. ಯಾವನು ಯೋಗ್ಯ ಯಾವನು ಅಯೋಗ್ಯ ಅಂತ ನಾವು ನೋಡಿ ಅವನಿಗೆ ಬೆಲೆ ಕೊಡಬೇಕು. ಪಾತ್ರಾಪಾತ್ರರನ್ನು ನೋಡಿ ಅವರಿಗೆ ಬೆಲೆ ಕೊಡಬೇಕು ಅಂತ ಶ್ರೀ ಕೃಷ್ಣ ಹೇಳಿರೋದು ಅದೇ ಸಾರ್. ಒಂದು ಕಡೆ ಹರಿದಾಸರು ಹೇಳಿದಾರೆ,

ನಾರಿಯ ಧಾರುಣಿಯು ಧನವಬಿಟ್ಟರಾಯಿತೆ
ವೈರಾಗ್ಯವಲ್ಲ ಕಂಡ್ಯಾ ಧೀರರಿಗೆ, ಅಂತ.

ನಾರಿ ಧಾರುಣಿ ಧನವನ್ನು ಬಿಟ್ಟು ಕಾಷಾಯಾಂಬರ ಧರಿಸಿದವರೆಲ್ಲ ವೈರಾಗಿಗಳಲ್ಲ ಸಾರ್. ಈ ಸ್ವಾಮಿಗಳು ಜಂಗಮರು ಕೇವಲ ಮತದ್ವೇಷ ಹಬ್ಬಿಸ್ತಾರೆ ಅಷ್ಟೆ. ಶಿವ, ವಿಷ್ಣು ಅಂತ ಭೇದ ಮಾಡಿ, ಎರಡು ಜಾತಿಗಳಲ್ಲೂ ಭೇದ ಹುಟ್ಟಿಸಿದಾರೆ. ನೋಡಿ ಒಂದು ಕಡೆ ಪುರಂದರದಾಸರು ಹೇಳಿದಾರೆ,

"ಜಂಗಮರು ನಾವು ಲಿಂಗಾಂಗಿಗಳು,
ಮಂಗಳವಂತರು ಭವಿಗಳೆಂತೆಂಬಿರಿ ?
ವಿಭೂತಿ ನಮಗುಂಟು ವಿಶ್ವೇಶ ನಮಗುಂಟು
ವೀರಭದ್ರಪ್ರಿಯ ಭಕ್ತರು ನಾವು
ಕಾರಣಕರ್ತ ಶ್ರೀಪುರಂಧರ ವಿಠಲನ
ಕಾರುಣ್ಯಕೆ ಮುಖ್ಯ ಪಾತ್ರರು ನಾವು"

--ಎಂದು ಕೃಷ್ಣ ಸಶ್ರಾವ್ಯವಾಗಿ ಹಾಡಿದ. ಶಾಂತಪ್ಪನಿಗೆ ಈ ಜಾತೀಯ ಕಲಹದಲ್ಲಿ ಯಾವ ಆಸಕ್ತಿಯೂ ಇರಲಿಲ್ಲ. ಇಂತಹ ಕ್ಷುದ್ರವಾದ ವಿಷಯಕ್ಕೆ ಇಷ್ಟೊಂದು ಮಂಜುಳ ಧ್ವನಿಯಲ್ಲಿ ಹಾಡಿ ಕಂಠಶೋಷಣೆ ಮಾಡಿಕೊಳ್ಳುವುದೇಕೆ ಎಂದವನ ಭಾವನೆಯಿದ್ದಿತು. ಆದರೆ ಅಡಿಗೆಯವನಾದ ಕೃಷ್ಣನ ಪಾಂಡಿತ್ಯಪೂರ್ಣ ನುಡಿಗೆ ತಲೆದೂಗಿದ; ಅವನಿಗೆ ಉತ್ತರ ಕೊಡಲಿಷ್ಟವಿರಲಿಲ್ಲ.

ಮಾತನಾಡದೆ ಕುಳಿತಿದ್ದ ಶಾಂತಪ್ಪನನ್ನು ನೋಡಿ ಕೃಷ್ಣನೆಂದ,

"ಹುಚ್ಚುಹುಚ್ಚಾಗಿ ಏನೇನೋ ಹೇಳಿಬಿಟ್ಟೆ ಸಾರ್ ಕ್ಷಮಿಸಿ."

"ಛೆ !....ಛೆ !....ಹಾಗಲ್ಲರಪ್ಪ....ನೀವು ಹಾಡಿದ ಹಾಡು ಎಷ್ಟೊಂದು ಅರ್ಥಪೂರ್ಣವಾಗಿದೇಂತ ಯೋಚಿಸ್ತಿದ್ದೆ. ನಿಜವಾಗಲೂ ಈ ಮತವೈಷಮ್ಯ ಎಷ್ಟೊಂದು ಹರಡಿಹೋಗಿದೆ ನಮ್ಮಲ್ಲೀಂತಲೂ ಯೋಚಿಸ್ತಿದ್ದೆ."

"ಹೌದು.....ಸಾರ್.....ಈ ಸ್ವಾಮಿಗಳೇ ಅಂಥ ಮತವೈಷಮ್ಯ ಹರಡುತ್ತಿದ್ದಾರೆ....ನೋಡಿ, ಈ ವಿಷಯ ನಿಮ್ಮಲ್ಲೇ ಇರಲಿ, ಈ ಸ್ವಾಮಿಗಳೇ ಸಾಹುಕಾರ್ರಿಗೆ ಒಂದು ಸಲ, ಬ್ರಾಹ್ಮಣರಾದ ನಿಮ್ಮನ್ನ ಕೆಲಸಕ್ಕೆ ಯಾಕೆ ಇಟ್ಟುಕೊಂಡಿದೀರಿ ಅಂತ ಕೇಳಿದರಂತೆ. ಬೇರೆ ಯಾರಾದರೂ ಲಿಂಗಾಯಿತರನ್ನಿಟ್ಟುಕೊಳ್ಳೀಂತಂದರಂತೆ."

"ಅದಕ್ಕೆ ಸಾಹುಕಾರ್ರು ಏನು ಹೇಳಿದರಂತೆ ?"

"ಅಷ್ಟೊಂದು ಓದಿದ, ಅದೂ ಸಹ ಆ ವಿಷಯವನ್ನೇ ಓದಿದ, ಲಿಂಗಾಯಿತರನ್ನೆಲ್ಲಿ ಹುಡುಕಿಕೊಂಡು ಹೋಗಲೀಂದರಂತೆ."

ಶಾಂತಪ್ಪ ಒಂದು ನಿಮಿಷ ಸುಮ್ಮನಾದ. ಸನ್ಯಾಸ, ವ್ಯಭಿಚಾರ, ವಿರಕ್ತಿ, ವ್ಯವಹಾರ, ಈ ನಾಲ್ಕಾರು ವೈಷಮ್ಯಭಾವಗಳು ಒಬ್ಬನಲ್ಲೇ ನೆಲೆಗೊಂಡಿರುವುದರ ಬಗ್ಗೆ ಯೋಚಿಸುತ್ತಿದ್ದನವನು.

"ನೀವು ಇಷ್ಟೊಂದೆಲ್ಲ ಎಲ್ಲಿ ಅಭ್ಯಾಸ ಮಾಡಿದಿರಿ ?" ನಿಧಾನವಾಗಿ ಕೇಳಿದ ಶಾಂತಪ್ಪ.

"ಯಾವುದನ್ನ ಸಾರ್ ?"

"ಈ ಪಾರಮಾರ್ಥಿಕ ವಿಷಯಗಳನ್ನ ?"

"ಆರ್ಥಿಕ ಮುಗ್ಗಟ್ಟು ಉಂಟಾಯ್ತು ಒಂದು ಸಲ, ಆಗ ಬಾಳೇ ಬೇಸರವಾಗಿ ಪಾರಮಾರ್ಥಿಕದ ಕಡೆ ಮನಸ್ಸು ತಿರುಗಿತು. ಆರ್ಥಿಕ ಸ್ಥಿತಿ ಸರಿಯಾಗಿದ್ದರೆ ಯಾರಿಗೂ ಪಾರಮಾರ್ಥಿಕದತ್ತ ಮನಸ್ಸೇ ಹೋಗೋಲ್ಲ!" ನಗುತ್ತಾ ಕೃಷ್ಣನೆಂದ.

"ಚೆನ್ನಾಗಿದೆ....—ಹಾಗಾದರೆ 'ಆರ್ಥಿಕ'ವಿಲ್ಲದಿದ್ರೆ 'ಪಾರಮಾರ್ಥಿಕ' ಅನ್ನಿ" ಶಾಂತಪ್ಪನೂ ನಕ್ಕ.

"ಹೌದು ಸಾರ್. ಈಗೇನೋ ಒಂದು ವರ್ಷದಿಂದ ಸಾಹುಕಾರ್ರ ಹತ್ತಿರವೇ ಇದೀನಿ. ಪ್ರತಿ ತಿಂಗಳೂ ನಲವತ್ತು ರೂಪಾಯಿ ನನ್ನ ಸಂಬಳ, ಬ್ಯಾಂಕಿಗೆ ಹಾಕ್ತಿದೀನಿ. ಊರಿನಲ್ಲಿ ತಂದೆತಾಯಿಗಳೂ ಅನುಕೂಲವಾಗಿದಾರೆ. ಮದುವೆ ಮಾಡಿಕೋ ಅಂತ ಕಾಗದ ಬರೀತಾನೇ ಇದಾರೆ."

"ಮಾಡಿಕೊಂಡುಬಿಡಿ."

"ಇಲ್ಲ ಸಾರ್....ನಂಗೇನೋ ಈ ಸಂಸಾರಿಗಳ ಬಾಳು ನೋಡಿ ನೋಡಿ ಬೇಜಾರು ಬಂದುಬಿಟ್ಟಿದೆ. ನೋಡಿ ಸಾವಕಾರ್ರು ಹೆಂಡತಿ ಮಕ್ಕಳಿಗೋಸ್ಕರ ಎಂಥ ಅನ್ಯಾಯಗಳನ್ನ ಮಾಡ್ತಾರೆ. ಈ ಮಠದ ಸ್ವಾಮೀ ಸಹ ಸಂಸಾರ ಕಟ್ಟಿಕೊಂಡು ಎಷ್ಟೊಂದು ಕಷ್ಟಪಡ್ತಿದಾನೆ. ಆ ಶಿವಗಂಗೇಗೆ ಒಡವೆವಸ್ತ್ರ ತೆಗೆದುಕೊಡೋಕೆ ಎಷ್ಟು ಸುಳ್ಳು ಹೇಳಿ ಸಂಪಾದನೆ ಮಾಡ್ತಾನೆ."

"ನೀವೂ ಸ್ವಾಮಿಗಳ ಹಾಗೆ ವಿರಕ್ತರೇ ?" ಶಾಂತಪ್ಪ ನಗುತ್ತಾ ಪ್ರಶ್ನಿಸಿದ.

"ಇಲ್ಲ ಸಾರ್. ನಾನು ಯಾವ ಸನ್ಯಾಸವನ್ನೂ ಸ್ವೀಕರಿಸಿಲ್ಲ. ಆದರೂ ನಾನು ವಿರಕ್ತ. ಊಟ ತಿಂಡೀಲೆಲ್ಲಾ ವಿಲಕ್ಷಣ ತಿನ್ನುತ್ತಿದೀನಿ ಸಾರ್, ಹಾಳು ದೇಹವನ್ನ ದಂಡಿಸೋಕೋಸ್ಕರ!"

ಶಾಂತಪ್ಪನ ಕಾಲಿಗೆ ಬೆಂಕಿ ಮುಟ್ಟಿಸಿದಂತಾಯ್ತು, ಕೃಷ್ಣನ ಮಾತು ಕೇಳಿ. ಅವನ ದೇಹವನ್ನು ನೋಡಿದ, ಒಣಗಿದ 'ಲಾಂಟಾನಾ' ಗಿಡದ ಕಾಂಡ ದಂತಿದ್ದಿತದು. ಆದರೆ ಅವನ ಆ ಕಣ್ಣುಗಳು ಪಳಪಳನೆ ಹೊಳೆಯುತ್ತಿದ್ದುವು, ಮಠದಲ್ಲಿ ಶಿವಲಿಂಗವು ಹೊಳೆದಂತೆ. ಆ ವಿರಕ್ತತೆ ಅವನ ಬಿಳಿ ಮುಖದಲ್ಲಿ ರಾರಾಜಿಸುತ್ತಿದ್ದಿತು. ಇವನು ಪ್ರಾಮಾಣಿಕನೇ ಆಗಿದ್ದಾನೆ, ಎಂದು ಶಾಂತ ಪ್ಪನ ಮನಸ್ಸು ಹೇಳಿತು; ಈ ಯೌವನದಲ್ಲಿ ಇಂತಹ ಸಂಸಾರ ಪರಿತ್ಯಾಗದ. ಬುದ್ಧಿಯೇಕೆ ಬಂದಿತೋ ಪಾಪ, ಎಂದವನಲ್ಲಿ ಮರುಕವೂ ಉಂಟಾಯ್ತು.

ಸ್ವಾಮಿಗಳ ಕೃಷ್ಣಲೀಲೆ!

ಕೃಷ್ಣನ ವಿರಕ್ತವೃತ್ತಿ!—ಎಂತಹ ಅಂತರವಿದು!

ಈ ನಗ್ನ ಸತ್ಯವನ್ನು ನೋಡಿ ಅವನಿಗೆ ವಿಸ್ಮಯವಾಯಿತು. ಇರಬೇಕಾ ದೆಡೆಯಲ್ಲಿ ಸತ್ಯವಿಲ್ಲ; ಇಲ್ಲದಿರಬೇಕಾದೆಡೆ ಆ ಸತ್ಯವಿದೆ; ಇದೇ ಬಾಳು, ನಾಟಕೀಯವಾದ ಬಾಳು.

೯

## 'ಲೇಬರ್ ಇನ್‌ಸ್ಪೆಕ್ಟರಿ'ಗೆ ಲಂಚವೆಷ್ಟು?

ಮಾರನೆಯ ದಿನ ಗಣಿಗೆ ಬಂದ ಲಾರಿಯೊಂದರಲ್ಲಿ ಕುಳಿತು ಶಾಂತಪ್ಪ ರಾಮನಾಯ್ಕನಪಳ್ಳಿಗೆ ಹೊರಟುಹೋದ. ಹೋಗುವ ಮುನ್ನ ಕೃಷ್ಣನಿಗೆ ಒಂದು ರೂಪಾಯಿ ಕೊಟ್ಟುಹೋಗಿದ್ದ; ಆ ರೂಪಾಯಿ ತೆಗೆದುಕೊಳ್ಳುವಾಗ ಕೃಷ್ಣ ಹೇಳಿದ ಮಾತು ಕೇಳಿ ಶಾಂತಪ್ಪನಿಗೊಂದು ಬಗೆಯ ಸಂಕಟವಾಗಿತ್ತು.

"ನನಗೇಕೆ ಸಾರ್ ಈ ಹಣ. ನನಗೆ ಸಾಹುಕಾರ್ರು ಕೊಡೋದೇ ಸಾಕು. ನಾನು ಆ ಹಣಾನೇ ಬ್ಯಾಂಕಿನಲ್ಲಿಟ್ಟು ಕೊಳೆಸ್ತಿದೀನಿ. ಬೇಡ ಸಾರ್ ಇದು" ಎಂದಿದ್ದ.

"ಪರವಾಗಿಲ್ಲ. ತೆಗೆದುಕೊಳ್ಳೀಪ್ಪ. ಇಟ್ಟುಕೊಂಡಿರಿ" ಎಂದು ಬಲ ವಂತದಿಂದ ಕೈಗೆ ಕೊಟ್ಟುಬಂದಿದ್ದ. ಅದೇ ಬೆಳಿಗ್ಗೆ ಮಠಕ್ಕೆ ಹೋಗಿದ್ದಾಗ

ತನ್ನ ಬಳಿಯಿದ್ದ ಒಂದು ರೂಪಾಯಿನ ಚಿಲ್ಲರೆಯನ್ನು ಸ್ವಾಮಿಗಳ ಮಂಗಳಾರತಿ ತಟ್ಟೆಯಲ್ಲಿ ಹಾಕಿದ್ದ. ಅವನು ಅಲ್ಲಿಂದ ಹೊರಟು ೬.ರುವಾಗ ಸ್ವಾಮಿಗಳೆಂದಿದ್ದರು,

" ಶಾಂತಪ್ಪನೋರೆ ಈ ಚಿಲ್ಲರೆಯೆಲ್ಲಾ ತೆಗೆದುಕೊಂಡು ಒಂದು ನೋಟಿದ್ದರೆ ಕೊಟ್ಟುಬಿಡಿ. ನಮಗೆ ಈ ಚಿಲ್ಲರೆ ತುಂಬಾ ಭಾರ."

"ಆಗಲಿ, ಅದನ್ನ ಕೃಷ್ಣನ ಹತ್ತಿರ ಕಳಿಸಿ ನೋಟು ತರಿಸಿಕೊಳ್ಳಿ. ನಾನು ಅವನ ಕೈಲಿ ಕೊಟ್ಟ್ತೀರ್ನಿ" ಎಂದು ಶಾಂತಪ್ಪ ಉತ್ತರವಿತ್ತಿದ್ದ.

ಸ್ವಾಮಿಗಳಿಗೇಕೆ ನೋಟಿನ ಚಿಂತೆ? ಅವನು ಶಿವಮಂದಿರದಿಂದ ಹೊರಟಿರುವಾಗ ಅಲ್ಲಿ ನಿಂತಿದ್ದ ಶಿವಗಂಗೆಯ ಆ ದೃಷ್ಟಿ ಅವನನ್ನು ಚಕಿತಗೊಳಿಸಿತ್ತು. ಆ ದೃಷ್ಟಿಯಲ್ಲಿದ್ದ ಮೋಹಕ ಕಲೆ ಅವನನ್ನು ಒಂದು ಕ್ಷಣ ತಲ್ಲಣಗೊಳಿಸಿತು. ಸ್ವಾಮಿಗಳಿಗೂ ಅದೇ ಮೋಹದ ದೃಷ್ಟಿ ಜಾಲ ಬೀರಿದ್ದಳು, ತನಗೂ ಅದೇ ದೃಷ್ಟಿ ಬೀರುತ್ತಿರುವಳು, ಇವಳೇನು ಮನುಷ್ಯಳೋ ಅಥವಾ....,ಎಂದು ಶಾಂತಪ್ಪ ಚಿಂತಿಸಿದ್ದ.

ಅವನು ರಾಮನಾಯಕನ ಹಳ್ಳಿ ಸೇರಿ ತನ್ನ ಬಿಡಾರದತ್ತ ನಡೆದಾಗ, ಅಡಿಗೆಯವನು ಬಾಗಿಲಿನಲ್ಲಿಯೇ ನಿಂತಿದ್ದ, ಖಾನನು ಗಣಿಗೆ ಹೋಗಿರುವುನೆಂದು, ಮಾಣಿಕ್ಯಮ್ ಕೋಣಸಂದ್ರಕ್ಕೆ ಹೋಗಿರುವನೆಂದು ತಿಳಿಸಿದ. ಶಾಂತಪ್ಪ ಒಳಹೋಗಿ ಬಟ್ಟೆ ಬದಲಾಯಿಸಿಕೊಂಡು, ಲಾರಿಯವರೆಲ್ಲರಿಗೂ, ತನಗೂ, ಭಟ್ಟರ ಹೋಟಲಿನಿಂದ ಉಪಹಾರ ತರಿಸಿದನಂತರ ಅದೇ ಲಾರಿಯಲ್ಲಿಯೇ ಗಣಿಗೆ ಹೊರಟು ಹೋದ.

ಅವನು ಹಿಂದಿರುಗಿದಾಗ ಸಾಹುಕಾರರಿಂದ ಬಂದಿದ್ದ ಪತ್ರವೊಂದನ್ನು ಅಡಿಗೆಯವನು ಕೊಟ್ಟ. ಶಾಂತಪ್ಪ ಅದನ್ನೊಡೆದು ಓದಿದ. ಬರುವ ವಾರ ಗಣಿಯ ಪರಿಶೀಲನೆಗೆ ಕೇಂದ್ರ ಸರ್ಕಾರದ ಕಾರ್ಮಿಕ ಅಧಿಕಾರಿಯು ಬರುವವರಿದ್ದರು. ಆ ದಿನದ ಮಟ್ಟಿಗೆ ಹದಿನೆಂಟು ವರ್ಷದ ಒಳಗಿನ ಬಾಲಕ ಬಾಲಕಿಯರನ್ನೆಲ್ಲ ಕಲಸಕ್ಕೆ ಬರದಂತೆ ಹೇಳಬೇಕು. ಗಣಿಯಲ್ಲಿ ಐದಾರೆಡೆಗಳಲ್ಲಿ ನೀರು ತುಂಬಿದ ದೊಡ್ಡ ಮಡಕೆಗಳನ್ನಿಟ್ಟಿರಬೇಕು. ಒಟ್ಟು ಎಂಭತ್ತು ಜನ ಆಳುಗಳನ್ನು ಮಾತ್ರ ಆ ದಿನ ಬರುವಂತೆ ಏರ್ಪಡಿಸಬೇಕೆಂದು ಬರೆದಿದ್ದರು. ಗಣಿಯಲ್ಲಿ ಕೂಲಿಗಾರರಿಗೆ ಯಾವ ತೊಂದರೆಯೂ ಇಲ್ಲದಂತೆ ಇರುವ ಹಾಗೆ ಆ ದಿನ ತೋರ್ಪಡಿಸುವುದು ಅವನ ಜವಾಬ್ದಾರಿ. ಪ್ರತಿನಿತ್ಯವೂ ಗಣಿಗೆ ಹೋಗುರಬೇಕಾದುದು ಅವನ ಕರ್ತವ್ಯ' ಎಂದು ಪತ್ರದ ಕೊನೆಯಲ್ಲಿ ಬರೆದಿದ್ದರು.

ಪತ್ರದ ಕೊನೆಯ ವಾಕ್ಯವನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಹಾಗಾದರೆ ತಾನು, ಕರ್ತವ್ಯವನ್ನು ನಿರ್ವಹಿಸುತ್ತಿಲ್ಲವೇ? ಸಾಹುಕಾರರೇ ಬರೆದಿರುವ ಪತ್ರವೇ ಇದು? ತಾನು ಹಿರಿಯಣ್ಣನೆಂದು ಭಾವಿಸಿರುವ ಸಾಹುಕಾರರಿಂದ ಬಂದುದೇ ಇದು? ಪ್ರಶ್ನೆಗಳು, ಕುದಿಯುವ ನೀರೊಳಗಿನ ಗುಳ್ಳೆಗಳಂತೆ ಅವನ ಹೃದಯದ ತಳದಿಂದೆದ್ದು ಬರುತ್ತಿದ್ದುವು.

ಪತ್ರವನ್ನೋದಿದ ನಂತರ, ಆಗ ತಾನೆ ಕೋಣಸಂದ್ರದಿಂದ ಬಂದು ಕುಳಿತಿದ್ದ ಮಾಣಿಕ್ಯಂನನ್ನು ಮಾತನಾಡಿಸಲೂ ಬೇಕಾಗಲಿಲ್ಲ ಅವನಿಗೆ. ಪುನಃ ಪುನಃ ಅದೇ ಪತ್ರದ ಅವೇ ನುಡಿಗಳನ್ನು ಕಿವಿಯ ಬಳಿ ಯಾರೋ ಗುಯ್ಯುಟ್ಟಿದಂತಾಗುತ್ತಿದ್ದಿತವನಿಗೆ. ಅದನ್ನು ನೆನೆದಂತೆ ಅವನಿಗೊಂದು ಬಗೆಯ ದುಃಖವಾಗುತ್ತಿದ್ದಿತು. ಕೊನೆಗೆ, ಜೀವನದ ವನದಲ್ಲಿ ಕಾಲಿಟ್ಟಾಗ ಎದುರಿಗೆ ಎಂತಹ ದುಷ್ಟಪ್ರಾಣಿ ಬಂದರೂ ಅವನೊಡನೆ ಹೋರಾಡಿದನಂತರವೇ ಹಾದು ಹೋಗಬೇಕು ಎಂದುಕೊಂಡು ಕರ್ತವ್ಯ ಮುಖನಾದ,

"ಮಾಣಿಕ್ಯಮ್, ನಾಳೆ ರಾಮನಹಳ್ಳಿ ಸಂತೆಯಿಂದ ಹತ್ತು ಹನ್ನೆರಡು ದೊಡ್ಡ ದೊಡ್ಡ ಮಡಕೆ ತರಿಸಿ, ಅವಕ್ಕೆ ಬಾಯಿಮುಚ್ಚುವಂಥ ಮುಚ್ಚಳಗಳನ್ನು ತರಿಸಿಬಿಡಿ" ಎಂದ ಶಾಂತಪ್ಪ.

"ಅಲ್ಲಿಗೆ ಹೋಗೋರು ಸಿಕ್ಕಬೇಕಲ್ಲ ಸಾರ್"

"ಯಾರೂ ಸಿಕ್ಕದಿದ್ದರೆ ನೀವೇ ಹೋಗಿ ಬನ್ನಿ, ನಾಳೇನೆ ಅದು ಸಿಕ್ಕೋದು. ಇಲ್ಲದಿದ್ದರೆ ತೊಂದರೆಯಾಗುತ್ತೆ."

"ಅಂಥದೇನು ಸಾರ್ ಅರ್ಜೆಂಟು ?"

"ಮುಂದಿನ ವಾರ ಲೇಬರ್ ಇನಸ್ಪೆಕ್ಟರು ಬರ್ತಾರೆ....ಗಣಿ ನೋಡೋಕೆ"

ಆ ಮಾತನ್ನು ಹೇಳಿದೊಡನೆಯೇ ಮಾಣಿಕ್ಯಂ ಮುಖದಲ್ಲಿ ಯಾವುದೋ ಭಾವನೆಯ ಬೆಳಕು ಮಿಂಚಿನಂತೆ ಹೊಳೆದು ಮಾಯವಾದುದನ್ನು ಶಾಂತಪ್ಪ ಗಮನಿಸಿದರೂ ಗಮನಿಸದವನಂತೆಯೇ ಇದ್ದ.

"ಆಗಲಿ ಸಾರ್ ತರ್ತೀನೆ ....ಅದಕ್ಕೆ ದುಡ್ಡು ?"

"ನಾನು ಕೊಡ್ತೇನೆ." ಎಂದು ಶಾಂತಪ್ಪ ಜೇಬಿನಿಂದ ಐದು ರೂಪಾಯಿಗಳನ್ನು ತೆಗೆದು ಕೊಟ್ಟ. ಮಾಣಿಕ್ಯಂ ನೋಟನ್ನು ತೆಗೆದುಕೊಂಡು ಜೇಬಿಗೆ ಸೇರಿಸಿದ.

ಆ ಸಂಜೆಯೇ ಶಾಂತಪ್ಪನು ಅದೇ ಗಣಿಯಲ್ಲಿ ಕೆಲಸಗಾರನಾಗಿದ್ದ ವೆಂಕಟಪ್ಪ ಎಂಬುವವನೊಡನೆಯೂ ಹಣವನ್ನು ಕೊಟ್ಟು ಮಡಕೆಗಳನ್ನು ತರಹೇಳಿದ್ದ. ವೆಂಕಟಪ್ಪ ವಡ್ಡರ ಜಾತಿಗೆ ಸೇರಿದವನು. ಧೃಢಕಾಯ, ಅವಿದ್ಯಾವಂತ. ಆದರೆ, ಹಲವು ಜನ ಅವಿದ್ಯಾವಂತ ಕೂಲಿಗಾರರಲ್ಲಿರುವಂತೆಯೇ ವೆಂಕಟಪ್ಪನಲ್ಲಿಯೂ ಪ್ರಾಮಾಣಿಕತೆಯಿದ್ದಿತು; ಅವನು ಕರ್ತವ್ಯಪರನೂ ಆಗಿದ್ದುದರಿಂದ ಶಾಂತಪ್ಪನಿಗೆ ಅವನಲ್ಲಿ ವಿಶ್ವಾಸವಿದ್ದಿತು. ಆದ್ದರಿಂದಲೇ ಯಾವುದಾದರೊಂದು ಕೆಲಸವನ್ನು ಅವನಿಗೆ ನಿರ್ವಹಿಸಲೊಪ್ಪಿಸುತ್ತಿದ್ದ. ತನ್ನ ಬಟ್ಟೆಗಳನ್ನೊಗೆಸಲೂ ತನಗೆ ಬೇಕಾದ ಪದಾರ್ಥಗಳನ್ನು ತರಿಸಲೂ, ವೆಂಕಟಪ್ಪನನ್ನೇ ನಿಯಮಿಸುತ್ತಿದ್ದ. ವಾರವಾರವೂ ವೆಂಕಟಪ್ಪನಿಗೆ ಶಾಂತಪ್ಪನಿಂದ ಒಂದೆರಡು ರೂಪಾಯಿಗಳೂ ದೊರೆಯುತ್ತಿದ್ದುವು. ಆ ಹಣವನ್ನವನು ತೆಗೆದುಕೊಂಡು ಕಣ್ಣಿಗೊತ್ತಿಕೊಂಡು ಜೇಬಿಗಿಟ್ಟುಕೊಳ್ಳುವುದನ್ನು ನೋಡಿ ಶಾಂತಪ್ಪನಿಗೆ ಅವನ ಆ ಮೂಢ ನಂಬಿಕೆಯಾದರೂ ನಿಷ್ಠೆಯನ್ನು ನೋಡಿ ಸಂತೋಷವಾಗುತ್ತಿದ್ದಿತು..

ಮಾರನೆಯ ದಿನ ರಾತ್ರೆ ಮಾಣಿಕ್ಯಂ ಸಂತೆಯಿಂದ ಹಿಂದಿರುಗಿದಾಗ ಬರಿಗೈನಲ್ಲಿ ಬಂದಿದ್ದ. ಅವನು ಬಂದ ಸ್ವಲ್ಪ ಹೊತ್ತಿನ ನಂತರ ಸಂತೆಗೆ ಹೋಗಿದ್ದ ರತ್ನಮ್ಮ ಬೇರೆ ಮಾರ್ಗದಿಂದ ಬಂದುದನ್ನು ಶಾಂತಪ್ಪ ಗಮನಿಸಿದ. ಶಾಂತಪ್ಪ ಕೇಳಿದ,

"ಯಾಕೆ ಮಾಣಿಕ್ಯಂ ಮಡಕೆಗಳನ್ನು ತೆಗೆಸಿಕೊಂಡು ಬರಲಿಲ್ವ ?"

"ಅಯ್ಯೋ !....ಸಂತೆಯೆಲ್ಲಾ ಹುಡುಕಿದೆ ಸಾರ್, ಸಾಯಂಕಾಲದವರೆಗೂ ಒಂದು ಕಡೇಲೂ ಮಡಕೆಗಳೇ ಬಂದಿರಲಿಲ್ಲ....ಸುತ್ತಿ ಸುತ್ತಿ ನನಗೂ ಸುಸ್ತಾಗಿ ಬಿಡ್ತು."

ಶಾಂತಪ್ಪನಿಗೆ ಘಾಬರಿಯಾಯಿತು. ಎಲ್ಲಿಯೂ ಅವು ದೊರೆಯದಿದ್ದರೆ ಗತಿಯೇನು, ಸಾಹುಕಾರರು ಆ ಜವಾಬ್ದಾರಿಯನ್ನು ತನಗೆ ವಹಿಸಿದ್ದರು, ಅವು ಇಲ್ಲದಿದ್ದರೆ ಗಣಿಯಲ್ಲಿ ನೀರು ತುಂಬಿಸಿಡುವುದು ಹೇಗೆ ? ಗಣಿಯಲ್ಲಿ ನೀರಿಲ್ಲದಿದ್ದರೆ ಕಾರ್ಮಿಕಾಧಿಕಾರಿಯು ದೊಡ್ಡ ಆಕ್ಷೇಪಣೆಯೆತ್ತುತ್ತಾನೆ. ಸಾಹುಕಾರರಿಗೆ ಸರ್ಕಾರದಿಂದ ತೊಂದರೆಯಾಗಬಹುದು. ಎಲ್ಲವೂ ತಾನು ಮಡಕೆಗಳನ್ನು ತರಿಸದಿದ್ದುದರಿಂದ; ಈ ಸಂತೆ ದಿನ ಬಿಟ್ಟರೆ ಸುತ್ತಲಿನ ಯಾವ ಹಳ್ಳಿಯಲ್ಲೂ ಅದು ದೊರೆಯುವುದಿಲ್ಲ. ಇನ್ನೇನು ಗತಿ ?........ಶಾಂತಪ್ಪನು ಯೋಚಿಸುತ್ತಿದ್ದಂತೆಯೇ ಚನ್ನಯ್ಯನೂ ಇದ್ದಕ್ಕಿದ್ದಂತೆ ಅಲ್ಲಿ ಬಂದ.

"ಬಾರಪ್ಪ....ನೀನು ಬಂದುದು ಒಳ್ಳೆಯದಾಯಿತು."

"ಏಕೆ ಸಾರ್ ? ನನ್ನಿಂದೇನಾಗಬೇಕಿತ್ತು."

"ಎಲ್ಲಾದರೂ ಎಂಟು ಹತ್ತು ಮಡಕೆ ತರಿಸಿಕೊಡಪ್ಪ."

"ಅಯ್ಯಯ್ಯೊ....ಏನು ಮಾಡೋದು ಸಾರ್, ಹೋದ ವಾರ ನೀವು ಹೇಳಿದ್ದರೆ ಸಂತೇಗೆ ಬರೋ ಕುಂಬಾರಂಗೆ ಹೇಳಿ ಈ ವಾರ ತರಿಸಿಬಿಡ್ತಿದ್ದೆ. ಇಲ್ಲಿ ಹಾಗೆಲ್ಲಾ ಬೇಕೆಂದಾಗ ಮಡಿಕೆ ಸಿಕ್ಕೋಲ್ಲ ಸಾರ್...."

ಶಾಂತಪ್ಪ ಯೋಚಿಸತೊಡಗಿದ; ಚನ್ನಯ್ಯನೇ ಪುನಃ ಕೇಳಿದ,

"ಅದೇನು ಸಾರ್ ಅಂಥ ಅರ್ಜೆಂಟು ?"

"ಇನ್ನು ಮೂರು ದಿನಕ್ಕೆ ಲೇಬರ್ ಇನಸ್ಪೆಕ್ಟರು ಬರ್ತ್ತಾರಪ್ಪ."

"ಓಹೋ....ಅವರಾ ಸಾರ್....ಅವರು ಬಂದಾಗ ಕೂಲಿಯೋರಿಗೆ ನೀರು, ನೆರಳು, ಸರಿಯಾಗಿ ದೊರೆಯುತ್ತೋ ಇಲ್ಲವೋಂತ ನೋಡ್ತಾರೆ ಸಾರ್. ....ಏನು ಮಾಡೋದು....ಈ ಸಲ ಸಾವಕಾರ್ರಿಗೆ ಏನಾದರೂ ತೊಂದರೆಯಾಗುತ್ತೆ....ನೀವು ನಿನ್ನೇನಾದ್ರೂ ಹೇಳಿದ್ರೆ ಎಲ್ಲಾದರೂ ತರಿಸಿಬಿಡ್ತಿದ್ದೆ.... ಹೋದ ಸಲ ಇನಸ್ಪೆಕ್ಟರು ಬಂದಾಗ ಸುಬ್ಬಣ್ಣೋರು ಎಲ್ಲಾ ಸರಿಯಾಗಿ ಏರ್ಪಾಡು ಮಾಡಿದ್ರು...."

ಶಾಂತಪ್ಪನಿಗೆ ಬರೆಯೆಳೆದಂತೆ ಮಾತನಾಡಿದ ಚನ್ನಯ್ಯ. ಸುಬ್ಬಣ್ಣ ಸಮರ್ಥನಾದ ವ್ಯವಸ್ಥಾಪಕ, ಆದರೆ ಶಾಂತಪ್ಪ ಅಸಮರ್ಥ. ಕೇವಲ ಹತ್ತಾರು ಮಡಕೆಗಳನ್ನು ತಂದಿರಿಸಲು ವ್ಯವಸ್ಥೆ ಮಾಡದೇ ಸಾಹುಕಾರರಿಗೆ ತೊಂದರೆಯುಂಟು ಮಾಡಿಸುವವನು, ಎಂಬಂತೆ ಮಾತನಾಡಿದ್ದ ಅವನು.

"ಏನೋ ಸಾರ್ ಪ್ರಯತ್ನ ಮಾಡ್ತೀನಿ........ಆದರೂ ಸಿಕ್ಕೋದು ಅನುಮಾನ" ಎಂದು ಹೇಳಿದ ಚನ್ನಯ್ಯ ಅಲ್ಲಿಂದ ಹೊರಟುಹೋದ. ಅವನು ಹೋಗುವಾಗೊಮ್ಮೆ ಓರೆಗಣ್ಣಿನಲ್ಲಿ ಮಾಣಿಕ್ಯಂನನ್ನು ನೋಡಿ ಹಸನ್ಮುಖದಿಂದ ಹೋದುದನ್ನು ಶಾಂತಪ್ಪ ನೋಡಿದ.

ಶಾಂತಪ್ಪನನ್ನು ಈ ರೀತಿ ಮಾತನಾಡಿಸಬೇಕೆಂದೇ ಅವನು ಬಂದಂತಿದ್ದಿತು.

* * *

ಮಾರನೆಯ ದಿನ ಬೆಳಿಗ್ಗೆ ಐದು ಗಂಟೆಗೇ ಶಾಂತಪ್ಪನಿಗೆಚ್ಚರವಾಯಿತು. ಅವನು ಹೊರ ಹೋದಾಗ ಬಾಗಿಲಿನಲ್ಲಿ ವೆಂಕಟಪ್ಪ ನಿಂತಿದ್ದು, ಶಾಂತಪ್ಪನನ್ನು ನೋಡಿ ಅವನು ವಂದಿಸಿದ.

"ಓ....ಏನು ವೆಂಕಟಪ್ಪ....ನಿನ್ನೆ ಸಂತೇಲಿ ಮಡಕೇನೆ ಬಂದಿರಲಿಲ್ಲ ವಂತೆ."

"ಯಾವ್ರೋನು ಸಾರ್ ಹೇಳಿದ್ದು ಹಾಗೇಂತ........ಸಾವಿರ ಮಡಕೆ ಬೇಕಾದ್ರೂ ಸಿಕ್ತಿತ್ತು....ಸಂತೇಲಿ ಮಡಕೆ ಇಲ್ಲಾಂದರೆ ಏನು....ನಾನು ತಂದಿ ದೀನಿ ಸಾರ್, ನೀವು ಹೇಳಿರ್ಲಿಲ್ಲವಾ, ಹನ್ನೆರಡು ಮಡಕೆ ತಂದಿದೀನಿ. ಎಲ್ಲಿಡ ಲೀಂತ ಕೇಳೋಕೆ ಬಂದೆ ಅಷ್ಟೆ" ಎಂದ ವೆಂಕಟಪ್ಪ.

ವೆಂಕಟಪ್ಪನ ಮಾತಿನಿಂದ ಶಾಂತಪ್ಪನಿಗೆ ಸಂತೋಷವಾಯಿತು. ಹಾಗೆಯೇ ಚನ್ನಯ್ಯ ಮಾಣಿಕ್ಯಂರ ಕುತಂತ್ರವೂ ಹೊಳೆಯಿತು.

"ಈಗಲೇ ತಂದು ಒಳಗಿಟ್ಟುಬಿಡು." ಎಂದು ಹೇಳಿ ಶಾಂತಪ್ಪ ಆ ನಸುಕಿ ನಲ್ಲಿಯೇ ಸುತ್ತಾಡಿಕೊಂಡು ಬರಲು ಹೊರಟ.

ಶಾಂತಪ್ಪ ಹಿಂದಿರುಗಿದಾಗ ಇನ್ನೂ ಪೂರ್ಣವಾಗಿ ಬೆಳಕಾಗಿರಲಿಲ್ಲ. ಅಡಿಗೆಯವನೆದ್ದು ಒಲೆಗೆ ಬೆಂಕಿ ಹಾಕಿದ್ದ. ಮಾಣಿಕ್ಯಂ ಇನ್ನೂ ಮುಸುಕು ಹಾಕಿಕೊಂಡು ಮಲಗಿದ್ದ; ಅವನನ್ನು ನೋಡಿ ಶಾಂತಪ್ಪನಿಗೆ ಅಸಹ್ಯವಾ ಯಿತು. ಅವನ ನಡೆನುಡಿಗಳು ಮಲಿನವಾಗಿದ್ದಂತೆಯೇ ಮನಸ್ಸೂ ಮಲಿನ ವಾಗಿದ್ದಿತು. ಆದ್ದರಿಂದಲೇ ಶಾಂತಪ್ಪನಿಗೆ ಅವನನ್ನು ಕಂಡು ಕೋಪ ಬರು ವುದರ ಬದಲು ಅಸಹ್ಯವುಂಟಾಯಿತು.

ಮೂಲೆಯೊಂದರಲ್ಲಿ ವೆಂಕಟಪ್ಪ ತಂದಿಟ್ಟಿದ್ದ ಮಡಕೆಗಳು ಸಾಲಾಗಿ ಕುಳಿತಿದ್ದುವು. ಮಾಣಿಕ್ಯಂ ಎದ್ದಾಗ ಎದುರಿಗೇ ಇದ್ದ ಆ ಮಡಿಕೆಗಳನ್ನು ನೋಡಿ ಆಶ್ಚರ್ಯಭರಿತನಾಗಿ ಅಡಿಗೆಯವನನ್ನು ಕೇಳಿದ. ವೆಂಕಟಪ್ಪ, ಒಬ್ಬ ಕೂಲಿಯಾಳು ಅವನ್ನು ತಂದನೆಂದು ತಿಳಿದಾಗ ಮಾಣಿಕ್ಯಂನ ತಲೆಯಲ್ಲಿ ಯಾವು ಯಾವುವೋ ವಿಚಾರ ಚಕ್ರಗಳು ಗಿರ್ರೆನ್ನತೊಡಗಿದುವು.

ಆ ದಿನ ಗಣಿಗೆ ಹೋದಾಗ ಮಧ್ಯಾಹ್ನ ಮರವೊಂದರ ನೆರಳಿನಲ್ಲಿ ವಿಶ್ರ ಮಿಸಿಕೊಳ್ಳಲು ಶಾಂತಪ್ಪ ಕುಳಿತಾಗ, ವೆಂಕಟಪ್ಪ ಓಡುತ್ತಾ ಬಂದು,"ಬುದ್ಧೀ ನನ್ನ ಕೆಲಸದಿಂದ ಓಡಿಸೋಕೆ ಪ್ರಯತ್ನಮಾಡ್ತಿದಾರೆ. ಇಲ್ಲಿ ಕೂಲಿ ಬಂದರೆ ನನ್ನ ಹೆಂಡತಿ ಮಗೂಗೆ ಅನ್ನ. ಇಲ್ಲದಿದ್ರೆ ಉಪಾಸ. ನನ್ನ ಅನ್ನ ಉಳ್ಸಿ" ಎಂದ.

"ಯಾರು ನಿನ್ನನ್ನು ಓಡಿಸೋರು ?"

"ಮಾಣಿಕ್ಯಂರು ಚನ್ನಯ್ಯನೋರಿಗೆ ಯೇಳಿದ್ರು, ನನ್ನ ಓಡಿಸೋಕೆ."

"ನಿಂಗೆ ಹೇಗೆ ತಿಳೀತಿದು ?"

"ನಾನೇ ಸ್ವತಃ ಕೇಳಿದೆ."

"ಯಾವಾಗ ಕೇಳಿದ್ದೆ ?"

"ನಾನು ಬೆಳಿಗ್ಗೆ ಗಣೇಗೆ ಬರ್ತಿದ್ದಾಗ ಗಿಡದ ಮರೇಲಿ ಕೂತಿದ್ದೆ. ಆಗ ಮಾಣಿಕ್ಯಂ ಚನ್ನಯ್ಯನೋರೂ ಬರ್ತಿದ್ರು. ಅವರ ಮಾತು ನಂಗೆ ಕೇಳಿಸ್ತು. ಆಗ ನನ್ನ ಓಡಿಸೋಕೆ ಅವರು ಯೇಳ್ತಿದ್ರು."

"ಚನ್ನಯ್ಯ ನಿನಗೆ ಕೆಲಸಕ್ಕೆ ಬರಬೇಡಾಂತ ಹೇಳಿದಾಗ ನಂಗೆ ಬಂದು ಹೇಳು ನಾನು ನೋಡಿಕೊಳ್ತೀನಿ. ಈಗ ನೀನು ಹೋಗು, ಯೋಚ್ನೆ ಮಾಡ್ದೆ ಊಟ ಮಾಡು."

"ಆಗ್ಲಿ ಬುದ್ದಿ. ಈಗ ಇಟ್ಟು ಗಂಟೆಲೊಳಗೆ ಇಳೀತವೆ" ಎಂದು ಸಂತೋಷದಿಂದ ಹಿಂತಿರುಗಿ ಹೋದ. ವೆಂಕಟಪ್ಪ ನಾಲ್ಕಾರು ಹೆಜ್ಜೆ ಮುಂದೆ ನಡೆದಿದ್ದವನು ಪುನಃ ಬಂದು ಹೇಳಿದ,

"ನಾನು ಇಂಗೆ ಯೇಳ್ದೇಂತ ಚನ್ನಯ್ಯನೋರಿಗೆ ಯೇಳ್ಬೇಡಿ ಸಾರ್."

"ಆಗಲಿ ಹೋಗು."

ವೆಂಕಟಪ್ಪ ಹೊರಟುಹೋದ. ಆದರೆ ಕುಳಿತಿದ್ದ ಶಾಂತಪ್ಪನ ಮನಸ್ಸು ವೆಂಕಟಪ್ಪನ ಹಿಂದೆಯೇಹೋಯಿತು. ಬಂಡವಾಳಗಾರ, ಗುತ್ತಿಗೆದಾರರ ಮಧ್ಯೆ ಸಿಕ್ಕಿಕೊಂಡ ಈ ದೀನ ಜನರ ಜೀವನ ಎಷ್ಟೊಂದು ಗೋಳಿನಿಂದ ತುಂಬಿದೆ. ಇವರ ಬೆವರಿನಿಂದ ಘನೀಭೂತವಾದ ಉಪ್ಪಿನಲ್ಲಿ ನೂರರಲ್ಲಿ ಒಂದಂಶ ಮಾತ್ರ ಇವರಿಗೆ. ಉಳಿದುದೆಲ್ಲವೂ, ಸಾಹುಕಾರರು ಗುತ್ತಿಗೆದಾರರಲ್ಲಿ ಒಡೆದು ಹಂಚಲ್ಪಡುತ್ತದೆ. ಆದರೂ ಈ ದೀನರನ್ನು ದಮನಮಾಡುವುದು ಅಮಾನುಷವಲ್ಲವೆ? ಸರ್ವೇಜನಃ ಸುಖಿನೋಭವಂತು, ಎಂಬುದು ನಮ್ಮ ಜೀವನಮಂತ್ರ. ಆದರೆ ಇಲ್ಲಿನ ಜನಕೋಟಿಯಲ್ಲಿ ಸುಖೀಜನರು ಸಾವಿರಕ್ಕೊಬ್ಬರು ! ದುಡಿಯುವವ, ದುಡಿಸಿಕೊಳ್ಳುವವ ಎಂಬ ಎರಡೇ ವರ್ಗವಿದ್ದರೆ ಎಷ್ಟೋ ಒಳಿತು, ದುಡಿಸಿಕೊಳ್ಳುವವ ಬಂಡವಾಳಗಾರನಿಗೆ ಲಾಭಾಂಶ ದೊರಕುವುದರಲ್ಲಿ ಒಂದು ನ್ಯಾಯವಾದರೂ ಉಂಟು, ಆದರೆ ಈ ಗುತ್ತಿಗೆದಾರನಿಗೆ ಯಾವ ಹಕ್ಕು? ದೀನಧನಿಕ ಸಮಾಜದಲ್ಲಿನ ಪರಾವಲಂಬಿ (ಪ್ಯಾರಾಸೈಟ್) ಇವನು, ಆಹಾರ, ರಕ್ತದ ನಡುವೆ ಜಂತುಹುಳುವಿದ್ದಂತೆ ಈ ಕಂಟ್ರಾಕು ಪದ್ಧತಿ.

ಆದ್ದರಿಂದಲೇ, ಚನ್ನಯ್ಯನು ಬಡಪಾಯಿಯಾದ ವೆಂಕಟಪ್ಪನನ್ನು

ಕೆಲಸದಿಂದ ಓಡಿಸುವುದನ್ನು ತಡೆಗಟ್ಟುವುದು ಕಂಪೆನಿಯವರ ಪರಿಮಿತಿಯಲ್ಲಿರಲಿಲ್ಲ. ಸಾಹುಕಾರರಿಗೆ ಸೇರಿದ ಗಣಿಯಲ್ಲಿ ಅದಿರನ್ನು ತೆಗೆದುಕೊಡುವುದು ಅವನ ಜವಾಬ್ದಾರಿ ; ಅವನ ಆಡಳಿತವು ಹೇಗಾದರೂ ಇರಲಿ, ಕಂಪೆನಿಯವರಿಗೆ ಸೇರಿದ ವಿಷಯವಲ್ಲವದು. ಆದರೂ ಚನ್ನಯ್ಯನೇಕೆ ವೆಂಕಟಪ್ಪನನ್ನು ತೊಂದರೆಗೆ ಗುರಿಪಡಿಸಬೇಕು, ಇದ್ದಕ್ಕಿದ್ದಂತೆ ? ಪ್ರಶ್ನೆಗೆ ಉತ್ತರ ಹುಡುಕಿದ ಶಾಂತಪ್ಪನಿಗೆ ಉತ್ತರ ಹೊಳೆಯುವುದೇನು ತಡವಾಗಲಿಲ್ಲ, ವೆಂಕಟಪ್ಪನಿಗೆ ಚನ್ನಯ್ಯ ಮಾಣಿಕ್ಯಂಯ ತೊಂದರೆ ಕೊಡುವುದು ಸ್ವಯಂಸಿದ್ಧವಾಗಿದ್ದಿತು.

* * *

ಆ ದಿನ ಬೆಳಗ್ಗೆ ಮಡಕೆಗಳಲ್ಲಿ ನೀರು ತುಂಬಿಸಿ ಗಣಿಗೆ ಕಳುಹಿಸಿದ ಶಾಂತಪ್ಪ. ಗಣಿಯಲ್ಲಿ ಕಂಪೆನಿಯವರೇ ಕೆಲಸ ಮಾಡಿಸುತ್ತಿರುವೆವು, ಕಂಟ್ರಾಕ್ಟ್ ಕೊಟ್ಟಿಲ್ಲವೆಂದು ಕಾರ್ಮಿಕ ಅಧಿಕಾರಿಗೆ ತಿಳಿಸಬೇಕೆಂದು ಶಾಂತಪನಿಗೆ ಸಾಹುಕಾರರು ಸೂಚಿಸಿದ್ದರು.

ಬೆಳಗ್ಗೆ ಹನ್ನೊಂದು ಗಂಟೆಗೆ ಸಾಹುಕಾರರ ಕಾರು ದೂರದಿಂದಲೇ ಶಬ್ದ ಮಾಡಿಕೊಂಡು ತಾನು ಬರುತ್ತಿರುವ ಸೂಚನೆ ಕೊಟ್ಟಿತು. ಕಾರು ಹತ್ತಿರ ಬಂದಾಗ, ಕಾರಿನಲ್ಲಿ ಸಾಹುಕಾರರು, ಸುಬ್ಬಣ್ಣ ಮತ್ತು ಅಧಿಕಾರಿ ಕುಳಿತಿದ್ದುದೂ ಕಾಣಿಸಿತು.

ಸಾಹುಕಾರರು ಕಾರಿನಿಂದಿಳಿದು ಹೊಸ ಅಧಿಕಾರಿಗೆ ಶಾಂತಪ್ಪನ ಪರಿಚಯ ಮಾಡಿಕೊಟ್ಟರು. ಇಬ್ಬರೂ ಪರಸ್ಪರ ಹಸ್ತಲಾಘವವಿತ್ತನಂತರ ಶಾಂತಪ್ಪ ಅವರನ್ನೆಲ್ಲ ಒಳಗೆ ಕರೆದೊಯ್ದ. ಒಳಹೋಗುವಾಗ ಸುಬ್ಬಣ ಕಣ್ಣು ಸಂಜ್ಞೆ ಮಾಡಿ ಶಾಂತಪ್ಪನನ್ನು ಹೊರಗೆ ಕರೆದೊಯ್ದು ಹೇಳಿದ,

"ಅವರು ಇಲ್ಲೇ ತಿಂಡಿ ಊಟ ಮಾಡಿಬಿಡ್ತಾರೆ ಸಾರ್, ಅಡಿಗೆಯವನಿಗೆ ಹೇಳಿ ಭರ್ಜರಿ ಅಡಿಗೆ ಮಾಡಿಸಿ. ಹಣ್ಣು, ಬಿಸ್ಕತ್ತು, ಓವಲ್ಟೀನು ಎಲ್ಲಾ ನಾವೇ ತಂದಿದೀವಿ. ಎಲ್ಲಾ ಸರಿಯಾಗಿ ಏರ್ಪಾಡು ಮಾಡಿಸಿಬಿಡಿ."

"ಆಗಲಿ....ಗಣೀಗೆ ಹೋಗೋದು ಯಾವಾಗ ?"

"ಗಣಿಗೆ ಹೋಗೋದಿಲ್ಲ. ಇಲ್ಲೇ ಇದ್ದು ಹೂರಟು ಹೊಗ್ತಾರೆ. ಸಾಹುಕಾರ್ರು ಎಲ್ಲಾ 'ಸರಿ'ಮಾಡಿಬಿಟ್ಟಿದ್ದಾರೆ"

"ಗಣಿಗೆ ಹೋಗದಿದ್ರೆ, ಇನಸ್ಪೆಕ್ಷನ್ ಪುಸ್ತಕದಲ್ಲಿ ಬರೆಯೋದಿಲ್ವೆ?"

"ಎಲ್ಲಾ ಇಲ್ಲೇಬರೆದು ಕೊಟ್ಟುಬಿಡ್ತಾರೆ! ಅವರನ್ನು ಅಷ್ಟು ಸರಿ ಮಾಡಿ

ಕೊಳ್ಬೇಕಾದರೆ ಸಾಹುಕಾರ್ರು ಬಹಳ ಬುದ್ಧಿ ಖರ್ಚು ಮಾಡಿದ್ರು!....ಆದ್ರೂ ಎಲ್ಲಾ ಸರಿಮಾಡಿದಾರೆ....ಇನ್ನು ಅವರು ಗಣಿಗೆ ಹೋದರೆ ಏನಾದರೂ ತಪ್ಪು ಸಿಗೋದು, ಆ ತೊಂದರೆ ಯಾಕೇಂತ ನಮ್ಮ ಸಾಹುಕಾರ್ರು ಎಲ್ಲಾ ಮೊದಲೇ ಸರಿಮಾಡಿಕೊಂಡು ಬಿಟ್ಟಿದಾರೆ" ಸುಬ್ಬಣ್ಣನೆಂದ ನಗುಮುಖದಿಂದ.

"ಸರಿಮಾಡಿಕೊಂಡು ಬಿಟ್ಟಿದಾರೆ, ಅಂದರೆ ?"

"ಇನ್ನೂ ಗೊತ್ತಾಗಲಿಲ್ವ....ಇದಕ್ಕೇ ನಿಮಗಿನ್ನೂ ಅನುಭವ ಸಾಲು ಅಂತ ಹೇಳೋದು....ಅವರಿಗೆ ಕೈ ಬೆಚ್ಚಗೆ ಮಾಡಿಬಿಟ್ಟರೆ ಆಯ್ತು. ಈ ಕಾಲ ದಲ್ಲೇನು ಸಾರ್ ದುಡ್ಡೊಂದಿದ್ದರಾಯ್ತು, ಯಾವ ಅಧಿಕಾರಿಗಳನ್ನಾದ್ರೂ ಬುಟ್ಟೀಗೆ ಹಾಕ್ಕೋ ಭೌದು ?"

"ಅದಿರ್ಲಿ....ಈಗ ಅವರಿಗೆಷ್ಟು ಕೊಟ್ಟದ್ದು ?"

"ಇನ್ನೂರೈವತ್ತು ?" ಸುಬ್ಬಣ್ಣ ನಗುತ್ತಾ ನುಡಿದ.

ಆದರೆ ಶಾಂತಪ್ಪ ನಗಲಿಲ್ಲ. ಅವನಿಗೆ ನಗುವಂತಹ ಆನಂದವುಂಟಾ ಗಲೇ ಇಲ್ಲ.

ಅಧಿಕಾರಿ ಊಟಮಾಡಿದ ನಂತರ ಸಾಹುಕಾರರ ಕಾರಿನಲ್ಲಿ ಬೆಂಗ ಳೂರಿಗೆ ಹೊರಟು ಹೋದ. ಮಾರನೆಯ ದಿನ ಪುನಃ ಬೆಂಗಳೂರಿನಿಂದ ಬರು ವುದಾಗಿ ಸಾಹುಕಾರರು ಹೇಳಿದರು ಶಾಂತಪ್ಪನಿಗೆ.

ಮಾರನೆಯ ದಿನ ಬಂದ ಸಾಹುಕಾರರು ಶಾಂತಪ್ಪನನ್ನು ಕಂಡುದು ಗಣಿಯಲ್ಲೇ. ಅವರು ಗಣಿಯಲ್ಲಿನ ವಿಷಯಗಳನ್ನು ಕೇಳಿ ತಿಳಿದುಕೊಂಡ ನಂತರ ಶಾಂತಪ್ಪನೇ ಗಣಿಗೆ ಪ್ರತಿದಿನವೂ ಎತ್ತಿನ ಗಾಡಿಯಲ್ಲಿ ನೀರು ಸಾಗಿಸಿ ಕೂಲಿಗಾರರಿಗೆ ಅನುಕೂಲಮಾಡಿ ಕೊಡಬೇಕೆಂದು ತಿಳಿಸಿದ; ಅದರೊಡನೆಯೇ ದೊಡ್ಡದಾದ ನಾಲ್ಕಾರು ಗುಡಿಸಲು ಕಟ್ಟಿಸಿ ಕೆಲಸಗಾರರಿಗೆ ವಿಶ್ರಾಂತಿ ಸಮ ಯದಲ್ಲಿ ಕುಳಿತು ಕೊಳ್ಳಲು ಅನುಕೂಲ ಮಾಡಿಸಲೂ ಒಪ್ಪಿಗೆ ಪಡೆದ.

ರಾಮನಾಯ್ಕನಹಳ್ಳಿಯ ಬಿಡಾರದಲ್ಲಿ ಸಾಹುಕಾರರೆಂದರು,

"ನೋಡಿ ಮಿಸ್ಟರ್....ಶಾಂತಪ್ಪ ನೀವು ಆಗಾಗ್ಗೆ ಊರು ಬಿಟ್ಟು ಹೊರಟು ಹೋಗ್ತೀರೀಂತ ನನಗೆ ಸಮಾಚಾರ ಬಂತು...."

"ಅದು ಸುಳ್ಳು ಸಾರ್....ತಮಗೆ ಯಾರು ಹೇಳಿದರೋ ತಿಳಿಯದು."

"ಇರಲಿ. ಅದು ಸುಳ್ಳೇ ಆದರೂ ಸಹ ನೀವು ಇನ್ನು ಮೇಲೆ ನನಗೆ ಕಾಗದ ಬರೆದು ತಿಳಿಸದೆ ಎಲ್ಲಿಗೂ ಹೋಗಕೂಡದು....ಆಮೇಲೆ ಸಂಬಳ ತೆಗೆ

ದುಕೊಳ್ಳೋ ದಿನ ನೀವು ರುಜು ಹಾಕೋದಿಕ್ಕೆ ತಕರಾರು ಮಾಡಿದಿರೀಂತ ತಿಳೀತು...."

"ಯಾರು ಸಾರ್ ಇದೆಲ್ಲಾ ತಮಗೆ ಹೇಳಿದ್ದು? ನಾನು ತಕರಾರು ಮಾಡಿದೆನೇ ?"

"ಅದಿರ್ಲಿ ..ಗಂಗಯ್ಯನ ಗಣಿಗೆ ಹೋಗಿದ್ರಾ ಯಾವಾಗಲಾದ್ರ?"

"ಹೋಗಿದ್ದೆ. ಎಲ್ಲಾ ನೋಡಿಕೊಂಡು ಬಂದೆ"

"ಅವನ ಅದಿರು ಹೋಗಿದೆ ?"

"ಪರವಾಗಿಲ್ಲ ಸಾರ್. ಶೇಕಡ ನಲವತ್ತೆರಡು ನಲವತ್ತನಾಲ್ಕು ಬರಬೌದು."

"ನೀವು ಚೆನ್ನಾಗಿ ಅದಿರ್ನ ನೋಡಿದ್ರಾ ?"

"ನೋಡಿದೀನಿ ಸಾರ್. ನಲವತ್ತೆರಡಕ್ಕೆ ಮೋಸವಿಲ್ಲ."

"ನಲವತ್ತೆರಡು ಬರೋಲ್ಲಾಂತ ಸುಬ್ಬಣ್ಣ ಹೇಳಿದರಲ್ಲ."

"ಸುಬ್ಬಣ್ಣನವರು ಹೇಳಿದ್ದು ನಂಗೆ ಗೊತ್ತಿಲ್ಲ ಸಾರ್. ಆದ್ರೆ ನಲವತ್ತೆರಡು ಬರುತ್ತೇಂತ ನನಗನ್ನಿಸುತ್ತೆ."

"ನೀವು ಖಂಡಿತವಾಗಿ ಹೇಳ್ತೀರಾ ?"

"ಹೌದು ಸಾರ್....ಆದ್ರೆ ನಾನು ತಮ್ಮ ಹತ್ತಿರ ವಾದ ಮಾಡ್ತೀನೀಂತ ಭಾವಿಸಬಾರದು."

"ಅದಕ್ಕೇನ್ರಿ ಸತ್ಯ ಹೇಳೋದಿಕ್ಕೆ ಯಾವಾಗ್ಲೂ ಹೆದರಬಾರ್ದು!"

"ಹಾಗಾದ್ರೆ ನಾನು ಇನ್ನೊಂದು ಸತ್ಯಾಂಶ ಹೇಳಬೇಕೊಂತಿದೀನಿ ಸಾರ್

"ಹೇಳಿ....ಏನದು ?"

"ಚನ್ನಯ್ಯನ ಅದಿರು ಪ್ರತಿ ವಾರವೂ ಅಳತೇನು ಕಡಿಮೆಯಿರುತ್ತೆ, ಗ್ರೇಡೂ ಕಡಿಮೆಯಿರುತ್ತೆ."

"ಮತ್ತೆ ಸರಿಯಾಗಿರುತ್ತೇಂತ ಸುಬ್ಬಣ್ಣ ಹೇಳಿದರಲ್ಲಾ."

"ಏನೋ ಸಾರ್ ನನಗೆ ಹಾಗೆ ತೋರಿತ್ತು. ಸುಬ್ಬಣ್ಣನವರ ಮಾತು ನಂಬಬಹುದಾದರೆ ನಂಬಿ."

"ಯಾಕೆ ಅವರ ಮಾತು ನಂಬಬಾರದೇ?" ಸಾಹುಕಾರರು ಕೋಪದಿಂದಲೇ ಕೇಳಿದರು.

"ನಂಬಬಾರದೂಂತ ನಾನು ಹೇಳ್ಲಿಲ್ಲ. ಅವರು ನನಗಿಂತ ಅನುಭವಸ್ಥರು. ಆದ್ದರಿಂದ ಅವರಿಗೆ ನನಗಿಂತ ಚೆನ್ನಾಗಿ ಗೊತ್ತಿರಬೇಕು!"

"ಓ !....ಹಾಗೋ....ಸರಿ....ಸರಿ"

ನಾಲ್ಕಾರು ನಿಮಿಷಗಳ ನಂತರ ಸಾಹುಕಾರರೇ ಪುನಃ ಹೇಳಿದರು.

"ಮೊನ್ನೆ ಲೇಬರ್ ಇನ್‌ಸ್ಪೆಕ್ಟ್ರರು ಬಂದು ಇಲ್ಲೇ ಇದ್ದ ವಿಷಯ ನಿಮಗೆ ತಿಳಿದವರು ಯಾರಾದರೂ ಸರಕಾರದಲ್ಲಿದ್ರೆ ಅವರಿಗೆ ಹೇಳಿಬಿಡಬೇಡಿ. ಅವರು ಗಣೀಗೆ ಹೋಗಿದ್ದರೂಂತ ಹೇಳಿ ! ಗೊತ್ತಾಯ್ತೆ ?"

"ಗೊತ್ತಾಯ್ತು ಸಾರ್."

"ನಾನು ಇಲ್ಲೇ ಸ್ವಲ್ಪ ದೇವಸ್ಥಾನಕ್ಕೆ ಹೋಗಿಬರ್ತೀನಿ." ಎಂದು ಸಾಹುಕಾರರೆದ್ದರು. ಅವರ ಹಿಂದೆಯೇ ಮಾಣಿಕ್ಯಮ್ ಹೊರಟ.

ಶಾಂತಪ್ಪ ಬಾಗಿಲಿನಲ್ಲಿ ಹೋಗಿ ನಿಂತುಕೊಂಡ. ಎದುರಿನಲ್ಲಿ ಸಾಹುಕಾರರ ಬ್ಯೂಕು ಕಾರು ಪಳ ಪಳನೆ ಹೊಳೆಯುತ್ತಾ ನಿಂತಿತ್ತು. ಹದಿನಾರು ಹದಿನೆಂಟು ಸಾವಿರ ರೂಪಾಯಿ ಬೆಲೆಯ ವಸ್ತುವದು ಎಂದವನಿಗೆ ನೆನಪಾದಾಗ ಅದರ ಪ್ರತಿಯೊಂದು ಭಾಗವನ್ನು ನೋಡತೊಡಗಿದ. ನೋಡು ನೋಡುತ್ತಿದ್ದಂತೆಯೇ ಕಾರಿನ ಒಂದೊಂದು ಭಾಗದಲ್ಲಿಯೂ ಅವನಿಗೆ ಇದ್ದಕ್ಕಿದ್ದಂತೆ ಕನ್ನಡಿಯಲ್ಲಿನ ಪ್ರತಿಬಿಂಬದಂತೆ ಗಣಿಯ ಕಾರ್ಮಿಕರ ಮುಖ ಕಾಣಲಾರಂಭಿಸಿತು. ಬೆವರ ಹನಿಗಳು ಹಣೆಯಮೇಲೆ ಸಾಲುಗಟ್ಟಿದ ಆ ಮುಖಗಳು, ಕಾಂತಿಹೀನ ಕಣ್ಣುಗಳು, ನೀರಿಲ್ಲದೇ ಒಣಗಿದ ಬಾಯ್ಗಳು, ಹರಕು ವಸ್ತ್ರದ ಮೈ.... ಧನ್ ಧನ್....ಹಾರೆಯನ್ನು ಕಲ್ಲಿಗೆ ಹೊಡೆವ ಶಬ್ದ....ಠಪ್ ಠಪ್....ಸುತ್ತಿಗೆಯನ್ನು ಹೊಡೆವ ಶಬ್ದ....ಅದೇ ದೀನರ ಚಿತ್ರ, ಅವೇ ಶ್ರಮಕಾರ್ಯ.... "ಹ್ಹ....ಹ್ಹ....ಹ್ಹ....ನಾವೇ ಇಲ್ಲಿರುವವರು....ನಾವೇ ಇಲ್ಲಿರುವವರು ಏನು ನೋಡುತ್ತಿ!" ಅವರೆಲ್ಲರೂ ಒಟ್ಟಿಗೇ ಕೂಗಿದಂತಾಯ್ತು.

ಶಾಂತಪ್ಪ ಕಣ್ಣುಗಳನ್ನು ಹೊಸಕಿಕೊಂಡು ಪುನಃ ನೋಡಿದ. ಅವನ ಕಣ್ಣನ್ನು ಅವನೇ ನಂಬದಾದ. ಆ ಕೆಲಸಗಾರರ ದೇಹದಿಂದ ಬಿದ್ದ ಒಂದೊಂದು ಹನಿ ಬೆವರು ಇದ್ದಕ್ಕಿದ್ದಂತೆ ಘನೀ ಭೂತವಾಗಿ ಲೋಹದ ಒಂದೊಂದು ಅಣುಗಳಾದುವು. ಆ ಲೋಹಾಣುಗಳೆಲ್ಲವೂ ಒಟ್ಟಿಗೆ ಸೇರಿಕೊಂಡು ಕಾರಿನ ರೂಪ ಪಡೆದುವು. ಪುನಃ ಬೆವರ ಹನಿ, ಕಣ್ಣೀರ ಹನಿ, ಬೀಳುತ್ತಲೇ ಇದ್ದುವು, ಲೋಹಾಣುಗಳಾದುವು, ಕಾರಿಗೆ ಸೇರಿಕೊಂಡುವು.... ಬೆವರು, ಕಣ್ಣೀರು....ಕಾರು....ಬೆವರು....ಕಣ್ಣೀರು....ಕಾರು........ಕಾರಿನಲ್ಲಿನ ಮುಖಗಳು ...."ಹ್ಹ ಹ್ಹ....ಹ್ಹ....ನಾವೇ ನಾವೇ ಇಲ್ಲಿರುವವರು, ಏನು ನೋಡ್ತೀ ?....ಹ್ಹ....ಹ್ಹ....ಹ್ಹ....ನಾವೇ ?"

ಶಾಂತಪ್ಪನಿಗೆ ಕಣ್ಣು ಕತ್ತಲೆ ಹಿಡಿದಂತಾಯ್ತು. ತಲೆ ಸುತ್ತಿಬಂದಿತು. ಧಢಾರನೆ ಬಿದ್ದುಬಿಟ್ಟ.

ಅವನು ಎಚ್ಚರಗೊಂಡಾಗ ತಾನು ಹಾಸಿಗೆಯ ಮೇಲೆ ಮಲಗಿದ್ದುದರ ಅರಿವಾಯ್ತು, ಕಣ್ಣು ಬಿಟ್ಟವನೇ ಕೇಳಿದ,

"ಕಾರು....ಸಾಹುಕಾರ್ರು....?"

"ಇದೀನಿ....ಮಿಸ್ಟರ್ ಶಾಂತಪ್ಪ.... ಹೇಗಿದೆ ಈಗ?" ಸಾಹುಕಾರರು ಎದುರಿಗೇ ನಿಂತಿದ್ದರು. ಸುತ್ತಲೂ ಮಾಣಿಕ್ಯಮ್, ಚನ್ನಯ್ಯ, ವೆಂಕಟಪ್ಪ ಎಲ್ಲರೂ ನಿಂತಿದ್ದರು. ಅವರ ಕಾಲುಗಳ ಹಿಂಭಾಗದಲ್ಲಿ ಬಾಗಿಲಿನಾಚೆ ರತ್ನಮ್ಮ ನಿಂತಿದ್ದಳು.

"ತಾವು ನಿಂತಿದ್ದೀರಲ್ಲ ಸಾರ್...." ಎಂದು ಶಾಂತಪ್ಪ ಏಳ ಹೋದ.

"ಏಳಬೇಡಿ....ಏಳಬೇಡಿ....ಮಲಕ್ಕೊಳ್ಳಿ....ತುಂಬಾ ಜ್ವರ ಇದೆ." ಎಂದರು ಸಾಹುಕಾರರು. ಸಾಹುಕಾರರನ್ನು ನೋಡಿದ ಶಾಂತಪ್ಪ. ಅವರ ಮುಖ, ಸೂಟು, ಕೈನ ಗಡಿಯಾರ, ಉಂಗುರ ಎಲ್ಲವೂ ಗಿರ್ರನೆ ತಿರುಗಿದಂತಾದುವು. ಆ ತಿರುಗುತ್ತಿರುವ ಚಿತ್ರದಲ್ಲಿಯೂ ಅದೇ ಹಾರೆ, ಗುದ್ದಲಿ, ಸುತ್ತಿಗೆ, ಬಾಣಲೆ, ಬೆವರ ಹನಿ, ಕಂಬನಿ...."ನಾವೇ ನಾವೇ ಇಲ್ಲಿರುವವರು ಹ್ಹ....ಹ್ಹ ....ಹ್ಹಾ" ಶಾಂತಪ್ಪನಿಗೆ ಆ ಭಯಂಕರ ಕೂಗನ್ನು ಕೇಳಲಾಗಲಿಲ್ಲ. ಪುನಃ ಹಾಸಿಗೆಯ ಮೇಲೆ ಬಿದ್ದುಬಿಟ್ಟ,

ಶಾಂತಪ್ಪನಿಗೆಚ್ಚರವಾದಾಗ ತಕ್ಷಣ ಎದ್ದು ಕುಳಿತು ಹೇಳಿದ, "ಸಾರ್ ....ತಾವು....ಆ ಕಾರಿನಲ್ಲಿ ಹೋಗಬೇಡಿ ಸಾರ್....ಅದರಲ್ಲಿ...." ಅಷ್ಟರಲ್ಲಿಯೇ,

"ಸಾವಕಾರ್ರು ನಿನ್ನೇನೆ ಬೆಂಗಳೂರಿಗೆ ಹೊರಟ್ಹೋದ್ರು ಸಾರ್," ಎಂದು ಅಡಿಗೆಯವನೆಂದ.

# ೧೦

# ರತ್ನಗುಡ್ಡದಲ್ಲಿ ಚನ್ನಯ್ಯನ ದರೋಡೆ

ಶಾಂತಪ್ಪನಿಗೆ ಪ್ರತಿ ದಿನವೂ ಜ್ವರ ಬರತೊಡಗಿತು. ರಾಮನಾಯ್ಕನ ಹಳ್ಳಿಯಲ್ಲಿ ವೈದ್ಯರು ಯಾರೂ ಇಲ್ಲದಿದ್ದರಿಂದ ರಾಮಪುರದಿಂದ ಔಷಧಿಯನ್ನು

ತರಿಸಿಕೊಳ್ಳುತ್ತಿದ್ದ. ಅವನಿಗೆ ಸ್ವಲ್ಪ ಗುಣವಾಗಿ ಎದ್ದು ಓಡಾಡುವಂತಾಗ ಬೇಕಾದರೆ ಎಂಟು ಹತ್ತು ದಿನಗಳಾದುವು. ಒಂದು ದಿನ ಗಂಗಯ್ಯ ಬಂದ.

"ಅಯ್ಯೊ....ನೋಡೋಕಾಗುಲ್ಲವಲ್ಲ ಸಾರ್ ತಮ್ಮನ್ನ. ಮೊದಲು ಎಷ್ಟು ಚನ್ನಾಗಿದ್ರಿ. ಈಗ ನೋಡೋಕೆ ಆಗೋಲ್ಲ," ಕೃಶನಾಗಿದ್ದ ಶಾಂತಪ್ಪ ನನ್ನು ನೋಡಿ ಸಂಕಟಪಡುತ್ತಾ ಗಂಗಯ್ಯನೆಂದ.

"ನಮಗಲ್ಲದೆ ಖಾಯಿಲೆ ಇನ್ನು ಯಾರಿಗೆ ಬರಬೇಕು ಗಂಗಯ್ಯ. ಮನು ಷ್ಯರಿಗೇ ತಾನೆ ರೋಗ ಬರೋದು ?"

"ಹಾಗೆಂದು ಬಿಟ್ಟು ಊಟ ತಿಂಡಿ ಬಿಟ್ಟು ಗುಡ್ಡ ಸುತ್ತಿದರಾಗುತ್ತೆಯೇ ಸಾರ್ ? ಇಲ್ಲಿನ ಹವಾ ತುಂಬಾ ಕೆಟ್ಟದ್ದು. ಈಗ ಔಷಧಿಗೆ ಏನು ಮಾಡಿ ದ್ದೀರಿ."

"ರಾಮಪುರದಿಂದ ತರಿಸ್ತಿದ್ದೀನಿ."

"ಓಹೋ ಆ ಡಾಕ್ಟರೋ ದಿವಸವೊಂದಕ್ಕೆ ಮೂರು ಮೂರು ರೂಪಾಯಿ ತಗೋತಾನಲ್ಲ ಸಾರ್ ಅವ."

"ಹೌದಪ್ಪ."

"ಇದನ್ನೆಲ್ಲ ಸಾವಕಾರ್ರು ಕೊಡ್ತಾರೇನು ಸಾರ್ ?"

"ನಮ್ಮ ಖಾಯಿಲೆಗೆ ಸಾವಕಾರ್ರು ಯಾಕೆ ಕೊಡಬೇಕು."

"ಒಳ್ಳೇ ಚೆನ್ನಾಗಿ ಹೇಳ್ತೀರಿ ಸಾರ್. ನೀವೇನು ನಿಮ್ಮ ಮನೇಲಿ ಚೆನ್ನಾಗಿ ಊಟ ಮಾಡಿ ಖಾಯಿಲೆ ತಂದುಕೊಂಡಿಲ್ಲವಲ್ಲ. ಸಾವಕಾರ್ರ ಜೀತ ಮಾಡಿದ್ದಕ್ಕೆ ತಾನೇ ಖಾಯಿಲೆ ಬಂದದ್ದು ನಿಮ್ಗೆ. ಆದ್ದರಿಂದ ನಿಮ್ಮ ಔಷಧಿ ಖರ್ಚು ಅವರೇ ಕೊಡಬೇಕು ಅಲ್ವೆ ಸಾರ್ ?"

"ನಾವು ಅವರ ಕೆಲಸ ಮಾಡಿದ್ದಕ್ಕೆ ನಮಗೆ ಸಂಬಳ ಕೊಡೋದಿಲ್ವೆ ?"

"ಸಂಬಳ ಕೊಡೋದು ನಿಮ್ಮ ಊಟ ತಿಂಡಿಗಾಯ್ತು. ಸಂಬಳಾನೆಲ್ಲ ನೀವು ಔಷಧಕ್ಕೇ ಕೊಟ್ಟರೆ ಊಟ ಮಾಡೋದು ಏನು ಸಾರ್ ? ನ್ಯಾಯ ವಾಗಿ ಸಾವಕಾರ್ರು ಕೊಡಲೇಬೇಕು,"

ಗಂಗಯ್ಯನು ಹೆಚ್ಚಿನ ವಿದ್ಯಾವಂತನಲ್ಲದಿದ್ದರೂ ಅವನಲ್ಲಿ ವ್ಯವಹಾರ ಜ್ಞಾನ ವಿಪುಲವಾಗಿದ್ದಿತು, ಆದ್ದರಿಂದಲೇ ಶಾಂತಪ್ಪನಿಗೆ ಆ ಮಾತು ಕೇಳಿ ಸಂತೋಷಾಶ್ಚರ್ಯಗಳಾದರೂ, ಅವನ ಮಾತಿಗೆ ಬೆಂಬಲ ಕೊಡುವುದು ಸಾಧು ವಲ್ಲವೆಂದು ತೋರಿದ್ದರಿಂದ ಸುಮ್ಮನಾದ. ಕೊನೆಗೆ ಗಂಗಯ್ಯನೆಂದ.

"ಏನೋ ಸಾರ್ ನಾನು ಏನೂ ತಿಳಿಯದವನು. ತಾವು ಓದಿರೋರು.... ಅಂದ ಹಾಗೆ ಮರೆತೇ ಬಿಟ್ಟಿದ್ದೆ. ಮೊನ್ನೆ ಬೆಂಗಳೂರಿಗೆ ಹೋಗಿದ್ದಾಗ ಸಾವ ಕಾರ್ರು ಈ ಕಾಗದ ಕೊಟ್ಟಿದಾರೆ ನೋಡಿ" ಎಂದು ಗಂಗಯ್ಯ ತನ್ನ ಜೇಬಿನಿಂದ ಒಂದು ಪತ್ರವನ್ನೆಳೆದು ಶಾಂತಪ್ಪನ ಕೈಗೆ ಕೊಟ್ಟ.

"ಮತ್ತೆ ಇಷ್ಟರವರಗೆ ಹೇಳಲೇ ಇಲ್ಲವಲ್ಲಪ್ಪ. ಯಾವಾಗ ಬೆಂಗಳೂರಿಗೆ ಹೋಗಿದ್ದು ?"

"ಅದೇ ಸಾರ್. ನನ್ನ ಕಲ್ಲಿನ ವಿಷಯಕ್ಕೆ ಹೋಗಿದ್ದೆ. ನನ್ನ ಕಲ್ಲಿನ 'ಅನಾಲಿಸಿಸ್ ರಿಪೋರ್ಟನ್ನ' ತಗೊಂಡು ಹೋಗಿದ್ದೆ....ಆದರೂ ಸಾವಕಾರು ತುಂಬಾ ಬುದ್ಧಿವಂತರೂ ಸಾರ್."

"ಅದೇನಪ್ಪ ಹಾಗೆ ಹೇಳ್ತೀಯೆ ?"

"ನಾನು ಸುಬ್ಬಣ್ಣನ ವಿಷಯಾನೆಲ್ಲಾ ಹೇಳಿ, ನನ್ನ ಅನಾಲಿಸಿಸ್ ರಿಪೋರ್ಟನ್ನ ಅವರ ಕೈಗೆ ಕೊಟ್ಟಿದ್ದಕ್ಕೆ ಅವರೇನಂದ್ರು ಗೊತ್ತೆ ಸಾರ್?....'ಇಷ್ಟೆಲ್ಲಾ ಯಾಕೆ ತೊಂದರೆ ತಗೊಂಡೆ ಗಂಗಯ್ಯ, ನಿಂಗೆ ಬೇಕಾದರೆ ಒಂದು ಇನ್ನೂರ್ರ ಮುನ್ನೂರು ಜಾಸ್ತಿ :ಗೊಂಡಿರು, ಈ 'ಅನಲೈಸ್' ಮಾಡಿಸೋಕೆ ನೀನ್ಯ ದುಡ್ಡು ಖರ್ಚು ಮಾಡೋಕೆ ಯಾಕೆ ಹೋದೆ ?' ಅಂದುಬಿಟ್ಟರು.

"ಅದಕ್ಕೆ ನೀನೇನು ಹೇಳಿದೆ ?"

"ನಾನೇನು ಹೇಳೋದು ಸಾರ್, ಸುಬ್ಬಣ್ಣನ ವಿಷಯ ಹೇಳಿ ನಾನೇ ಹುಚ್ಚುಮುಂಡೆಯಾದೆ." ಗಂಗಯ್ಯನ ಮಾತು ಕೇಳಿ ಶಾಂತಪ್ಪನಿಗೆ ನಗು ಬಂದಿತಾದರೂ ಅದನ್ನು ತಡೆದುಕೊಂಡು ಹೇಳಿದ,

"ನೀನು ಹೇಳೋಕೆ ಯಾಕೆ ಹೋದೆ ?"

"ನಾನು ಸುಬ್ಬಣ್ಣನ ಯೋಗ್ತೇನ ತಿಳಿಸೋಣಾಂತ ಬೆಂಗಳೂರಿಗೆ ಹೋದೆ ಸಾರ್. ಆದ್ರೆ ನಾನು ಮಾತಾಡೋಕೇ ಅವಕಾಶ ಕೊಡದೇ ನನ್ನ ಬಾಯಿ ಮುಚ್ಚಿಸಿಬಿಟ್ಟು ಬೇರೆ ಮಾತು ತೆಗೆದುಬಿಟ್ರು. ಒಟ್ಟಿನಲ್ಲಿ ನಮ್ಮನ್ನೆಲ್ಲ ಕುರಿಗಳನ್ನಾಗಿ ಮಾಡಿ ತಮ್ಮ ಕೆಲಸ ಸಾಧಿಸಿಕೊಳ್ತಾರೆ. ನಾನು ಬೆಂಗಳೂರಿಂದ ಬರುವಷ್ಟರಲ್ಲಿ ಸುಬ್ಬಣ್ಣ ಲಾರೀಲಿ ಬಂದು ನನ್ನ 'ಕಲ್ಲನ್ನೆಲ್ಲ' ಸಾಗಿಸಿಕೊಂಡು ಹೋಗಿಬಿಟ್ಟ. ಹೋಗುವಾಗ ಈ ಸಲ ಶಿವಗಂಗೇನೂ ಅವರ ಜೊತೇಲಿ ಲಾರೀಲಿ ಹೋಗಿದ್ದಳಂತೆ !"

"ಇದು ನಿಜಾನೇ ?"

"ಬೇಕಾದ್ರೆ ಡ್ರೈವರ್ ರಾಮುಲೂನ ಕೇಳಿ ಸಾರ್."

ಶಾಂತಪ್ಪ ಮಾತನಾಡದೇ ಸಾಹುಕಾರರ ಪತ್ರವನ್ನು ಓದತೊಡಗಿದ.

ಚನ್ನಯ್ಯನು ರತ್ನಗುಡ್ಡದಲ್ಲಿ ಮ್ಯಾಂಗನೀಸು ಉತ್ತಮ ದರ್ಜೆಯದು ದೊರೆಯುವುದಾಗಿ ತಿಳಿಸಿದ್ದಾನೆ, ಆಗಲೇ ನೂರು ಟನ್ ಅದಿರನ್ನು ತೆಗೆಸಿದ್ದಾನೆ, ಅಲ್ಲಿ ಶ್ರೇಷ್ಠ ದರ್ಜೆಯ ಮ್ಯಾಂಗನೀಸ್ ಡೈಯಾಕ್ಸೈಡ್ ಪುಡಿಯೂ ದೊರೆಯುವುದು, ಪ್ರತಿ ವಾರವೂ ನೂರು ಟನ್‌ಗಳು ತೆಗೆಯಬಹುದು, ಎಂದು ತಿಳಿಸಿ ಒಂದು ಸಾವಿರ ರೂಪಾಯಿ ಮುಂಗಡ ತೆಗೆದುಕೊಂಡುಹೋಗಿದ್ದಾನೆ. ಇನ್ನೂ ಐದಾರು ಸಾವಿರ ರೂಪಾಯಿ ಬೇಕೆಂದು ತಿಳಿಸಿದ್ದಾನೆ, ಮುಂದಿನ ವಾರ ಅದನ್ನು ಕೊಡಬೇಕಾಗಿದೆ. ಅಲ್ಲಿಗೆ ಓಡಾಡಲು ರಸ್ತೆ ನಿರ್ಮಾಣ ಮಾಡಿದನಂತರ ತಾವು ಅಲ್ಲಿಗೆ ಹೋಗಿ ನೋಡುವರು, ಆದರೆ ತಕ್ಷಣ ಹೋಗಿ ಪರಿಶೀಲಿಸುವಂತೆ ಶಾಂತಪ್ಪನಿಗೆ ಸಾಹುಕಾರರು ಬರೆದಿದ್ದರು.

"ಏನು ಸಾರ್ ಸಮಾಚಾರ ?"

"ಏನೂ ವಿಶೇಷವಿಲ್ಲಪ್ಪ. ರತ್ನಗುಡ್ಡದಲ್ಲಿ ಒಂದು ಹೊಸ ಗಣೀನ ಪ್ರಾರಂಭಿಸ್ತಾರೆ."

"ಹಾಗಾದ್ರೆ ನಮಗೂ ಕಂಟ್ರಾಕ್ಟು ಕೊಡ್ತಾರೇನು ಸಾರ್ ?"

"ಇಲ್ಲ. ಚನ್ನಯ್ಯಂಗೇ ಪೂರ್ತಿ ಕಂಟ್ರಾಕ್ಟೂ ಕೊಟ್ಟುಬಿಟ್ಟಿದಾರೆ."

"ಸರಿ ಸಾರ್. ಚನ್ನಯ್ಯನಂಥ ದೊಡ್ಡ ಕಂಟ್ರಾಕ್ಟರು ತಾನೇ ಅಷ್ಟು ದೊಡ್ಡ ಗಣೀನ ನಡೆಸಬೇಕಾದ್ರೆ. ದೊಡ್ಡೋರೇ ದೊಡ್ಡೋರಾಗುತಿರೋದು ತಾನೇ ಈ ಕಾಲದಲ್ಲಿ", ಎಂದ ಗಂಗಯ್ಯ.

ಶಾಂತಪ್ಪ ನಕ್ಕು ಸುಮ್ಮನಾದ. ಗಂಗಯ್ಯ ಪುನಃ ಹೇಳಿದ,

"ಅದಿರ್‍ಲಿ ಸಾರ್. ನೀವಿನ್ನೂ ಖಾಯಿಲೆ ಮನುಷ್ಯರು. ಇನ್ನು ಎಂಟು ಹತ್ತು ದಿನ ಗಣೀಲಿ ಓಡಾಡಬೇಡಿ ಸಾರ್. ಗುಡ್ಡದ ಧಗೆ ಮೈಗೆ ಒಳ್ಳೇವಲ್ಲಾ. ನಿಮಗಿನ್ನು ತಿಳೀದು. ಅದೂ ಅಲ್ದೆ ಈ ಮಾಗಿ ಬಿಸಿಲು ಜೋರು, ಇನೂ ಕೆಟ್ಟದ್ದು."

"ಬಿಸಿಲಿಗೆ ಹೆದರಿಕೊಂಡು ಕೆಲಸ ಮಾಡದಿದ್ರೆ ಆಗುತ್ತೇನಪ್ಪ."

"ಹಾಗಾದ್ರೆ, ರತ್ನ ಗುಡ್ಡಕ್ಕೆ ಹೋಗೋದು ಹೇಗೆ ಸಾರ್ ?"

"ದೇವರು ಕೊಟ್ಟ ಕಾಲುಗಳಿವೆಯಲ್ಲ !"

"ಏನು ಸಾರ್ ಇದು: ಅಷ್ಟು ದೂರ, ನೀವು ಖಾಯಿಲೆ ಬಿದ್ದವರು

ನಡೆಯೋದೇ ? ನಿಮ್ಮ ಮಾಣಿಕ್ಯಂ ಕಳಿಸಿ ಸಾರ್. ನೀವು ದಯವಿಟ್ಟು ಬಿಸಿಲಿನಲ್ಲಿ ಅಷ್ಟು ದೂರ ಹೋಗಬೇಡಿ."

ಮಾಣಿಕ್ಯಂನನ್ನು ಕಳುಹಿಸಿದರೆ ಬರುವ ಉತ್ತರದ ಪರಿವೆಯಿದ್ದಿತ್ತು ಶಾಂತಪ್ಪನಿಗೆ. ಆದ್ದರಿಂದ ಗಂಗಯ್ಯನ ಮಾತಿಗೆ ಉತ್ತರವೀಯಲಿಲ್ಲ.

ಒಂದೆರಡು ನಿಮಿಷ ಮಾತನಾಡುತ್ತಾ ಕುಳಿತಿದ್ದನಂತರ ಗಂಗಯ್ಯ ಹೊರಟುಹೋದ.

* * * *

ಮಾರನೆಯ ದಿನ ರತ್ನಗುಡ್ಡಕ್ಕೆ ಹೋಗಲು ಹೊರಟುನಿಂತಿದ್ದ ಶಾಂತಪ್ಪ ಖಾನನೊಡನೆ ಹಲವು ಬಾರಿ ಚನ್ನಯ್ಯನಿಗೆ ಬರುವಂತೆ ಹೇಳಿಕಳುಹಿಸಿದ. ಆದರೆ ಹನ್ನೊಂದು ಗಂಟೆಯಾದರೂ ಚನ್ನಯ್ಯನ ಸುಳಿವೇ ಇಲ್ಲದ್ದರಿಂದ ಶಾಂತಪ್ಪನೇ ಖಾನನೊಡನೆ ಹೊರಟ. ಆ ದಿನ ರತ್ನಗುಡ್ಡವನ್ನೆಲ್ಲಾ ಸುತ್ತಿ ಅಲ್ಲಿ ದೊರೆಯುವ ಅದಿರಿನ ವಿಷಯವನ್ನೆಲ್ಲಾ ಅರಿತುಕೊಳ್ಳಬೇಕೆಂದೇ ಸಂಕಲ್ಪಿಸಿದ ಸುಮಾರು ಏಳೆಂಟು ಮೈಲಿ ನಡೆದುಕೊಂಡು ರತ್ನಗುಡ್ಡವನ್ನು ಶಾಂತಪ್ಪ ತಲುಪಿದಾಗ ಹನ್ನೆರಡೂವರೆ ಗಂಟೆಯಾಗಿದ್ದಿತು. ಅಲ್ಲಿ ಹರಿಯುತ್ತಿದ್ದ ತಣ್ಣನೆಯ ನೀರಿನಲ್ಲಿ ಕೈಕಾಲು ತೊಳೆದುಕೊಂಡು ಒಂದೆರಡು ನಿಮಿಷ ವಿಶ್ರಮಿಸಿಕೊಂಡನಂತರ ಗಣಿಯತ್ತ ಹೊರಡಲು ಎದ್ದುನಿಂತ ಶಾಂತಪ್ಪನನ್ನು ನೋಡಿ ಖಾನನೆಂದ,

"ಸಾರ್. ತಾವು ಒಳ್ಳೇ ಮಿಷನ್ನಿನ ಹಂಗೇ ನಡೀತೀರಿ ಸಾರ್."

"ಯಾಕೆ ನೀನೂ ನನ್ನ ಜೊತೇಗೇ ನಡೆದೆಯಲ್ಲಯ್ಯ," ಶಾಂತಪ್ಪ ನಗುತ್ತಾ ಕೇಳಿದ.

"ಆದ್ರೆ ತಮ್ಮ ಜೊತೆ ನಡೆಯೋಕೆ ನಮ್ಮ ಹಣೇಲಿ ಬರ್ದಿಲ್ಲ ಸಾರ್...... ಆ ಸುಬ್ಬಣ್ಣನವರಿದ್ದಾಗ ಹಿಂದೆ ಒಂದಿನಾನೂ ಹೀಗೆ ನಡೀತಿರಲಿಲ್ಲಾ ಸಾರ್ ಅವರು."

"ಅವರೂ ದಿನಾ ಗಣೀಗೆ ಬರೂತ್ತಿದ್ದರೂಂತ ಎಲ್ಲಾ ಹೇಳ್ತಾರೆ."

"ಸುಳ್ಳು ಸಾರ್ ಆ ಮಾತು. ಅವರು ಒಂದಿನಾನೂ ನಡೀತಿರಲಿಲ್ಲ. ಕೋಣಸಮುದ್ರದಿಂದ ಲಾರೀಗೆ ಬರೋಕೆ ಹೇಳಿಬಿಟ್ಟು ಅದರಲ್ಲಿ ಬಂದುಬಿಡುತ್ತಿದ್ದರು. ಸರಿ ಇಲ್ಲಿಂದ ಲಾರೀಲೆ ರಾಮಪುರಕ್ಕೆ ಹೋಗಿ ಹೋಟೇಲಿನಲ್ಲಿ ಕತ್ತಿನಗಂಟಾ ಎಲ್ಲರಿಗೂ ತಿನ್ನಿಸ್ತಿದ್ರು."

“ಹಾಗಾದರೆ ಅವರು ಒಳ್ಳೆಯವರು ?”

“ಅದಕ್ಕೇನೂ ಸಾರ್. ಕಂಪೆನಿ ಹೆಸರಿಗೆ ಖರ್ಚು ಹಾಕಿ ಸಾವಕಾರ್ರ ತಲೆ ಬೋಳಿಸೋಕೆ !”

ಶಾಂತಪ್ಪ ಉತ್ತರ ಕೊಡಲಿಲ್ಲ. ಸಣ್ಣ ದರ್ಜೆಯ ಕೆಲಸಗಾರರು, ತಮ್ಮ ಮೇಲಿನವರ ಬಳಿ ಮತ್ತೊಬ್ಬನ ಬಗ್ಗೆ ದೂಷಣೆ ಮಾಡುವುದು, ಅವರಲ್ಲಿಯೇ ವೃತ್ತಿ ವೈಷಮ್ಯದ ಬೆಂಕಿಯನ್ನು ಉರಿಸಲು ತುಪ್ಪ ಹೊಯ್ಯುವುದು ಸಾಮಾನ್ಯ ವಿಷಯ, ಹೀಗೆ ಮಾಡಿ ತಮ್ಮ ಮೇಲಿನವರ ವಿಶ್ವಾಸ ಸಂಪಾದಿಸುವುದು ಅವರ ಸ್ವಭಾವ.

“ಹೋಗಲಿ ಬಿಡು. ಹಾಗೆಲ್ಲ ಒಬ್ಬರನ್ನು ಅವರ ಹಿಂದೆ ಬೈಯಬಾರ್ದು. ಸುಬ್ಬಣ್ಣನವರೂ ಸಹ ಸಾಹುಕಾರ್ರಿಗಾಗಿ ಬೇಕಾದಷ್ಟು ಕೆಲಸ ಮಾಡಿದ್ದಾರೆ” ಎಂದ ಶಾಂತಪ್ಪ ಮುಂದೆ ನಡೆಯುತ್ತಾ.

“ಅದಕ್ಕೇನು ಸಾರ್ ಚನ್ನಯ್ಯನ ಹತ್ರ ಟನ್ನಿಗೆ ಎರಡು ರೂಪಾಯಿ ಲಂಚ ಹೊಡೀತಿದ್ರು. ಸಾವಕಾರ್ರ ದುಡ್ಡಿನಲ್ಲಿ ಬೇಕಾದಷ್ಟು ಖರ್ಚು ಮಾಡ್ತಿದ್ರು. ಅಷ್ಟು ದುಡ್ಡು ಹೊಡೆಯೋರಲ್ಲ ಸಾರ್, ನನಗೆ ಒಂದಿನಾ ಕೈಯೆತ್ತಿ ಒಂದು ರೂಪಾಯಿ ಕೊಡಲಿಲ್ಲ !”

ತನಗೆ ಒಂದು ರೂಪಾಯನ್ನಾದರೂ ಕೊಡಲಿಲ್ಲವೆಂಬ ಕೋಪದಿಂದ ಅವನು ಸುಬ್ಬಣ್ಣನ ರಹಸ್ಯವನ್ನು ಬಯಲು ಮಾಡುತ್ತಿರುವನೆಂದು ಯೋಚಿಸಿ ಶಾಂತಪ್ಪ ಖೊಳಕ್ಕನೆ ನಕ್ಕುಬಿಟ್ಟ.

ಆದರೆ, ತನ್ನ ಮಾತಿನ ಚಾತುರ್ಯಕ್ಕೆ ಹೊಸ ಮೇನೇಜರರು ನಕ್ಕರೆಂದುಕೊಂಡು, ಅವರ ವಿಶ್ವಾಸ ಸಂಪಾದಿಸಲು ಅಂತಹ ಮಾತನ್ನೇ ಹೆಚ್ಚು ಹೇಳಬೇಕೆಂದುಕೊಂಡು ಖಾನನೆಂದ,

“ಅಷ್ಟೇ ಅಲ್ಲ ಸಾರ್ ಆ ಸುಬ್ಬಣ್ಣ, ಮಾಣಿಕ್ಯಂ ಅವರು ಆ....”

ಅಷ್ಟರಲ್ಲಿಯೇ ಮೇಸ್ತ್ರಿ ಸಿದ್ದಪ್ಪನು ಎದುರಿನಲ್ಲಿ ಕಾಣಿಸಿಕೊಂಡು,

“ಓ. ಇದೇನು ಸಾರ್, ತಾವು ನಡಕೊಂಡು ಬಂದುಬಿಟ್ರಿ?” ಎಂದು ಕೇಳಿದ.

“ನಿಮ್ಮ ಗಣಿ ನೋಡೋಣಾಂತ ಬಂದೆನಪ್ಪ. ಒಳ್ಳೆ ಅದಿರು, ‘ಡೈಯಾಕ್ಸೈಡ್’ ಪುಡಿ (Manganese-di-oxide Powder) ಸಿಕ್ಕುತ್ತಂತೆ; ಆ ಸಳ ಮೊದಲು ತೋರಿಸು” ಎಂದು ಶಾಂತಪ್ಪ ಮುಂದೆ ಮುಂದೆ ನಡೆದ.

ಸಿದ್ದಪ್ಪ ಕುಣಿಯೊಂದರ ಬಳಿ ಶಾಂತಪ್ಪನನ್ನು ಕರೆದೊಯ್ದ. ಶಾಂತಪ್ಪ ಆ ಕುಣಿಯ ಒಳಗೆ ಅದರ ಸುತ್ತಲೂ ಹಲವು ಬಾರಿ ನೋಡಿ, ಸುತ್ತಲ ಭೂಮಿಯ ಗುಣವನ್ನು ಪರೀಕ್ಷಿಸಿದ. ಆಳುಗಳಿಂದ ಅದೇ ಕುಣಿಯನ್ನು ಒಂದೆಡೆ ಆಳಗೊಳಿಸಿ ಪರೀಕ್ಷಿಸಿಯೂ ಆಯ್ತು. ಕೊನೆಗೆ,

"ಇದೇಯೇನಪ್ಪ 'ಪೌಡರು' ಸಿಕ್ಕೋ ಪಿಟ್ಟು?" ಎಂದು ಪ್ರಶ್ನಿಸಿದ.

"ಹೌದು ಸಾರ್. ಚನ್ನಯ್ಯನೋರು ಹೇಳಿರೋದು ಇದೇ 'ಪಿಟ್ಟು' ಇಲ್ಲೇ ಪೌಡರು ಸಿಕ್ಕೋದು."

ಆ ಸ್ಥಳವಲ್ಲಿ ಕೆಂಪು ಮಣ್ಣು ತುಂಬಿದ್ದಿತು—ಕುಣಿಯ ಒಳಗೂ ಅದೇ ಕೆಂಪು ಮಣ್ಣು. ಆದರೆ ಒಂದೆಡೆ ಮೂಲೆಯಲ್ಲಿ ಮ್ಯಾಂಗನೀಸ್ ಅದಿರಿನ ಪುಡಿಯು ಕೊಂಚ ಕಾಣಿಸಿಕೊಂಡು, ಅದು ನೆಲಕ್ಕೆ ಉದುರುತ್ತಿದ್ದಿತು. ಅಲ್ಲಿಯೇ ಶಾಂತಪ್ಪ ಆಳವಾಗಿ ಅಗಿಸಿ ನೋಡಿದಾಗ ಅವನ ದೃಷ್ಟಿಗದು ನಿರಾಶಾದಾಯಕವಾಗಿ ಕಾಣಿಸಿತು. ಅವನು ಕೇಳಿದ,

"ಏನಯ್ಯ ಇದು, ಇಲ್ಲಿ ದಿನಕ್ಕೆ ಹತ್ತಾರು ಮೂಟೆ ಪೌಡರು ತೆಗೆಯೋಕಾಗುತ್ತೆಯೆ ?"

"ಆಗುತ್ತೆ ಸಾರ್. ಹಾಗಂತ ಚನ್ನಯ್ಯನವರೇ ಹೇಳಿದಾರೆ."

"ಇಲ್ಲಿ ಈಗಾಗಲೇ ಹತ್ತಿಪ್ಪತ್ತು ಮೂಟೆ ತೆಗೆದಿಟ್ಟಿದಾರಂತಲ್ಲ ಎಲ್ಲಿ ಅದು?"

"ಇಲ್ಲಿ ತೆಗೆದಿಟ್ಟಿದಾರಂತೇನು ಸಾರ್ ? ಅದು ನನಗೆ ಗೊತ್ತಿಲ್ಲ." ಆಶ್ಚರ್ಯಚಕಿತನಾಗಿ ಸಿದ್ದಪ್ಪ ಉತ್ತರಿಸಿದ.

"ನಿಮ್ಮ ಚನ್ನಯ್ಯ ಇಲ್ಲಿ ಬಂದಿದ್ದರೆ ಚನ್ನಾಗಿತ್ತು. ಅವನನ್ನೇ ಕೇಳ್ತಿದ್ದೆ....ಇರಲಿ" ಎಂದು ಶಾಂತಪ್ಪನೆಂದ. ಈ ತೆರನಾದ ವಿದ್ಯಮಾನಗಳನ್ನು ನೋಡಿ ಅವನಿಗೆ ಕೋಪ ಬೇಸರಗಳು ತುಂಬಿಬಂದಿದ್ದುವು.

ಆದರೆ ಅಲ್ಲಿಯೇ ನಿಂತಿದ್ದ ಆಳು, ಹತ್ತಿರದ ಹಳ್ಳಿಯ ಪಟೇಲನ ಮಗ ಮುಂದೆ ಬಂದು ಏನೋ ಮಾತನಾಡುವವನಂತೆ ನಿಂತುದನ್ನು ನೋಡಿ ಶಾಂತಪ್ಪ ಕೇಳಿದ.

"ಏನಯ್ಯ ?"

"ಏನಿಲ್ಲ ಸಾರ್. ಇಲ್ಲಿ ಪೌಡರು ಸಿಕ್ಕೇಸಿಕ್ಕುತ್ತೇಂತ ಚನ್ನಯ್ಯನೋರು ಹೇಳಿದ್ದಾರೆ ಸಾರ್. ಅವರಿಗೆ ಈ ಕೆಲಸದಲ್ಲಿ ತುಂಬಾ ಅನುಭವ ಇದೆ." ಅವನೆಂದ.

ಅವನ ಮಾತು ಕೇಳಿ ಶಾಂತಪ್ಪನಿಗೆ ಕೋಪ ಬಂದಿತು. ಅವನನ್ನು ಈ ಮೊದಲೇ ಒಮ್ಮೆ ಶಾಂತಪ್ಪ ಸಾಕಷ್ಟು ಹಳಿದಿದ್ದ; ಅವನ ಅಕ್ಕನ ವಿಷಯ ವನ್ನೇನೋ ಸಿದ್ದಪ್ಪ ಹೇಳಲು ಬಂದಾಗ ರೌದ್ರಾಕಾರ ತಾಳಿದ್ದ. ಆದ್ದ ರಿಂದಲೇ ಅವನಿಗೆ ಶಾಂತಪ್ಪನ ಮೇಲೆ ಕ್ರೋಧವಿದ್ದಿತು, ತಾನು ಹಳ್ಳಿಯ ಪಟೇಲನ ಮಗನಾದರೂ ತನ್ನ ಬಗ್ಗೆ ಹೊಸ ಮೇನೇಜರು ತುಚ್ಛವಾಗಿ ನುಡಿದಿದ್ದರೆಂಬ ಕೋಪದಿಂದಲೇ ಅವನು ಹಾಗೆ ಶಾಂತಪ್ಪನ ಮುಂದೆ ಬಂದು ಹೇಳಿದ. ಅಲ್ಲದೆ ಶಾಂತಪ್ಪ ಹೊಸಬ, ಹುಡುಗ, ಅನನುಭವಿ; ಚನ್ನಯ್ಯ ನಾದರೆ ಹಳಬ, ವಯಸ್ಕ, ಅನುಭವಿ ಸಾಹುಕಾರರ ಪ್ರೀತಿಪಾತ್ರನಾದ ಕಂಟ್ರಾಕ್ಟರು. ಆದ್ದರಿಂದಲೇ ಶಾಂತಪ್ಪನಿಗೆ ಏನೂ ತಿಳಿಯದೆಂಬ ಪೂರ್ಣ ನಂಬುಗೆಯಿಂದಲೇ ಹಾಗೆಂದ.

ಆದರೆ ಆ ಭೂಗುಣವನ್ನು ನೋಡಿದನಂತರ ಶಾಂತಪ್ಪನಿಗೆ ಚೆನ್ನಾ ಗಿಯೂ ಅರಿವಾಯಿತು, ಅಲ್ಲಿ ಆ 'ಪೌಡರು' ದೊರೆಯುವುದಿಲ್ಲವೆಂದು ಅಲ್ಲಿಗೆ ಬಂದುಹೋದನಂತರ ಒಮ್ಮೆ ಗೋಪಾಲಯ್ಯನೂ ಅಲ್ಲಿ ಏನೂ ದೊರೆಯುವು ದಿಲ್ಲವೆಂದು ಹೇಳಿದ್ದ. ಅಷ್ಟು ಪೂರ್ಣ ನಂಬುಗೆ ಬಂದಿದ್ದರೂ ಸಹ ತನಗೇನೂ ತಿಳಿಯದು, ಚನ್ನಯ್ಯನಿಗೇ ತಿಳಿಯುವುದೆಂಬ ಭಾವನೆಯಿಂದ ಪಟೇಲರ ಮಗು ಹೇಳುತ್ತಿದ್ದಾನೆ........

"ಹಾಗಾದರೆ, ಇಲ್ಲಿಗೆ ಚನ್ನಯ್ಯ ಬಂದಾಗ, ಹೆಚ್ಚು ಜನ ಆಳುಗಳನ್ನು ಬಿಟ್ಟು ಕೆಲಸ ಮಾಡಿಸುವಂತೆ ಹೇಳು. ಮುಂದಿನ ವಾರದ ಹೊತ್ತಿಗೆ ಐವತ್ತು ಮೂಟೆ ಪೌಡರು ತೆಗೆಸಬೇಕು. ಗೊತ್ತಾಯ್ತು ?" ಶಾಂತಪ್ಪ ಕೋಪದಿಂದ ಹೇಳಿದ. ಆ ಸ್ಪಷ್ಟ ನುಡಿಗೆ ಪಟೇಲನ ಮಗ ಬಾಯ್ದೆರೆದು ಉತ್ತರ ಕೊಡಲಾ ರದೇ ತಲೆಯಾಡಿಸಿದ.

ಒಂದೆರಡು ನಿಮಿಷಗಳಾದನಂತರ ಇದ್ದಕ್ಕಿದ್ದಂತೆ ದೂರದಲ್ಲಿ ನೋಡುತ್ತ ಸಿದ್ದಪ್ಪನೆಂದ,

"ಓ, ಚನ್ನಯ್ಯನವರೇ ಇಲ್ಲಿ ಬರ್ತಿದಾರೆ."

ಶಾಂತಪ್ಪ ನೋಡಿದಾಗ, ದೂರದಲ್ಲಿ ಎರಡು ಮೂರು ಗುಡ್ಡಗಳ ಮಧ್ಯೆ ಕಣಿವೆಯಲ್ಲಿ ಚನ್ನಯ್ಯ ಬರುತ್ತಿದ್ದುದು ಕಾಣಿಸಿತು,

"ಒಳ್ಳೇದೇ ಆಯ್ತು. ಅವನೇ ಬಂದನಲ್ಲ...." ಎಂದು ಶಾಂತಪ್ಪ ಮರ ವೊಂದರಬದಿಯಲ್ಲಿ ಕುಳಿತ. ಉಳಿದವರೆಲ್ಲ ತಮ್ಮ ತಮ್ಮ ಕೆಲಸದತ್ತಹೋದರು.

ಬೆವರು ಹರಿಸುತ್ತಾ ಗಣಿಯಲ್ಲಿ ಅಗೆಯುತ್ತಿದ್ದ ಆಳುಗಳು, ಬಿಸಿಲಿನಲ್ಲಿ ಕಲ್ಲನ್ನೊಡೆಯುತ್ತಾ ಕುಳಿತಿದ್ದ ಹೆಂಗಸರು, ಅವರಲ್ಲಿ ಎದೆಗೇ ತಮ್ಮ ಮಕ್ಕಳನ್ನು ಕಟ್ಟಿಕೊಂಡು ತಮ್ಮ ತೂಗುಬಿದ್ದ ಸ್ತನಗಳನ್ನು ಮಕ್ಕಳ ಬಾಯಲ್ಲಿಡುತ್ತಿದ್ದ ತಾಯಿಯರು ಕೆಲವರು, ಕುಣಿಯೊಳಗಿನಿಂದ ಮಣ್ಣನ್ನು ಹೊತ್ತುಕೊಂಡು ಹೋಗಿ ದೂರಕ್ಕೆ ಒಗೆಯುತ್ತಿದ್ದ ಬಾಲಕರು, ಇವರನ್ನು ನೋಡುತ್ತಾ ಶಾಂತಪ್ಪ ಹತ್ತಾರು ನಿಮಿಷಗಳನ್ನು ಕಳೆದನಂತರ ಚನ್ನಯ್ಯ ಬಂದ.

"ಓ....ಏನು ಸಾರ್, ತಾವು ಬಂದುಬಿಟ್ಟಿದ್ದೀರಿ ?"

ಚನ್ನಯ್ಯನ ಮಾತಿನ ರೀತಿಯಿಂದ ಶಾಂತಪ್ಪನಿಗೆ ಬೇಸರ ಬಂದಿತಾದರೂ ನಿಧಾನವಾಗೆಂದ,

"ನೀನು ಬರದಿದ್ದರೆ, ನಾನೂ ಬರದಿದ್ದರೆ ಹೇಗಪ್ಪ? ನೀನಂತೂ ಕಂಟ್ರಾಕ್ಟರು ವಾರಕ್ಕೆ ಒಂದು ಸಲ ಬಟವಾಡೆ ತೆಗೆದುಕೊಂಡು ಊರಿನಲ್ಲೇ ಕುಳಿತುಬಿಟ್ಟರೂ ಸರಿ."

"ಹಾಗಂದರೆ ಹೇಗೆ ಸಾರ್. ಸಾವಕಾರ್ರ ಉಪ್ಪು ತಿಂದ ಮೇಲೆ ನಾನು ದುಡೀದಿದ್ದರೆ ಶಿವ ಮೆಚ್ಚುತಾನೆಯೇ ?"

"ಶಿವ ಮೆಚ್ಚದಿದ್ದರೇನು ನಿನ್ನ ಎದುರಿಗೆ ಬಂದು, ನಾನು ಮೆಚ್ಚಲಿಲ್ಲಾಂತ ಅವ ಹೇಳ್ತಾನೆಯೆ ?" ಶಾಂತಪ್ಪ ನಗುತ್ತಾ ಹೇಳಿದ.

"ತಾವು ಚನ್ನಾಗಿ ಹೇಳ್ತೀರಿ ಸಾರ್......." ಚನ್ನಯ್ಯನು ನಕ್ಕು ಹೇಳಿದ.

"ಆ ಪೌಡರು ಸಿಕ್ಕೋ ಗಣಿ ತೋರಿಸು ಹೋಗಲಿ" ಎಂದು ಶಾಂತಪ್ಪ ನೆದ್ದ. ಅವರಿಬ್ಬರೂ ಅದೇ ಕುಣಿಗೆ ಹೊರಟರು. ನಡೆಯುವಾಗ ದಾರಿಯಲ್ಲಿ ಚನ್ನಯ್ಯನೆಂದ,

"ತಾವು ಹೇಳಿಕಳಿಸಿದ್ದಕ್ಕೆ ಬರಲಿಲ್ಲಾಂತ ಏನೂ ತಿಳ್ಕೋಬೇಡಿ ಸಾರ್ ಮನೇಲಿ ಜನನಕಾಲವಾಗಿತ್ತು ಆದ್ದರಿಂದ ತಡವಾಯಿತು."

ಶಾಂತಪ್ಪ ಆ ಮಾತಿಗೆ ಏನೂ ಉತ್ತರವೀಯಲಿಲ್ಲ. ಕುಣಿಯ ಬಳಿ ಬಂದಾಗ ಹೇಳಿದ,

"ಈ ಪಿಟ್ಟಿನಲ್ಲಾದರೆ ಇಲ್ಲಿ ಪೌಡರು ಸಿಕ್ಕೋಲ್ಲ."

"ಇಲ್ಲ ಸಾರ್. ಇಲ್ಲಿ ಸಿಕ್ಕುತ್ತೆ. ಇನ್ನು ಒಂದೆರಡು ಅಡಿ ಆಳ ಇಳಿಸಿದ್ರೆ ಖಂಡಿತ ಸಿಕ್ಕುತ್ತೆ."

"ಇನ್ನು ಹತ್ತು ಅಡಿ ಆಳವಿಳಿಸಿದ್ರೂ ಸಿಕ್ಕೋಲ್ಲ!" ಶಾಂತಪ್ಪ ಧೃಢವಾಗಿ ನುಡಿದ.

"ಇಲ್ಲ ಸಾರ್, ಸಿಕ್ಕುತ್ತೆ. ಪೌಡರು ಸಿಕ್ಕೋ ಜಾಗವೆಲ್ಲಾ ಮೊದಲು ಹೀಗೇ ಇರುತ್ತೆ. ಆಮೇಲೆ ದಿನಾ ಇಪ್ಪತ್ತು ಮೂಟೆ ಬೇಕಾದ್ರೂ ತುಂಬೋ ವಷ್ಟೂ ಸಿಕ್ಕಿಬಿಡುತ್ತೆ. ಒಟ್ಟಿನಲ್ಲಿ ಇಲ್ಲಿಗೆ ರಸ್ತೆ ಮಾಡಿಸಿ ಸಾವಕಾರ್ರು ಕಾರಿನ ಮೇಲೆ ಇಲ್ಲೀಗೆ ಬರೋಹೊತ್ತಿಗೆ ಇಲ್ಲಿ ಐನೂರು ಮೂಟೆ ಪೌಡರು ತುಂಬಿ ಸಿಡ್ತೀನಿ."

ಆ ಮಾತು ಕೇಳಿದ ಶಾಂತಪ್ಪನಿಗೆ, ಚನ್ನಯ್ಯನ ಹೃದಯ ಹೊಕ್ಕು ನೋಡಿದಂತಾಯ್ತು. ಹೇಗಿದ್ದರೂ ಈ ಕಾಡಿನಲ್ಲಿ ನಡೆದುಕೊಂಡು ಸಾಹುಕಾರು ಬರುವಂತಿಲ್ಲವಾದ್ದರಿಂದ, ರಸ್ತೆ ಮಾಡಿಸಿ ಅವರು ಕಾರು ಅಥವಾ ಲಾರಿಯಲ್ಲಿ ಕುಳಿತು ಸ್ವತಃ ಬಂದು ಗಣಿಯನ್ನು ನೋಡುವ ಮುನ್ನ ಮ್ಯಾಂಗನೀಸ್ ಡೈಯಾಕ್ಸ್ಯೆಡ್ ಪುಡಿಯನ್ನು ತೆಗೆಸುವೆನೆಂದು ಆಶ್ವಾಸನವಿತ್ತು, ಸಾವಿರಾರು ರೂಪಾಯಿ ಹಣ ಸೆಳೆಯುವ ತಂತ್ರ ಹೂಡಿರುವನು ಇವನು !

"ಇಲ್ಲಿ ನೀನು ಒಂದು ತಿಂಗಳು ಕೆಲಸ ಮಾಡಿಸಿದ್ರೂ ಪೌಡರು ಸಿಕ್ಕೊಲ್ಲ. ಹಾಗೆ ಸಿಕ್ಕೇಸಿಕ್ಕುತ್ತೇಂತ ನಿನಗೆ ನಂಬಿಕೆಯಿದ್ರೆ ಈವತ್ತಿನಿಂದಲೇ ನೂರು ಜನರನ್ನ ಕೆಲಸಕ್ಕೆ ಬಿಟ್ಟು ಒಂದು ವಾರದಲ್ಲಿ ಕೊನೇಪಕ್ಷ ಐವತ್ತು ಮೂಟೆ ಪೌಡರು ತುಂಬಿಸಿಡು" ಎಂದ ಶಾಂತಪ್ಪ.

"ಇಲ್ಲಿ ಸಿಕ್ಕೇಸಿಕ್ಕುತ್ತೆ ಸಾರ್. ಹಾಗೆ ಇಲ್ಲಿ ಪೌಡರು ಸಿಕ್ಕದಿದ್ರೆ ನನ್ನ ಟೋಪಿ ತೆಗೆದು ಬಿಸಾಕಿಬಿಡ್ತೀನಿ" ಅಷ್ಟೇ ಸ್ಪಷ್ಟವಾಗಿ ಚನ್ನಯ್ಯನೆಂದ.

"ಸರಿ ಹಾಗಾದ್ರೆ. ನಾನು ಹೇಳಿದೆನಲ್ಲ. ಮುಂದಿನ ವಾರ ಐವತ್ತು ಮೂಟೆ ತೆಗೆಸಿಡು !" ಶಾಂತಪ್ಪ ಆಣತಿ ಮಾಡಿ ಮುಂದೆ ಹೊರಟ. ಅವನ ಹಿಂದೆಯೇ ಬಂದ ಚನ್ನಯ್ಯನಿಗೆ ಪುನಃ ಹೇಳಿದ,

"ನೀನು ಈಗ ಇಲ್ಲೇ ಇದ್ದು ಎಲ್ಲಾ ಏರ್ಪಾಟು ಮಾಡು....ನೋಡು ಆ ಹೆಂಗಸಿಗೆ ಎಷ್ಟು ದಿನ ಹೇಳಿದರೂ ಅವಳು ಕೇಳೋದಿಲ್ಲ, ಅವಳ ಮಗೂನ ಬೇರೆ ಕಡೆ ಮಲಗಿಸೋಕೆ ಹೇಳು.........ಆ ಸಣ್ಣ ಹುಡುಗೀನ ಕೆಲಸಕ್ಕೆ ಬರ ಬೇಡ ಅಂತ ಹೇಳು."

"ಆಗಲಿ ಸಾರ್."

ಶಾಂತಪ್ಪ ಉತ್ತರವೀಯದೆ ಹೊರಟುಬಿಟ್ಟ. ಅವನು ಅತ್ತ ಹೋಗು ತ್ತಿದ್ದಂತೆಯೇ ಚನ್ನಯ್ಯ ಕುಣಿಯ ಬಳಿ ನಡೆದ. ಪಟೇಲನ ಮಗ ಅವ ನೊಡನೆ ಮೆಲ್ಲನೆ ನುಡಿದುದು ಅವನಿಗೆ ಅಸ್ಪಷ್ಟವಾಗಿ ಕೇಳಿತು,

"ಪರವಾಗಿಲ್ಲಯ್ಯೋ, ಹೊಸ ಮ್ಯಾನೇಜರು ಜೋರಾಗವ್ರೆ. ಹಳಬ ಸುಬ್ಬಣ್ಣನಂಗಲ್ಲ."

"ಸುಬ್ಬಣ್ಣನೂ ಮೊದಲಲ್ಲಿ ಹಿಂಗೇ ರೋಫಾಗಿದ್ದ. ಆಮೇಲೆ ರುಚಿ ತೋರಿಸ್ದೆ, ಬಿದ್ದ"

"ಯಾಕೆ ಈಯಪ್ಪಂಗೆ ರುಚಿ ತೋರಿಸ್ಲಿಲ್ವ?"

"ತೋರಿಸ್ದೆ. ಆ ಶಿವಿ ಹೆಂಗೆ ನಡ್ಕೊಂಡ್ಲೋ ಏನೋ! ಅವತ್ತು ಅವಳನ್ನ ಇವರು ಓಡಿಸಿಬಿಟ್ರಂತೆ!"

"ಅದು ಹೋಗ್ಲಿ ಕಾಸು ತೋರಿಸ್ಲಿಲ್ವ?"

"ಅದೂ ಕೊಟ್ಟೆ ಒಂದಿನಾ. ನಾನು ಎಷ್ಟೋ ಕೇಳಿಕೊಂಡ್ರೂ ತಗೊಳ್ಲಿಲ್ಲ. ಇನ್ನೂ ಕೇಳಿದ್ರೆ ನಂಗೇ ಒದೆ ಬೀಳ್ತಿತ್ತೋ ಏನೋ ಅಷ್ಟೊಂದು ಕೋಪ ತೋರಿಸ್ಬಿಟ್ರು."

"ಮತ್ತೆ ಏನು ಮಾಡ್ದೋದು ಇನ್ನುಮೇಲೆ ?"

"ಹುಡ್ಗಿ, ಹಣ ಯಾವ 'ಪಳಾನೂ' ನಡೀಲಿಲ್ಲ ಇವರ್ತಾವು. ಏನು ಮಾಡೋದು ?"

"ಯಾವುದಾದ್ರೂ ಹದಿನೇಳು ಹದಿನೆಂಟರ ಹುಡ್ಗೀನ....ಹೆಂಗಿದ್ರೂ ಮದ್ವೆ ಇಲ್ಲ. ದಿನಾ ದಿನಾ ಗಣೀ ತುಂಬಾ ಹೆಣ್ಣುಗಳನ್ನ ನೋಡಿ ತಲೆ ಕೆಡುತ್ತಿರುತ್ತೆ. ನೋಡು ಒಂದು ಕೈ."

"ಅಯ್ಯೋ ಇವರು ಹಂಗಲ್ಲಪ್ಪಾ."

"ಸರಿಯಾದ್ದನ್ನ ಕಳಿಸಿದ್ರೆ ತಾವೇ ಬುಟ್ಟೀಗೆ ಬೀಳ್ತಾರೆ. ಇಲ್ದಿದ್ರೆ ಆ ಶಿವೀಗೆ ಹೇಳು ಆಗಾಗ್ಗೆ ಕಣ್ಣಿಡುತ್ತಿರೋಕೆ."

" ಇರಲಿ ಈ ಅಯ್ಯನ್ನ ಬಲೀಗೆ ಹಾಕ್ಕೊಳ್ದಿದ್ರೆ ನಾನು ಚನ್ನಯ್ಯನೇ ಅಲ್ಲ."

ಶಾಂತಪ್ಪನಿಗೆ ಒಂದೊಂದು ಮಾತೂ ಅವನ ಆತ್ಮಾಭಿಮಾನದ ಮೇಲೆ ಕಶಾಘಾತದಂತೆ ಬೀಳತೊಡಗಿದುವು. ತಕ್ಷಣ ಹಿಂದಿರುಗಿ ಚನ್ನಯ್ಯನನ್ನು ಹೊಸಕಿಹಾಕಿಬಿಡಲೇ ಎನ್ನಿಸಿತು. ಆದರೆ ತನ್ನಲ್ಲಿ ತಾನೇ ವಿವೇಚನೆಮಾಡಿಕೊಂಡು ತಾಳ್ಮೆ ತಂದುಕೊಂಡ.

ಅವನು ಸಂಜೆ ಭಟ್ಟರ ಹೋಟೇಲಿಗೆ ಹೋದಾಗ ಅಲ್ಲಿ ಶಾನುಭೋಗ ಈಶ್ವರಯ್ಯನವರೂ ಕುಳಿತಿದ್ದರು. ಅವರು ಅದೇ ಊರಿನ ಶಾನುಭೋಗ

ರೆಂದು ತಿಳಿದಿದ್ದರೂ ಅವರೊಡನೆ ಮಾತನಾಡುವ ಪ್ರಸಂಗ ಅದುವರೆಗೂ ಉದಯವಾಗಿರಲಿಲ್ಲ. ಆದರೆ ಅವನು ಆಗ ಹೋಟೇಲಿನ ಒಳಹೊಕ್ಕಾಗ ಅವರವನನ್ನು ಸ್ವಾಗತಿಸಿದರು.

"ಓಹೋ, ಶಾನುಭೋಗರಿಗೆ ನಮಸ್ಕಾರ" ಎಂದ ಶಾಂತಪ್ಪ.

"ಬನ್ನಿ ಸಾರ್....ಕೂತುಕೊಳ್ಳಿ" ಎಂದು ಈಶ್ವರಯ್ಯನವರೂ ಹೇಳಿದರು. ಅವರಿಬ್ಬರೂ ಕಾಫಿ ಕುಡಿದ ನಂತರ ಶಾಂತಪ್ಪನೇ ಭಟ್ಟರಿಗೆ ಹಣ ಕೊಟ್ಟ. ಹಾಗೆಯೇ ಮಾತನಾಡುತ್ತಾ ಇದ್ದಾಗ ಶಾನುಭೋಗರೆಂದರು,

"ತಾವು ಈಗ ಬಂದುದೂ ಒಳ್ಳೇದೇ ಆಯಿತು ಸಾರ್. ಈಗ ಪಟೇಲರೂ ಬರ್‍ತಾರೆ ಇಲ್ಲೀಗೇನೆ, ನಿಮ್ಮ ಹತ್ತಿರ ಕೆಲವು ಮಾತನ್ನಾಡಬೇಕಿತ್ತು."

"ಗುಟ್ಟಿನ ವಿಷಯವೇನಾದರೂ ಇದ್ದರೆ ಬನ್ನಿ ಹಾಗೇ ಮಾತನಾಡಿಕೊಂಡೇ ಹೋಗೋಣ."

"ಗುಟ್ಟು ಅಂದರೆ, ಈ ಭಟ್ಟರಿಗೆ ತಿಳಿಯದಂತಹ ಗುಟ್ಟೇನೂ ಅಲ್ಲ. ಟೇಲರೂ ಬರಲಿ. ಮಾತನಾಡೋಣ." ಎಂದು ಈಶ್ವರಯ್ಯನವರೆಂದ ಒಂದೆರಡು ನಿಮಿಷಗಳ ನಂತರ ರಾಮನಾಯ್ಕನಹಳ್ಳಿಯ ಪಟೇಲರೂ ಬಂದರು.

"ಓಹೋ ಆಗಲೇ ಸೇರಿಬಿಟ್ಟಿದ್ದೀರಿ........ಸರಿ, ನಮ್ಮ ಈಶ್ವರಯ್ಯನವರೇನು ಕೆಲಸ ಒಪ್ಪಿಕೊಂಡರೆ ಮಾಡಿದರೂಂತಲೇನೆ" ಎನ್ನುತ್ತಾ ಪಟೇಲರು ಒಳ ಬಂದು ಕುಳಿತರು.

ಶಾನುಭೋಗರೇ ಮಾತು ತೆಗೆದರು.

"ನೋಡಿ ಸಾರ್, ವಿಷಯ ಇಷ್ಟೇನೆ. ಈ ಊರಿನಲ್ಲಿ ನಿಮ್ಮ ಕಂಪೆನಿಯ ಮಾಣಿಕ್ಯಂ, ಚನ್ನಯ್ಯ ಇವರ ಕಾಟ ಹೆಚ್ಚಾಗಿದೆ. ಆ ಮಾಣಿಕ್ಯಂ ಪಕ್ಕದ ಮನೆ ಶಿವಣ್ಣನ ತಂಗಿ ರತ್ನಮ್ಮನ್ನ ಕೆಡಿಸಿಬಿಟ್ಟಿದಾನೆ. ಚನ್ನಯ್ಯನಂತು ಊರಿನಲ್ಲಿ ಐದಾರು ಜನರನ್ನ ಇಟ್ಟುಕೊಂಡಿದಾನೆ. ಇದರ ಜೊತೆಗೆ ಅವನು ಈ ಊರಿನಲ್ಲಿ ಅನೇಕ ಜನ ಬಡವರಿಂದ ಗಣೀಲಿ ದುಡಿಸಿಕೊಂಡು ನಾಲ್ಕು ಐದು ವಾರದಿಂದ ಸರಿಯಾಗಿ ಕೂಲಿ ಕೊಟ್ಟಿಲ್ಲ, ಅವರೆಲ್ಲ ತುಂಬಾ ತೊಂದರೆಪಡ್ತಿದಾರೆ."

"ಈಗ ಎರಡು ವಾರದಿಂದಲಂತೂ ಪೂರ್ತಿ ಕೂಲಿ ಕೊಟ್ಟಿಲ್ಲ," ಎಂದು ಪಟೇಲರೆಂದರು ಮಧ್ಯೆ.

"ನೋಡಿದಿರಾ....ಈ ಹಳ್ಳಿ ಜನ ಸೇರಿಕೊಂಡು ಸಾಹುಕಾರ್ರು, ಮತ್ತು ತಮ್ಮಂಥ ಗಣ್ಯರಿರೋ ಕಂಪೆನಿಗೆ ಕೆಟ್ಟ ಹೆಸರು ತರುತ್ತಿದಾರೆ. ಈ ಅನ್ಯಾಯಗಳು ನಿಲ್ಲದಿದ್ದರೆ ನಿಮ್ಮ ಕಂಪೆನಿಗೇ ಅವಮಾನ. ಅಲ್ಲದೇ ಅದು ನಿಲ್ಲದಿದ್ದರೆ ನಾವೇ ನಿಲ್ಲಿಸಬೇಕಾಗುತ್ತೆ."

ಶಾನುಭೋಗರ ಸ್ಪಷ್ಟ ನುಡಿ ಕೇಳಿ ಶಾಂತಪ್ಪನಿಗೆ ಸೋಜಿಗವೆನಿಸಿದರೂ ಅವನಿಗೆ ಆ ಮಾತುಗಳ ಅಂತರಾರ್ಥ ತಿಳಿಯಲಿಲ್ಲ.

"ತಮಗೆ ಇಲ್ಲಿನ ವಿಷಯ ತಿಳೀದು ಸಾರ್. ಈ ಊರಿನಲ್ಲಿ ಹೀಗೆ ಮೋಸ, ಹಾದರ ಮಾಡೋರನ್ನ ಹಿಡಿದು ದೇವಸ್ಥಾನದ ಮುಂದೆ ಇರೋ ಕಂಭಕ್ಕೆ ಅವರ್ನ ಹಗ್ಗದಲ್ಲಿ ಬಿಗಿದು ಕಟ್ಟುತಾರೆ. ಆಮೇಲೆ ಊರಿನ ಪ್ರಮುಖರು ಪಂಚಾಯ್ತಿ ಸೇರಿ ಛಡೀಲಿ ಜಡಿಸೋ ಶಿಕ್ಷೆ ವಿಧಿಸ್ತಾರೆ. ಈ ಪದ್ಧತಿಗೆ ಯಾವ ಸರ್ಕಾರದ ಕಾನೂನೂ ಇಲ್ಲ. ಆದರೆ ಈ ಜನ ಸರ್ಕಾರದವರು ಅಡ್ಡ ಬಂದರೂ ಇದನ್ನ ಬಿಡೋಲ್ಲ." ಎಂದರು ಶ್ಯಾನುಭೋಗರು ಪುನಃ.

"ತಾವು ಇಲ್ಲಿಗೆ ಮುಖ್ಯಸ್ತರು. ತಮಗೆ ತಿಳಿಸದೇ ಯಾವುದೂ ಮಾಡಬಾರದೂಂತ ನಾವು ತಮಗೆ ತಿಳಿಸಿದೀವಿ ಸಾರ್. ತಾವು ಸಾವಕಾರ್ರಿಗೆ ಸರಿಯಾಗಿ ತಿಳಿಯಪಡಿಸಿ. ಇನ್ನು ಒಂದು ವಾರದಲ್ಲಿ ಈ ಊರಿನ ಆಳುಗಳ ಕೂಲಿ ಪೂರ್ತಿ ಕೊಟ್ಟು, ಈ ಹಾದರದ ಅವಾಂತರ ನಿಲ್ಲಿಸದಿದ್ದರೆ ನಾವು ಚನ್ನಯ್ಯನ, ಮಾಣಿಕ್ಯಮ್ಮನ ಕಂಭಕ್ಕೆ ಕಟ್ಟಿಸ್ತೀವಿ ಸಾರ್. ಇದು ಸತ್ಯವಾದ ಮಾತು." ಎಂದು ಪಟೇಲರೆಂದರು.

ಆ ಮಾತು ಕೇಳಿ ಶಾಂತಪ್ಪನ ಎದೆ ಒಂದು ಕ್ಷಣ ನಡುಗಿದಂತಾಯ್ತು, ಹಳ್ಳಿಯ ಜನ ಒಂದು ಗೂಡಿದರೆ ಎಂತಹ ಕೃತ್ಯವನ್ನಾದರೂ ಮಾಡಿ ಬಿಡುವರೆಂದು ಅರಿವಿದ್ದಿತು. ಆದ್ದರಿಂದ ಅವನೆಂದ,

"ನೋಡಿ, ಚನ್ನಯ್ಯ ಕೂಲಿ ಕೊಡೋದು, ಇಲ್ಲದಿರೋದು ಸಾಹುಕಾರ್ರಿಗೆ ಸೇರಿದ ಮಾತಲ್ಲ. ಯಾಕೆಂದ್ರೆ ಅವನಿಗೆ ಟನ್ನಿಗೆ ಇಪ್ಪತ್ತು, ಮೂವತ್ತು ರೂಪಾಯಿನಂತೆ ಪ್ರತಿ ವಾರವೂ ಅವರು ಕೊಟ್ಟು ಬಿಡೋದು ಎಲ್ಲರಿಗೂ ಗೊತ್ತಿದೆ. ಅವರು ಹಾಗೆ ಕೊಟ್ಟಮೇಲೆ ಕೂಲಿಯನ್ನೆಲ್ಲಾ ಸರಿಯಾಗಿ ಬಟವಾಡೆ ಮಾಡೋದು ಕಂಟ್ರಾಕ್ಟರು ಚನ್ನಯ್ಯನಿಗೆ ಸೇರಿದ್ದು. ಅದಕ್ಕೆ ಕೂಲಿಯವರುಂಟು ಚನ್ನಯ್ಯನುಂಟು, ಸಾಹುಕಾರರಿಗೆ ಸೇರಿದ್ದಲ್ಲ ಆ ವಿಷಯ....ಆದರೆ ಈ ಇನ್ನೊಂದು ದುರ್ನಡತೆ ಪ್ರಸಂಗವನ್ನ ಅವರಿಬ್ಬರಿಗೂ ಬುದ್ಧಿ ಹೇಳಿ ನಿಲ್ಲಿಸಬಹುದು,"

ಶಾಂತಪ್ಪನ ಮಾತುಕೇಳಿ ಶಾನುಭೋಗ ಪಟೇಲರಿಬ್ಬರು ಮುಖ ಮುಖ ನೋಡಿ ಕೊಂಡರು. ಅವರಿಗೆ ಏನು ಹೇಳಲೂ ತೋರಲಿಲ್ಲ. ಒಂದು ಕ್ಷಣದ ನಂತರ ಶಾನುಭೋಗರೆಂದರು,

"ಅದು ಏನಾದರೂ ಆಗಲಿ ಸಾರ್. ಚನ್ನಯ್ಯನಿಗೆ ಕಂಟ್ರಾಕ್ಟು ಕೊಟ್ಟಿದೀರೋ ಇಲ್ಲವೋ ನಮಗೆ ಗೊತ್ತಿಲ್ಲ. ಆದರೆ ಕೂಲಿಯವರು ಕೆಲಸಕ್ಕೆ ಬಂದದ್ದು ಸಾಹುಕಾರ್ರ ಗಣೀಗೆ ಹೊರ್ತು ಚನ್ನಯ್ಯನ ಗಣೀಗಲ್ಲ. ಅವರು ಬಂದದ್ದು ಸಾಹುಕಾರ್ರ ಮುಖ ನೋಡಿಕೊಂಡೇ ಹೊರತು, ಚನ್ನಯ್ಯನ ಮುಖ ನೋಡಿಕೊಂಡಲ್ಲ. ಈ ಗಣಿ ಸಾಹುಕಾರ್ರದ್ದಾದ ಮೇಲೆ ಅವರು ಕೂಲಿ ಕೇಳೋದು ಸಾಹುಕಾರ್ರನ್ನ. ಚನ್ನಯ್ಯನ್ನಲ್ಲ. ಅದಕ್ಕೆ ಸಾಹುಕಾರ್ರು ಅವರ ಕಡೆಯವರೂ ಜವಾಬ್ದಾರರು."

"ಹೌದು, ಹೌದು....ಶಾನುಭೋಗರೆನ್ನುವುದು ಸರಿ." ಪಟೇಲರೆಂದರು.

ಶಾನುಭೋಗರು ತಮ್ಮ ವಾಸ್ತವ ನುಡಿಗಳಿಂದ ಶಾಂತಪ್ಪನ ಬಾಯಿ ಕಟ್ಟಿಬಿಟ್ಟಿದ್ದರು. ಅವರ ಒಂದೊಂದು ಮಾತೂ ಸತ್ಯತೆಯ ಎಲ್ಲೆಯೊಳಗೇ ಇದ್ದುವು. ಆದರೂ ಸಾಹುಕಾರರ ಪರವಾಗಿ ಮಾತನಾಡಬೇಕಾದ ಅವನ ಕರ್ತವ್ಯ ಜ್ಞಾನ ಎಚ್ಚರವಾಗಿಯೇ ಇದ್ದಿತು. ಅವನೆಂದ,

"ನೀವು ಹೇಳುವುದು ಒಂದು ದೃಷ್ಟಿಯಿಂದ ಸರಿ ಶಾನುಭೋಗರೇ. ಆದರೆ ಇನ್ನೊಂದು ಸತ್ಯಾಂಶವಿದೆ ನೋಡಿ ಇಲ್ಲಿ; ಸಾಹುಕಾರ್ರು ಚನ್ನಯ್ಯನಿಗೆ ಕಂಟ್ರಾಕ್ಟು ಕೊಟ್ಟ ಮೇಲೆ ಕೂಲಿಯೋರು ಯಾರನ್ನಾಗಲೀ ಎಷ್ಟು ಜನರನ್ನಾಗಲೀ ನಿಯಮಿಸಿಕೊಳ್ಳೋದು ಅವನಿಗೇ ಸೇರಿದ್ದು. ಆದ್ದರಿಂದ ಅವನೇ ಕೂಲಿಯೋರನ್ನ ಕೆಲಸಕ್ಕೆ ಕರೆದದ್ದು. ಅವನ ಮಾತಿನ ಮೇಲೇ ಅವರು ಗಣೀಗೆ ಬಂದದ್ದು. ಸಾಹುಕಾರ್ರು ಅವರನ್ನ ಬನ್ನೀ ಅಂತ ಹೋಗಿ ಕೇಳಿರಲಿಲ್ಲ. ಹೀಗಿರುವಾಗ ಚನ್ನಯ್ಯ ಕೊಡಬೇಕಾದ ಕೂಲಿಯನ್ನ ಸಾಹುಕಾರ್ರನ್ನ ಕೊಡೀಂತ ಕೇಳೋದು ನ್ಯಾಯವೆ ?"

ಶಾಂತಪ್ಪನ ಪ್ರಶ್ನೆಗೆ ಅವರಿಬ್ಬರಲ್ಲಿಯೂ ಉತ್ತರವಿರಲಿಲ್ಲ. ಅವರಿಬ್ಬರೂ ಕ್ಷಣಕಾಲ ಚಿಂತಿಸಿದ ನಂತರ ಶಾನುಭೋಗರೆಂದರು,

"ಇರಲಿ, ಚನ್ನಯ್ಯನಿಂದ ಕೂಲಿಯೋರ ಹಣ ಕೊಡಿಸೋದು ನಮಗೆ ಗೊತ್ತಿದೆ. ಆದರೆ ಈ ಸೂಳೆಗಾರಿಕೆ ನಿಲ್ಲಿಸಬೇಕು ಸಾರ್. ಈ ಊರಿನ ಹೆಣ್ಣುಗಳು ಸೂಳೆಯರಾಗೋಕೆ ಈ ಊರಿನ ಜನ ಬಿಡೋದಿಲ್ಲ. ಅದು ನಿಲ್ಲದಿದ್ದರೆ ಆಚೆ ವಾರ ಆ ಕೊಂಗನನ್ನೂ, ಚನ್ನಯ್ಯನನ್ನೂ ಕಂಭಕ್ಕೆ ಕಟ್ಟಿಸ್ತೀವಿ."

"ಇದು ಸತ್ಯವಾದ ಮಾತು ಸಾರ್" ಎಂದು ಪಟೇಲರೂ ಧ್ವನಿ ಗೂಡಿಸಿದರು.

"ಆಗಲಿ ಇನ್ನು ನಾನು ಬರ್ತೀನೆ." ಎಂದು ಹೇಳಿ ಶಾಂತಪ್ಪ ಎದ್ದ.

"ನಮಸ್ಕಾರ. ತಾವು ಮಾತ್ರ ನಮ್ಮ ಮಾತಿಗೆ ಏನೂ ತಿಳ್ಕೋ ಬಾರದು ಸಾರ್. ಬಡಮುಂಡೇವು ಕೂಲಿಯೋರು ಹೊಟ್ಟೆಗಿಲ್ಲದೇ ಒದ್ದಾ ಡೋದು ನೋಡಲಾರದೇ ಹಾಗೆ ಹೇಳಿದೆವು ಅಷ್ಟೆ" ಎಂದರು ಅವರಿಬ್ಬರೂ.

"ಅದಕ್ಕೇನೂ ಪರವಾಗಿಲ್ಲ. ಊರಿನ ಪ್ರಮುಖರಾದೋರು ನೀವುಗಳ ಲ್ಲದೇ ಇನ್ನು ಯಾರು ಹೇಳಬೇಕು ಈ ಮಾತನ್ನ....ಬರ್ತೀನಿ."

"ನಮುಸ್ಕಾರ."

ಶಾಂತಪ್ಪ ರಾಮುಪುರದ ರಸ್ತೆಯಲ್ಲಿ ಸುತ್ತಾಡಿಕೊಂಡು ಬರಲು ಹೊರಟ. ಅವನ ತಲೆಯ ತುಂಬಾ ಹಲವಾರು ಭಾವನೆಗಳ ಅಲೆಗಳು ಹರಡಿದ್ದುವು. ಕೂಲಿಯಾಳುಗಳಿಗೆ ಎರಡು ವಾರದಿಂದ ಕೂಲಿಯಿಲ್ಲವೆಂಬ ವಿಷಯವೇ ಅವನಲ್ಲಿ ಪುನಃ ಪುನಃ ಬರುತ್ತಿದ್ದಿತು. ಅವರ ಬಡತನದ ಭೀಕರ ಚಿತ್ರ ಅವನ ಕಣ್ಣಮುಂದೆ ಬಂದಿದ್ದಿತು:

"ಅಪ್ಪಾ ಹಸಿವಾಗ್ತೈತೆ."

"ಹಸಿವಾದ್ರೆ ನಾನೇನು ಮಾಡಲೋ ಮಗಾ. ಎರಡು ಸೇರು ರಾಗಿ ತರಾಕೆ ಹನ್ನೆರಡಾಣೆ ಇಲ್ಲ."

"ಈವತ್ತು ನಾನು ಗಣೀಗೆ ನಡೆಯಾಕೆ ಆಗಾಕಿಲ್ಲಪ್ಪ, ನನ್ನನ್ನ ಎಳ್ಕೊಂಡು ಓಗಬೇಡ." ಆ ಹತ್ತು ವರ್ಷದ ಬಾಲಕನು ಆರ್ತನಾಗಿ ಬೇಡಿ ಕೊಳ್ಳುವನು.

"ಹಂಗಂದ್ರೆ ಆಗಾಕಿಲ್ಲಪ್ಪ. ನೀನು ಇವತ್ತು ಗಣೀಗೆ ಬರದಿದ್ರೆ ನಿನ್ನ ಪಾಲಿಂದು ಆರಾಣೆ ಈವತ್ತು ಬರೋಕಿಲ್ಲ. ಆ ಮೂಲೇಲಿ ಒಸಿ ತಂಗಳಿಟ್ಟೆ ಐತಲ್ಲಾ ತಿಂದುಬಿಟ್ಟು ಬಾ." ತಂದೆ ಹೇಳುವನು.

"ಅವನ ಪಾಲಿಂದು ಆರಾಣೆ........ಈ ಎಲ್ಡು ವಾರದಿಂದ ಬಂದಿಲ್ಲ, ಇವತ್ತು ಒಂದಿನಾ ಬರದಿದ್ರೆ ಏನೂ ನಸ್ಟ ಇಲ್ಲ. ಬರದಿದ್ರೆ ಬ್ಯಾಡ. ನಾವೇ ಹೋಗೋಣ" ಬಾಲಕನ ತಾಯಿಯೆನ್ನುವಳು.

"ನೀನು ಬರಬ್ಯಾಡಕಣೇ. ಆ ಕೈಯಿಂದಕ್ಕೆ ಉಸಾರಿಲ್ಲ. ಗುಡ್ಡದ ಓಸಿಲಲ್ಲಿ ಸುತ್ತಿದ್ರೆ ಅದು ಉಳೀತೈತ ?"

"ಗಣೀಗೆ ಬಂದರೆ ಕೆಲಸ ಮಾಡ್ತಾ ಹಸಿವನ್ನ ಮರೀಬೌದು. ಇಲ್ಲಿದ್ರೆ ನಿಮಿಸ ನಿಮಿಸಕ್ಕೂ ಒಟ್ಟೆ ತತ್ತಾ ಅಂತೈತೆ !"

"ನೀನು ಬಂದ್ರೆ ಮಗೀನ ಗತಿ ?"

"ಒಟ್ಟೀಗಿಲ್ದೆ ಇದ್ರೆ ಅದು ಮನೇಗಿದ್ರೂ ಉಳಿಯಾಕಿಲ್ಲ. ಗಣೀಲಿದ್ರೂ ಉಳಿಯಾಕಿಲ್ಲ. ಗಣೀಲೇ ಸಾಯೋದಿದ್ರೆ ಸಾಯಲಿ ಬುಡಿ. ನೂರಾರು ಜನ ನೋಡ್ತಾರೆ" ಎಂದು ತಾಯಿ ತನ್ನ ಹಾಲುಗೂಸನ್ನು ತಬ್ಬಿಕೊಂಡು ಬಿಕ್ಕಿಬಿಕ್ಕಿ ಅತ್ತುಬಿಡುವಳು.

"ಅಯ್ಯೋ ಅಲ್ಲಿ ಬರೋ ನೂರಾರು ಜನರೂ ನಮ್ಮಂಗೇ ಅಸ್ಕೊಂಡೇ ಬರುತಾರೆ ಕಣೇ...." ಎಂದು ಅವನು ಗೋಡೆಯಕಡೆ ಮುಖ ತಿರುಗಿಸುವನು.

ಸಾಹುಕಾರರನ್ನು ಉಳಿಸುವುದಕ್ಕೋಸ್ಕರ ತಾನು ಮಾನವೀಯಕಾರ್ಯವನ್ನೇ ಮರೆತಿದ್ದೇನೆ. ಕೂಲಿಗಾರರಿಗೆ ಕೂಲಿ ಕೊಡಿಸುವುದು ಸಾಹುಕಾರರ ಕರ್ತವ್ಯ, ಕೂಲಿಯವರ ದೇಹದಿಂದ ಹನಿಹನಿ ಬೆವರಿಳಿದು ಭೂಮಿಗೆ ಬಿದ್ದು ಅದೇ ಅದಿರಾಗಿ ಮೇಲೆ ಬರುವುದು, ಅದರೆ ಲಾಭ ಪಡೆಯುವವರು ಸಾಹುಕಾರರು. ಆದ್ದರಿಂದ ಅವರಿಗೂ ಕೂಲಿಯವರ ಕೂಲಿ ಹಣಕ್ಕೂ ಸಂಬಂಧವಿಲ್ಲವೆನ್ನುವುದು ನ್ಯಾಯಬದ್ಧವಾದ ಮಾತಲ್ಲ.....ಶಾನುಭೋಗರು ಪಟೇಲರನ್ನು ತನ್ನ ಚತುರ ನುಡಿಗಳಿಂದ ಸುಮ್ಮನಾಗಿಸಿದ್ದ ಅವನು, ತನ್ನ ಆತ್ಮವನ್ನೇ ಸುಮ್ಮನಾಗಿಸಲಾರದವನಾದ.

"ಏನ್ಸಾರ್ ಬಹಳ ಯೋಚಿಸ್ತಿದ್ದೀರಿ?...." ತಾವೂ ಸುತ್ತಾಡಲು ಹೊರಟಿದ್ದ ಶಾನುಭೋಗರ ಮಾತು ಕೇಳಿ ಶಾಂತಪ್ಪ ತಿರುಗಿನೋಡಿದ.

"ಏನಿಲ್ಲ ಸಾರ್.........ಹೀಗೇ ಗಣಿ ವಿಷಯ ಏನಾದರೂ ಇರುತ್ತಲ್ಲ."

"ತಾವು ಎಲ್ಲಾ ವಿಷಯಕ್ಕೂ ತುಂಬಾ ಚಿಂತಿಸುತೀರಿ ಸಾರ್. ಆ ಸುಬ್ಬಣ್ಣೋರಿದ್ದಾಗ ಅವರು ಹೀಗೆಲ್ಲಾ ಒಂದಿನಾನೂ ಚಿಂತಿಸಿರಲಿಲ್ಲ. ನೀವ್ಯಾಕೆ ಹೀಗೆ ಚಿಂತೆ ಪಡ್ತೀರಿ ಸಾರ್."

"ಏನೋ ಒಬ್ಬೊಬ್ಬರದು ಒಂದೊಂದು ಸ್ವಭಾವ ಶಾನುಭೋಗರೇ ಸುಬ್ಬಣ್ಣನವರು ಒಳ್ಳೇ ಅನುಭವಸ್ತರು. ಅವರು ಯಾವ ಕೆಲಸವನ್ನು ಮಾಡಬೇಕಾದ್ರೂ ಹೆಚ್ಚು ಯೋಚಿಸುತ್ತಲೇ ಇರಲಿಲ್ಲ. ಅವರು ಅನುಭವಜ್ಞಾನದಿಂದಲೇ ಎಲ್ಲಾ ಮಾಡಿಬಿಡ್ತಿದ್ದರು. ನಾನಿನ್ನೂ ಹೊಸಬ ಎಲ್ಲಕ್ಕೂ ಯೋಚಿಸಿಯೇ ಕೆಲಸ ಮಾಡಬೇಕು,"

"ನಿಮ್ಮವರನ್ನ ನೀವು ಬಿಟ್ಟುಕೊಡೊಲ್ಲ ಸಾರ್. ಆದರೆ ನಿಜವಾದ ವಿಷಯ ಎಲ್ಲರಿಗೂ ಗೊತ್ತು. ಅವರು ಅಷ್ಟೊಂದು ಅನುಭವಪಡೆದಿದ್ದಕ್ಕೇ ಕೋಣಸಂದ್ರಕ್ಕೆ ಹೋದರು!" ಎಂದು ಶಾನುಭೋಗರು ನಕ್ಕರು. ಆದರೆ ಶಾಂತಪ್ಪ ಸುಮ್ಮನೇ ನಡೆಯುತ್ತಿದ್ದ. ದೂರದಲ್ಲಿ ರಾಮಪುರದಿಂದ ಬರುತ್ತಿದ್ದ ಸಂಜೆಯ ಬಸ್ಸು ಶಬ್ದ ಮಾಡುತ್ತಾ ಧೂಳೆಬ್ಬಿಸಿಕೊಂಡು ಬರುತ್ತಿದ್ದಿತು.

"ಇಲ್ಲೇ ಪಕ್ಕದಲ್ಲಿ ಕುಳಿತುಕೊಳ್ಳೋಣ. ಧೂಳು ಬರುತ್ತೆ" ಎಂದು ಶಾಂತಪ್ಪ ಪಕ್ಕದ ಹೊಲದಲ್ಲಿ ಹೋಗಿ ಪೈರು ಕೊಯ್ದು ರಾಶಿ ಹಾಕಿದ್ದ ಒಣ ಹುಲ್ಲಿನ ಬಳಿ ಕುಳಿತ. ಸುತ್ತಲೂ ಕೆಲವು ಹೊಲಗಳಲ್ಲಿ ಬೆಳೆಸಿದ್ದ ಅವರೇಗಿಡಗಳಲ್ಲಿ ಕಾಯಿಗಳು ತುಂಬಿ ಅವುಗಳ ವಾಸನೆ ಛಳಿಗಾಳಿಯೊಡನೆ ಬೀಸಿಬರುತ್ತಿದ್ದಿತು. ನಾಲ್ಕಾರು ನಿಮಿಷಗಳು ಸುಮ್ಮನೇ ಕುಳಿತಿದ್ದಾಗ, ಬಸ್ಸು ರಸ್ತೆಯಲ್ಲಿ ಹಾದು ರಾಮನಾಯ್ಕನ ಹಳ್ಳಿಯತ್ತ ಹೋಯಿತು.

"ರತ್ನಗುಡ್ಡದಲ್ಲಿ ಕೆಲಸ ಪ್ರಾರಂಭಿಸುತ್ತೀರಂತೆ?" ಶಾನುಭೋಗರು ಕೇಳಿದರು.

"ಇನ್ನೂ ನೋಡಬೇಕು."

"ಇದೇನು ಸಾರ್ ನೋಡಬೇಕೂಂತೀರಿ. ಚನ್ನಯ್ಯನಿಗೇ ಕಂಟ್ರಾಕ್ಟು ಕೊಟ್ಟಿದಾರಂತೆ. ಸಾಹುಕಾರ್ರು ಐದು ಸಾವಿರ ರೂಪಾಯಿ ಅಡ್ವಾನ್ಸು ಕೊಡ್ತಾರೆ. ಅದನ್ನ ತಂದು ಹಳೇ ಕೂಲಿಯೆಲ್ಲಾ ಕೊಟ್ಟುಬಿಡ್ತೀನೀಂತ ಅವನು ಎಲ್ಲಾರ ಹತ್ತಿರಲೂ ಹೇಳಿದಾನಂತೆ," ಎಂದ ಶಾನುಭೋಗರ ಮಾತು ಕೇಳಿ ಶಾಂತಪ್ಪನಿಗೆ ಆಶ್ಚರ್ಯವಾಯಿತು. ಅವನೆಂದ,

"ಅದಿರ್‍ಲಿ, ಈಗ ಚನ್ನಯ್ಯ ಒಟ್ಟು ಎಷ್ಟು ರೂಪಾಯಿ ಕೂಲಿ ಕೊಡಬೇಕು?"

"ಸುಮಾರು ಎರಡು ಸಾವಿರದ ಆರುನೂರು ರೂಪಾಯಿ ಕೊಡಬೇಕು ಈ ಎರಡು ವಾರದ್ದು ಮಾತ್ರ. ಇದರ ಜೊತೆಗೆ ಮುಂಚಿನದು ಬೇರೆ ಒಂದೆರಡು ಸಾವಿರ ರೂಪಾಯಿಗಳಿವೆ."

ಆ ಸಂಖ್ಯೆ ಕೇಳಿ ಶಾಂತಪ್ಪನಿಗೆ ಘಾಬರಿಯೇ ಆಯಿತು. ಶಾನುಭೋಗರೇ ಪುನಃ ಹೇಳಿದರು,

"ಈ ಕಂಟ್ರಾಕ್ಟರುಗಳನ್ನೆಲ್ಲ ಬಿಟ್ಟುಬಿಟ್ಟು ಕಂಪೆನಿಯವರೇ ಏಕೆ ಕೆಲಸ ಮಾಡಿಸಬಾರದು ಸಾರ್? ನೋಡಿ ಹೀಗೆಲ್ಲಾ ಕೂಲಿಯವರ ಹಣ ಕೊಡ

ದಿದ್ರೆ, ಆ ಬಡವರು ಸಾಹಕಾರ್‍ರನ್ನೂ ಕೇಳೋಹಾಗಿಲ್ಲ. ಕಂಟ್ರ್ಯಾಕ್ಟರನ್ನೂ ಕೇಳೋ ಹಾಗಿಲ್ಲ. ಸರಿ ಕೂಲಿಯೋರನ್ನ ಅವರಿಬ್ಬರೂ ಸಹ ಮಾತನಾಡಿ ಸೋದಿಲ್ಲ."

ಶಾಂತಪ್ಪ ಏನೂ ಉತ್ತರ ಕೊಡಲಾರದೇ ಮೇಲೆದ್ದ, ಅವನ ಹೃದಯದ ಮಾತುಗಳೇ ಶಾನುಭೋಗರ ಹೃದಯದಿಂದ ಬಂದಿದ್ದುವು.

ತಮ್ಮ ಮನೆಯ ಬಾಗಿಲಿನಲ್ಲಿರುವ ಒಂದು ಕೊಠಡಿಯಲ್ಲಿಯೇ ಶಾಂತಪ್ಪ ವಾಸಿಸಬಹುದು, ಅವನ ಬಿಡಾರಕ್ಕೆ, ಊಟ ಸ್ನಾನಗಳಿಗೆ ಮಾತ್ರ ಹೋಗಬಹುದು, ದುರಾಚಾರ ನಡೆಯುವ ಆ ಸ್ಥಳದಲ್ಲಿ ವಾಸಿಸುವುದು ಸಭ್ಯ ನಾದ ಅವನಿಗೆ ಗೌರವವಲ್ಲವೆಂದು ಶಾನುಭೋಗರು ಒಮ್ಮೆ ಹೇಳಿದರು.

* * *

ಮೂರನೆಯ ದಿನ ಶಾಂತಪ್ಪ ಸಾಹುಕಾರರಿಗೆ ರತ್ನಗುಡ್ಡದ ನಿರಾಶಾದಾಯಕ ಸನ್ನಿವೇಶವನ್ನು ಬರೆದು ತಿಳಿಸಿದ. ಅವನ ಕಾಗದವನ್ನು ನೋಡಿ ಸಾಹುಕಾರರೇ ಬೆಂಗಳೂರಿನಿಂದ ಬಂದುಬಿಟ್ಟರು. ಅವರು ಹೊಸದಾಗಿ ಕೊಂಡ 'ಕ್ರಿಸ್ಲರ್' ಕಾರಿನಲ್ಲಿ ಬಂದು ರಾಮನಾಯ್ಕನ ಹಳ್ಳಿಯ ಬಿಡಾರದಲ್ಲಿಳಿದಾಗ, ಶಾಂತಪ್ಪ ಗಣಿಗೆ ಹೊರಟುಹೋಗಿದ್ದ. ಅವರು ಬರುವ ನಿರೀಕ್ಷಣೆಯಿಲ್ಲದ್ದರಿಂದ ಮಾಣಿಕ್ಯಂ ಪಕ್ಕದ ಮನೆಯಲ್ಲಿ ಕುಳಿತು ರತ್ನಮ್ಮನೊಡನೆ ಮಾತನಾಡುತ್ತಿದ್ದ. ನಿಶ್ಶಬ್ದವಾಗಿ ಬಂದು ನಿಂತ ಕಾರಿನ ಹೊಳಪು ಫಳಾರನೆ ಮನೆಯೊಳಗೆ ಬಿದ್ದಾಗ, ಕುತೂಹಲದಿಂದ ಅವನು ಹೊರಬಂದು ಸಾಹುಕಾರರನ್ನು ನೋಡಿ ಘಾಬರಿಯಾದ.

"ಏನು ಮಾಣಿಕ್ಯಂ. ಗಣೀಗೆ ಹೋಗಿಲ್ಲವಾ ?" ಸಾಹುಕಾರರು ಕೋಪದಿಂದ ಕೇಳಿದರು. ಶಾಂತಪ್ಪನ ಪತ್ರವನ್ನು ನೋಡಿ ನಿರಾಶೆಗೊಂಡಿದ್ದ ಅವರು ಕರ್ತವ್ಯವಿಮುಖನಾಗಿ, ಪಕ್ಕದ ಮನೆಯಲ್ಲಿ ಕುಳಿತಿದ್ದ ಮಾಣಿಕ್ಯಂನನ್ನು ನೋಡಿ ಕೋಪಗೊಂಡರು. ಜೊತೆಗೆ, ಕಾರಿನಿಂದ ಬಂದು ಇಳಿದಾಗ ತಕ್ಷಣ ಕಂಪನಿಯವರು ಯಾರಾದರೊಬ್ಬರು ಎದುರು ಬಂದು ಅವರಿಗೆ ವಂದಿಸಿ ಅವರನ್ನು ಒಳಗೆ ಕರೆದೊಯ್ಯಬೇಕೆಂದವರು ಯಾವಾಗಲೂ ಬಯಸುತ್ತಿದ್ದರು. ತಾವು ಬಂದತಕ್ಷಣವೇ ಕಾರಿನಬಾಗಿಲು ತೆಗೆದು, ಎದುರಿನಲ್ಲಿ ನಿಂತು 'ಮಿಲಿಟರಿ ಸಲಾಂ' ಹೊಡೆಯುವುದಕ್ಕಾಗಿಯೇ ಖಾನನನ್ನಿಟ್ಟಿದ್ದರು. ಆದರೀಗ ಎಲ್ಲಕೂ ನಿರಾಶೆಯಾಗಿತ್ತಾದ್ದರಿಂದ ಮೇರೆ ಮೀರಿದ್ದಿತು ಅವರ ಕೋಪ.

"ಇಲ್ಲ ಸಾರ್. ಮ್ಯಾನೇಜರು ಹೋಗಿದಾರೆ" ಎಂದ ಮಾಣಿಕ್ಯಂ.

"ಮ್ಯಾನೇಜರು ಹೋಗಿದಾರೆ.....ನೀವೇನು ಮಾಡ್ತಿದ್ದೀರಿ ? ನಿಮಗೆ ಗಣೀಲಿ ಕೆಲಸವಿಲ್ಲವೇನು. 'ಇಲ್ಲಿ' ಕೂತುಕೊಂಡು ಏನು ಕೆಲಸ ನಿಮಗೆ. ಇಲ್ಲಿರುವುದಕ್ಕೇನು ನಾನು ನಿಮಗೆಲ್ಲ ಸಂಬಳ ಕೊಡೋದು ?" ಸಾಹುಕಾರರು ಅಬ್ಬರಿಸಿದರು.

"ಮಾಣಿಕ್ಯಂನ ಎದೆ ಡವಡವನೆ ಬಡಿದುಕೊಳ್ಳತೊಡಗಿತು.

"ಮ್ಯಾನೇಜರು ಯಾವ ಗುಡ್ಡಕ್ಕೆ ಹೋಗಿದಾರೆ ?"

"ರತ್ನಗುಡ್ಡಕ್ಕೆ."

"ಅಲ್ಲಿಗೆ ರಸ್ತೆಯಿದೆಯೇನು ?"

"ಇಲ್ಲ ಸಾರ್. ಮ್ಯಾನೇಜರು ನಡಕೊಂಡೇ ಹೋಗಿದಾರೆ."

"ನೀವು ಎಂದಾದರೂ ರತ್ನಗುಡ್ಡ ನೋಡಿದೀರಾ ?"

"ಇಲ್ಲ ಸಾರ್ !"

"ಇಲ್ಲ ! ನೀವು ಇಲ್ಲಿ ಲೀಲೆಯಾಡುತಿದ್ರೆ, ಗಣೀಗೆ ಹೋಗೋಕೆ ಪುರಸೊತ್ತಿರುತ್ಯೆ. ನಿಮ್ಮಂಥ ಜನರನ್ನ ನಾವು ಕೆಲಸಕ್ಕೆ ತಗೊಂಡಿದ್ದಕ್ಕೆ ನಮ್ಮನ್ನ ಹಾಳು ಮಾಡಿಬಿಡ್ತೀರಿ... ....ಹೋಗಲಿ ಈಗ ರತ್ನಗುಡ್ಡಕ್ಕೆ ನಮಗೆ ದಾರಿ ತೋರಿಸೋರು ಯಾರು ?"

"ಅಲ್ಲೀಗೆ ನಡೀಬೇಕು ಸಾರ್ !"

"ಹೌದು ನಡೀಬೇಕು. ಇನ್ನೇನು ವಿಮಾನದಲ್ಲಿ ಹೋಗಬೇಕೇನು ? ಮ್ಯಾನೇಜರು ದಿನಾ ನಡೀತಾರೆ. ನಿಮಗೆ ಒಂದಿನಾ ನಡಿಯೋಕೆ ಪ್ರಾಣ ಹೋಗುತ್ತೆ!"

ಅಷ್ಟರಲ್ಲಿ ಆಳೊಬ್ಬನು ದೂರದಿಂದ ಓಡೋಡಿಬರುತ್ತಿದ್ದ. ಅವನು ಹತ್ತಿರ ಬಂದು ಸಾಹುಕಾರರಿಗೆ ನಮಸ್ಕರಿಸಿ ನಿಂತಾಗ ಸಾಹುಕಾರರೆಂದರು,

"ಏನಪ್ಪ, ನಿಂಗೆ ರತ್ನಗುಡ್ಡಕ್ಕೆ ದಾರಿ ಗೊತ್ತೆ?"

"ಗೊತ್ತು ಸಾರ್. ಅಲ್ಲಿಗೆ ನಡೆದುಕೊಂಡೇ ಹೋಗಬೇಕು ಸಾರ್ ಇಲ್ಲದಿದ್ರೆ ಎತ್ತಿನಗಾಡಿ ಕಟ್ಟಿಸಬೇಕು."

"ಈಗ ಯಾವುದಾದರೂ ಗಾಡಿ ಸಿಕ್ಕುತ್ತೇನು ?"

"ಸಿಕ್ಕುತ್ತೆ ಸಾರ್."

"ಸರಿ ಬೇಗ ಕಟ್ಟಿಸು. ಹಾಗೆ ಚನ್ನಯ್ಯ ಇದ್ರೆ ಬರಹೇಳು."

"ಗಾಡಿ ಕಟ್ಟಿಸ್ತೀನಿ ಸಾರ್. ಚನ್ನಯ್ಯನೋರು ಗಣೀಗೆ ಹೋಗವ್ರೆ."

"ಯಾವ ಗಣೀಗೆ ಹೋಗಿದಾನೆ?"

"ಲಕ್ಷ್ಮೀ ಗಣೀಗೆ."

"ಸರಿ. ನೀನು ಹೋಗಿ ಗಾಡಿ ಕಟ್ಟಿಸು.....ಮಾಣಿಕ್ಯಂ ನೀವು ಲಕ್ಷ್ಮೀ ಗಣೀಗೆ ಹೋಗಿ ಚನ್ನಯ್ಯನ್ನ ರತ್ನಗುಡ್ಡಕ್ಕೆ ತಕ್ಷಣ ನಡಕೊಂಡುಬರೋದಿಕ್ಕೆ ಹೇಳಿ" ಎಂದರು ಸಾಹುಕಾರರು.

ಮಾಣಿಕ್ಯಂ ಒಳಗೆ ಹೋಗಿ ಛತ್ರಿಯೊಂದನ್ನು ತೆಗೆದುಕೊಂಡು ಗಣಿಗೆ ಹೊರಡಲು ಸಿದ್ಧನಾದ. ಆ ಛತ್ರಿಯನ್ನು ನೋಡಿ ಸಾಹುಕಾರರೆಂದರು,

"ಇದೇನು ಛತ್ರಿ ಇಲ್ಲೇ ಇದೆ. ಮ್ಯಾನೇಜರು ತೊಗೊಂಡು ಹೋಗಿಲ್ಲವೇ?"

"ಇಲ್ಲ ಸಾರ್. ಅವರು ಹಾಗೇ ಹೋಗಿದ್ದಾರೆ."

"ಆ್ಞ....ಹಾಗೇ ಬಿಸಿಲಲ್ಲಿ ಹೋಗಿದ್ದಾರ....ಪಾಪ!" ಎಂದು ಸಾಹುಕಾರರು ಒಳಗೆ ನಡೆದರು. ಮಾಣಿಕ್ಯಂ ಗಣಿಗೆ ಒಬ್ಬನೇ ಬೇಸರದಿಂದ ನಡೆದುಕೊಂಡು ಹೊರಟ.

ಸಾಹುಕಾರರು ಒಳಹೋಗುವಾಗ ಪಕ್ಕದ ಬಾಗಿಲಿನಲ್ಲಿನ ಸಂದಿನಲ್ಲಿ ಕಾಣುತ್ತಿದ್ದ ರತ್ನಮ್ಮನ ಸೀರೆಯ ನೆರಿಗೆಯನ್ನು ಗಮನಿಸದಿರಲಿಲ್ಲ. ಅವರು ಅಡಿಗೆಯವನಿಟ್ಟಿದ್ದ ನೀರಿನ ಚೊಂಬನ್ನು ತೆಗೆದುಕೊಂಡು ಮುಖ ತೊಳೆದುಕೊಂಡರು. ಅವರು ಒಳಗೆ ಕುರ್ಚಿಯ ಮೇಲೆ ಕುಳಿತಾಗ ತಮಗೆ ತಾವೇ ಹೇಳಿಕೊಂಡರು,

"ಛೆ! ಪಾಪ........ಈ ಸುಬ್ಬಣ್ಣ, ಚನ್ನಯ್ಯನ ಮಾತು ಕೇಳಿಕೊಂಡ ನಾನು ಏನೇನೋ ತಿಳಕೊಂಡುಬಿಟ್ಟಿದ್ದೆನಲ್ಲ. ಪಾಪ!........ಎಂತಹ ಒಳ್ಳೆ ಹುಡುಗ....ಇರಲಿ ನೋಡೋಣ."

ಅವರು ಗಾಡಿಯಲ್ಲಿ ಕುಳಿತು ರತ್ನಗುಡ್ಡವನ್ನು ತಲಪಿದಾಗ ಮಧ್ಯಾಹ್ನ ಎರಡು ಗಂಟೆಯೇ ಆಗಿದ್ದಿತು. ಶಾಂತಪ್ಪನೂ ಆಗಲೇ ಊಟಕ್ಕೆ ಹಿಂದಿರುಗಬೇಕೆಂದುಕೊಂಡಿದ್ದ. ಸಾಹುಕಾರರು ಗಾಡಿಯಿಂದಿಳಿದುದನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಅವನು ಹತ್ತಿರ ಹೋಗಿ ಅವರಿಗೆ ವಂದಿಸಿ,

"ಇದೇನು ಸಾರ್. ತಾವು ಇಷ್ಟು ದೂರ ಗಾಡೀಲಿ ಬಂದುಬಿಟ್ರಿ?" ಎಂದ.

"ನೀವು ಇಷ್ಟು ದೂರ ನಡಕೊಂಡು ಬರೋವಾಗ ನಾನು ಗಾಡೀಲೂ ಬರಬಾರದೇ ?" ಎಂದರು ಸಾಹುಕಾರರು ನಗುತ್ತಾ,

"ನಾವೆಲ್ಲ ಇರೋದು ತಮ್ಮ ಕೆಲಸಕ್ಕೆ ಅಲ್ಲವೆ ಸಾರ್. ತಾವು ಮೈಯೆಲ್ಲಾ ಕುಲುಕಿಸಿಕೊಂಡು ಎತ್ತಿನ ಗಾಡೀಲಿ ಬಂದರೆ ಹೇಗೆ ಸಾರ್ ?"

ಶಾಂತಪ್ಪನ ಆ ಮಾತಿಗವರು ಏನೂ ಉತ್ತರ ಹೇಳಲಿಲ್ಲ. ಒಂದು ಕ್ಷಣದ ನಂತರ,

"ಅದಿರಲಿ. ನಿಮ್ಮ ಊಟವಾಯಿತ ?"

"ಈಗ ಹೋಗೋಣಾಂತಿದ್ದೆ."

"ನೀವು ಅಷ್ಟು ದೂರ ನಡಕೊಂಡು ಹೋಗೋಕೆ ಐದು ಗಂಟೇನಾದ್ರೂ ಬೇಕಲ್ರೀ."

"ಇಲ್ಲ ಸಾರ್. ಒಳದಾರೀಲಿ ಆರು ಮೈಲಿಯಾಗುತ್ತೆ ಅಷ್ಟೆ. ನಾಲ್ಕು ಗಂಟೆ ಒಳಗೆ ಊರು ಸೇರ್ತೀನಿ."

"ನೀವು ದಿನಾ ಇಷ್ಟೊಂದು ತಿರುಗಿ, ಸಾಯಂಕಾಲ ಹೋಗಿ ಊಟ ಮಾಡೋ ಬದಲು ಇನ್ನುಮೇಲೆ ಊಟ ಮಾಡಿಕೊಂಡೇ ಬಂದುಬಿಡಿ."

"ಆಗಲಿ ಸಾರ್."

"ಸರಿಯಾಗಿ ಊಟ ಮಾಡಿ ಕೆಲಸ ಮಾಡ್ರೀ! ಊಟವಿಲ್ಲದೇ ಇರುವ ಬ್ರಾಹ್ಮಣರನ್ನ ದುಡಿಸಿದ ಪಾಪ ನನಗೆ ಗಂಟುಹಾಕಿಸಬೇಡಿ. ಆ ಪಾಪ ನಂಗೆ ಏಳೇಳು ಜನ್ಮಕ್ಕೂ ತಪ್ಪೋಲ್ಲ."

ತಾನು ಬ್ರಾಹ್ಮಣನಾದುದಕ್ಕೆ ಶಾಂತಪ್ಪನಿಗೆ ನಗು ಬಂದಿತು. ತಾನು ಲಿಂಗಾಯಿತನಾದ್ದರಿಂದ ತನ್ನನ್ನು ದುಡಿಸಿದ ಪಾಪ ಸಾಹುಕಾರರಿಗೆ ಬರುವುದಿಲ್ಲವೆಂದುಕೊಂಡಾಗ ಆ ಮಂದಹಾಸ ಅವನ ಮುಖದಲ್ಲಿ ಲಾಸ್ಯವಾಡಿತು. ಅದನ್ನು ನೋಡಿ ಸಾಹುಕಾರರೆಂದರು.

"ನೀವು ಯಾವ್ಯದಕ್ಕೂ ಹೆಚ್ಚು ಮಾತನಾಡೊಲ್ಲ. ನಗುತ್ತಾ ಸುಮ್ಮನಿದ್ದುಬಿಡ್ತೀರಿ.........ಹೋಗಲಿ ಈ ಕಂಟ್ರಾಕ್ಟರುಗಳೆಲ್ಲ ನಿಮ್ಮ ಸಲಹೆ ಪ್ರಕಾರಾನೇ ಕೆಲಸ ಮಾಡಿಸ್ತಾರೆ ತಾನೇ ?"

"ಹೌದು ಸಾರ್. ಆದರೆ ಕೂಲಿಗಾರರಿಗೆ ಕೊಂಚ ಅನುಕೂಲಮಾಡಿ ಕೊಡಬೇಕು."

"ಏನು ಅನುಕೂಲ ?"

"ಬಿಸಿಲಿನಲ್ಲಿ ಕೆಲಸ ಮಾಡಿ ಕುಡಿಯುವ ನೀರಿಲ್ಲದೇ ಒದ್ದಾಡ್ತಾರೆ. ಈ ಬಿಸಿಲಿನಲ್ಲಿ ದುಡಿದರೆ ಅವರಿಗೆ ಖಾಯಿಲೆ ಬರುತ್ತೆ, ಆದ್ದರಿಂದ ಅವರಿಗೆ ನೆರಳು ಮಾಡಿಸಬೇಕು."

"ಇದಕ್ಕೆಲ್ಲಾ ತುಂಬಾ ಖರ್ಚಾಗುತ್ತೆ, ನೋಡೋಣ" ಎಂದು ಅವರು ಗಣಿಯತ್ತ ಹೊರಟರು.

ಶಾಂತಪ್ಪನು ಇನ್ನೂ ಕೆಲವು ಮಾತುಗಳನ್ನು ಹೇಳಬೇಕೆಂದು ಕೊಂಡಿದ್ದ, ಸಾಹುಕಾರರ ಉತ್ತರ ಕೇಳಿ ನಿರಾಶೆಗೊಂಡು ಸುಮ್ಮನಾದ ಹತ್ತಾರು ಹೆಜ್ಜೆಗಳು ನಡೆದನಂತರ ಸಾಹುಕಾರರು ಶಾಂತಪ್ಪನತ್ತ ತಿರುಗಿ ಪುನಃ ಕೇಳಿದರು,

"ಚನ್ನಯ್ಯನಿಗೆ ಇಲ್ಲಿಗೆ ಬರೋಕೆ ಹೇಳಿಕಳಿಸಿದ್ದೆ. ಬಂದನೆ ?"

"ಇಲ್ಲ" ಎಂದು ಶಾಂತಪ್ಪನೆಂದ. ಆದರೆ ದೂರದಲ್ಲಿ ಚನ್ನಯ್ಯನು ಬರುತ್ತಿದ್ದುದು ಕಾಣಿಸಿತವರಿಗೆ.

ಚನ್ನಯ್ಯ ಬರುವಷ್ಟರಲ್ಲಿ ಅವರಿಬ್ಬರೂ ಗಣಿಯನ್ನೆಲ್ಲ ಸುತ್ತಾಡಿ ಬಂದರು. ಅಲ್ಲಿ ನಿರೀಕ್ಷಿಸಿದ್ದ ಅದಿರು ದೊರೆಯುವುದಿಲ್ಲ, ಚನ್ನಯ್ಯನು ಸಟೆ ಹೇಳಿದ್ದಾನೆಂಬುದರ ಅರಿವಾಗಿ ಸಾಹುಕಾರರೆಂದರು,

"ಇವನ ಮಾತು ನಂಬಿಕೊಂಡು ನಾನು ಅಮೆರಿಕನ್ ಕಂಪೆನಿಯೊಂದ ರಲ್ಲಿ ಡೈಯಾಕ್ಸೈಡ್ ಪುಡಿಯನ್ನು ಕೊಡುತ್ತೇನೆಂತ ಅಡ್ವಾನ್ಸ್ ತೆಗೆದು ಕೊಂಡುಬಿಟ್ಟೆ. ಈಗ ಅಷ್ಟು ದೊಡ್ಡ ಕಂಪೆನಿಯಲ್ಲಿ ನನ್ನ ಮಾನ ಹೋಗುವ ಪ್ರಸಂಗ ಬಂದಿದೆ. ಏನು ಮಾಡಲಿ ಈಗ....ಈ ಚನ್ನಯ್ಯನಿಂದ ನನ್ನ ಮರ್ಯಾದೆ ಹೋಯಿತು," ಸಾಹುಕಾರರು ಚಿಂತಾಕ್ರಾಂತರಾದರು. ಅವರು ನಿರೀಕ್ಷಿಸಿದ್ದ ಅದಿರು ದೊರೆತಿದ್ದರೆ ಟನ್ನು ಒಂದಕ್ಕೇ ನೂರಾರು ರೂಪಾಯಿ ಲಾಭವಿದ್ದಿತು. ದಿನವೊಂದಕ್ಕೆ ಇಪ್ಪತ್ತು ಮೂವತ್ತು ಟನ್ನು ಅದಿರು ತೆಗೆಯು ವೆನೆಂದು ಹೇಳಿ ಚನ್ನಯ್ಯ ಎರಡು ಸಾವಿರ ರೂಪಾಯಿ ಮುಂಗಡವನ್ನು ಪಡೆದಿದ್ದ. ಸಾಹುಕಾರರು ಭಾರಿ ಲಾಭದ ಆಶೆಯನ್ನು ಹೊಂದಿದ್ದರು. ಆದರೆ ?

ಶಾಂತಪ್ಪನು ಶಾನುಭೋಗ ಪಟೇಲರ ಮಾತುಗಳನ್ನು ಹೇಳಲೋ ಬೇಡವೋ ಎಂದು ಚಿಂತಿಸಿದ; ಸಾಹುಕಾರರು ಚಿಂತಾಕ್ರಾಂತರಾಗಿರುವ ಸಮಯದಲ್ಲಿ ಹೇಳುವುದರ ಔಚಿತ್ಯವನ್ನು ಯೋಚಿಸಿದ. ಕೊನೆಗೆ ವಿಷಯ

ವನ್ನು ಸೂಕ್ಷ್ಮವಾಗಿ ಅವರ ಮನನೆಡುವಂತೆ ವಿವರಿಸಿದ. ಅವನ ಮಾತು ಕೇಳಿ ಸಾಹುಕಾರರಿಗೆ ಇನ್ನೂ ಬೇಸರವಾಯಿತು. ಕೋಪ ಮೇರೆ ಮೀರಿತ್ತು.

ಕಂಪೆನಿಯ ಬಿಡಾರದಲ್ಲಿ ವ್ಯಭಿಚಾರ—

ಕಂಟ್ರಾಕ್ಟರು ಚನ್ನಯ್ಯನು ಎರಡು ಮೂರು ವಾರ ಕೂಲಿಯನ್ನು ಹಂಚಿಲ್ಲ—ಸುಮಾರು ಮೂರು ಸಾವಿರ ರೂಪಾಯಿ ಬಟವಾಡೆ!—

ಕೂಲಿಯವರು ಕೂಲಿ ಹಣವನ್ನು ಪಡೆದಿಲ್ಲವೆಂಬ ಸುದ್ದಿ ಸುತ್ತಲೆಲ್ಲ ಪ್ರಸಾರವಾಗಿದೆ—ತಮ್ಮ ಘಟನೆಗೆ ಕುಂದುಂಟಾಗಿದೆ?--

ಕಂಪೆನಿಯವರನ್ನು ಊರ ಮಧ್ಯೆ ಕಂಬಕ್ಕೆ ಬಿಗಿಯುವರು!—

ಎಷ್ಟೊಂದು ಅವ್ಯವಸ್ಥೆ........

ಸಾಹುಕಾರರು ಚಿಂತಿಸುತ್ತ ಕುಳಿತಿದ್ದರು. ಸುಬ್ಬಣ್ಣನವರು ಮೇನೇಜರಾಗಿದ್ದಾಗ ಈ ಎಲ್ಲ ಅವ್ಯವಸ್ಥೆಯೂ ಇರಲಿಲ್ಲ. ಆ ವಿಷಯವು ತಮ್ಮ ಕಿವಿಗೆ ಬಿದ್ದಿರಲಿಲ್ಲ. ಇದಕ್ಕೆಲ್ಲ ಯಾರು ಕಾರಣ? ಏನು ಕಾರಣ? ಎಂದು ತಮ್ಮಲ್ಲಿ ತಾವೇ ಪ್ರಶ್ನಿಸಿಕೊಂಡು ಆಳವಾಗಿ ಯೋಚಿಸತೊಡಗಿದರು.

ಈ ಹೊಸ ಮೇನೇಜರು ಕೂಲಿಗಾರರ ಅನುಕೂಲತೆಗಳ ವಿಷಯವಾಗಿ ಹೇಳುವರು.

ಕೂಲಿಗಾರರ ಪರವಾಗಿರುವ ಇವರು ತಮ್ಮ ಭದ್ರತೆಯನ್ನು ಕಾಪಾಡುವರೆ?

ಹೊಸ ಮೇನೇಜರು ಸಮರ್ಥರಾಗಿರುವಿರೆ?

ಕಂಪೆನಿಯವರನ್ನು ಊರಿನ ಮಧ್ಯೆ ಕಂಭಕ್ಕೆ ಬಿಗಿಯುವುದೆಂದರೇನು?

ಮೂರು ಸಾವಿರ ರೂಪಾಯಿ ಕೂಲಿ ಹಣವನ್ನು ಉಳಿಸುವುದೆ?

ಈ ಅವ್ಯವಸ್ಥೆಗಳಿಗೆ ಮೂಲವೇನು?

ಅವರಲ್ಲಿ ಗುರಿಮುಟ್ಟದ ಹಲವು ಭಾವಗಳು ಎದ್ದಿದ್ದುವು. ಎದ್ದ ಭಾವಗಳು ಅಲ್ಲಲ್ಲೇ ಚದುರಿ ಚಲ್ಲಾಪಿಲ್ಲಿಯಾಗಿಹೋಗಿದ್ದುವು. ಆ ವೇಳೆಗೆ ಚನ್ನಯ್ಯ ಬಂದು,

"ನಮಸ್ಕಾರ ಸಾರ್" ಎಂದ.

ಅವನು ಸಾಹುಕಾರರನ್ನು ರತ್ನಗುಡ್ಡದಲ್ಲಿ ನಿರೀಕ್ಷಿಸಿರಲಿಲ್ಲ. ಅವರು ನಡೆದುಕೊಂಡೇ ಬಂದಿದ್ದರು, ಮೇಲುಸಿರು ಬಿಡುತ್ತಿದ್ದರು. ಅವರನ್ನೂ ಶಾಂತಪ್ಪನನ್ನೂ ಅಲ್ಲಿ ಕಂಡ ಚನ್ನಯ್ಯನೂ ಯೋಚಿಸಿದ—

ಸಾಹುಕಾರರು ಇಷ್ಟು ದೂರ ನಡೆದುಕೊಂಡು ಬರುವುದಿಲ್ಲವೆಂದು ಭಾವಿಸಿದ್ದೆ.

ಡೈಯಾಕ್ಸೈಡ್ ಪೌಡರು ದೊರೆಯುವುದೆಂದು ಕೇಳಿದ ಸಾಹುಕಾರರು ಸಹಸ್ರಾರು ರೂಪಾಯಿ ಸಂಪಾದಿಸುವ ಆಶೆಯನ್ನು ಹೊಂದಿದ್ದರು. ಆದ್ದರಿಂದಲೇ ಕೇಳಿದಾಕ್ಷಣ ಎರಡು ಸಾವಿರ ರೂಪಾಯಿ ಅಡ್ವಾನ್ಸು ಕೊಟ್ಟರು. ಇನ್ನೂ ಐದು ಸಾವಿರ ರೂಪಾಯಿ 'ಗುಂಜಿ'ಕೊಳ್ಳೋಣವೆಂದು ತಂತ್ರ ಹೂಡಿದ್ದೆ. ಆದರೆ ಅವರಿಗೆ ಈಗ ಹೇಳುವುದೇನು? ಡೈಯಾಕ್ಸೈಡ್ ಪೌಡರು ದೊರೆಯುವ 'ಪಿಟ್ಟು' ಯಾವುದೆಂದು ತೋರಿಸಲಿ?

ಇನ್ನು ಮುಂದೆ ದೊರೆಯಬಹುದಾದ ಹಣಕ್ಕೆ 'ಖೋತ' ಬಿದ್ದಿತು.

ಇದಕ್ಕೆ ಯಾರು ಕಾರಣ?....ಯಾರು ಕಾರಣ?

ಇಲ್ಲಿ ನಿಂತಿರುವ ಹೊಸ ಮೇನೇಜರೇ ಇರಬೇಕೆ?

ಏನೂ ತಿಳಿಯದ ಕಾಲೇಜು ಹುಡುಗನೆಂದಿದ್ದರೆ ನನಗೇ 'ಡೈನಾಮೆಂಟು' ಇಡೋ ಹಾಗಾಧ!

ಸುಖ ಪಡಲಿ ಪಾಪ ಎಂದು ಎಷ್ಟು ಸಹಾಯ ಮಾಡೋಣವೆಂದಿದ್ದೆ!

ಈಗ ನನಗೇ ಮೋಸ ಮಾಡೋದಿಕ್ಕೆ ಬಂದಂತಿದೆ.

ಇರಲಿ 'ಒಂದು ಕೈ' ನೋಡಿಕೊಳ್ತೀನಿ! ಚನ್ನಯ್ಯನನ್ನು ಕೆಣಕಿ ಉಳಿಯುವವರಾರು?

ಸಾಹುಕಾರರು ಚನ್ನಯ್ಯನನ್ನು ತಲೆಯೆತ್ತಿ ನೋಡಿದರು. ಆ ಮುಖವನ್ನು ನೋಡಿ ಅವರಿಗೆ ಬೇಸರ ಕೋಪಗಳುಕ್ಕಿ ಬಂದುವು.ಅವರ ಮುಖವನ್ನು ನೋಡಿದ ಚನ್ನಯ್ಯನಿಗೆ ಕಾಲೇ ನಿಲ್ಲದಂತಾದುದನ್ನು ಶಾಂತಪ್ಪ ಗಮನಿಸಿದ.

"ಏನಯ್ಯಾ. ನಿನ್ನಿಂದ ನನಗೆ ಎಷ್ಟೊಂದು ಅವಮಾನ," ಸಾಹುಕಾರರೆಂದರು ಕೋಪದಿಂದ.

"ಅಯ್ಯೊ ತಮಗೆ ಅವಮಾನ ಮಾಡಿದರೆ ನಿಮ್ಮ ಬೂಡ್ಸಿನಲ್ಲಿ ಹೊಡೀರಿ ಸಾರ್. ತಮಗೆ ಎರಡು ಬಗೆದ್ರೆ ಶಿವ ಮೆಚ್ಚುತಾನೆಯೆ? ಅನ್ನ ಕೊಡೋ ಧಣಿಗೆ ನಾನು ಎಂದೂ ಹಾಗೆ ಎಣಿಸಿಲ್ಲ ಸಾರ್," ಚನ್ನಯ್ಯ ನಮ್ರತೆಯಿಂದಲೇ ಹೇಳಿದ.

ಆ ಮಾತುಗಳನ್ನು ಕೇಳಿ ಆ ಕೃತಕತೆಯನ್ನು ಗಮನಿಸಿ, ಶಾಂತಪ್ಪನಿಗೆ ಅಸಹ್ಯವಾಯಿತು.

"ನೀನು ಹೀಗೆ ಹೇಳಿ ಹೇಳಿ ನಂಗೆ ಮೊದಲಿನಿಂದಲೂ ತೊಂದರೆ ಕೊಟ್ಟೆ. ಹೋಗಲಿ ಎಲ್ಲಿ ಎಷ್ಟು ಪೌಡರು ತೆಗೆದಿದಿ, ಎಷ್ಟು ಆಳ ಇಳಿಸಿದ್ದೀ ಪಿಟ್ಟ'ನ್ನ, ಎಲ್ಲಾ ತೋರಿಸು," ಎಂದವರು ಎದ್ದರು.

ಚನ್ನಯ್ಯ ಅವರನ್ನು ಅದೇ ಕುಣಿಯ ಬಳಿ ಕರೆದೊಯ್ದು ತೋರಿಸಿ ಹೇಳಿದ,

"ಇದೇ ಸಾರ್ 'ಪಿಟ್ಟು', ಇನ್ನು ಎಂಟು ಹತ್ತು ಅಡಿ ಆಳ ಇಳಿಸಿದ್ರೆ ಪೌಡರು 'ರೀಫು' ಸಿಕ್ಕುತ್ತೆ ಸಾರ್."

"ಇದರ ವಿಷಯ ಇರಲಿ. ಎಲ್ಲಿ, ಆ ಇಪ್ಪತ್ತು ಮೂಟೆ ಪೌಡರು ತೆಗೆದಿಟ್ಟಿದ್ದೀಯಲ್ಲ ತೋರ್ಸು."

"ಪೌಡರು ತೆಗೆದಿದ್ದೆ. ಎಲ್ಲಾ ಮಣ್ಣು ಸೇರಿ ಬಿಟ್ಟಿತ್ತು. ಆದ್ರಿಂದ ಬಿಸಾಕಿ ಬಿಟ್ಟೆ ಸಾರ್ !"

"ಸರಿ ಇನ್ನು ಇವತ್ತಿನಿಂದಲೇ ಇಲ್ಲಿ ಕೆಲಸ ನಿಲ್ಲಿಸಿಬಿಡು," ಸಾಹುಕಾರರೆಂದರು.

"ಯಾಕೆ ಸಾರ್," ಚನ್ನಯ್ಯ ಯಾವ ಧೈರ್ಯದಿಂದ ಹಾಗೆ ಕೇಳಿದನೋ !

"ಯಾಕೇಂತ ಕೇಳೋಕೆ ನಾಚಿಕೆಯಾಗೋಲ್ವೆ ? ಪೌಡರೂ ಇಲ್ಲ. ಪಿಟ್ಟನಲ್ಲಿ ಒಂದು ಬಾಂಡಲೇನೂ ಸಿಕ್ಕೋಲ್ಲ, ಇನ್ನು ಯಾಕೆ ಕೆಲಸ ಮಾಡಿಸಬೇಕು ?"

"ಸಿಕ್ಕೋಲ್ಲಾಂತ ಯಾರು ಹೇಳಿದ್ರು ಸಾರ್? ಇಲ್ಲಿ ಪೌಡರು ಸಿಕ್ಕದಿದ್ರೆ ನಾನು ಈ ತಲೇ ಮೇಲಿನ ಟೋಪೀನ ಕಿತ್ತು ಬಿಸಾಕಿ ಬಿಡ್ತೀನಿ. ಇಲ್ಲಿ ಖಂಡಿತ ಸಿಕ್ಕುತ್ತೆ ಸಾರ್....ಸಿಕ್ಕೋಲ್ಲಾಂತ ಯಾರು ಹೇಳಿದ್ರು ಸಾರ್, ತಮಗೆ?" ಎಂದು ಚನ್ನಯ್ಯ ಒಮ್ಮೆ ಶಾಂತಪ್ಪನನ್ನು ತೀಕ್ಷ್ಣವಾಗಿ ನೋಡಿ ಪುನಃ ಹೇಳಿದ,

"ಏನು ಸಾರ್ ಇಲ್ಲಿ ಪೌಡರು ಸಿಕ್ಕೋಲ್ಲವ? ನೀವು ಓದಿರೋರು ಹೇಳಿ ಸಾರ್."

"ಇಲ್ಲಿ ಇಷ್ಟೊಂದು ಆಳ ಇಳಿಸಿದ್ದೀಯೆ ಆದರೂ ಪೌಡರು ಸಿಕ್ಕಿಲ್ಲ. ಪೌಡರು ಸಿಕ್ಕೋ ಚಿಹ್ನೆಯೂ ಇಲ್ಲವಲ್ಲ," ಶಾಂತಪ್ಪನೆಂದ.

"ಈ ಪೌಡರು ಎಷ್ಟು ಬರಬಹುದು ?" ಅಲ್ಲಿನ ಭೂಮಿಯಲ್ಲಿ ಕಾಣು

ತ್ತಿದ್ದ ಪುಡಿಯನ್ನು ಒಂದು ಚಿಟಿಕೆ ತೆಗೆದು ಕೈನಲ್ಲಿ ಹಿಡಿದುಕೊಂಡು ಚನ್ನಯ್ಯ ಕೇಳಿದ. ಶಾಂತಪ್ಪನನ್ನು ಪರೀಕ್ಷಿಸಬೇಕೆಂದೇ ಅವನು ಹಾಗೆ ಕೇಳಿದ್ದ. ಅವನ ಮಾತಿನಲ್ಲಿ ಮತ್ತು ನೋಟದಲ್ಲಿ ಕೆಣಕುವ ರೀತಿಯಿದ್ದಿತು.

ಆ ರೀತಿಯನ್ನು ನೋಡಿ ಶಾಂತಪ್ಪನಿಗೆ ಕೋಪ ಸಹನೆಗೆಟ್ಟು ಬಂದಿತು. ಎದುರಿಗೆ ಸಾಹುಕಾರರಿಲ್ಲದಿದ್ದರೆ ಅವನು ಏನೆಂದು ಬಿಡುತ್ತಿದ್ದನೋ. ಆದರೆ ತನ್ನ ಕೋಪವನ್ನು ದಮನಮಾಡಿ ಅವನೆಂದ,

"ನೀನು ಅನುಭವಸ್ಥ. ಪೌಡರಿನ ವಿಷಯ ನನಗೆ ತಿಳಿಯದು, ನೀನೇ ಹೇಳು !"

ಸಾಹುಕಾರರು ಏನೊಂದೂ ಹೇಳದೇ ಅಲ್ಲಿಂದ ಮುನ್ನಡೆದರು. ಶಾಂತಪ್ಪನೂ ಅಲ್ಲಿಂದ ಹೊರಟ. ಆದರೆ ಚನ್ನಯ್ಯ ಮಾತ್ರ ತನ್ನೆದೆಯಲ್ಲಿ ದ್ವೇಷದ ಕಿಡಿಯನ್ನು ತುಂಬಿಕೊಂಡು ನಿಂತಿದ್ದ.

ಸಾಹುಕಾರರು ಬಿಡಾರಕ್ಕೆ ಹಿಂದಿರುಗಿದ ನಂತರ ಮಾಣಿಕ್ಯಂನನ್ನು ರಾಕ್ಷಸಗುಡ್ಡ ಈಶ್ವರಗುಡ್ಡಗಳ ಗಣಿಗೆ ವರ್ಗಾಯಿಸಿದರು. ಅವನು ಮಠದ ಬಳಿ ಗುಡಿಸಲೊಂದನ್ನು ಕಟ್ಟಿಸಿಕೊಂಡಿರಬೇಕೆಂದು ಅಪ್ಪಣೆ ಮಾಡಿದರು. ಚನ್ನಯ್ಯನಿಗೆ ರತ್ನಗುಡ್ಡದ ಕೆಲಸವನ್ನು ನಿಲ್ಲಿಸುವಂತೆ ತಿಳಿಸಿ, ಅವನ ಮೇಸಗಾರಿಕೆಗೆ ಸಾಕಷ್ಟು ಛೀಮಾರಿ ಮಾಡಿದರು.

ಗಣಿಯಲ್ಲಿ ತಾನು ಒಬ್ಬನೇ ಇದ್ದುಕೊಂಡು ಎಲ್ಲವನ್ನೂ ಸರಿಯಾಗಿ ನೋಡಬೇಕೆಂದು ಶಾಂತಪ್ಪನಿಗೆ ತಿಳಿಸಿ, ಅವರು ತಮ್ಮ ಹೊಸದಾಗಿ ಕೊಂಡ ಕಾರು 'ಕ್ರಿಸ್ಲರಿ'ನಲ್ಲಿ ಕುಳಿತಾಗ—

ಶಾಂತಪ್ಪನಿಗೆ ಒಂದು ದಿನ ಬ್ಯೂಕು ಕಾರನ್ನು ನೋಡಿ ಆದ ಅನುಭವದ ನೆನಪಾಗಿ, ಈ ಹೊಸ ಕಾರನ್ನು ಅವನು ತಿರುಗಿಯೂ ನೋಡಲಿಲ್ಲ !

* * *

ಅದೇ ದಿನ ಸಾಯಂಕಾಲವೇ ಮಠಕ್ಕೆ ಹೊರಡಬೇಕೆಂದು ಮಾಣಿಕ್ಯಂಗೆ ಅಪ್ಪಣೆಯಾದುದರಿಂದ ಅವನು ಹೊರಟು ಹೋದ.

ಮಾಣಿಕ್ಯಂ ಹೊರಡುವಾಗ ಶಾಂತಪ್ಪನಿಗೆ ವಂದಿಸಿದ. ವಂದಿಸಿ ವ್ಯಂಗ್ಯ ಬೆರೆತ ನಗೆಯೊಂದನ್ನು ಮುಖದಲ್ಲಿ ಒಂದು ಕ್ಷಣ ತೇಲಿಸಿದ. ಅವನೊಡನೆಯೇ ಚನ್ನಯ್ಯನೂ ಅಷ್ಟು ದೂರ ಹೋಗಿ ಬರುವೆನೆಂದು ಹೇಳಿ ಹೊರಟ. ಅವರು ಹೊರಟು ಹೋದ ನಂತರ ಶಾಂತಪ್ಪ ರತ್ನಮ್ಮನ ಮನೆಯ ಬಾಗಿಲಿನತ್ತ ನೋಡಿದ. ಅದಕ್ಕೆ ಆಗಲೇ ಬೀಗ ಬಿದ್ದಿದ್ದಿತು !

ದೂರ ಹೋದ ನಂತರ ಒಮ್ಮೆ ಚನ್ನಯ್ಯ ಮಾಣಿಕ್ಯಂರು ತಮ್ಮ ಕತ್ತು ತಿರುಗಿಸಿ, ಇನ್ನೂ ಅಲ್ಲಿಯೇ ನಿಂತಿದ್ದ, ಶಾಂತಪ್ಪನತ್ತ ನೋಡಿದರು. ಹೆಡೆ ತುಳಿದ ಹಾವುಗಳು ಸರಸರನೆ ಹರಿದು ಹೋಗಿ ದೂರದ ಪೊದೆಯೊಂದರಲ್ಲಿ ಸೇರಿಕೊಂಡು ತುಳಿದವನನ್ನು ಕತ್ತುತಿರುಗಿಸಿ ನೋಡುವಂತಿದ್ದಿತು, ಆ ನೋಟ.

## ೧೧

## ಅರ್ಥಪೂರ್ಣ 'ಇನಸ್ಪೆಕ್ಷನ್'

ಈ ಮೂರು ತಿಂಗಳುಗಳು ಶಾಂತಪ್ಪ ಒಬ್ಬನೇ ಗಣಿಗಳನ್ನು ನೋಡಿಕೊಂಡಿದ್ದ. ಅವನು ಆಗಾಗ್ಗೆ ಮಠಕ್ಕೂ ಹೋಗಿ ಅಲ್ಲಿನ ಗಣಿಯನ್ನು ನೋಡಿ ಬರುತ್ತಿದ್ದ. ಅಲ್ಲಿನ ಕಬ್ಬಿಣದ ಗಣಿಯೂ ಅವನ ಅಧಿಕಾರಕ್ಕೇ ಒಳಪಟ್ಟಿದ್ದಿತಾದ್ದರಿಂದ ಅಲ್ಲಿಗೂ ಹೋಗಿ ಬರುತ್ತಿದ್ದ. ಅಲ್ಲಿನ ಕಂಟ್ರಾಕ್ಟರು ರೇವಯ್ಯ ಹೆಚ್ಚು ಮಾತುಗಾರನಲ್ಲದಿದ್ದರೂ ಮಾಣಿಕ್ಯಂ ಪಕ್ಷಪಾತಿಯೆಂಬುದು ಸ್ಪಷ್ಟವಾಯಿತು ಶಾಂತಪ್ಪನಿಗೊಂದು ದಿನ.

"ಈ ಲಾಟು ಎಷ್ಟು ಟನ್ನಿದೆ ?" ಶಾಂತಪ್ಪ ರೇವಯ್ಯನನ್ನು ಕೇಳಿದ್ದ.

"ಇದು ಇಪ್ಪತ್ತನಾಲ್ಕು ಟನ್ ಇದೆ ಸಾರ್" ರೇವಯ್ಯನೆಂದ.

"ಯಾರು ಹೇಳಿದರು ಹಾಗೆಂದು ?" ಆ ರಾಶಿಯನ್ನಳೆದ ನಂತರ ಶಾಂತಪ್ಪ ಕೇಳಿದ.

"ಮಾಣಿಕ್ಯಂರೇ ನೋಡಿದ್ರು ಸಾರ್."

"ಇದು ಹದಿನೆಂಟು ಟನ್ ಇದೆ....ಇನ್ನೊಂದು ದಿನ ಹೀಗೆಲ್ಲಾ ಸುಳ್ಳು ಹೇಳಿದ್ರೆ ನಿನ್ನ ಕಂಟ್ರಾಕ್ಟು ತಪ್ಪಿಸಬೇಕಾಗುತ್ತೆ."

"ಮಾಣಿಕ್ಯಂರೇ ಅಳೆದಿದ್ರು ಸಾರ್ !" ರೇವಯ್ಯ ಪುನಃ ಹೇಳಿದುದು ಶಾಂತಪ್ಪನಿಗೆ ಕೋಪ ತರಿಸಿತು.

"ಹೇಳಿದೆಲ್ಲ ಕಡಿಮೆಯಿದೇಂತ. ಇನ್ನೊಂದಿನ ನಾನು ಬಂದಾಗ ಹೀಗೆ ಕಡಿಮೆಯಿದ್ರೆ ಚೆನ್ನಾಗಿರೋಲ್ಲ....ಹುಷಾರು...." ಎಂದು ಶಾಂತಪ್ಪನೆಂದಿದ್ದ. ಅಲ್ಲಿಂದ ಬರುವಾಗ ಆ ಹೊಸ ಜಾಗದಲ್ಲಿಯೂ ಮಾಣಿಕ್ಯಂ ತನ್ನ ಕಾರ್ಯಾಚರಣೆ ಪ್ರಾರಂಭಿಸಿರುವನೆಂಬ ವಿಷಯವೇ ಅವನ ತಲೆಯಲ್ಲಿ ತುಂಬಿದ್ದಿತು.

ಗಂಗಯ್ಯನೂ ಆಗಾಗ್ಗೆ ಬಂದು ಗಣಿಯ ವಿಷಯವನ್ನು ಕೇಳುತ್ತಿದ್ದ, ಹೇಳುತ್ತಿದ್ದ.

ಈ ಮೂರು ತಿಂಗಳೂ ಶಾಂತಪ್ಪನ ಪ್ರಭಾವ ಗಣಿಯಲ್ಲಿ ನೆಲೆಸಲು ಸಹಕಾರಿಯಾಗಿದ್ದಿತು. ಅವನ ಕೂಲಿಗಾರರಲ್ಲಿನ ಪ್ರೀತಿಯುತ ನಡವಳಿಕೆ, ಅವನ ಸಭ್ಯ ನಡತೆ, ಮೇಲಾಗಿ ಹೆಣ್ಣು ಹೊನ್ನುಗಳ ಹೊಳಪಿಗೆ ಬಲಿ ಬೀಳದಿರುವ ಅವನ ಆ ಒಂದು ಪ್ರವೃತ್ತಿ ಇವು ಅವನ ಬಗ್ಗೆ ಎಲ್ಲರೂ ಭಯಭಕ್ತಿಗಳನ್ನು ತಾಳಲು ಅವಕಾಶವಾಗಿದ್ದಿತು.

ಅವನು ಸಾಹುಕಾರರಿಗೆ ತಿಳಿಸಿ, ಒಂದು ತಿಂಗಳು ಪೂರ್ತಿ ಚನ್ನಯ್ಯನಿಗೆ ಒಂದು ಕಾಸೂ ಲಾಭ ಕೊಡಿಸದೆ, ಕೂಲಿಗಾರರ ಹಣವನ್ನು ಕಂಪೆನಿಯಿಂದ ಹಂಚಿಸಿದ್ದ. ಚನ್ನಯ್ಯನಿಗೆ ಲಾಭವೂ ದೊರಕದೆ, ಅವನು ಸಾಹುಕಾರರಿಗೇ ಸಾಲಗಾರನಾಗಿ ಉಳಿದಿದ್ದ ; ಶಾಂತಪ್ಪನಿಂದಾಗಿ, ಅವನಿಗೆ ದೊರಕುತ್ತಿದ್ದ ರತ್ನಗುಡ್ಡದ ಸಹಸ್ರಾರು ರೂಪಾಯಿ ಲಾಭವೂ ಕಡಿಮೆಯಾಗಿದ್ದಿತು. ಸುಬ್ಬಣ್ಣ-ಮಾಣಿಕ್ಯಂರಿಗೂ ತೊಂದರೆಯುಂಟಾಗಿದ್ದಿತು. ಅವರ ಅನೇಕ 'ಮಾಮೂಲು'ಗಳು ಇಲ್ಲವಾಗಿದ್ದುವು. ಗಣಿ ಜೀವನದಲ್ಲಿ ಅವರು ನಿರಾತಂಕವಾಗಿ ಇದುವರೆಗೂ ಅನುಭವಿಸಿದ್ದ ಸ್ತ್ರೀ ಸುಖಕ್ಕೆ ತೊಂದರೆಯುಂಟಾಗಿದ್ದಿತು. ಗಣಿಯಲ್ಲಿನ ಆಳುಗಳ ಹಾಜರಿಪಟ್ಟಿಯನ್ನವನು ಪ್ರತಿದಿನವೂ ಪರಿಶೀಲಿಸುತ್ತಿದ್ದುದರಿಂದ, ಕೆಲಸಕ್ಕೆ ಬರದಿದ್ದರೆ ಶಿವಮ್ಮ, ಪಾರ್ವತಿ, ರತ್ನಮ್ಮ ಮೊದಲಾದವರಿಗೂ ಗೈರುಹಾಜರಿ ಹಾಕಬೇಕಾಗುತ್ತಿದ್ದಿತು. ಇದರಿಂದಾಗಿ ಚನ್ನಯ್ಯ ಮಾಣಿಕ್ಯಂ, ಸುಬ್ಬಣ್ಣ ಇವರಲ್ಲಿ ದ್ವೇಷದ ದಳ್ಳುರಿ ಉರಿಯುತ್ತಲೇ ಇದ್ದು ಶಾಂತಪ್ಪನಿಗಾಗಿ ಎಂದು ದಾವಾನಲವಾಗುವೆನೋ ಎನ್ನುತ್ತಿದ್ದಿತದು.

ಶಿವಮ್ಮ,
ರತ್ನಮ್ಮ,
ಪಾರ್ವತಿ,

—ಈ ಮೂರು ಹೆಣ್ಣುಗಳ ಮೋಹಕ ದೃಷ್ಟಿ ಅವನ ಮೇಲೆ ದಿನವೂ ಬಿದ್ದು ವಿಫಲವಾಗಿ ಹಿಂದಿರುಗುತ್ತಿದ್ದುವು. ಆ ದೃಷ್ಟಿಯನ್ನವನು ಗಮನಿಸಿದಾಗಲೆಲ್ಲಾ 'ಹೆಣ್ಣು ಪ್ರಕೃತಿ ಶಕ್ತಿಯ ಒಂದು ಅಂಗ. ಜೀವ ಸೃಷ್ಟಿಯ ಕಾರ್ಯವನ್ನು ಸಾಧಿಸಲು ಅವಳಿಗೆ ಗಂಡು ಕೇವಲ ಒಂದು ಸಾಧನ. ಆದ್ದರಿಂದ ತನ್ನ ಕೆಲಸವನ್ನು ಸಿದ್ಧಿಸಿಕೊಳ್ಳಲು ಅವಳು ನಿರಂತರವೂ ಗಂಡೆಂಬ

ಹುಳುವನ್ನು ತನ್ನ ಬಲೆಯಲ್ಲಿ ಹಾಕಿಕೊಳ್ಳಲು ಸದಾ ಮೋಹದ ಬಲೆಯನ್ನು ನೇಯುತ್ತಲೇ ಇರುವಳು,' ಎಂಬ ಬರ್ನಾರ್ಡ್ ಷಾನ ಸಾಹಿತ್ಯದ ನೆನಪಾಗುತ್ತಿದ್ದಿತು. ಅವನು ಮನಸ್ಸಿನಲ್ಲಿಯೇ ನಗುತ್ತಿದ್ದ.

*　　*　　*

ಒಂದು ದಿನ ಇದ್ದಕ್ಕಿದ್ದಂತೆ ಸಾಹುಕಾರರಿಂದ ಪತ್ರವೊಂದು ಬಂದಿತು. ಇನ್ನು ಮೂರು ದಿನದಲ್ಲಿ ಕೇಂದ್ರಸರ್ಕಾರದ ಅಧಿಕಾರಿ, ಗಣಿಯ ಇನ್‌ಸ್ಪೆಕ್ಟರು, ಗಣಿ ಪರಿಶೀಲನೆಗೆ ಬರುವರು. ಅದಕ್ಕಾಗಿ ಯಾವುದಾದರೊಂದು ಗಣಿಯನ್ನು ಅಪಾಯವಿಲ್ಲದಂತೆ ಅವರಿಗೆ ಕಾಣಿಸುವ ಏರ್ಪಾಟು ಮಾಡಬೇಕು, ಮೊದಲಾಗಿ ಅನೇಕ ಸೂಚನೆಗಳನ್ನು ತಿಳಿಸಿದ್ದರು.

ಮಹಾಲಕ್ಷ್ಮೀ ಗಣಿಯ ಸುರಂಗ,

ಚನ್ನಯ್ಯನ ಗಣಿಯಲ್ಲಿನ ಹಲವು ಕುಣಿಗಳು,

ರಾಕ್ಷಸ ಗುಡ್ಡದಲ್ಲಿ ರೇವಯ್ಯನು ಕೆಲಸ ಮಾಡಿಸುತ್ತಿರುವ ಕಬ್ಬಿಣದ ಗಣಿ,

ಎಲ್ಲವೂ ಅವನ ಕಣ್ಣ ಮುಂದೆ ಸುಳಿದುಹೋದುವು, ಎಲ್ಲವೂ ಒಂದಲ್ಲ ಒಂದು ವಿಧದಲ್ಲಿ ಅಪಾಯಕಾರಿಯಾಗಿದ್ದುವು. ಉಳಿದ ಗಣಿಗಳಗಳಲ್ಲಿಯೂ ಸಹ ಎಲ್ಲವೂ ಅವ್ಯವಸ್ಥೆಯೇ. ಇವೆಲ್ಲವೂ ಎರಡೇ ದಿನಗಳಲ್ಲಿ ವ್ಯವಸ್ಥಿತವಾಗಬೇಕಿದ್ದುವು. ಸುಳ್ಳು ಬರಹಗಳು ಸೃಷ್ಟಿಯಾಗಬೇಕಿದ್ದುವು. ಕೂಲಿಗಾರರಿಗೆ ಸುಳ್ಳು ಪಾಠವಾಗಬೇಕಿದ್ದಿತು. ತಾನು ಹಲವು ಸಟೆ ನುಡಿಗಳನ್ನು ಅಭ್ಯಸಿಸಬೇಕಿದ್ದಿತು. ಯಾವುದಾದರೊಂದು ಕುಣಿಯು ಅಪಾಯರಹಿತವಾಗಿರುವಂತೆ ಕೆಲಸ ಮಾಡಿಸಿ ಆ ಒಂದು ದಿನ ಪ್ರದರ್ಶಿಸಬೇಕಿದ್ದಿತು. ಶಾಂತಪ್ಪನು ಎರಡು ದಿನವೂ ಬಹು ದಕ್ಷತೆಯಿಂದಲೇ ಎಲ್ಲವನ್ನೂ ನಿರ್ವಹಿಸಿದ. ಗಣಿಗೆ ಹೋಗುವ ರಸ್ತೆಯಲ್ಲಿ ತೂಗು ಹಲಗೆಯೊಂದರ ಮೇಲೆ ಕಂಪೆನಿಯ ಹೆಸರು ಕಾಣುವಂತೆ ಹಾಕಲ್ಪಟ್ಟಿದ್ದಿತು. ರಸ್ತೆಯಿಂದ ಒಂದೇ ಒಂದು ಸ್ಥಳಕ್ಕೆ ಇನ್‌ಸ್ಪೆಕ್ಟರನ್ನು ಕರೆದೊಯ್ಯಲು ರಸ್ತೆಯನ್ನು ಸ್ವಚ್ಛಗೊಳಿಸಲಾಯಿತು. ನಾಲ್ಕಾರು ಕುಣಿಗಳ ಬಳಿ ಹಲಗೆಯ ಮೇಲೆ ಕುಣಿಯ ಸಂಖ್ಯೆ, ಗಣಿಯ ಹೆಸರು ಸೂಚಿಸಲ್ಪಟ್ಟಿತ್ತು.

ಆ ದಿನ ಶಾಂತಪ್ಪ ಗಣಿಯಲ್ಲಿದ್ದ. ದೂರದಲ್ಲಿ ಬರುತ್ತಿದ್ದ ಹೊಸ ಲಾರಿಯು ಧೂಳನ್ನೆಬ್ಬಿಸುತ್ತಾ ಶಬ್ದ ಮಾಡುತ್ತಾ ತಾನು ಬರುತ್ತಿರುವುದನ್ನು

ಸೂಚಿಸಿತು. ಗುಡ್ಡವೊಂದರ ಮೇಲಿದ್ದ, ಶಾಂತಪ್ಪನು ಲಾರಿಯನ್ನು ಕಂಡು ಇಳಿದುಬಂದು ಸಾಹುಕಾರರಿಗೂ, ಇನ್‌ಸ್ಪೆಕ್ಟರಿಗೂ ವಂದಿಸಿದ.

ಇನ್‌ಸ್ಪೆಕ್ಟರು ಖಾಕಿ ಉಡುಪನ್ನೇ ಧರಿಸಿದ್ದರು. ಅವರೊಡನೆ ಡವಾಲಿ ಧರಿಸಿದ್ದ ಆಳೊಬ್ಬ ಕೆಲವು ಪುಸ್ತಕಗಳನ್ನು ಹೊತ್ತುಕೊಂಡು ನಮ್ರತೆಯಿಂದ ಅವರ ಹಿಂದೆ ಬರುತ್ತಿದ್ದ. ತಾನು ಆ ಎರಡು ದಿನಗಳಲ್ಲಿಯೇ ಬರೆದು ಮುಗಿಸಿದ್ದ ಗಣಿ ಕೆಲಸದ ಒಂದು ವರ್ಷದ ವಿವರವರದಿಯಿದ್ದ ಪುಸ್ತಕವನ್ನು ಕೈನಲ್ಲಿ ಹಿಡಿದಿದ್ದ ಶಾಂತಪ್ಪನೂ ಖಾಕಿ ಉಡುಪು ಧರಿಸಿ ಅವರೆದುರು ಬಂದಾಗ ಸಾಹುಕಾರರೆಂದರು,

"ಇವರೇ ನಮ್ಮ ಗಣಿ ಮ್ಯಾನೇಜರು, ಮಿಸ್ಟರ್ ಶಾಂತಪ್ಪ ಬಿ. ಎಸ್‌ಸಿ ಆನರ್ಸ್."

ಶಾಂತಪ್ಪ ಇನ್‌ಸ್ಪೆಕ್ಟರು ಪರಸ್ಪರು ಹಸ್ತಲಾಘವವಿತ್ತನಂತರ ಇನ್‌ಸ್ಪೆಕ್ಟರೆಂದರು,

"ನನ್ನನ್ನು ನಿಮ್ಮ ಗಣಿ ಸುತ್ತ ಕರೆದುಕೊಂಡು ನಡೆಯಿರಿ, ಹೋಗೋಣ!", ಎಂದು ಮುಂದೆ ಹೊರಟರು. ಆ ಅಧಿಕಾರಿಯ ಕಾರ್ಯ ತತ್ಪರತೆಗೆ ಶಾಂತಪ್ಪ ಮನಸ್ಸಿನಲ್ಲಿಯೇ ಮೆಚ್ಚುಗೆ ಸೂಚಿಸಿಕೊಂಡ- ಅವರೆದುರಿನಲ್ಲಿಯೇ ಆ ದಿನದ ಮಟ್ಟಿಗೆ ಬಂದಿದ್ದ ನೀರಿನ ಗಾಡಿ ನಿಂತಿದ್ದಿತು, ಅದರೊಳಗೆ ದೊಡ್ಡ ಕಡಾಯಿಗಳೆರಡರಲ್ಲಿ ನೀರು ತುಂಬಿದ್ದಿತು. ಅಲ್ಲಿಯೇ ಮರವೊಂದರ ಬದಿಯಲ್ಲಿ ಅದೇ ದಿನವೇ ಇಟ್ಟಿದ್ದ ಹೊಸ ಮಡಕೆಗಳು ನೀರು ತುಂಬಿಕೊಂಡು ಕುಳಿದ್ದುವು.

"ಇದು ನೀವು ದಿನವೂ ನೀರಿಡೋ ಜಾಗವೇನು?" ಅವರು ಕೇಳಿದರು ಶಾಂತಪ್ಪನನ್ನು.

"ಹೌದು ಸಾರ್. ಇಲ್ಲೇ ದಿನವೂ ನೀರು ತುಂಬಿಡೋದು."

—ಎಂದು ಶಾಂತಪ್ಪನೆಂದರೂ, ಆ ದಿನವೇ ಹೊಸದಾಗಿ ಇಟ್ಟಿದ್ದ ಮಡಕೆಯ ಹೊಸ ಬಣ್ಣ, ಹೊಸದಾಗಿ ನಿರ್ಮಿಸಿದ್ದ ಅದರ ಮಣ್ಣಿನ ಪೀಠವು ಅದೇ ದಿನ ಅಲ್ಲಿ ಅದನ್ನಿಟ್ಟಿರುವುದೆಂದು ಸಾರಿ ಹೇಳುತ್ತಿದ್ದಿತು.

"ನಿಮ್ಮ ಗಣಿಯಲ್ಲಿ ಎಷ್ಟು ಜನ ಕೆಲಸಗಾರರಿದ್ದಾರೆ?"

"ಎಂಬತ್ತನಾಲ್ಕು ಜನ!"

"ಗಂಡಸರೆಷ್ಟು, ಹೆಂಗಸರೆಷ್ಟು, ಬಾಲಕರೆಷ್ಟು?"

ಇನ್ಸ್ಪೆಕ್ಟರು ಕೇಳಿದ ಈ ಪ್ರಶ್ನೆಗೆ ಶಾಂತಪ್ಪನ ಬಾಯಿಂದ ಯಾವ ಉತ್ತರವು ಹೊರಬೀಳುವುದೋ ಎಂದು ಸಾಹುಕಾರರು ತವಕಿಸುತ್ತಿದ್ದರು. ಅವರ ಮುಖದಲ್ಲಿ ಆ ಕಾತರ ಭಾವದ ಪಡಿನೆಳಲು ಮೂಡಿದ್ದಿತು. ಗಣಿಯಲ್ಲಿದ್ದ ಬಾಲಕರ ಸಂಖ್ಯೆಯನ್ನು ಶಾಂತಪ್ಪ ಹೇಳಿದ್ದರೆ ಸಾಹುಕಾರರದು ಅಪರಾಧವಾಗುತ್ತಿದ್ದಿತು. ಶಾಂತಪ್ಪನೆಂದ,

"ಮೂವತ್ತು ಜನ ಗಂಡಸರು, ಐವತ್ತನಾಲ್ಕು ಜನ ಹೆಂಗಸರು."

"ಯಾಕೆ ಬಾಲಕರು ಇಲ್ಲವೆ?"

"ಇಲ್ಲ ಸಾರ್. ಬಾಲಕರನ್ನ ಗಣಿ ಕೆಲಸಕ್ಕೆ ತೆಗೆದುಕೊಳ್ಳಕೂಡದೆಂದು ಕಾನೂನಿದೆಯಲ್ಲ!" ಎಂದ ಶಾಂತಪ್ಪನ ಉತ್ತರ ಕೇಳಿ ಸಾಹುಕಾರರ ಮುಖದಲ್ಲಿ ತಿಳಿನಗೆ ತೇಲಿತು. ಆದರೆ ಗಣಿಯಲ್ಲಿ ಕಲ್ಲು ಹೊರುತ್ತಿದ್ದ ಬಾಲಕ ಬಾಲಕಿಯರು ಎಂಬತ್ತು ತೊಂಬತ್ತು ಜನರನ್ನು ಲಾರಿ ಬರುವುದಕ್ಕೆ ಅರ್ಧ ಗಂಟೆ ಮುಂಚೆಯೇ ದೂರದ ಗುಡ್ಡವೊಂದರ ಬಳಿ ಶಬ್ದಮಾಡದೇ ಕುಳಿತಿರಲು ಹೇಳಿ ಕಳುಹಿಸಿದ್ದ, ಬಹುಶಃ ಆ ಸಮಯದಲ್ಲಿ ಅವರು ಅಲ್ಲಿ ಚೌಕಭಾರವನ್ನೋ, 'ಜೂಜಾಟ'ವನ್ನೋ ಆಡುತ್ತಿದ್ದರಲ್ಲಿ!

"ಈ ನೆರಳು ಕಟ್ಟಿಸಿದ್ದು ಎಷ್ಟು ದಿನದ ಹಿಂದೆ?" ಅದಿರನ್ನೊಡೆಯುತ್ತಿದ್ದ ಹೆಂಗಸರು ಕುಳಿತಿದ್ದ ತೆಂಗಿನ ಗರಿಯ ನೆಳಲನ್ನು ನೋಡಿ ಕೇಳಿದರವರು.

"ಇದು ಎಷ್ಟೋ ತಿಂಗಳಿಂದ ಇದೆ ಸಾರ್," ಎಂದ ಶಾಂತಪ್ಪ.

"ನಿಮ್ಮ ಗಣೀಲಿ ಎಷ್ಟು ವಾರದ ಕೂಲಿ ಬಾಕಿ ಉಳಿದಿದೆ?"

ಆ ಪ್ರಶ್ನೆಯನ್ನು ಕೇಳಿ ಸಾಹುಕಾರರು, ಚನ್ನಯ್ಯನೂ ಘಾಬರಿಯಾದರು. ಶಾಂತಪ್ಪನೇನೆಂದುಬಿಡುವನೋ ಎಂದು ಅವರಿಗೆ ಭಯವಾಯಿತು, ಸಾಹುಕಾರರೇ ತಕ್ಷಣ ಉತ್ತರಿಸಿಬಿಡುತ್ತಿದ್ದರಾದರೂ ಮೇನೇಜರರೇ ಕೇಳಿದುದಕ್ಕೆ ಉತ್ತರ ಹೇಳಬೇಕಿದ್ದಿತು.

"ನಾವು ಯಾವಾಗಲೂ ಕೂಲಿ ಬಾಕಿ ಉಳಿಸಿಕೊಳ್ಳೋದೇ ಇಲ್ಲ. ಪ್ರತಿವಾರವೂ ಬಟವಾಡೆ ಮಾಡಿಬಿಡ್ತೀವಿ" ಎಂದ ಶಾಂತಪ್ಪನ ಉತ್ತರದಿಂದ ಸಾಹುಕಾರರಿಗೆ ಸಂತೋಷವಾಯ್ತು.

ಆದರೆ, ಅದೇ ದಿನ ಬೆಳಗ್ಗೆ ಆಳೊಬ್ಬನು ಶಾಂತಪ್ಪನ ಬಳಿಗೆ ಬಂದು "ಸಾರ್....ನನ್ನ ಮಗೂಗೆ ಒಂದು ವಾರದಿಂದ ಜ್ವರ. ಡಾಕ್ಟರಿಗೆ

ಕೋಡೋಕೆ ಕಾಸಿಲ್ಲ. ಎರಡು ವಾರದ ಕೂಲಿ ನಂಗೆ ಚನ್ನಯ್ಯ ಕೊಡಿಸ್ಲೇ ಇಲ್ಲ. ನನ್ನ ಮಗೂನ ಬದುಕ್ಸಿ ಸಾರ್. ನಿಮ್ಮ ಕಾಲಿಗೆ ಬೀಳ್ತೀನಿ" ಎಂದು ಅಳುತ್ತಾ ಕೇಳಿದ್ದ. ಶಾಂತಪ್ಪ ತನ್ನ ಜೇಬಿನಿಂದ ಅವನಿಗೆ ಐದು ರೂಪಾಯಿ ಕೊಟ್ಟು, "ಇದು ತೊಗೋ. ಕೂಲಿ ಕೊಟ್ಟಿಲ್ಲಾಂತ ಯಾರಿಗೂ ಹೇಳಬೇಡ" ಎಂದಿದ್ದ. ಆದರೆ ಇಲ್ಲಿ ಸತ್ಯಶೋಧನಕ್ಕಾಗಿ ಸರ್ಕಾರದ ಅಧಿಕಾರಿ ಬಂದಾಗ ಆ ಭಯಂಕರ ಸುಳ್ಳನ್ನು ಮುಚ್ಚಿದ್ದ. ಅವನ ಕಣ್ಣ ಮುಂದೆ ಬೆಳಗಿನ ಆ ಆಳಿನ ಕಂಬನಿಯೇ ಕಂಡಂತಾದರೂ, ತಾವು ಪ್ರತಿವಾರವೂ ತಪ್ಪದಂತೆ ಬಟವಾಡೆ ಮಾಡುವೆವೆಂದು ತಿಳಿಸಿದ್ದ. ಪ್ರತಿ ದಿನವೂ ಕೂಲಿಗಾರರು ಗಂಟಲೊಣಗಿಸಿಕೊಂಡು, ಒಣಗಿದ ನಾಲಿಗೆಯು ಒಳಗೇ ಅಂಟಿಕೊಳ್ಳುತ್ತಿದ್ದರೂ, ದುಡಿಯುವ ವೇದನಾಮಯ ಚಿತ್ರವನ್ನವನು ನೋಡಿದ್ದರೂ, ಗಣಿಗೆ ಪ್ರತಿದಿನವೂ ನೀರು ಸರಬರಾಜು ಮಾಡುವುದಕ್ಕೆ ಹೆಚ್ಚು ಹಣ ವೆಚ್ಚವಾಗುವುದೆಂದು ಅದು ಸಾಧ್ಯವಿಲ್ಲವೆಂದು ಸಾಹುಕಾರರು ಹೇಳಿದ್ದರೂ, ಅವನು ಮಾತ್ರ ಪ್ರತಿದಿನವೂ ನೀರು ತರುವ ಗಾಡಿಯಿದೇ, ಎಂದು ತೋರಿಸಿದ್ದ.

"ಇವರನ್ನೆಲ್ಲಾ ಎಷ್ಟು ಗಂಟೆ ಇಲ್ಲಿ ಕೆಲಸ ಮಾಡಲು ಹೇಳುತ್ತೀರಿ ?"

"ಪ್ರತಿ ದಿನವೂ ಎಂಟು ಗಂಟೆ ಕಾಲ. ಮಧ್ಯೆ ಊಟಕ್ಕೆ ಒಂದು ಗಂಟೆ ಕಾಲ ವಿರಾಮ ಕೊಡ್ತೇವೆ," ಎಂದು ಶಾಂತಪ್ಪ ಉತ್ತರಿಸಿದ್ದ. ಆದರೆ ಪ್ರತಿದಿನ ಹತ್ತು ಹನ್ನೊಂದು ಗಂಟೆ ದುಡಿಮೆ, ಮಧ್ಯೆ ಅವರಿಗೆ ಹತ್ತು ನಿಮಿಷ ವಿರಾಮ ವಷ್ಟೇ. ಆ ಕೂಲಿಗಾರರನ್ನು ಕಂಪೆನಿಯು ಕೊಂಡ ಗುಲಾಮರಂತೆ ಕಾಣು ತ್ತಿದ್ದುದು ಶಾಂತಪ್ಪನಿಗೆ ನೆನಪಿದ್ದಿತು. ಗಣಿಯಲ್ಲಿ ತಾವು ಕೈದಿಗಳೆಂದು ಅವರು ಭಾವಿಸಿಕೊಂಡು ದುಡಿಯುತ್ತಿದ್ದುದೂ, ವಾರ ವಾರದ ಕೂಲಿಯನ ವರು ಪಡೆಯುವುದೇ ಅವರು ಮಾಡುವ ಅಪರಾಧವೆಂಬಂತೆ ಅವರು ಭಾವಿಸು ತ್ತಿದ್ದುದೂ ಶಾಂತಪ್ಪನಿಗೆ ನೆನಪಿದ್ದಿತು.

"ಇಲ್ಲಿ ಪ್ರಥಮ ಚಿಕಿತ್ಸೆಗೆ ಏನು ಮಾಡುವಿರಿ ?"

"ಅದರ ಪೆಟ್ಟಿಗೆಗಳೇ ಎರಡಿವೆ ಇಲ್ಲಿ. ಇದು ನೋಡಿ," ಎಂದು ಆದಿನಕ್ಕೆ ಮಾತ್ರ ತಂದಿದ್ದ ಪ್ರಥಮ ಚಿಕಿತ್ಸೆ ಸಾಮಗ್ರಿಗಳ ಪೆಟ್ಟಿಗೆಯನ್ನವನು ತೋರಿದ.

"ಇದು ದಿನವೂ ತರುತ್ತೀರಾ ?"

"ಹೌದು...."ಎಂದ ಶಾಂತಪ್ಪ. ಆದರೆ ಪ್ರತಿದಿನವೂ ಕೈಕಾಲುಗಳ ಮೇಲೆ ಹಾರೆ, ಗುದ್ದಲಿ, ಸುತ್ತಿಗೆ ಕಲ್ಲುಗಳನ್ನು ಹಾಕಿಕೊಂಡವರಿಗೆ ಅವರ ಗಾಯಕ್ಕೆ ಹಚ್ಚಲು ಔಷಧಿಯಿರುತ್ತಲೇ ಇಲ್ಲ. ಆದರೂ ಏಕೆ ?........ ಈ ಸುಳ್ಳಿನ ಬಲೆ ನೆಯ್ದು ನೆಯ್ದು ಹೇಳುತ್ತಿರುವುದು ? ಈ ನೂರಾರು ಬಡಜನರನ್ನು ತಾವು ಅಮಾನುಷರಾಗಿ ನಡೆಸಿ ಕೊಳ್ಳುತ್ತಾ ಇದ್ದರೂ ಅವರೆದುರಿಗೇ ಅವರನ್ನು ಮನುಷ್ಯರಂತೆಯೇ ಕಾಣುತ್ತಿರುವುದಾಗಿ ಸುಳ್ಳು ಹೇಳಿ ಅವರ ಕತ್ತು ಕೊಯ್ಯುವ ರಾಕ್ಷಸೀ ಕೃತಿಯೇಕೆ ? ಎಂದು ಅವನು ತನ್ನಲ್ಲಿಯೇ ಪ್ರಶ್ನೆ ಹಾಕಿಕೊಂಡ. ಹೌದು, ಸಾಹುಕಾರರು ನೀಡುವ ಸಂಬಳವನ್ನು ಪಡೆದಮೇಲೆ ಅವರನ್ನುಳಿಸಲು ಸುಳ್ಳು ಹೇಳಲೇ ಬೇಕು, ಅವರ ನೌಕರಿಯನ್ನು ಒಪ್ಪಿ ಕೊಂಡ ಮೇಲೆ ತನ್ನನ್ನು ತಾನು ಮಾರಿ ಕೊಂಡಂತೆಯೇ ; ಆಗ ಅವರ ಪರ ವಾಗಿ ನುಡಿಯಲೇ ಬೇಕು ! ನೌಕರಿ....ಸಂಬಳ....ಗುಲಾಮತನ....ಬಂಧನ ....ಸುಳ್ಳು !

"ನೀವು ಡೈನಾಮೈಟು ಉಪಯೋಗಿಸುತ್ತೀರೋ, ಇಲ್ಲವೋ ಮದ್ದನ್ನೋ ?" ಅವರು ಕೇಳಿದ ಪ್ರಶ್ನೆ ಸಾಹುಕಾರರನ್ನು ದಂಗುಬಡಿಸಿತು. ಅವರು ಶಾಂತಪ್ಪನ ಉತ್ತರದ ಬಗ್ಗೆ ಭಯಪಟ್ಟರು. ಲೈಸೆನ್ಸ್ ಇಲ್ಲದೇ, ಲೈಸೆನ್ಸು ಪಡೆದ ಸ್ಫೋಟನ ಮಾಡುವವನಿಲ್ಲದೇ, ತಾವು ಡೈನಾಮೈಟು ಉಪಯೋಗಿಸುವುದರ ಅಪರಾಧದ ಅರಿವಿದ್ದಿತವರಿಗೆ. ಆದರೆ ಶಾಂತಪ್ಪ ಸಹಜವಾಗಿ ನುಡಿದ,

"ನಾವು ಡೈನಾಮೈಟು,ಮದ್ದು ಯಾವುದನ್ನೂ ಉಪಯೋಗಿಸೋದಿಲ್ಲ,"

"ಒಂದು ವಾರಕ್ಕೆ ಎಷ್ಟು ಟನ್ನು ಅದಿರು ತೆಗೀತೀರಿ?"

"ಇನ್ನೂರರಿಂದ ಐದು ನೂರರವರೆಗೂ ಆಗುತ್ತೆ" ಎಂದ ಶಾಂತಪ್ಪ.

"ಸರಿ....ನಿಮ್ಮ ಅದಿರು ತೆಗೆಯುವ 'ಪಿಟ್ಟು' ಇದೇಯೋ?"

"ಇದು ಮತ್ತು ಆ ಎದುರಿನದು, ಎರಡೇ" ಎಂದು ಶಾಂತಪ್ಪನೆಂದಾಗ ಅವನೆದುರಿಗೆ ನಿಮಿಷ ನಿಮಿಷವೂ ನರಬಲಿಯನ್ನು ಬೇಡುವಂತೆ ಬಾಯ್ದೆರದು ನಿಂತಿದ್ದ ಮಹಾಲಕ್ಷ್ಮಿ ಗಣಿಯ ಸುರಂಗದ ಕರಿಚಿತ್ರ ಬಂದಿತು. ಮಹಾ ಮಾರಿ ಗಣಿಯದು, ಎನಿಸಿತವನಿಗೆ. ಆದರೆ ಆ ಗಣಿಯನ್ನು ಅವರು ನೋಡಿದ್ದರೆ ಆ ದಿನವೇ ಸಾಹುಕಾರರ ಗಣಿ ಕೆಲಸ ನಿಲ್ಲುತ್ತಿದ್ದಿತು.

"ಸರಿ....ನೀವು ಚೆನ್ನಾಗಿ ಕೆಲಸ ಮಾಡಿಸುತ್ತಿದ್ದೀರಿ. ನಿಮ್ಮ ಗಣಿಯಲ್ಲಿ

ಯಾವ ಅಪಾಯವೂ ಇಲ್ಲ. ಎಲ್ಲಾ ಸಮರ್ಪಕವಾಗಿದೆ....ಎಲ್ಲಿ ನಿಮ್ಮ ಪುಸ್ತಕ ಕೊಡಿ" ಎಂದು ಶಾಂತಪ್ಪನ ಪುಸ್ತಕಗಳನ್ನು ತೆಗೆದುಕೊಂಡು ಅವರು ರುಜು ಮಾಡಿದರು.

ಆದರೆ ಕೇವಲ ಅಷ್ಟು ಸಣ್ಣ ಕುಣಿಗಳೆರಡರಲ್ಲಿಯೇ ವಾರಕ್ಕೆ ಐದು ನೂರು ಟನ್ನುಗಳವರೆಗೂ ಅದಿರು ದೊರೆಯುವುದೆಂಬ ಮಾತನ್ನು ಹೇಗೆ ನಂಬಿದರು, ಆ ಗಣಿಯ ಇನ್‌ಸ್ಪೆಕ್ಟರು ಎಂಬುದು ಶಾಂತಪ್ಪನಿಗೆ ಎಂದಿಗೂ ಬಗೆಹರಿಯದ ಸಮಸ್ಯೆಯಾಗಿದ್ದಿತು !

ಸಾಹುಕಾರರ ಆತಿಥ್ಯ, ಶಾಂತಪ್ಪನ ವಿನಯಶೀಲ ನಡವಳಿಕೆಯಿಂದ ಸಂತುಷ್ಟರಾದ ಇನ್‌ಸ್ಪೆಕ್ಟರು ರಾಮನಾಯ್ಕನ ಹಳ್ಳಿಗೆ ಹಿಂದಿರುಗಿ, ಸಾಹುಕಾರರ 'ಕ್ರಿಸ್ಲರ್' ಕಾರಿನಲ್ಲಿ ಹೊರಟುಹೋದರು ! ಅವರೊಡನೆಯೇ ಹೊರಟು ಹೋದ ಸಾಹುಕಾರರು ಹೊರಡುವ ಮುನ್ನ ಶಾಂತಪ್ಪನಿಗೆ ಹೇಳಿದರು,

"ನಿಮ್ಮ ಈ ದಿನದ ಮಾತುಗಳು ತುಂಬಾ ಸಮರ್ಪಕವಾಗಿದ್ದವು. ನನಗೆ ಬಹಳ ಸಂತೋಷವಾಯಿತು. ಈ ತಿಂಗಳಿಂದ ನಿಮ್ಮ ಸಂಬಳ ನೂರೆಪ್ಪತ್ತು ಮಾಡಿಬಿಡುತ್ತೇನೆ."

ಆದರೆ ಶಾಂತಪ್ಪನಿಗೆ ಸಂತಸವಾಗಲಿಲ್ಲ. ಅವನ ಕಣ್ಣೆದುರು ನೂರೈವತ್ತು ರಕ್ತದ ರೂಪಾಯಿಗಳು ಠಣ್ ಠಣ್ಣೆಂದು ಉರುಳಿ ಹೋದಂತೆ ಭಾಸವಾಯಿತು.

## ೧೨

## ಜ್ವಾಲಾಮುಖಿ ಒಡೆಯಿತು

ಶಾಂತಪ್ಪನ ಉತ್ಕರ್ಷವನ್ನು ನೋಡಿ ಕೇಳಿದ ಸುಬ್ಬಣ್ಣ, ಮಾಣಿಕ್ಯಂ, ಚನ್ನಯ್ಯರಿಗೆ ಅಸಹನೆ ತಾಳಲಾರದಷ್ಟಾಗಿದ್ದಿತು. ತಾವು ಇಷ್ಟು ದಿನ ದುಡಿದರೂ ಒಂದು ಬಾರಿಯಾದರೂ ಹತ್ತು ರೂಪಾಯಿಯ ಹೆಚ್ಚಿನ ದುಡಿಮೆಯನ್ನು ಕಾಣದಿದ್ದರೂ ಇತ್ತೀಚೆಗೆ ಬಂದ ಶಾಂತಪ್ಪನಿಗೆ ಒಂದೇ ಬಾರಿಗೆ ಎಪ್ಪತ್ತು ರೂಪಾಯಿಗಳ ಏರಿಕೆಯಾಗಿದ್ದಿತು. ಅವನಿಗೆ ಸ್ವತಂತ್ರವಾಗಿ ಗಣಿ

ಗಳನ್ನು ನೋಡಿಕೊಳ್ಳುವ ಅಧಿಕಾರ ದೊರೆತಿದ್ದಿತು. ಮಾಣಿಕ್ಯಂ ಒಬ್ಬನೇ ಮಠದ ಬಳಿ ಇದ್ದು ದಿನದಿನವೂ ಗಣಿಗೆ ನಡೆಯುವಂತಾಗಿತ್ತು.

ಚನ್ನಯ್ಯನಿಗೂ ಆರ್ಥಿಕ ಧಕ್ಕೆಯುಂಟಾಗಿದ್ದಿತು. ಪ್ರತಿ ವಾರವೂ ಅವನು ಅದಿರಿನ ದರ್ಜೆಯು ಕಡಿಮೆಯಾಗಿಯೋ, ಅವನು ನಿರೀಕ್ಷಿಸಿದ ಅಳತೆ ಬಾರದೆಯೋ, ಅವನ ಪಾಲಿನ ಹಣ ಕಡಿಮೆಯಾಗಿಯೇ ಬರುತ್ತಿತ್ತು. ಹೀಗಾಗಿ ವಾರವಾರವೂ ಅವನ ಪಾಲಿನ ಹಣವು ಬಟವಾಡೆಗೆ ಸರಿಯಾಗಿಯೋ ಕೊರೆಯಾಗಿಯೋ ಇರುತ್ತಿತ್ತು. ಇದರಿಂದ ರಾಮನಾಯ್ಕನ ಹಳ್ಳಿಯಲ್ಲಿ ಅವನು ನಡೆಸುತ್ತಿದ್ದ ನಾಲ್ಕೈದು ಸಂಸಾರಗಳಿಗೆ, ಅವನ ಗೆಳೆಯರಾದ ಊರಿನ ಹಲವು ಪುಂಡರಿಗೆ, ಕೆಲವು ವಾರಗಳಿಂದ ಹಣ ಸಂದಾಯವಾಗಿರಲಿಲ್ಲ! ಒಂದೊಂದು ದಿನ ಮಠದಿಂದ ಕೋಣಸಂದ್ರದಿಂದ ಮಾಣಿಕ್ಯಂ, ಸುಬ್ಬಣ್ಣನವರು ಚನ್ನಯ್ಯನ ಹಣವಿಲ್ಲದೆಯೂ, ಅವನ ಕಡೆಯ ಹೆಣ್ಣುಗಳಿಲ್ಲದೆಯೂ ನಿರಾಶರಾಗಿ ಹಿಂತಿರುಗುತ್ತಿದ್ದರು. ಅವರಿಂದ ಯಾವ ಪ್ರಯೋಜನವೂ ಇಲ್ಲದ ಚನ್ನಯ್ಯ ಅವರನ್ನು ತಾತ್ಸಾರದಿಂದಲೇ ಕಾಣತೊಡಗಿದ್ದ.

ಇದರೊಡನೆಯೇ ತನ್ನ ಗಣಿಯ ಪಕ್ಕದಲ್ಲಿ ಹೊಸದಾಗಿ ಕೆಲಸ ಪ್ರಾರಂಭಿಸಿದ್ದ ಗಂಗಯ್ಯನನ್ನು ಕಂಡು ಸಹಿಸಲಾರದೇ ಚನ್ನಯ್ಯನು ಅವನ ಕೆಲಸಗಾರರನ್ನು ಒಂದು ದಿನ ತನ್ನ ಕೆಲಸಗಾರರಿಂದ ಚೆನ್ನಾಗಿ ಹೊಡೆಸಿದ್ದ. ಅದೇ ದಿನ ರಾತ್ರಿ ಗಂಗಯ್ಯನು ತೆಗೆದ ಅದಿರನ್ನೆಲ್ಲಾ ತನ್ನ ಗಣಿಯ ಬಳಿಗೆ ಸಾಗಿಸಿ ತನ್ನ ರಾಶಿಗೆ ಸೇರಿಸಿಕೊಂಡಿದ್ದ. ಮಾರನೆಯ ದಿನ ಗಂಗಯ್ಯನು ಹೋಗಿ ನೋಡಿ ವಿಷಯವರಿತು ಚನ್ನಯ್ಯನನ್ನು ಕೇಳಿದಾಗ,

"ಇದು ನನ್ನ ಗಣಿ, ಇಲ್ಲಿಗೆ ಯಾರೂ ಕಾಲಿಡಕೂಡದು. ಯಾರಾದರೂ ಕಾಲಿಟ್ಟರೆ ಅವರ ಕಾಲು ಕತ್ತರಿಸ್ತೇನೆ" ಎಂದ.

"ಇದೇನು ಹೀಗೆ ಹೇಳ್ತೀರಿ ಚನ್ನಯ್ಯನೋರೆ, ಇದು ಯಾರ ಗಣೀನೂ ಅಲ್ಲ. ಎಲ್ಲಾ ಸಾವಕಾರ್ರಿಗೆ ಸೇರಿದ್ದು. ಅವರೇ ಹೇಳಿದ್ರಿಂದ ಬಂದೆ. ಇಲ್ದಿದ್ದರೆ ನಾನು ಯಾಕೆ ಬಂದು ನಿಮ್ಮ ಹತ್ತಿರ ಜಗಳಮಾಡಬೇಕಿತ್ತು?"

"ಅವೆಲ್ಲ ನಂಗೆ ಗೊತ್ತಿಲ್ಲ, ಇಲ್ಲಿ ಯಾರೂ ಕಾಲಿಡಕೂಡ್ದು."

"ಒಂದು ವೇಳೆ ಕಾಲಿಟ್ಟರೆ?" ಸಹನೆಯ ಸೀಮೆಯನ್ನು ಮೀರುತ್ತಾ ಗಂಗಯ್ಯ ಕೇಳಿದ.

"ಅದು ಹೇಗೆ ಕಾಲಿಡ್ತಾರೋ ನಾನು ನೋಡಿಕೊಳ್ತೇನೆ."

"ಹಾಗಾದರೆ ನೀವು ಕದ್ದಿರೋ ನಮ್ಮ ಅದಿರನ್ನು ಕೊಡೋದಿಲ್ವೆ?"

"ನಾವು ನಿಮ್ಮ ಅದಿರನ್ನು ಯಾಕೆ ಮುಟ್ಟಬೇಕು ? ನಾವು ವಾರ ವಾರವೂ ನೂರಾರು ಟನ್ನು ತೆಗೆಯೋ ದೊಡ್ಡ ಕಂಟ್ರಾಕ್ಟರು. ನಾವು ಇತರ ಚಿಲ್ರೆ ಕಂಟ್ರಾಕ್ಟರ ಅದಿರು ಯಾಕೆ ಮುಟ್ಟಬೇಕು ?"

"ನೋಡಿ ಚನ್ನಯ್ಯ. ನಿಮ್ಮ ಜೊತೆ ಸುಮ್ಮನೆ ಜಗಳ ಮಾಡೋಕೆ ನಂಗೆ ಇಷ್ಟವಿಲ್ಲ. ನಾನು ಮರ್ಯಾದಸ್ಥ. ಆದರೆ ನನ್ನನ್ನು ಯಾರೂ ಬೆದರಿಸಲಾರರು!"

"ನಿಮ್ಮ ಬೆಂಗಳೂರಿನ 'ರೋಫು' ಇಲ್ಲಿ ನಡೆಯೋದಿಲ್ಲ."

"ನಾನು ರೋಫು ಹಾಕ್ತಾ ಇಲ್ಲ. ಆದರೆ ರೋಫು ನಡೆಸಬೇಕೂಂತ ಮನಸ್ಸು ಮಾಡಿದರೆ ಯಾವನ ಮುಖಾನೂ ನೋಡದೇ ನಡೆಸಬಲ್ಲೆ. ಯಾವ ಹಳ್ಳಿಯ ಪುಂಡನನ್ನೂ ಎದುರಿಸಬಲ್ಲೆ."

"ಹಾಗಾದರೆ ನೋಡ್ತೀನಿ. ಹೇಗೆ ಕೆಲಸ ಮಾಡ್ತೀರೋ ನನ್ನ ಗಣಿ ಹತ್ತಿರ."

ಎಂದ ಚನ್ನಯ್ಯ ಸರಸರನೆ ಹೊರಟು ಹೋದ. ಹೊಸ ಮೇನೇಜರು ಗಂಗಯ್ಯನ ಗೆಳೆಯರು ಎಂದು ಭಾವಿಸಿದ ಚನ್ನಯ್ಯ ಗಂಗಯ್ಯನಿಂದಲೇ ಸುದ್ದಿ ಅವರಿಗೆ ತಿಳಿಯಬಹುದೆಂದುಕೊಂಡು ತಾನು ಹೇಳದೇ ಸುಮ್ಮನಾದ. ಅವನು ತನ್ನ ಮನೆಗೆ ಹೋಗಿ ಮಾರನೆಯ ದಿನದ ಧಾಳಿಗೆ ಸಿದ್ಧನಾಗ ತೊಡಗಿದ.

ಚನ್ನಯ್ಯನ ಔದ್ಧತ್ಯದಿಂದ ಕೋಪಗೊಂಡಿದ್ದ ಗಂಗಯ್ಯ, ಹೊಸಮೇನೇ ಜರಿಗೆ ತಾನೇ ವಿಷಯವನ್ನು ತಿಳಿಸಿದರೆ ಅವರು ಇನ್ನು ತಮ್ಮಿಬ್ಬರಲ್ಲಿಯೂ ಜಗಳವನ್ನು ನಿಲ್ಲಿಸಿ ಬಿಡುವರು ಆದರೆ ಮಾರನೆಯ ದಿನ ಚನ್ನಯನಿಗೆ ತನ್ನ ಬಿಸಿ ಮುಟ್ಟಿಸಲೇಬೇಕು ಎಂದು ನಿರ್ಧರಿಸಿ, ಶಾಂತಪ್ಪನಿಗೆ ತಿಳಿಸಲೇ ಇಲ್ಲ.

ಮಾರನೆಯ ದಿನ ಶಾಂತಪ್ಪ ಹತ್ತು ಗಂಟೆಗೆ ಗಣಿಗೆ ಹೋದಾಗ, ಗಂಗಯ್ಯನ ಗಣಿಯ ಬಳಿ ಕೂಲಿಗಾರರ ಕೂಗಾಟ ಕೇಳಿಬಂದು ಅತ್ತ ಕಡೆ ಧಾವಿಸಿದ. ಅವನೊಡನಿದ್ದ ಖಾನನು ಓಡೋಡಿ ಹೋಗಿ ಮೊದಲೇ ವಿಷಯವನ್ನರಿತುಕೊಂಡ. ಶಾಂತಪ್ಪನು ಬರುತ್ತಿರುವ ಸುದ್ದಿ ಕೇಳಿ ಇದ್ದಕಿದ್ದಂತೆ ಗಲಾಟೆ ನಿಂತಿತು. ಎಲ್ಲರೂ ಸುಮ್ಮನಾಗಿ ಶಾಂತಪ್ಪನತ್ತ ನೋಡ ತೊಡಗಿದರು. ಹತ್ತಿರ ಹೋಗುತ್ತಿದ್ದಂತೆಯೇ ಶಾಂತಪ್ಪನನ್ನು ಗಂಗಯ್ಯ ಕೇಳಿದ,

"ಏನುಸಾರ್. ಇದು ಸಾವಕಾರ್ರ ಗಣಿಯೋ ಚನ್ನಯ್ಯನದೋ ?"

"ಸಾಹುಕಾರ್ರದ್ದು ! ಯಾಕೆ?"

"ಮತ್ತೆ ಇಲ್ಲಿ ನಾವು ಕೆಲಸ ಮಾಡಕೂಡದು, ಇದು ನನ್ನ ಗಣೀಂತ ಚನ್ನಯ್ಯ ಹೇಳಿ ಕಳಸಿ ನನ್ನ ಕಡೆ ಆಳುಗಳನ್ನ ನಾನು ಬರುವಷ್ಟರಲ್ಲಿ ಹೊಡೆ ಸಿದ್ದಾನೆ. ನೋಡಿ", ಎಂದ ಗಂಗಯ್ಯ.

ಶಾಂತಪ್ಪನು ನೋಡಿದ. ಎದುರಿನಲ್ಲಿದ್ದ ಸಣ್ಣ ಗುಡ್ಡದ ಮೇಲೆ, ಕುಣಿ ಯಲ್ಲಿ ಮರದರೆಂಬೆಗಳನ್ನು, ಹಾರೆ, ಪಿಕಾಸಿಗಳನ್ನು ಹಿಡಿದುಕೊಂಡು ಆಗಿನ್ನೂ ಕಲಹವಾಡಿದ ಕೂಲಿಗಾರರು ಯುದ್ಧೋನ್ಮತ್ತರಾಗಿ ನಿಂತಿದ್ದರು. ಅವರ ಮುಖದಲ್ಲಿ ದುಗುಡ ತುಂಬಿದ್ದಿತು. ಕೆಲವರಿಗೆ ಕೈ, ಕಾಲು, ಮುಖಗಳ ಮೇಲೆ ಗಾಯವಾಗಿದ್ದುವು. ಇತ್ತಂಡದವರಿಗೂ ಪೆಟ್ಟುಗಳು ಬಿದ್ದಿದ್ದುವು. ನೆಲದ ಲ್ಲೆಲ್ಲಾ ಮಣ್ಣು ಚೆಲ್ಲಾಡಿದ್ದಿತು, ಆದಿನ ತೆಗೆದ ಅದಿರು ಚಲ್ಲಾಪಿಲ್ಲಿಯಾಗಿ ದ್ದಿತು. ಅಲ್ಲಲ್ಲಿ ಬೆಳೆದಿದ್ದ ಹುಲ್ಲು ಗಿಡಗಳೆಲ್ಲವೂ ಹರಿದು ಹೋಗಿದ್ದುವು, ಅವರು ಕೈನಲ್ಲಿ ಹಿಡಿದಿದ್ದ ಮುರಿದ ರಂಬೆಗಳ ಎಲೆಗಳೆಲ್ಲವೂ ಸುತ್ತಲೂ ಹರಡಿ ಹಾರಾಡುತ್ತಿದ್ದುವು. ಒಬ್ಬಿಬ್ಬರ ಕೈನಲ್ಲಿದ್ದ ಹಾರೆ ಗುದ್ದಲಿಗಳು ಮುರಿದಿದ್ದುವು.

"ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತಾಯ್ತು"ಎಂಬ ಕವಿವಾಕ್ಯದ ನೆನಪಾಯ್ತು ಶಾಂತಪ್ಪನಿಗೆ. ಅವನೆಂದ,

"ಅಂತೂ ಎರಡು ಕೋಣಗಳ ಜಗಳದಿಂದ ಗಿಡವೆಲ್ಲಾ ಹಾಳಾದು ವಲ್ಲಪ್ಪಾ."ಎಂದ.

ಅಲ್ಲಿ ನೆರೆದಿದ್ದ ಎಲ್ಲರಿಗೂ ನಗೆಬಂದಿತು. ಕೆಲವರಂತೂ ಖೊಳ್ಳನೆ ನಕ್ಕರು. ಕೆಲವರು ಹೆಂಗಸರು ಸೆರಗಿನಿಂದ ತಮ್ಮ ಬಾಯಿ ಮುಚ್ಚಿಕೊಂಡು ತಮ್ಮ ಕರಿ ಹಲ್ಲುಗಳನ್ನು ಮರೆ ಮಾಡಿಕೊಂಡರು. ಆದರೆ ಗಂಗಯ್ಯನೆಂದ,

"ಅಂತೂ ನಮ್ಮನ್ನ ಕೋಣಗಳನ್ನು ಮಾಡಿಬಿಟ್ಟರಿ. ಈ ವಿಷಯ್ವ ಹೇಳಲೇ ಇಲ್ಲ....ಇಲ್ಲಿ ನೋಡಿ ಸಾರ್. ನಮ್ಮ ಈ ವಾರದ ಅದಿರು ಕದ್ದು ತಮ್ಮ ಕಡೆಗೆ ಹಾಕಿಕೊಂಡಿದಾರೆ. ನಮ್ಮ ಕೆಲಸಗಾರರನ್ನು ಹೊಡೆದಿದ್ದಾರೆ. ಇಲ್ಲಿ ಯಾರನ್ನು ಯಾರೂ ಕೇಳೋರೇ ಇಲ್ಲವೇ ಸಾರ್ ? ನಾವು ಸಾವಕಾರ್ರ ಮಾತು ಕೇಳಿಕೊಂಡು ಬಂದು ಈ ಹಳ್ಳಿ ಜನಗಳ ಹತ್ತಿರ ಹೊಡೆದಾಡುವ ಹಾಗೆ ಆಯ್ತು."

"ಇಲ್ಲಿ ಮೊದಲು ಜಗಳಕ್ಕೆ ಯಾರು ಕಾರಣರು ?"

"ನೀವೇ ನೋಡಿ ಸಾರ್. ನನ್ನ ಗಣಿ ಹತ್ತಿರ ಜಗಳವಾಗಿದೆ. ಚನ್ನಯ್ಯನ ಕಡೆಯವರು ಇಲ್ಲಿ ನಿಂತಿದಾರೆ."

"ಹಾಗಲ್ಲ ಸಾರ್. ಇವರೇ ನಮ್ಮನ್ನ ಮೊದಲು ಬಯ್ದುರು." ಚನ್ನಯ್ಯನ ಕಡೆಯವನೊಬ್ಬನೆಂದ, ಮಧ್ಯೆ.

"ಈ ಗಣೀಲಿ ಅವರು ಬಯ್ದುದ್ದು ನಿಮಗೆ ನಿಮ್ಮ ಗಣೀವರೆಗೆ ಹೇಗೆ ಕೇಳಿಸಿತು ?" ಎಂದು ಶಾಂತಪ್ಪ ಅವನನ್ನು ಕೇಳಿದ. ತನ್ನ ತಪ್ಪು ಅರ್ಥ ಮಾಡಿಕೊಂಡ ಅವನು ಉತ್ತರ ಕೊಡಲಾರದೇ ಮುಖ ಕೆಳಗೆ ಹಾಕಿದ.

"ನೀವು ಬೇಕಾದ್ರೆ ಅವರು ಹಾಕಿರೋ ರಾಶಿ ನೋಡಿಸಾರ್ ಅಲ್ಲಿ ನಮ್ಮ ಅದಿರು ಇದೆಯೋ ಇಲ್ಲವೋ ನೋಡಿ," ಎಂದು ಗಂಗಯ್ಯನೆಂದುದನ್ನು ಕೇಳಿ ಶಾಂತಪ್ಪ,

"ಇರಲಿ. ಈ ವಿಷಯ ವಿಚಾರಿಸೋಣ. ನೀವೆಲ್ಲಾ ನಿಮ್ಮ ನಿಮ್ಮ ಕೆಲಸಕ್ಕೆ ಹೋಗಿ" ಎಂದ. ಎಲ್ಲರೂ ತಮ್ಮ ತಮ್ಮ ಗಣಿಗಳತ್ತ ಹೊರಟರು. ಅನಂತರ ಗಂಗಯ್ಯನೆಂದ ಪುನಃ,

"ಬೇಕಾದ್ರೆ ನೋಡಿ ಸಾರ್. ಚನ್ನಯ್ಯಂದು ಶೇಕಡ ನಲವತ್ತು ನಲವತ್ತೆರಡು ಬರೋ 'ಕಲ್ಲು'. ನಮ್ಮದು ಶೇಕಡಾ ಐವತ್ತು ಬರೋ 'ಕಲ್ಲು'. ಎರಡನ್ನೂ ಸೇರಿಸಿ ಬೆರಿಕೆ ಮಾಡಿದಾರೆ. ಪರೀಕ್ಷೆ ಮಾಡಿ ಬೇಕಾದ್ರೆ."

ಶಾಂತಪ್ಪನು ಚನ್ನಯ್ಯನ ಗಣಿಯತ್ತ ಹೊರಟ. ಚನ್ನಯ್ಯನ ಅದಿರಿನ ರಾಶಿಯನ್ನು ಪರೀಕ್ಷಿಸಿದಾಗ ಅಲ್ಲಿ ಗಂಗಯ್ಯನು ಹೇಳಿದಂತಹ ಅದಿರು ಮಿಶ್ರವಾಗಿದ್ದುದು ಕಾಣಿಸಿತು. ಇದು ಚನ್ನಯ್ಯನ ಪ್ರೇರೇಪಣೆಯಿಲ್ಲದೇ ನಡೆದ ಕಾರ್ಯವಲ್ಲವೆಂದೆನಿಸಿತವನಿಗೆ. ಚನ್ನಯ್ಯನು ಗಣಿಗೆ ಬಂದಾಗ ನಮ್ರತೆಯಿಂದ ಶಾಂತಪ್ಪನಿಗೆ ವಂದಿಸಿದ. ಶಾಂತಪ್ಪನೆಂದ,

"ಏನು ಚನ್ನಯ್ಯ ಈ ಪುಂಡತನ? ಇಲ್ಲಿ ಯಾರೂ ಹೇಳೋರು ಕೇಳೋರು ಇಲ್ಲಾಂತ ಭಾವಿಸಿದ್ದೀಯೇನು ?"

"ಹಾಗಂದ್ರೇನು ಸಾರ್. ನಂಗೆ ಏನೂ ತಿಳೀದ ಮಾತನಾಡುತೀರಿ ತಾವು ?" ಏನೂ ತಿಳಿಯದವನಂತೆ ಚನ್ನಯ್ಯ ನಟಿಸಿದ. ಶಾಂತಪ್ಪನಿಗದನ್ನು ನೋಡಿ ಸಹನೆ ಆರತೊಡಗಿತು. ಆದರೆ ಅಲ್ಲಿಯೇ ನಿಂತಿದ್ದ ಗಂಗಯ್ಯ ತಕ್ಷಣವೆಂದ,

"ಈ ನಾಟಕವೆಲ್ಲ ಬಿಟ್ಟುಬಿಡು ಚನ್ನಯ್ಯ. ನೀನು ದೊಡ್ಡ

ಕಂಟ್ರಾಕ್ಟರು, ನಮ್ಮಂಥ ಚಿಲ್ಲರೆ ಕಂಟ್ರಾಕ್ಟರ ಅದಿರು ಕದಿಯೋಕೆ ನಾಚಿಕೆಯಾಗೋಲ್ವೆ."

"ಏನು ಗಂಗಯ್ಯನೋರೆ. ನಾಚಿಕೆ ಗೀಚಿಕೇಂತ ಮಾತಾಡ್ತೀರಿ. ನಂಗೆ ಏನೂ ತಿಳಿಯದು, ನೀವು ಬಾಯಿಗೆ ಬಂದ ಹಾಗೆ ಮಾತಾಡ್ತಿದೀರಿ. ಇದು ನ್ಯಾಯವಲ್ಲ."

"ನೀನು ನಿನ್ನೆ ದಿನ ನನ್ನ ಸಂಗಡ ಜಗಳ ಮಾಡಿದ್ದೆ. ಈವತ್ತು ನಿನ್ನ ಪುಂಡಾಟ ತೋರಿಸಿದೆ."

"ಏನು ಹಾಗಂದ್ರೆ ?"

"ಏನೂ ತಿಳಿಯದವನಂತೆ ಹೇಳ್ತೀಯಲ್ಲ. ನೀನು ನಮ್ಮ ಈ ವಾರದ 'ಕಲ್ಲ'ನ್ನೆಲ್ಲಾ ಕದಿಯಲಿಲ್ಲವೆ ? ಈವತ್ತು ಬೆಳಿಗ್ಗೆ ನಮ್ಮ ಆಳುಗಳ ಸಂಗಡ ನಿಮ್ಮ ಆಳುಗಳು ಜಗಳವಾಡಿ, ಇಲ್ಲಿಂದ ಅವರನ್ನ ಹೊಡೆದೋಡಿಸಬೇಕೆಂತ ತಂತ್ರ ಮಾಡಲಿಲ್ಲವೆ. ಹೇಳು." ಗಂಗಯ್ಯನೆಂದ.

"ಹಾಗಂತ ಯಾರು ಹೇಳಿದ್ರು?"

"ನೋಡು ಚನ್ನಯ್ಯ, ಈವತ್ತು ದೇವರ ಹಾಗೆ ಮ್ಯಾನೇಜರು ಮಧ್ಯೆ ಬಂದರು, ಜಗಳ ನಿಲ್ಲಿಸಿದರು. ಇಲ್ಲದಿದ್ದರೆ ನಿನ್ನ ಆಳುಗಳು ಎಷ್ಟು ಜನ ಬಂದಿದ್ದರೂ ನೋಡಿಕೊಳ್ತಿದ್ದೆವು. ಕೊನೆಗೆ ಒಂದೆರಡು ತಲೆಯಾದರೂ ಈದಿನ ಬೀಳುತ್ತಿತ್ತು." ಗಂಗಯ್ಯ ಕ್ರೋಧೋದ್ದೀಪಿತನಾಗಿ ನುಡಿದ.

"ಏನು ನೀವೇ ಭಾರಿ ಗಂಡಸರೂನ್ನುವ ಹಾಗೇ ಮಾತಾಡ್ತಿದೀರಿ?" ಚನ್ನಯ್ಯನೂ ಏರಿಕೆಯ ಧ್ವನಿಯಲ್ಲೆಂದ. ಅದುವರೆಗೂ ಅವರಿಬ್ಬರ ಮಾತುಗಳನ್ನು ಕೇಳುತ್ತ ಸುಮ್ಮನೆ ನಿಂತಿದ್ದ ಶಾಂತಪ್ಪ ಇನ್ನು ಸುಮ್ಮನಿರಬಾರದೆಂದುಕೊಂಡು ತಕ್ಷಣ ಅಬ್ಬರಿಸಿದ,

"ಇಬ್ಬರೂ ಮಾತು ನಿಲ್ಲಿಸಿ, ನಿಮ್ಮ ನಿಮ್ಮ ಗಣೀಗೆ ಹೋಗಿ. ಇಲ್ಲದಿದ್ರೆ ಈ ಕ್ಷಣವೇ ನಿಮ್ಮ ಕಂಟ್ರಾಕ್ಟು ನಿಲ್ಲಿಸಿಬಿಡ್ತೇನೆ. ನೀವು ಇಲ್ಲಿ ಖೂನಿಗಳನ್ನು ಮಾಡಿ ಸೋಕೆ ಸನ್ನಾಹ ಮಾಡ್ತಿದೀರೀಂತ ಸಾಹುಕಾರ್ರಿಗೆ ಟೆಲಿಗ್ರಾಮು ಕೊಟ್ಟು ಬಿಡ್ತೇನೆ."

ಶಾಂತಪ್ಪನು ಅಬ್ಬರಿಸಿದುದನ್ನು ಕೇಳಿ ಅವರಿಬ್ಬರೂ ಸುಮ್ಮನಾದುದೇ ಅಲ್ಲದೆ ಸುತ್ತಲಿನ ಕೂಲಿಗಾರರು ಇತ್ತ ಭಯದಿಂದ ತಿರುಗಿ ನೋಡಿದರು. ಅದುವರೆಗೂ ಒಂದು ದಿನವೂ ಸಹನೆ ಕಳೆದುಕೊಳ್ಳದೇ ನಗು ನಗುತ್ತಲೇ ಮಾತ

ನಾಡುತ್ತಿದ್ದ ಹೊಸಮೇನೇಜರರು ಈ ದಿನಇಷ್ಟೊಂದು ಕೋಪ ಗೊಂಡಿರು ವರೆಂದು ಹೆದರಿದರವರು.

ಗಂಗಯ್ಯ ಸುಮ್ಮನೇ ಹೊರಟುಹೋದ. ಶಾಂತಪ್ಪ ಚನ್ನಯ್ಯನನ್ನು ಅದಿರಿನ ರಾಶಿಯ ಬಳಿಗೆ ಕರೆದೊಯ್ದು ಒಂದು ಹಿಡಿ ಅದಿರನ್ನು ಕೈನಲ್ಲಿ ತೆಗೆದುಕೊಂಡು ಅದರಲ್ಲಿ ಮಿಶ್ರಿತವಾಗಿದ್ದ ಶ್ರೇಷ್ಠ ದರ್ಜೆಯ ತುಣುಕುಗಳನ್ನು ತೋರಿಸುತ್ತಾ ಎಂದ,

"ನೋಡು ಚನ್ನಯ್ಯ. ಇದು ಚೆನ್ನಾಗಿರೋದಿಲ್ಲ. ಇವು ನಿನ್ನ ಗಣೀಲಿ ಸಿಕ್ಕುವ ಅದಿರಲ್ಲ. ಇದು ಗಂಗಯ್ಯನ ಗಣಿಯ ಅದಿರು. ಅಲ್ಲಿಂದಲೇ ನೀವು ಕದ್ದಿರೋದು. ಅದೂ ಅಲ್ಲದೆ ಈವತ್ತು ಸುಮ್ಮ ಸುಮ್ಮನೆ ನಿನ್ನ ಆಳುಗಳು ಅವರ ಹತ್ತಿರ ಜಗಳವಾಡೋಕೆ ಕಾರಣವಿರಲಿಲ್ಲ. ಇವೆಲ್ಲಾ ಬೇಕೆಂದೇ ನೀನು ಮಾಡಿದ ಗಲಾಟೆ."

"ಇದೇನು ಸಾರ್. ನೀವೂ ಗಂಗಯ್ಯನಿಗೇ ಸಾಮೀಲಾಗಿದೀರಿ" ಚನ್ನಯ್ಯನೆಂದ.

"ನಾಲಿಗೆ ಹಿಡಿದು ಮಾತಾಡು ಚನ್ನಯ್ಯ. ಯಾರಿಗೆ ಯಾರು ಸಾಮೀಲಾಗಿದಾರೆ ? ನೀನು ಅಯೋಗ್ಯತನ ಮಾಡಿದ್ದು ತೋರಿಸಿದರೆ, ಬಾಯಿಗೆ ಬಂದ ಹಾಗೆ ಬೊಗಳಬೇಡ."

ಶಾಂತಪ್ಪನ ಆ ಏರು ಧ್ವನಿಗೆ ಚನ್ನಯ್ಯ ಹೆದರಿದ. ಸುತ್ತಲಿದ್ದ ಕೆಲಸ ಗಾರರೂ ತಲೆ ತಗ್ಗಿಸಿಕೊಂಡು ತಮ್ಮ ಕೆಲಸದಲ್ಲಿ ನಿರತರಾಗಿದ್ದರು, ಅವರ ಲ್ಲೆಲ್ಲಾ ಭಯ ತುಂಬಿದ್ದಿತು. ಆದರೆ ಚನ್ನಯ್ಯನು ಏನೊಂದೂ ಉತ್ತರ ವನ್ನು ಕೊಡದೆ ಸುಮ್ಮನೆ ಶಾಂತತೆಯಿಂದಿದ್ದ. ಸ್ಫೋಟವಾಗುವ ಮುನ್ನಿನ ಜ್ವಾಲಾಮುಖಿಯ ಶಾಂತತೆಯಂತಿದ್ದಿತು ಅವನ ಆ ಶಾಂತತೆ !

"ಈ ವಾರ ನಿನ್ನ ಅದಿರಿನಲ್ಲಿ ನಲವತ್ತು ಟನ್ನು ಅದಿರು ಕಡಿಮೆ ಹಾಕುತ್ತೇನೆ" ಎಂದು ಶಾಂತಪ್ಪ ಸರಸರನೆ ಹೊರಟುಹೋದ. ನಾಲ್ಕಾರು ಹೆಜ್ಜೆ ಮುಂದುವರಿದಿದ್ದವನು ಪುನಃ ಬಂದು ಹೇಳಿದ,

"ಇದು ನೀನೇ ಮಾಡಿಸಿದ ಪುಂಡುತನಾಂತ ಗೊತ್ತಾದರೆ, ಈವತ್ತು ಏಟು ತಿಂದ ಕೂಲಿಗಾರರಿಗೆಲ್ಲಾ ಮುಂದಿನ ವಾರ ನೀನು ಐದೈದು ರೂಪಾಯಿ ದಂಡ ಕೊಡಬೇಕು. ಹಾಗಿಲ್ಲದೇ ಅವರೇ ಕಾಲು ಕೆರೆದುಕೊಂಡು ಜಗಳೆ

ವಾಡಿದ್ದರೆ ಅವರೆಲ್ಲರೂ ನಿನ್ನವರಿಗೆ ಐದೈದು ರೂಪಾಯಿ ಜುಲ್ಮಾನೆ ಕೊಡಬೇಕಾಗುತ್ತೆ....ಈ ಕಂಪೆನಿಯ ಗಣೀಲಿ ಇಂಥ ಪುಂಡಾಟ ನಡೆಯೋದಿಲ್ಲ. ಎಲ್ಲರೂ ಹುಷಾರಾಗಿರಲಿ."

ಆ ವಾರ ಮುಗಿಯುವವರೆಗೂ ಚನ್ನಯ್ಯ ಏನೊಂದೂ ಮಾತನಾಡದೆಯೇ ಸುಮ್ಮನಿದ್ದ.

ಆ ವಾರದ ಬಟವಾಡೆಗೆ ಸಾಹುಕಾರರು ಬರಲಿಲ್ಲ. ಕೋಣಸಂದ್ರದಿಂದ ಸುಬ್ಬಣ್ಣನ ಸಂಗಡ ಹಣ ಕಳುಹಿಸಿದ್ದರು. ಸುಬ್ಬಣ್ಣನಿಗೆ ಶಾಂತಪ್ಪ ಎಲ್ಲವನ್ನೂ ತಿಳಿಸಿ, ಚನ್ನಯ್ಯನಿಗೆ ನಲವತ್ತು ಟನ್ನುಗಳ ಹಣವನ್ನು ಕಡಿಮೆ ಕೊಟ್ಟು, ಅದೇ ಹಣವನ್ನು ಗಂಗಯ್ಯನಿಗೆ ಕೊಡಬೇಕೆಂದು ತಿಳಿಸಿದ.

"ಇದಕ್ಕೆಲ್ಲಾ ಸಾವಕಾರ್‍ರೇ ಬರಬೇಕು ಸಾರ್. ಈ ಗಲಾಟೆಯೆಲ್ಲಾ ನಂಗೆ ಬೇಡ" ಎಂದ ಸುಬ್ಬಣ್ಣ.

"ಹಾಗಾದ್ರೆ ಇಬ್ಬರಿಗೂ ಬಟವಾಡೆ ಮಾಡಬೇಡಿ. ಸಾಹುಕಾರ್‍ರಿಗೆ ನಾನೊಂದು ಕಾಗದ ಬರೆದುಕೊಡ್ತೀನಿ ನೀವು ದಯವಿಟ್ಟು ಅವರಿಗೆ ಕೊಟ್ಟುಬಿಡಿ" ಶಾಂತಪ್ಪ ಉತ್ತರವಿತ್ತ.

"ಅದು ಹೇಗೆ ಸಾಧ್ಯ ಸಾರ್. ಈ ವಾರದ ಬಟವಾಡೆ ನಿಲ್ಲಿಸಬೇಕೆ ಹಾಗಾದ್ರೆ?"

"ಅದೂ ಸಾಧ್ಯವಿಲ್ಲದಿದ್ದರೆ, ಚನ್ನಯ್ಯನಿಗೆ ನಲವತ್ತು ಟನ್ನುಗಳ ಹಣ ಕಡಿಮೆ ಮಾಡಿ ಕೊಡಿ."

"ಅವನ ಬಟವಾಡೆಗೆ ಏನು ಮಾಡಬೇಕು ಅವನು ?"

"ಹಾಗಾದರೆ ಗಂಗಯ್ಯನು ತಾನೇ ಏನು ಮಾಡಬೇಕು ?" ಸವಾಲು ಹಾಕುವವನಂತೆ ಶಾಂತಪ್ಪನೆಂದ.

"ಏನೋ ಸಾರ್. ನಂಗೆ ಒಂದೂ ತಿಳಿಯೋದಿಲ್ಲ. ಒಟ್ಟಿನಲ್ಲಿ ತಪ್ಪು ನಿಮ್ಮದೇಂತ ನನಗನ್ನಿಸುತ್ತೆ".

"ನಿಮಗೆ ತಿಳಿಯದಿದ್ದರೆ ನಾನು ಹೇಳಿದ ಹಾಗೆ ಮಾಡಿಬಿಡಿ. ನನ್ನದು ತಪ್ಪು ಹೌದೋ ಅಲ್ಲವೋ ಎಂಬುದನ್ನ ಸಾಹುಕಾರರು ನಿರ್ಧರಿಸಲಿ. ಬಾಕಿಯವರಿಗೆ ಆ ಮಾತು ಬೇಡ" ಮುಖ ಮುರಿದಂತೆ ಮಾತನಾಡಿದ ಶಾಂತಪ್ಪ.

"ಇದೇನು ಸಾರ್ ನೀವು ಹೀಗೆ ಮಾತನಾಡುತೀರಿ ?"

"ಮಾತಿಗೆ ತಕ್ಕ ಉತ್ತರ ಕೊಟ್ಟಿದೀನಿ ಸುಬ್ಬಣ್ಣನೋರೆ. ನಾನು

ಯಾವಾಗಲೂ ಸ್ಪಷ್ಟವಾಗಿ ಮಾತಾಡುವ ಸ್ವಭಾವದವನು, ನಂಗೆ ಮನಸ್ಸಿನಲ್ಲಿ ಒಂದು ಮೇಲೊಂದು ಮಾತನಾಡೋಕೆ ಬರೋದಿಲ್ಲ !"

"ಹಾಗಾದರೆ ನಾನು ಮನಸ್ಸಿನಲ್ಲೊಂದು ಮೇಲೊಂದು ಹೇಳೋನೋ?"

"ನಾನು ಹಾಗೆ ಹೇಳಲಿಲ್ಲ....ಈಗ ಅದೆಲ್ಲ ಏಕೆ? ಇದ್ದ ವಿಷಯ ಹೇಳಿದೇನೆ. ನಿಮಗೆ ತೋರಿದಂತೆ ಮಾಡಿ," ಎಂದು ಶಾಂತಪ್ಪ ನುಡಿದು ಸುಮ್ಮನಾದ. ಸುಬ್ಬಣ್ಣ ಚನ್ನಯ್ಯನಿಗೆ ಕಡಿಮೆ ಹಣ ಕೊಡಲೇಬೇಕಾಗಿ ಬಂದಿತು. ಗಂಗಯ್ಯನಿಗೂ ಹಣ ಸಂದಿತು.

ಆ ದಿನ ಚನ್ನಯ್ಯ ಬಟವಾಡೆಯ ಸಮಯದಲ್ಲಿ ಇರಲೇ ಇಲ್ಲ. ಸುಬ್ಬಣ್ಣನಿಂದ ಹಣ ಪಡೆದು ಅವನು ತನ್ನ ಮೇಸ್ತ್ರಿಗಳಿಗೆ ಕೊಟ್ಟು ಬಟವಾಡೆ ಮಾಡಲು ಹೇಳಿ ಹೊರಟುಹೋದ. ಅವನಿದ್ದಿದ್ದರೆ ಕೂಲಿಯವರಿಗೆ ಉತ್ತರ ಹೇಳಬೇಕಾಗಿದ್ದಿತು !

ಚನ್ನಯ್ಯನಿಗೆ ಶಾಂತಪ್ಪನ ಮೇಲೆ ದ್ವೇಷ ದಿನದಿನಕ್ಕೂ ಬೆಳೆಯಲು ಹಲವು ಕಾರಣಗಳಾದುವು. ಅವನ ಹಣಕ್ಕೆ ತಮ್ಮ ಒಲವನ್ನು ತೋರುತ್ತಿದ್ದ ಬೆಲೆವೆಣ್ಣುಗಳೀಗ ಯಾವುದೋ ಒಂದು ತೆರನಾದ ಅಸಹನೆ ಅಸಹಕಾರ ತೋರುತ್ತಿದ್ದರು. ಮೊದಲಿನ ಮನೆಬಾಗಿಲಿನ ಆಹ್ವಾನ, ಒಳಗಿನ ನಗೆಮಾತು, ಕುರ್ಚಿಯ ಮೇಲೆ ತಾನು ಕುಳಿತಾಗ ಬರುವ ಸಿಹಿ ಖಾದ್ಯ, ಮಂಚದ ಮೇಲೆ ಬಳೆಗೈಗಳಿಂದ ಬರುವ ತಾಂಬೂಲ, ಈಗಿಲ್ಲವಾಗಿದ್ದಿತು. ಆ ದೇಹಾಪೇಕ್ಷೆ, ಆ ಸುಖಾಶಯ ಅವನನ್ನು ನಿಮಿಷ ನಿಮಿಷವೂ ಕೆಣಕಿ ಹುಚ್ಚನನ್ನಾಗಿ ಮಾಡುತ್ತಿದ್ದುವು. ಅವನು ಅಲ್ಲಿಗೆ ಮಾಮೂಲು ಹಣ ಸಲ್ಲಿಸಿ ಕೆಲವು ವಾರಗಳಾಗಿದ್ದುವು. ಅವನು ಬರಿಗೈಯಲ್ಲಿ ಅಲ್ಲಿಗೆ ಹೋಗುವಂತಿರಲಿಲ್ಲ. ಹೋಗುವಂತಿದ್ದರೂ, ಅವನಿಗೆ ಹೋಗಲು ಧೈರ್ಯವಿರಲಿಲ್ಲ. ಹೋಗಿದ್ದರೆ ಕೆಲವು ಅಶ್ಲೀಲ ಶಬ್ದಗಳಿಂದ ಆ ಹೆಣ್ಣುಗಳು ಅವನನ್ನು ಹಳಿದು ಹಿಂದಕ್ಕಟ್ಟುತ್ತಿದ್ದರು. ಆದರೆ ಮೊದಲು ಪಟ್ಟ ಸುಖದ ನೆನಪುಗಳು ಬಂದು ಬಂದು ಅವನನ್ನು ಉದ್ರೇಕಿಸುತ್ತಿದ್ದುವು. ಅವನೆಂದುಕೊಳ್ಳುತ್ತಿದ್ದ,

ಇದಕ್ಕೆ ಈ ಹೊಸ ಮ್ಯಾನೇಜರೇ ಕಾರಣ.
ಅವನೇ ನನ್ನ ಸುಖಕ್ಕೆ ಕಲ್ಲು ಹಾಕಿದವನು.
ಸಾವಿರಾರು ರೂಪಾಯಿ ನಷ್ಟಗೊಳಿಸಿದ್ದಾನೆ.
ಆದರೆ ಅವನನ್ನು ಹೇಗಾದರೂ ಮಾಡಿ ಓಡಿಸಬೇಕು !

ಸುಬ್ಬಣ್ಣ, ಮಾಣಿಕ್ಯಂ ಹೇಳಿಕೊಟ್ಟ ಉಪಾಯ ?

ಏನಾದರೂ ಮಾಡಲೇಬೇಕು....ಹೌದು ಹೆದರಬಾರದು !

ಅವನ ಮುಖದಲ್ಲಿ ಭಯಂಕರ ಸಂತೋಷವೊಂದು ಉರಿಯಿತು. ಇದಕ್ಕಿದ್ದಂತೆ ಗಹಗಹಿಸಿ ನಕ್ಕುಬಿಟ್ಟ. ಪರ್ವತಗಳಿಂದ ದಮನ ಮಾಡಲ್ಪಟ್ಟದ್ದ ಶಕ್ತಿಯು ಭೂಮಿಯನ್ನು ಸೀಳಿಕೊಂಡು ಬಂದು ಭೂಕಂಪನ ಮಾಡಿ ಭಯಂಕರ ಶಬ್ದಗೊಳಿಸುವಂತಿದ್ದಿತು, ಆ ನಗುವಿನ ಶಬ್ದ. ಚನ್ನಯ್ಯ ಪ್ರತೀಕಾರದ ಪಿಕಾಸಿಯನ್ನು ಇಲ್ಲಿ ಮೇಲಕ್ಕೆತ್ತುತ್ತಿರುವಾಗ ಅಲ್ಲಿ ಕಂಪೆನಿಯ ಬಿಡಾರದಲ್ಲಿ, ಶಾಂತಪ್ಪ,

ಛೆ! ಇದೆಂತಹ ಜೀವನ !

ಈ ಕಲಹಕೂಪದಲ್ಲಿ ಬಂದು ಬೀಳಬೇಕಾಯಿತಲ್ಲ ತಾನು.

ಈ ಕಂಟ್ರಾಕ್ಟರುಗಳ ಜಗಳ, ವೃತ್ತಿವೈಷಮ್ಯ, ಸಾಹುಕಾರರ ಸ್ವಾರ್ಥನೀತಿ—

ಇವುಗಳ ಉರಿಯಲ್ಲಿ ಬಿದ್ದು ಬೆಂದುಹೋಗುತ್ತಿರುವ ಬಡ ಕೂಲಿಗಾರರು.

ವಾರವಾರವೂ ಅವರಿಗೆ ಪೂರ್ಣವಾಗಿ ಬಟವಾಡೆಯಿಲ್ಲ. ಗಣಿಯಲ್ಲಿ ಅವರು ಪಶುಗಳಂತೆ ದುಡಿಯಬೇಕು. ಕಂಟ್ರಾಕ್ಟರು, ಸಾಹುಕಾರರು, ಕಂಪೆನಿಯ ಸಿಬ್ಬಂದಿ, ಇವರ ಕಲಹ, ಸ್ವಾರ್ಥಗಳ ಬಂಡೆಗಳ ಅಡಿಯಲ್ಲಿ ಸಿಕ್ಕಿ ನರಳುವ ಹುಳುಗಳು ಕೂಲಿಗಾರರು,

ಆದರೆ ಈ ಅನ್ಯಾಯವನ್ನು ನೋಡಿ ನೋಡಿ ತಾನು ಸಹಿಸಬೇಕಾಗಿದೆ.

ಏನೂ ಮಾಡಲಾರೆ........ತಾನು ಏನೂ ಮಾಡಲಾರೆ........ಬರಿಯ ಅನುಕಂಪ ಪಡಬೇಕು....ಪಟ್ಟು ಸುಮ್ಮನಾಗಬೇಕು.....ಹೇಡಿಯಂತೆ ಸುಮ್ಮನಿರಬೇಕು !

ಅಯ್ಯೊ ಎಂತಹ ಅಸಹಾಯಕತೆ....ಎಂತಹ ಬಾಳು ಇದು ?

ಎಂದು ಚಿಂತಿಸುತ್ತ ಪರಿತಪಿಸುತ್ತಿದ್ದ. ಈ ವೇದನೆಯ ಜೊತೆಗೆ ಬರುವ ವಾರ ಸಾಹುಕಾರರು ಬಂದು ಚನ್ನಯ್ಯ, ಗಂಗಯ್ಯರ ವಿಚಾರಣೆ ನಡೆಸುವರು, ಅದಕ್ಕೆ ತಾನೇ ಸಾಕ್ಷಿ. ತನ್ನ ಸಾಕ್ಷ್ಯದಿಂದ ತನಗೆ ಎಂತಹ ಹೆಸರು ಬರುವುದೋ ಎಂದು ಪುನಃ ಚಿಂತೆಯಾಗುತ್ತಿದ್ದಿತು.

* * *

ಎರಡು ಮೂರು ದಿನಗಳು ಕಳೆದಿದ್ದುವು. ಚನ್ನಯ್ಯ ಒಂದೆರಡು ಬಾರಿ ಬಂದು ಶಾಂತಪ್ಪನನ್ನು ಮಾತನಾಡಿಸಿ ಹೋಗಿದ್ದ. ಪರೋಕ್ಷವಾಗಿ ಶಾಂತಪ್ಪನನ್ನು ಅಖಂಡವಾಗಿ ದೂಷಿಸುತ್ತಿದ್ದವನು ಎದುರಿಗೆ ಮಾತ್ರ ಅವನಿಗೆ ಬಾಗಿ ವಂದಿಸುತ್ತಿದ್ದ ಗಣಿಗೆ ಬಂದಾಗ ಜಗಳ ತೆಗೆದು ಅವನ ಕಾಲು ಮುರಿಯುವೆನು, ಎಂದು ಹಿಂದೆ ನುಡಿದು ಗಣಿಯಲ್ಲಿ ಶಾಂತಪ್ಪ ಬಂದಾಗ, 'ಎಳನೀರು ತರಿಸಿಕೊಡ್ತೀನಿ ಸಾರ್', ಎನ್ನುತ್ತಿದ್ದ. ಚನ್ನಯ್ಯನ ಈ ಹೀನ ವರ್ತನೆಯಿಂದಲೇ ಅವನ ಬಗ್ಗೆ ಶಾಂತಪ್ಪನಿಗೆ ತಿರಸ್ಕಾರ ಮೂಡಿದ್ದುದು.

ಆ ದಿನ ಶಾಂತಪ್ಪ ಕಂಪೆನಿಯ ಬಿಡಾರದಲ್ಲಿ ಕುಳಿತಿದ್ದ. ಅಡಿಗೆಯವನು ತನ್ನ ಬಟ್ಟೆ ಒಗೆಯಲು ಕೆರೆಗೆ ಹೋಗಿದ್ದ. ಶಾಂತಪ್ಪನನ್ನು ಬಿಟ್ಟರೆ ಅಲ್ಲಿ ಯಾರೂ ಇರಲಿಲ್ಲ. ಅವನು ಯಾವುದೋ ಒಂದು ಪುಸ್ತಕವನ್ನು ಕೈನಲ್ಲಿ ಹಿಡಿದುಕೊಂಡು ಕುಳಿತಿದ್ದ. ಬಾಗಿಲಿನಲ್ಲಿ ಯಾವುದೋ ನೆರಳು ಬಿದ್ದುದನ್ನು ನೋಡಿ, ಬಳೆಗಳ ಶಬ್ದ ಕೇಳಿ ತಲೆಯೆತ್ತಿ ನೋಡಿದ.

ಎದುರಿನಲ್ಲಿ ಪಾರ್ವತಿ ನಿಂತಿದ್ದಳು. ಅದೇ ಮೋಹಕ ನಗೆ ನಗುತ್ತಿದ್ದಳು. ಪ್ರಯತ್ನಪೂರ್ವಕವಾಗಿ ಎದೆಯುಬ್ಬಿಸಿ ಕೊಂಡು ನಿಂತಿದ್ದಳು. ಅವಳ ಆ ನಿಲುವು, ಆ ನೋಟ, ನೋಡುಗನನ್ನು ಆಹ್ವಾನಿಸುವುದಿರಲಿ ಹುಚ್ಚೆಬ್ಬಿಸುತ್ತಿದ್ದುವು. ಶಾಂತಪ್ಪ ಯಾವ ವಿಕಾರವನ್ನೂ ತೋರ್ಪಡಿಸಿ ಕೊಳ್ಳದೇ,

"ಏನು ?" ಎಂದು ಕೇಳಿದ.

"ಸ್ವಲ್ಪ ಕೊಡ ಕೊಡಿಸಿ. ನೀರು ತಂದುಕೊಂಡುವಾಪಸು ಕೊಡ್ತೇನೆ" ಎಂದಳು ಪಾರ್ವತಿ.

"ಅಡಿಗೆಯವನು ಕೆರೆಗೆ ಹೋಗಿದಾನೆ. ಆಮೇಲೆ ಬಂದು ಅವನನ್ನು ಕೇಳಿ ತೆಗೆದುಕೊಂಡುಹೋಗು."

"ಈಗಲೇ ಬೇಕಾಗಿತ್ತು. ಎಲ್ಲಿದೆ ಹೇಳಿದ್ರೆ ನಾನೇ ತೆಗೆದುಕೊಳ್ತೀನಿ."

ಶಾಂತಪ್ಪ ಕುಳಿತಲ್ಲಿಂದಲೇ ಒಳಗೆ ನೋಡಿದ. ಅಡಿಗೆಯ ಮನೆಯಲ್ಲಿ ಕೊಡವು ಕಾಣುತ್ತಿದ್ದಿತು. ಅವನೆಂದ,

"ಸರಿ. ಅಲ್ಲಿದೆ ಹೋಗಿ ತೆಗೆದುಕೊ."

ಪಾರ್ವತಿ ಒಳಗೆ ಹೋದವಳು ಒಂದು ನಿಮಿಷ ಅಲ್ಲಿಯೇ ಸುಮ್ಮನೆ ನಿಂತುದನ್ನು ಕಂಡು ತಾಳ್ಮೆಗೆಡುತ್ತಾ ಶಾಂತಪ್ಪ ಕೇಳಿದ,

"ಯಾಕೆ ನಿಂತಿದ್ದೀಯ? ತೆಗೆದುಕೊಂಡು ಹೋಗು !"

"ಇದರಲ್ಲಿ ನೀರಿದೆ. ಅದನ್ನು ನೀವು ಇಲ್ಲಿರೋ ಪಾತ್ರೆಗೆ ನೀವೇ ಬಗ್ಗಿಸಿಕೊಂಡುಬಿಟ್ಟು ಕೊಡಿ" ಎಂದಳು ಕಣ್ಣಿನಲ್ಲಿಯೇ ಮತ್ತೇನನ್ನೋ ನುಡಿಯುತ್ತಾ. ಆದರೆ ಅವಳನ್ನು ಹೆಚ್ಚು ಕಾಲ ನಿಲ್ಲಿಸಿಕೊಳ್ಳುವುದು ಗೌರವವಲ್ಲವೆಂದು ಭಾವಿಸಿ ಶಾಂತಪ್ಪ ಎದ್ದುಹೋಗಿ ಕೊಡದ ನೀರನ್ನು ಅಲ್ಲಿಯೇ ಇದ್ದ ಬಕೆಟ್ಟೊಂದಕ್ಕೆ ಬಗ್ಗಿಸಿ ಖಾಲಿ ಕೊಡವನ್ನವಳ ಕೈಗಿತ್ತ. ಅವಳು ಅವನಿಂದ ಕೊಡವನ್ನು ತೆಗೆದುಕೊಂಡು ತಕ್ಷಣ ನೆಲದ ಮೇಲಿಟ್ಟು ಶಾಂತಪ್ಪನನ್ನು ಬರಸೆಳೆದು ಅಪ್ಪಿಕೊಂಡುಬಿಟ್ಟಳು. ಒಂದು ಕ್ಷಣ ಶಾಂತಪ್ಪನಿಗೆ ದಿಕ್ಕೇ ತೋಚದಂತಾಯಿತು. ಮರುಕ್ಷಣವೇ ಅವಳನ್ನು ದೂಡಿ,

"ನಾಯಿ....ನಿನಗೆ ನಾಚಿಕೆಯಿಲ್ಲವೇ ?" ಎಂದು ಛಳಾರನೆ ಅವಳ ಕೆನ್ನೆಗೆ ನಾಲ್ಕಾರು ಏಟು ಬಾರಿಸಿದ. ಹುಚ್ಚು ಹಿಡಿದವನಂತೆ ಅವಳನ್ನು ಪುನಃ ಅಡಿಗೆ ಮನೆಯಿಂದಾಚೆ ದೂಡಿ,

"ಹಾಳಾಗಿಹೋಗು ನಾಯಿ...." ಎಂದ.

ಪಾರ್ವತಿ, ಕ್ರೋಧಗೊಂಡ ಹಾವು ಹೆಡೆ ತಿರುಗಿಸಿ ನೋಡುವಂತೆ ಅವನತ್ತ ನೋಡಿ, ಇದ್ದಕ್ಕಿದ್ದಂತೆ ತನ್ನ ಸೆರಗನ್ನು ಸರ್ರನೆ ಹರಿದುಹಾಕಿಕೊಂಡು ಬೀದಿಯ ಬಾಗಿಲತ್ತ ಓಡಿ.

"ಅಯ್ಯೋ.....ಅಯ್ಯಯ್ಯೋ........ನನ್ನನ್ನ ಉಳಿಸಿ...." ಎಂದು ಕೂಗಿಕೊಂಡಳು, ತನ್ನ ಸೆರಗನ್ನು ಕೈನಲ್ಲಿ ಹಿಡಿದುಕೊಂಡು,

ಎಲ್ಲಿಯೋ ಇದ್ದ ಚನ್ನಯ್ಯ, ಶಿವಣ್ಣ, ಅವನ ಕಡೆಯವರು ಕೆಲವರು ಎಲ್ಲರೂ ಓಡೋಡಿಬಂದರು. "ಏನು....ಏನಾಯ್ತು ಪಾರ್ವತವ್ವ?" ಎನ್ನುತ್ತಾ.

"ಅಯ್ಯೋ....ನಾನು ಕೊಡ ಕೇಳೋಕೆ ಬಂದೆ. ಇವರು ನನ್ನ ಸೆರಗು ಹಿಡಿದೆಳೆದರು. ನಾನು ತಕ್ಷಣ ಬಿಡಿಸಿಕೊಂಡು ಓಡಿಬಂದೆ...." ಎಂದು ಗಟ್ಟಿಯಾಗಿ ಅಳತೊಡಗಿದಳು ಪಾರ್ವತಿ.

"ಏನು ಸಾರ್........ಬ್ರಾಂಬ್ರರಾಗಿ ತಾವು ಮರ್ಯಾದಸ್ತರಾಗಿ ಈ ಕೆಲಸ ಮಾಡಬೌದೆ?....ನಾವೇನೋ ಸಭ್ಯರೂಂತ ಇದ್ದರೆ ನೀವು ಇಷ್ಟೊಂದು ಸಣ್ಣ ಕೆಲಸ!" ಚನ್ನಯ್ಯನೆಂದ.

ಶಾಂತಪ್ಪನಿಗೆ ಮಂಕು ಕವಿದಂತಾಗಿಬಿಟ್ಟಿತು. ಹಲವಾರು ನಿಮಿಷಗಳು ಅವನ ಬುದ್ಧಿ ಶೂನ್ಯವಾದಂತಾಗಿದ್ದಿತು. ಅಲ್ಲಿ ಸೇರಿದ್ದ ಜನ ಏನೇನು

ಮಾತನಾಡುತ್ತಿರುವರೆಂಬುದೇ ಅವರಿಗೆ ಅರಿವಿರಲಿಲ್ಲ. ಕೆಲವರು ನಗುತ್ತಿದ್ದರು, ಮತ್ತೆ ಕೆಲವರು ತೃಪ್ತಭಾವದಿಂದ ಒಬ್ಬರ ಮುಖವನ್ನೊಬ್ಬರು ನೋಡಿಕೊಳ್ಳುತ್ತಿದ್ದರು, ಕೆಲವರಂತೂ ವಿಸ್ಮಯಪೂರ್ಣಮುಖದಿಂದ ತಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಿದ್ದರು. ಆ ವೇಳೆಗಾಗಲೇ ಹಲವಾರು ಜನ ಬಂದು ಸೇರಿದ್ದರು. ಹತ್ತಾರು ನಿಮಿಷಗಳ ನಂತರ ಶಾಂತಪ್ಪ ತಲೆಯೆತ್ತಿ ಸುತ್ತಲೂ ನೋಡಿದ. ಮಾತನಾಡಿಕೊಳ್ಳುತ್ತಿದ್ದವರೆಲ್ಲರೂ ತಕ್ಷಣ ಸುಮ್ಮನಾದರು. ಅಲ್ಲಿದ್ದವರೆಲ್ಲರೂ ಹೆಚ್ಚಾಗಿ ಚನ್ನಯ್ಯ ಮತ್ತವನ ಗೆಳೆಯರೇ ಆಗಿದ್ದರು; ಅಲ್ಲಿಯೇ ಬಾಗಿಲ ಬಳಿ ಪಾರ್ವತಿ ತಲೆ ತಗ್ಗಿಸಿಕೊಂಡು ನಿಂತಿದ್ದಳು. ಹರಿದ ಹೋಗಿದ್ದ ಅವಳ ಸೆರಗಿನ ಒಳಗೆ ಅವಳ ರವಿಕೆ ಕಾಣುತ್ತಿದ್ದಿತು.

"ಪಾಪ ! ಆ ಹುಡುಗಿಯ ಜಾತೀನೇ ಹಾಳುಮಾಡಿಬಿಟ್ರಲ್ಲ ಸಾರ್ ಬೇರೆಯವರು ಮುಟ್ಟಿದ ಮೇಲೆ ಅವಳನ್ನ ಮನೆ ಒಳಗೆ ಸೇರಿಸೋದಿಲ್ಲ" ಚನ್ನಯ್ಯನೆಂದ.

"ಈಗ ಅವಳನ್ನ ಜಾತಿಗೆ ತೆಗೆದುಕೊಂಡು ಮನೆಯೊಳಗೆ ಸೇರಿಸಬೇಕಾದ್ರೆ ಸಾವಿರಾರು ರೂಪಾಯಿಗಳಾದರೂ ಖರ್ಚಾಗುತ್ತೆ" ಮತ್ತೊಬ್ಬನೆಂದ.

"ಗಣೀಲಿ ಇನ್ನುಮೇಲೆ ಹೆಂಗಸರು ಮಾನವಾಗಿ ಬಂದು ಕೆಲಸ ಮಾಡೋದು ಹೇಗೆ ?"

"ಇಲ್ಲ. ಇದು ಪಂಚಾಯ್ತಿಯಾಗಲೇಬೇಕು !"

"ಊರಿನ ಹಿರಿಯರೆಲ್ಲ ಸೇರಲಿ. ಅವರು ತೀರ್ಮಾನ ಮಾಡಿದ್ಹಂಗಾಗಲಿ."

"ಸಾವಕಾರ್‍ರಿಗೂ ತಿಳಿಸಬೇಕು. ತಕ್ಷಣ ತಿಳಿಸಬೇಕು."

"ಅವರು ಬರೋವರ್ಗೂ ನಾಳೆ ಕೂಲಿಯವರ್‍ಯಾರೂ ಕೆಲಸಕ್ಕೆ ಹೋಗಕೂಡದು !"

ಎಲ್ಲರೂ ತಮ್ಮಿಷ್ಟಕ್ಕೆ ತಾವೇ ಮಾತನಾಡಿಕೊಳ್ಳುತ್ತಿದ್ದರು. ಆಗಲೇ ಹನ್ನೊಂದು ಗಂಟೆಯಾಗಿದ್ದಿತು. ಗಣಿಯಲ್ಲಿ ಕೆಲಸ ಪ್ರಾರಂಭವಾಗಿ ಬಹಳ ಕಾಲವಾಗಿದ್ದಿತು ; ಆದರೆ ಚನ್ನಯ್ಯ, ಮತ್ತು ಆ ಕೆಲವರು ಮೇಸ್ತ್ರಿಗಳು ಮಾತ್ರ ಗಣಿಗೆ ಹೋಗದೆ ಉಳಿದಿದ್ದರು ! ಈ ಗಲಾಟೆಯ ವಿಷಯ ಆಗಲೇ ಊರಿನಲ್ಲೆಲ್ಲಾ ಹರಡಿಹೋಗಿ, ಹಲವರು ಅಲ್ಲಿ ಬಂದಿದ್ದರು, ಅವರಲ್ಲಿ ಪಟೇಲರೂ ಇದ್ದರು. ಅಡಿಗೆಯವನೂ ಓಡೋಡಿ ಬಂದ.

"ಏನು ಸಾರ್ ಇದೆಲ್ಲ?" ಪಟೇಲರು ಶಾಂತಪ್ಪನನ್ನು ಕೇಳಿದರು.

"ಪಾರ್ವತವ್ವನನ್ನೇ ಕೇಳಿ ಪಟೇಲರೇ" ಒಬ್ಬನೆಂದ.

"ಏಯ್. ಬಾಯಿ ಮುಚ್ಕೊ!" ಪಟೇಲರು ಕೂಗಿದರು. ಎಲ್ಲರೂ ಸುಮ್ಮನಾದರು.

ಶಾಂತಪ್ಪನಿಗೆ ಏನು ಹೇಳಬೇಕೆಂಬುದೇ ತೋರಲಿಲ್ಲ. ಇದೆಲ್ಲವೂ ಚನ್ನಯ್ಯನು ಬೀಸಿರುವ ಬಲೆಯೆಂಬುದು ಸ್ಪಷ್ಟವಾಗಿದ್ದಿತವನಿಗೆ, ಆ ಬಲೆಯು ಲ್ಲವನು ಬಿಡಿಸಿಕೊಳ್ಳಲಾರದಂತೆ ಬಿದ್ದಿದ್ದ. ಆದರೆ ಎದುರಿಗಿರುವ ಜನರಿಗೆ ಅದೆಲ್ಲ ಕೇವಲ ಬಲೆಯೇ ಹೌದು ಎಂಬುದನ್ನು ಸಾಧಿಸಿ ತೋರಿಸುವುದೆಂತು? ಶಾಂತಪ್ಪ ಯೋಚಿಸಿ ಹೇಳಿದ,

"ನಾನು ಮಾತನಾಡುವಾಗ ಒಬ್ಬರೂ ಮಾತನಾಡಕೂಡದು."

"ಎಲ್ಲರೂ ಆಚೆ ಹೊರಟೇಹೋಗಲಿ" ಎಂದು ಪಟೇಲರು ಎಲ್ಲರನ್ನೂ ಹೊರಕಳುಹಿಸಿದರು. ಪಾರ್ವತಿಯೂ ಹೊರಟುಹೋದಳು. ಅನಂತರ ಶಾಂತಪ್ಪ ಎಲ್ಲವನ್ನೂ ವಿವರಿಸಿ ಹೇಳಿದಮೇಲೆಯೇ ಪಟೇಲರು ಚಿಂತಾಮಗ್ನ ರಾಗಿ ಕುಳಿತುಬಿಟ್ಟರು.

"ಇವರು ಹೇಳುವುದೆಲ್ಲ ನೀವು ನಂಬುತೀರಾ ಪಟೇಲ್ರೆ?" ಶಾಂತಪ್ಪ ಕೊನೆಗೊಮ್ಮೆ ಕೇಳಿದ.

"ನಾನು ನಂಬುವುದಿರಲಿ ಸಾರ್. ಚನ್ನಯ್ಯ ನಿಮ್ಮ ಮೇಲೆ ಮೊದಲಿ ನಿಂದಲೂ ದ್ವೇಷ ಸಾಧಿಸ್ತಿದ್ದ. ಹೀಗೆ ಇದೆಲ್ಲಾ ನಂಬುವಹಾಗೇ ಮಾಡಿ ಸಿದ್ದಾನೆ!" ಪಟೇಲರೆಂದುದು ಕೇಳಿ ಶಾಂತಪ್ಪ ಘಾಬರಿಯಾದ.

"ಆ!....ನಂಬುವ ಹಾಗೇ ಮಾಡಿದಾನೇಂದ್ರೆ?," ಅವನೆಂದ.

"ಹೌದು ಸಾರ್! ಇದು ಸುಳ್ಳು ಅಂತ ನಾನು ಹೇಳಿದರೂ ಸಹ ಜನ ಒಪ್ಪೊಲ್ಲ ಸಾರ್. ಅವಳು ಇಲ್ಲಿ ಒಳಗೆ ಬಂದಿದ್ದುಂಟು, ನೀವು ಒಬ್ಬರೇ ಇದ್ದುದುಂಟು, ಅಡಿಗೆ ಮನೆಯಿಂದ ಅವಳು ಕೂಗಿಕೊಂಡು ಓಡಿಬಂದಳು, ಅವಳ ಸೆರಗು ಹರಿದಿದೆ....ಜನ ನಂಬದೆ ಇರ್ತಾರೆಯೆ?"

"ಹಾಗಾದರೆ ಈ ಊರಿನಲ್ಲಿ ಸತ್ಯಕ್ಕೆ ಬೆಲೆಯಿಲ್ಲ, ಸತ್ಯವಾದದ್ದನ್ನ ಪತ್ತೆ ಮಾಡೋರೇ ಇಲ್ಲ ಅಂತ ಹೇಳಿಬಿಡಿ," ಶಾಂತಪ್ಪ ಉಗ್ರನಾಗಿ ಹೇಳಿದ.

"ಏನೋ ಸಾರ್. ಈ ವಿಷಯದಲ್ಲಿ ನಂಗೆ ಬುದ್ಧಿ ಓಡೋದೇ ಇಲ್ಲ. ಶಾನುಭೋಗರನ್ನ ಕೇಳಬೇಕು ನಾನು."

"ಆಗಲಿ ಅವರನ್ನೂ ಕೇಳಿ. ಆದರೆ ನಿಮಗೆ ಹೇಗೆ ತೋರುತ್ತೆ. ಇದು ನಿಜವೇ ಸುಳ್ಳೇ ?"

"ತಮಗೆ ಈ ಊರಿನ ವಿಷಯ ಗೊತ್ತಿಲ್ಲ ಸಾರ್. ಇದು ಮಹಾ ಪುಂಡರಿರೋ ಊರು. ಊರಿನ ಜನ ಒಂದಾಗಿಬಿಟ್ರೆ ಸುಳ್ಳನ್ನ ನಿಜಾಮಾಡಿ ಬಿಡ್ತಾರೆ."

"ಊರಿನ ಜನರೆಲ್ಲಾ ಒಂದಾಗಿ ಈ ಸುಳ್ಳನ್ನ ನಿಜ ಮಾಡಬೇಕಾದಂಥ ದೇನು ? ಅಲ್ಲದೆ ಇಲ್ಲಿ ನ್ಯಾಯ ನೀತಿ ನಿರ್ಧರಿಸುವ ಹಿರಿಯರು ಯಾರೂ ಇಲ್ಲವೆ ? ಇಲ್ಲಿಗೇನು ಕಾನೂನು ಇಲ್ಲವೆ ? ಈ ಊರಿಗೆ ಹೇಳೋರು ಕೇಳೋರು ಇಲ್ಲವೆ ? ಸರ್ಕಾರ ಇಲ್ಲವೆ ಇಲ್ಲಿ ? ಏನು ಹೇಳ್ತಿದ್ದೀರಿ ಪಟೇಲರೇ ನೀವು?" ಶಾಂತಪ್ಪ ಜೋರಿನಿಂದಲೇ ಕೇಳಿದುದಕ್ಕೆ ಪಟೇಲರು ತಲೆ ತಗ್ಗಿಸಿದರು.

"ಸಾರ್. ತಮಗೆ ಒಂದು ವಿಷಯ ಹೇಳ್ತೀನೆ. ನಿಮ್ಮ ಅಡಿಗೆಯವರು ಒಳಗಿದ್ರೆ ಹೊರಕ್ಕೆ ಕಳಿಸಿಬಿಡಿ" ಎಂದ ಪಟೇಲರ ಮಾತಿನಂತೆ, ಅಡಿಗೆ ಮನೆ ಯಲ್ಲಿದ್ದ ಅಡಿಗೆಯವನನ್ನು ಶಾಂತಪ್ಪ ಹೊರಕಳುಹಿಸಿದ. ಅವನು ಹೊರ ಹೋಗಿ ಬಾಗಿಲು ಮುಚ್ಚಿದನಂತರ ಪಟೇಲರೆಂದರು,

"ನೋಡಿ ಸಾರ್ ಇಲ್ಲಿ ಜಾತಿಯ ವಿಷಯ ಬಂದಿದೆ. ಪಾರ್ವತಿ ಅವರ ಜನರಲ್ಲಿ ಪೂಜಾರರ ಮನೆತನದ ಹೆಣ್ಣು. ಅವಳನ್ನ ಬೇರೆಯೋರು ಮುಟ್ಟಿದ ನಂತರ ಅವಳ ಜಾತಿ ಕೆಟ್ಟಂತೆ ಆಯಿತು. ಅವಳನ್ನ ಪುನಃ ಜಾತಿಗೆ ಸೇರಿಸಿ ಕೊಳ್ಳೋವರೆಗೆ ಅವರ ಮನೆಯೋರು ದೇವರ ಪೂಜೆ ಮಾಡೋಹಾಗಿಲ್ಲ. ಅವಳು ಪುನಃ ಜಾತಿಗೆ ಬರೋದಕ್ಕೆ ಅವಳನ್ನ ಶುದ್ಧಗೊಳಿಸಬೇಕು. ಅದಕ್ಕೆ ಅವರು ಮಠಕ್ಕೆ ದಂಡ ಕೊಡಬೇಕು. ಪೂಜೆ, ಊಟ ಎಲ್ಲಾ ಸೇರಿ ಏನಿ ಲ್ಲಾಂತಂದರೂ ಏಳು ನೂರು ರೂಪಾಯಿ ಖರ್ಚಾಗುತ್ತೆ."

"ಯಾವ ಮಠಕ್ಕೆ ದಂಡ ಕೊಡಬೇಕು ?" ಶಾಂತಪ್ಪ ನಗುತ್ತಾ ಕೇಳಿದ.

"ಕರಡಿ ಮಠಕ್ಕೆ" ಪಟೇಲರೆಂದರು.

ಆ ಮಾತು ಕೇಳಿ ಶಾಂತಪ್ಪ ಬಿದ್ದುಬಿದ್ದು ನಗತೊಡಗಿದ. ಅವನಿಗೆ ಪಕ್ಕೆ ನೋಯುವಷ್ಟು ನಗು ಬಂದಿತು. ಅವನ ನಗುವನ್ನೇ ನೋಡುತಾ ನಾಲ್ಕಾರು ನಿಮಿಷ ಮಂಕಾಗಿ ಕುಳಿತಿದ್ದ ಪಟೇಲರು ಕೊನೆಗೆ ಕೇಳಿದರು,

"ಯಾಕೆ ಸಾರ್. ಹಾಗೆ ನಗುತ್ತೀರಿ ?"

"ನಿಮ್ಮ ಪದ್ಧತಿ ಚೆನ್ನಾಗಿದೆ! ಕರಡಿ ಮಠದ ಸ್ವಾಮಿಗಳನ್ನು ನೋಡಿದೀರಾ ನೀವು ?" ಎಂದು ಶಾಂತಪ್ಪ ಕೇಳಿದ ಪ್ರಶ್ನೆಗೆ ಅವರು ತಲೆ ತಗ್ಗಿಸಬೇಕಾಯಿತು! ಶಾಂತಪ್ಪನೆಂದ,

"ಒಟ್ಟಿನಲ್ಲಿ ನನ್ನ ಮೇಲಿನ ದ್ವೇಷದಿಂದ, ನನಗೆ ಅವಮಾನ ಮಾಡೋಕೆ ಚನ್ನಯ್ಯ ಹೂಡಿರೋ ನಾಟಕ ಇದು. ಅವರು ಮರ್ಯಾದೆಯಿಂದ ಈಗ ಹೊರಟುಹೋದರೆ ಸರಿ. ಇಲ್ಲವಾದರೆ ನಾನು ಪೋಲೀಸಿಗೆ ಅವರ ಮೇಲೆ ದೂರು ಕೊಡಬೇಕಾಗುತ್ತೆ. ನೀವು ಗ್ರಾಮಕ್ಕೆ ಮುಖ್ಯಸ್ಥರು. ನಿಮಗೆ ತಿಳಿಸಿದೀನಿ. ನಾಳೆ ಸಾಹುಕಾರರು ಬಂದಮೇಲೆ ಏನಾಗುತ್ತೋ ಆಗಲಿ. ನೀವು ದಯವಿಟ್ಟು ಶಾನುಭೋಗರಿಗೂ ತಿಳಿಸಿ."

"ಆಗಲಿ ಸಾರ್. ನಾನು ಅವರನ್ನೆಲ್ಲ ಈಗ ಕಳಿಸ್ತೀನಿ. ಶಾನುಭೋಗರಿಗೂ ತಿಳಿಸ್ತೀನಿ. ಆದ್ರೆ ನಿಮ್ಮ ಸಾವಕಾರ‍್ರಿಗೂ ಬರೀತೀನಿ. ಇಲ್ಲದಿದ್ದರೆ ಈ ಊರಿನ ಜನ ನನ್ನನ್ನಂತೂ ಸುಮ್ಮನೆ ಬಿಡೋಲ್ಲ," ಎಂದು ಹೇಳಿ ಎದ್ದರು.

ಪಟೇಲರು ಹೊರಗೆ ಹೋದ ನಂತರ ಅಲ್ಲಿದ್ದವರ ಬಳಿ ಮಾತನಾಡಿ ಅವರೆಲ್ಲರನ್ನೂ ಕಳುಹಿಸಿದರು. ಅವರೆಲ್ಲರೂ ಹೊರಡುವಾಗ "ಇದು ತೀರ್ಮಾನವಾಗಬೇಕು", "ಜಾತಿಗೆ ಸೇರಿಸೋಕೆ ಆ ಬಡ ಹೆಣ್ಣಿಗೆ ಸಾವಿರ ರೂಪಾಯಿಯಾರು ಕೊಡ್ತಾರೆ ಪಾಪ", "ಅವರಿಗೇ ದಂಡಹಾಕಿ...." ಎಂದೆಲ್ಲ ಹೇಳುತ್ತಿದ್ದುದು ಕೇಳಿದ ಶಾಂತಪ್ಪನಿಗೆ, ಜ್ವಾಲಾಮುಖಿಯೊಳಗೆ ಲಾವಾರಸವು ಕುದಿವಂತೆ ಒಳಗೆ ಕೋಪವು ಕುದಿಯತೊಡಗಿತು.

ಹಳ್ಳಿಗರೆಂದರೆ ಪ್ರಾಮಾಣಿಕರು, ಅವರಿಗೆ ಮೋಸ, ದ್ವೇಷದ ಪರಿಚಯವೇ ಇಲ್ಲ, ಅವರು ಕೇವಲ ಮುಗ್ಧತೆಯ ಮುದ್ದೆ ಎಂದು ಪಟ್ಟಣಿಗರು ಹೇಳುವರು. ಆದರೆ ಇಲ್ಲಿ ಬಂದು ನೋಡಲಿ ಅವರು. ಹಳ್ಳಿಗರ ಈ ನಿಜ ಚಿತ್ರವನ್ನು ! ಪಟ್ಟಣದಲ್ಲಿ ಕುಳಿತುಕೊಂಡು ರಾಷ್ಟ್ರದ ಖನಿಜ ಸಂಪತ್ತು, ಗಣಿ ಕೈಗಾರಿಕೆ ಎಂದು ಉದ್ದುದ್ದ ಬರೆಯುವವರು, ಗಂಟೆಗಟ್ಟಲೆ ಹರಟುವವರು ಇಲ್ಲಿ ಬಂದು ಈ ರಾಜಕೀಯವನ್ನು ನೋಡಲಿ, ಪ್ರಾಮಾಣಿಕರ ಪ್ರಾಣವು ಗಣಿಯಲ್ಲಿ ಹೇಗೆ ಹೋಗುವುದೆಂಬುದನ್ನರಿಯಲಿ !.....ಪ್ರಾಮಾಣಿಕತೆ..... ಹೌದು ಅದು ಪ್ರಕಟವಾಗುವುದು ಹೇಗೆ ? ಸಾಹುಕಾರರಿಗೆ ಎನ್ನ ಪ್ರಾಮಾಣಿ

ಕತೆ ಹೇಗೆ ತಿಳಿಯಬೇಕು ; ತಾನು ಅಂತಹ ಕ್ಷುದ್ರ ಮನುಷ್ಯನಲ್ಲ, ನಾಯಿಯಂತೆ ಹೆಣ್ಣುಗಳು ಕಂಡೊಡನೆ ಹಿಂದೆ ಓಡುವವನಲ್ಲವೆಂದು ತೋರಿಸುವುದೆಂತು ? ಛೆ, ಎಂತಹ ಅಪಮಾನ ಪ್ರಸಂಗ ! ಸಾಹುಕಾರರಿಗೆ ತಕ್ಷಣ ಒಂದು ಪತ್ರ ಬರೆದುಬಿಡುವುದೇ ?.. ತಾನೇ ಬರೆದರೆ ತನ್ನದೇ ಕಳ್ಳ ಹೃದಯವೆಂದು ತೋರಬಹುದು ಅವರಿಗೆ....ಬರೆಯದೇ ಇದ್ದರೆ ಸಾಹುಕಾರರಿಗೆ ವಿಷಯವೆಲ್ಲವನ್ನೂ ತಿಳಿಸುವುದು ಹೇಗೆ ?....ಬರೆಯಬೇಕು....ಬರೆಯುವುದು ತಪ್ಪು ಅದು ಬೇಡ....ಬರೆಯದೇ ಬಿಡುವುದು ಒಳಿತು....ಸುಮ್ಮನಿದ್ದು ಬಿಡುವುದು ಅದಕ್ಕಿಂತಲೂ ಒಳಿತು.

ಶಾಂತಪ್ಪ ಚಿಂತಿಸಿ ಚಿಂತಿಸಿ ನೆಲೆಯಿಲ್ಲದ ದೀಪದಂತಾದ. ವಿಚಾರಶೀಲರಿಗೆ ಇದೇ ದೊಡ್ಡ ತೊಂದರೆಯಾಗುವುದು ಹಲವು ವೇಳೆ. ಮೂಢರಾದವರು ಒಂದೇ ದೃಢ ನಂಬಿಕೆಯಿಟ್ಟುಕೊಂಡಿದ್ದು ಅದನ್ನೇ ಕೊನೆಯವರೆಗೂ ಅನುಸರಿಸುವರು. ಆದರೆ ಬುದ್ಧಿಜೀವಿಗಳು ತಮ್ಮ ವಿಚಾರಶೀಲತೆಯನ್ನೇ ಕೊನೆಯವರೆಗೂ ಬೆಳೆಸಿಕೊಂಡು, ಯಾವೊಂದೂ ವಿಷಯವನ್ನು ತಕ್ಷಣವೇ ನಿರ್ಧರಿಸದೇ ತೂಗಿ ತೂಗಿ ನೋಡಿ ವೇಳೆಗಳೆಯುವರು. ಶಾಂತಪ್ಪನೂ ಹಾಗೆಯೇ ಆ ದಿನವೆಲ್ಲಾ ಚಿಂತಿಸಿದ. ಆದರೆ ಚನ್ನಯ್ಯ ಆ ದಿನವೇ ಸಾಹುಕಾರರಿಗೆ ಪತ್ರ ಬರೆಸಿದ. ಶಾಂತಪ್ಪನೂ ಕೊನೆಗೊಂದು ನಿರ್ಧಾರಕ್ಕೆ ಬಂದು ಮಾರನೆಯ ದಿನ ವಿವರವಾಗಿ ಬರೆದು ಅವರಿಗೆ ತಿಳಿಸಿದ.

ಅ ದಿನ ಸಾಹುಕಾರರು ತಮ್ಮ ಹೊಸ ಕಾರಿನಿಂದಿಳಿಯುವಾಗಲೇ ರೌದ್ರಾಕಾರ ತಾಳಿದ್ದರು ಹೊಸದಾಗಿ ಬಂದಿದ್ದ ಘೂರ್ಖ ಸಿಪಾಯಿಯೊಬ್ಬ ಬಾಗಿಲು ತೆರೆದ. ಕಾರಿನಿಂದಿಳಿದು ಶಾಂತಪ್ಪನ ಮುಖ ನೋಡಿದಾಕ್ಷಣ ಇಂಗ್ಲೀಷಿನಲ್ಲಿ ಹೇಳಿದರು,

"ನೀವು ಹೀಗೆಲ್ಲಾ ಮಾಡ್ತೀರೀಂತ ನಾನು ನಂಬಿರಲಿಲ್ಲ !"

"ಇಲ್ಲ ಸಾರ್, ಅದು ಸುಳ್ಳು. ಅದು ನಿಜಾಂತ ಗೊತ್ತಾದರೆ ನಾನು ತಕ್ಷಣ ರಾಜೀನಾಮೆ ಕೊಟ್ಟುಬಿಡ್ತೀನಿ. ಸಾಕು ನನಗೆ ಈ ಕೆಲಸ," ಶಾಂತಪ್ಪನೂ ಇಂಗ್ಲೀಷಿನಲ್ಲೆಂದ.

"ನೀವು ರಾಜೀನಾಮೆ ಕೊಡೋದೇನು, ನಾನೇ ಕಳಿಸ್ತೀನಿ !" ಸಾಹುಕಾರರು ಸ್ಪಷ್ಟವಾಗೆಂದರು.

"ಮೊದಲು ಎಲ್ಲವನ್ನೂ ಪರಿಶೀಲಿಸಿ ನೋಡಿ."

"ಅದು ಸರೀ, ನೀವು ಮೊನ್ನೇನೆ ಏಕೆ ಪತ್ರ ಬರೀಲಿಲ್ಲ ? ಚನ್ನಯ್ಯ ಬರೆದ ಮೇಲೆ ನೀವು ಬರೆದಿದ್ದೀರಿ!"

"ಒಂದು ದಿನ ತಡವಾಗಿ ಪತ್ರ ಬರೆದಿದ್ದಕ್ಕೇ, ನಾನೇ ಅಂತಹ ಹೀನ ಕೆಲಸ ಮಾಡಿದೇಂತ ನಿರ್ಧರಿಸಿದಿರಾ ?" ಶಾಂತಪ್ಪ ಕ್ರುದ್ಧನಾಗಿಯೇ ಕೇಳಿದ. ತನ್ನ ಪ್ರಾಮಾಣಿಕತೆಗೆ ಎಲ್ಲೆಲ್ಲಿಯೂ ಆಘಾತಗಳೇ ಬೀಳುತ್ತಿದ್ದುದರಿಂದ ಅವನಿಗೆ ಹುಚ್ಚು ಹಿಡಿದಂತಾಗಿದ್ದಿತು. ಅವನ ಆ ಮಾತುಗಳನ್ನು ಕೇಳಿದ ಸಾಹುಕಾರರಿಗೂ ಕೋಪ ಬಂದಿತು. ತಮ್ಮ ಕೈಕೆಳಗಿನ ಕೆಲಸಗಾರ ಇಷ್ಟೊಂದು ಉದ್ಧಟನಾಗಿ ತಮ್ಮೆದುರಿನಲ್ಲಿಯೇ ಮಾತನಾಡುತ್ತಿರುವನು, ಎದುರಿನಲ್ಲಿ ತಮ್ಮ ಆಶ್ರಯದಲ್ಲಿರುವ ಇನ್ನೂ ಅನೇಕರು ಎಷ್ಟೋ ದೈನ್ಯತೆಯಿಂದ ನಿಂತಿರುವರು. ಜೊತೆಗೆ ತಮ್ಮ ಗೌರವದ ಪ್ರತೀಕವಾಗಿ 'ಕ್ರಿಸ್ಲರ್' ಕಾರು, ಹೊಸದಾಗಿ ಅವರೊಡನೆಯೇ ಬಂದಿರುವ ಘೂರ್ಖ ಸಿಪಾಯಿ....ಎಲ್ಲವನ್ನೂ ಒಮ್ಮೆ ನೋಡಿ ಅವರಲ್ಲಿನ ಶ್ರೀಮಂತಿಕೆ ಜಾಗೃತವಾಯಿತು.

"ಇರಲಿ ವಿಚಾರಿಸೋಣ ಒಳಗೆ ಬನ್ನಿ" ಎಂದವರು ಒಳಹೊಕ್ಕರು.

ಒಳಹೋಗುವಾಗ ಶಾಂತಪ್ಪ ಪುನಃ ಅಲ್ಲಿ ಸೇರಿದ್ದ ಗುಂಪನ್ನು ನೋಡಿದ. ಅಲ್ಲಿ ಸುಬ್ಬಣ್ಣ, ಮಾಣಿಕ್ಯಂ, ಚನ್ನಯ್ಯರನ್ನು ಅವನು ಕಂಡುದು ಅದೇ ಮೊದಲು. ಅವನೆದುರಿನಲ್ಲಿಯೇ ನಿಂತಿದ್ದ ವೆಂಕಟಪ್ಪನು ದೀನವದನದಿಂದ ಅವನನ್ನೇ ನೋಡುತ್ತಿದ್ದನು. ಆ ಮುಖದಲ್ಲಿದ್ದ ವೇದನೆ, ಅಸಹಾಯಕತೆಗಳನ್ನು ನೋಡಿ ಶಾಂತಪ್ಪನಿಗೆ, ತನ್ನ ಪರವಾಗಿರುವ ಆ ಕೂಲಿಗನ ಬಗ್ಗೆ ಅಪಾರ ಪ್ರೀತಿಯುಕ್ಕಿ ಬಂದಿತು.

ಅವರೆಲ್ಲ ಒಳಗೆ ಕುಳಿತಾಗ, ಸಾಹುಕಾರರು ಚನ್ನಯ್ಯನನ್ನು ಕರೆದು ಎಲ್ಲವನ್ನೂ ಕೇಳಿದರು. ಶಾಂತಪ್ಪನ ಬಗ್ಗೆ ದೊಡ್ಡದೊಂದು ದೂರನ್ನೇ ಕೊಟ್ಟ,

"ಇವರು ಮೊದಲು ಬಂದಾಗಲೇ ನನ್ನ ಹತ್ತಿರ ಲಂಚ ಕೇಳಿದರು ಸಾರ್....ನಾನು ಇವರಿಗೆ ಲಂಚ ಕೊಟ್ಟು ಉಪ್ಪು ಕೊಟ್ಟ ಧಣಿ ನಿಮಗೆ ದ್ರೋಹಮಾಡಲೇ ? ಹಾಗೆ ಮಾಡಿದರೆ ಶಿವ ಮೆಚ್ತಾನೆಯೆ ! ನಾನು ಇವರು ಹೇಳಿದಹಾಗೆ ನಡೆಯಲಿಲ್ಲಾಂತ ನನಗೆ ವಾರವಾರಾನೂ ತೊಂದರೆ ಕೊಡೋಕೆ ಶುರು ಮಾಡಿದ್ರು. ಪ್ರತಿ ವಾರಾನೂ ನನ್ನ ಕಲ್ಲು ಕಡಿಮೆ ಹಾಕೋದು ಗಂಗಯ್ಯನ ಜೊತೆ ಸೇರಿಕೊಂಡು ಅವನಿಗೇ ಸಾವಿರಾಲಾಗಿ ಕೆಲಸ ಮಾಡೋದು ಎಲ್ಲಾ ಮಾಡಿದ್ರು. ಈಗ ಹೀಗೆ ಮಾಡಿ ಕಂಪೆನಿಯವರಿಗೇ ಅವ

ಮಾನ ಮಾಡಿದ್ರು. ದೇವರಂಥ ಧಣಿ ತಾವಿದ್ದೀರಿ ! ನಮ್ಮ ಅಣ್ಣಂದ್ರ ಹಾಗೆ ಸುಬ್ಬಣ್ಣೋರು, ಮಾಣಿಕ್ಯಂ ಇದಾರೆ. ಅವರಿಗೆಲ್ಲ ಅವಮಾನ ಮಾಡಿಬಿಟ್ರು ಸಾರ್ !....ಇನ್ನು ಆ ಹೆಣ್ಣು ಮಗಳ ಗತಿಯೇನು ಸಾರ್ ? ಅವಳನ್ನ ಜಾತಿ ಯಿಂದ ಹೊರಗೆ ಹಾಕಿಬಿಟ್ಟಿದಾರೆ. ನಮ್ಮ ಕಂಪೆನಿ ಕೆಲಸಕ್ಕೆ ಬಂದಿದ್ದಕ್ಕೆ ಅವಳಿಗೆ ಈ ಸ್ಥಿತಿ ಬಂತೆ !"

ಹೇಳುತ್ತ ಹೇಳುತ್ತ ಚನ್ನಯ್ಯನ ಕಣ್ಣಿನಲ್ಲಿ ಥಳಕ್ಕನೆ ನೀರು ಬಂದಿತು. ಅವನ ಕಣ್ಣೀರು ನೋಡಿ ಸಾಹುಕಾರರ ಹೃದಯವೇ ಕಲಕಿದಂತಾದುದು ಅವರ ಮುಖದಲ್ಲಿ ಕಾಣಿಸಿತು !

"ನೀನು ಯಾಕೆ ಕಣ್ಣೀರು ಹಾಕ್ತೀಯೆ ಚನ್ನಯ್ಯ? ಸಮಾಧಾನ ತಂದುಕೋ. ಸುಮ್ಮನಿರು ವಿಚಾರಿಸೋಣ. ಎಲ್ಲಿ ಆ ಹೆಂಗುಸೆಲ್ಲಿ ?" ಎಂದು ಸಾಹುಕಾರರೆಂದಾಗ ಶಾಂತಪ್ಪನಿಗೆ ಆಶ್ಚರ್ಯವಾಯಿತು. ಜನರು ಜಾತಿ, ದೇವರು ಎಂಬ ಶಬ್ದಗಳನ್ನು ಎಷ್ಟು ವಿಧದಲ್ಲಿ ತಮ್ಮ ಅನುಕೂಲತೆಗಾಗಿ ಉಪ ಯೋಗಿಸಿಕೊಳ್ಳುವರು ? ತಾನೂ ಸಹ ವೀರಶೈವನೇ, ಆದರೆ ಕೇವಲ ಯಾವು ದೋ ಒಂದು ಸಮಯದಲ್ಲಿ ತಮಾಷೆಗಾಗಿ ತಾನು ಬ್ರಾಹ್ಮಣನೆಂದು ಹೇಳಿದ್ದು ತನಗೇ ತಾನು ಶಾಪ ಕೊಟ್ಟಂತಾಯಿತು. ಆದರೆ ಈ ನಿಮಿಷ ತಾನೂ ವೀರ ಶೈವನೆಂದು ಸಿದ್ಧಾಂತ ಮಾಡಿಬಿಟ್ಟರೆ ಈ ಜನರೇನು ಮಾಡುವರು ? ಪಾರ್ವ ತಿಯ ಜಾತಿ ಹೋದುದು ಹಿಂದಿರುಗುವುದೇ ?

"ಏನಮ್ಮ ಇವರೆಲ್ಲ ಹೇಳೋದು ನಿಜಾನೇ ?"

"ಹೌದು...." ಎಂದು ಸಾಹುಕಾರರಿಗೆ ಉತ್ತರವಿತ್ತು ಪಾರ್ವತಿ ಗಳ ಗಳನೆ ಅತ್ತುಬಿಟ್ಟಳು. ಸುತ್ತ ಸೇರಿದ್ದವರೆಲ್ಲರೂ ಮೂಕರಂತೆ ಈ ನಾಟಕ ವನ್ನು ನೋಡುತ್ತ ಕುಳಿತಿದ್ದರು. ಆದರೆ ಅಲ್ಲಿಯೇ ಕುಳಿತಿದ್ದ ವೆಂಕಟಪ್ಪ ನೆದ್ದು ಹೇಳಿದ,

"ಬುದ್ಧಿಯವರು ನಂಗೆ ಒಂದು ನಿಮಿಸ ಅವಕಾಸ ಕೊಡ್ಬೇಕು !"

"ಏನು ಹೇಳು" ಸಾಹುಕಾರರು ಹೇಳಿದರು. ಚನ್ನಯ್ಯ ಕಣ್ಣು ಕೆಕ್ಕರಿಸಿ ಅವನನ್ನು ನೋಡಿದ.

"ಇದೆಲ್ಲ ಸುಳ್ಳು ಸಾರ್. ಮ್ಯಾನೇಜರು ದೇವರಂಥ ಮನುಷ್ಯರು. ಅವಳು ಮರ್ಯಾದಸ್ತಳಾಗಿದ್ರೆ ಈಟೊಂದು ಜನದ ಮುಂದೆ ಬಂದು ಇವರು ತನ್ನ ಮಾನಬಂಗ ಮಾಡಿದ್ರು ಅಂತ ಹೇಳಕ್ಕೇ ಬರುತಿರ್ನಿಲ್ಲ. ಇದು ಸುಳ್ಳು ನಂಬಬ್ಯಾಡಿ ಇದನ್ನ !"

ಸಾಹುಕಾರರು ಚನ್ನಯ್ಯನ ಮುಖ ನೋಡಿದರು. ಚನ್ನಯ್ಯ ವೆಂಕಟಪ್ಪನನ್ನು ತಾತ್ಸಾರ ದೃಷ್ಟಿಯಿಂದ ನೋಡಿ, ಸಾಹುಕಾರರತ್ತ ತಿರುಗಿ ಅದೇ ತಾತ್ಸಾರದ ನಗೆ ನಕ್ಕ. ಆ ನಗುವಿನಲ್ಲಿ ವೆಂಕಟಪ್ಪನಿಗೆ ಮೂರು ಕಾಸಿನ ಬೆಲೆಯೂ ಇಲ್ಲವೆಂಬ ಅರ್ಥವಿದ್ದಿತು. ಸಾಹುಕಾರರು ಅತ್ತ ಗಮನಕೊಡದೆ ಸುಮ್ಮನಾಗಿ ಶಾಂತಪ್ಪನತ್ತ ತಿರುಗಿ ಇಂಗ್ಲೀಷಿನಲ್ಲಿಯೇ ಮಾತನಾಡಿದರು.

"ಏನು ಹೇಳ್ತೀರಿ ಶಾಂತಪ್ಪ ಇದಕ್ಕೆ ?"

"ನಾನು ನಿಮ್ಮೆದುರಿನಲ್ಲಿಯೇ ಅವರನ್ನ ಒಂದೆರಡು ಪ್ರಶ್ನೆ ಕೇಳ್ತೀನಿ ಸಾರ್. ಆಮೇಲೆ ನಿಮಗೆ ತೋರಿದಂತೆ ಮಾಡಿ," ಎಂದ. ಸಾಹುಕಾರರು ಸಮ್ಮತಿ ಸೂಚಕವಾಗಿ ತಲೆಯಾಡಿಸಿದರು.

"ಏನು ಪಾರ್ವತಮ್ಮ. ನಾನು ಒಂದೆರಡು ಪ್ರಶ್ನೆ ಕೇಳ್ತೀನಿ. ಉತ್ತರ ಕೊಡ್ತೀಯಾ?"

ಶಾಂತಪ್ಪನನ್ನು ಪಾರ್ವತಿ ತಲೆಯೆತ್ತಿ ನೋಡಿದಳು. ಅವನನ್ನು ನೋಡುತ್ತಿದ್ದಂತೆಯೇ ಅವಳ ದೇಹವೆಲ್ಲವೂ ಬೆವತಂತಾಗಿ ಅವಳ ಮುಖದಲ್ಲಿ ಬೆವರಿನ ಮಣಿಗಳು ಕಾಣಿಸತೊಡಗಿದುವು. ಅವಳು ತಕ್ಷಣ ತಲೆ ತಗ್ಗಿಸಿ, "ಆಗಲಿ" ಎಂದಳು.

"ನೀನು ಆದಿನ ಇಲ್ಲಿ ಒಬ್ಬಳೇ ಯಾಕೆ ಬಂದೆ?"

"ಕೊಡ ಕೇಳೋಕೆ" ಅವಳು ಮೆಲು ದನಿಯಲ್ಲಿ ಉತ್ತರವಿತ್ತಳು.

"ನಿನ್ನ ಇಲ್ಲಿಗೆ ಯಾರು ಕಳಿಸಿದರು ?"

ಪಾರ್ವತಿ ಒಂದು ಕ್ಷಣ ಸುಮ್ಮನಾದಳು. ಸುತ್ತಲಿದ್ದವರೆಲ್ಲ ಅವಳಿಂದ ಯಾವ ಉತ್ತರ ಬರುವುದೋ ಎಂದು ಕುತೂಹಲಿಗಳಾಗಿ, ಹೆದರಿದವರಾಗಿ, ಅವಳನ್ನೇ ನೋಡುತ್ತಿದ್ದರು. ಅವಳು ಒಮ್ಮೆ ತಲೆಯೆತ್ತಿ ಚನ್ನಯ್ಯನತ್ತ ನೋಡಿದಳು, ಅವನು ತಲೆಯನ್ನು ಬೇರೆಡೆಗೆ ತಿರುಗಿಸಿಕೊಂಡು ನಿಂತಿದ್ದ. ಅವಳು ನಿಧಾನವಾಗಿ ಹೇಳಿದಳು.

"ಯಾರೂ ಕಳಿಸಲಿಲ್ಲ. ನಾನೇ ಬಂದೆ," ಒಂದೊಂದೂ ಮಾತೂ ನಿಧಾನವಾಗಿ, ಆಗಿನ್ನೂ ಕುದಿಯುತೊಡಗಿದ ನೀರಿನಲ್ಲಿನ ಗುದಿಯಂತೆ, ಬಂದುವು.

ಆ ಉತ್ತರ ಕೇಳಿ ಶಾಂತಪ್ಪನಿಗೆ ಕೋಪ ಕೆರಳಿತು. ಆದರೆ ಪಾರ್ವತಿ ಹೆಂಗಸೆಂಬುದರ ಅರಿವಿನಿಂದ ತನ್ನ ಕೋಪವನ್ನು ತನ್ನಲ್ಲಿಯೇ ದಮನ ಮಾಡಿಕೊಂಡು ಸುಮ್ಮನಿರಬೇಕಾಯ್ತು ಅವನು.

"ನೀನು ಬೇರೆ ಯಾವ ಉದ್ದೇಶದಿಂದಲೂ ಬರಲಿಲ್ಲವೆ?" ಜೋರೇನೂ ತೋರಿಸದೇ ಕೇಳಿದ ಶಾಂತಪ್ಪ.

"ಕೂಡ ಕೇಳೋಕೆ ಮಾತ್ರ ಬಂದೆ."

"ನೋಡು ನೀನು ಸತ್ಯವನ್ನು ಹೇಳದಿದ್ದರೆ ನಿನ್ನ ವಿಷಯನೆಲ್ಲಾ ಹೇಳಿ ಬಿಡಬೇಕಾಗುತ್ತೆ ನಾನು!"

ಶಾಂತಪ್ಪ ಕೇಳಿದುದಕ್ಕೆ ಪಾರ್ವತಿ ತಕ್ಷಣ ತಲೆಯೆತ್ತಿ ಭಯದಿಂದ ಶಾಂತಪ್ಪ, ಸುಬ್ಬಣ್ಣ, ಚನ್ನಯ್ಯರನ್ನು ನೋಡಿದಳು. ಅವಳಿಗೆ ಬಹುಶಃ ತನ್ನ ಇದುವರೆಗಿನ ಜೀವನದ ಸಮಗ್ರ ಚಿತ್ರವೇ ಕಣ್ಮುಂದೆ ಬಂದಿರಬೇಕು. ಆ ಚಿತ್ರವನ್ನು ನೆನೆದಾಗ ಅವಳಿಗೆ ಮತ್ತೂ ಭಯವಾಯಿತು. ಸುಬ್ಬಣ್ಣನಿಗೂ ಅಷ್ಟೇ ಭಯವಾಗಿತ್ತಾಗ. ಇದೆಲ್ಲವನ್ನೂ ನೋಡಿದ ಸಾಹುಕಾರರಿಗೆ ವಿಸ್ಮಯ ವಾಯಿತು. ಅವರು ಯಾವೊಂದೂ ನಿರ್ಧಾರಕ್ಕೆ ಬರಲಾಗಲಿಲ್ಲ. ಅವರ ಭಾವನೆಗಳು ನಿಮಿಷ ನಿಮಿಷಕ್ಕೂ ಬದಲಾಗ ತೊಡಗಿ, ಅವರ ನಂಬಿಕೆಗಳೆಲ್ಲ ಜಾರತೊಡಗಿದುವು. ಎಲ್ಲವನ್ನೂ ಸೂಕ್ಷ್ಮವಾಗಿ ಗಮನಿಸಿದ ಚನ್ನಯ್ಯ ತಕ್ಷಣ ಹೇಳಿದ,

"ಏನು ಸಾರ್ ಮ್ಯಾನೇಜರೇ, ಪಾಪ ಆ ಹೆಣ್ಣನ್ನ ಜಾತಿ ಕೆಡಿಸಿದ್ದಲ್ಲದೇ ಅವಳನ್ನ ಹೆದರಿಸೋಕೆ ಹೋಗ್ತೀರಾ? ನೀವು ನಿಮ್ಮ ತಪ್ಪು ಮುಚ್ಚಿಕೊ ಳ್ಳೋಕೆ ಅವಳನ್ನ ಹೆದರಿಸ್ತೀರಾ,"

"ಏನು ತಪ್ಪು ?" ಅತ್ಯುಷ್ಣವಾದ ಶಿಲಾಪಾಕವು ನಿಧಾನವಾಗಿ ಮೇಲೆ ಬರುತ್ತಿತ್ತು.

"ನನ್ನ ಲಂಚ ಕೇಳಿದ್ರಿ. ನಮಗೆ ತೊಂದರೆ ಕೊಟ್ಟರಿ. ನಿಮಗೆ ಆಗದ ವರ ಮೇಲೆ ಚಾಡಿ ಹೇಳಿದಿರಿ. ಕಂಡ ಕಂಡ ಹೆಣ್ಣುಗಳನ್ನೆಲ್ಲ ಕೆಡಿಸಿದ್ರಿ. ಆ ದೇವರಂಥ ದೊರೆಗೆ ಮೋಸ ಮಾಡಿದ್ರಿ," ಚನ್ನಯ್ಯ ಒಂದೊಂದು ಮಾತನ್ನೂ ಒತ್ತಿ ಒತ್ತಿ ಹೇಳಿದ.

"ನೀವು ಆ ಹುಡುಗೀನ ಜಾತಿ ಕೆಡಿಸಿ ಹಾಳುಮಾಡಿದ್ರಿ. ನಿಮ್ಮಿಂದ ಈ ಗಣೇಲಿ ಹೆಂಗಸರು ಬರೋಹಾಗಿಲ್ಲ." ಆ ಮಾತು ಕೇಳಿದಾಕ್ಷಣ ಶಾಂತಪ್ಪನ ಕೋಪದ ಜ್ವಾಲೆ ಮೇರೆ ಮೀರಿತು. ಥಿಲ್ಲನೆ ಶಿಲಾಪಾಕವು ಜ್ವಾಲಾಮುಖಿ ಯಿಂದ ಉಕ್ಕುವಂತೆ ಅವನ ಬಾಯಿಂದ ಹೊರಟಿತು,

"ಅಯೋಗ್ಯ. ಎಲ್ಲಾ ದುರ್ನೀತಿಗಳನ್ನು ನಿನ್ನಲ್ಲೇ ಇಟ್ಟುಕೊಂಡು ಬೇರೆ ಯವರ ಮೇಲೆ ಹೇಳ್ತೀಯಾ?" ಎಂಬ ಮಾತು.

"ಏನು ಸಾರ್, ನನ್ನತ್ರಲೇ ಆಟ ಶುರು ಮಾಡ್ತೀರಾ ನೀವೂನೂ?" ಚನ್ನಯ್ಯನೆಂದ.

ಆ ಮಾತು ಕೇಳಿ ಶಾಂತಪ್ಪ ಧಿಗ್ಗನೆದ್ದು ಹೋಗಿ ಚನ್ನಯ್ಯ ಕುತ್ತಿಗೆ ಹಿಡಿದು, ರಪರಪನೆ ಅವನ ಕೆನ್ನೆ ಬಾರಿಸಿ ಅವನನ್ನು ತಳ್ಳಿದ. ತಳ್ಳಿದ ಆ ರಭಸಕ್ಕೆ ಚನ್ನಯ್ಯ ಅಷ್ಟು ದೂರ ಹೋಗಿ ಎಸೆದ ಮೂಟೆಯಂತೆ ಗೋಡೆಗೊರಗಿದ. ಅದನ್ನು ನೋಡಿದಾಕ್ಷಣ ಅವನ ಕಡೆಯವರು ಕೆಲವರು ಕುಳಿತಲ್ಲಿಂದ ಮೇಲೆ ಏಳ ತೊಡಗಿದರು. ಅವರನ್ನು ನೋಡಿ ಶಾಂತಪ್ಪನೆಂದ,

"ಯಾರಾದರೂ ಎದ್ದು ಬಂದರೆ ಒಬ್ಬೊಬ್ಬರನ್ನು ಸಿಗಿದು ಬಿಡ್ತೇನೆ! ಅಯೋಗ್ಯರಿರಾ!". ಶಾಂತಪ್ಪನೆಂದ ಮಾತಿನ ವೇಗಕ್ಕೇ ಹೆದರಿ ಅವರೆಲ್ಲ ಹಾಗೆಯೇ ಕುಳಿತರು. ಚನ್ನಯ್ಯನಿಗೆ ಬಿದ್ದಲ್ಲಿಂದ ಏಳಲಾಗಲೇ ಇಲ್ಲ. ಎಲ್ಲರೂ ಭಯಕಂಪಿತರಾಗಿದ್ದರು. ಸಾಹುಕಾರರೇ ಕೊಂಚ ಕೋಪದಿಂದಲೇ ಹೇಳಿ ಹೇಳಿದರು.

"ಮಿಸ್ಟರ್ ಶಾಂತಪ್ಪ. ನೀವು ಹಾಗೆಲ್ಲಾ ಹೊಡೀಬಾರದು. ಸುಮ್ಮನೆ ಬಂದು ಕುಳಿತುಕೊಳ್ಳಿ ಇಲ್ಲಿ."

"ನನ್ನ ಸಹನೆ ಪರೀಕ್ಷಿಸುತ್ತಿದೆ ಈ ಘಟನೆ," ಎಂದು ಕೊಳ್ಳುತ್ತಾ ಶಾಂತಪ್ಪ ಬಂದು ಕುಳಿತ.

ಆದರೆ ಅಷ್ಟರಲ್ಲಿಯೇ ಶ್ಯಾನುಭೋಗರು ಈಶ್ವರಯ್ಯನವರು ಏದುತ್ತಾ ಅಲ್ಲಿಗೆ ಬಂದುದನ್ನು ನೋಡಿ ಸಾಹುಕಾರರು,

"ಓಹೋ....ಬನ್ನಿ ಬನ್ನಿ ಶಾನುಭೋಗರೇ. ಏನು ಇಷ್ಟೊಂದು ಅತುರ ವಾಗಿ ಬಂದರಲ್ಲ?" ಎಂದರು.

"ಈಗಿನ್ನೂ ರಾಮಪುರದ ಬಸ್ಸಿಂದ ಇಳಿದವನೇ ಬಂದೆ ಸಾರ್. ಇಲ್ಲಿ ಇಲ್ಲಿಯ ವಿಷಯವೇನೋ ತಿಳೀತು. ಬಂದೆ. ತಾವು ದಯವಿಟ್ಟು ಒಂದು ನಿಮಿಷ ಇಲ್ಲಿ ಬನ್ನಿ," ಎಂದು ಶಾನುಭೋಗರು ಕರೆದುದಕ್ಕೆ ಸಾಹುಕಾರರು ಎದ್ದು ಆಚೆ ಹೊರಟರು. ಅವರಿಬ್ಬರೂ ಹೋಗಿ ಕಾರಿನಲ್ಲಿ ಕುಳಿತುಕೊಂಡು, ಹತ್ತಿರವಿದ್ದವರನ್ನೆಲ್ಲಾ ದೂರ ಕಳಿಸಿ ಮಾತನಾಡತೊಡಗಿದರು.

ಒಳಗೆ ಕುಳಿತಿದ್ದ ಶಾಂತಪ್ಪ ಮಾತ್ರ ಯೋಚಿಸುತ್ತಿದ್ದ,

ಛೆ! ಎಂತಹ ವಿಷ ಪರೀಕ್ಷೆಯಿದು?

ಚನ್ನಯ್ಯನೇನೋ ಕ್ಷುದ್ರ ಮನುಷ್ಯನೇ ಹೌದು.

ಆದರೆ ಪಾರ್ವತಿಯೂ ಇಂತಹವಳೇ ಎಂಬುದು ತಿಳಿದಿರಲಿಲ್ಲ.

ಅಂದು ಅವಳನ್ನು ನಿರಾಶೆಗೊಳಿಸಿದ್ದರಿಂದ ಅವಳು ಈ ದಿನ ಹೀಗೆ ಹೇಳಿ ರಬಹುದು.

ಅಬ್ಬ! ಹೆಂಗಸೆಂದರೆ ಕೇವಲ ಹಾವು........

ಏನು ಪ್ರಯೋಜನವಾಯಿತು ತನ್ನ ಧ್ಯೇಯವಾದದಿಂದ? ಜೇಬಿನವರೆಗೆ ಹಣ ಬಂದಿದ್ದಿತು. ದೇಹವನ್ನು ತಬ್ಬಿ ಹೆಣ್ಣು ಬಂದಿದ್ದಿತು. ಎಲ್ಲವನ್ನೂ ಬೇಡವೆಂದು ಬಿಟ್ಟುದಾಯ್ತು. ಸಾಹುಕಾರರ ಸಂಬಳ ಪಡೆವುದರಿಂದ ನಂಬಿಕೆ ದ್ರೋಹಮಾಡಬಾರದೆಂದು ಪ್ರಾಮಾಣಿಕತೆಯಿಂದ ನಡೆದುದಾಯ್ತು. ಆದರೆ ತನ್ನ ಪ್ರಾಮಾಣಿಕತೆಯನ್ನು ಗಮನಿಸುವವರಾರು? ಚನ್ನಯ್ಯ ದ್ವೇಷಿಯಾದ, ಸುಬ್ಬಣ್ಣ ಮತ್ಸರ ಸಾಧಿಸಿದ, ಸಾಹುಕಾರರು ಇನ್ನೂ ತನ್ನ ಸತ್ಯ ನೀತಿಯನ್ನು ಅರಿತಿಲ್ಲ, ಅರಿಯವುದೂ ಇಲ್ಲ ಬಹುಶಃ. ಏಕೆ, ಏಕೆ ಬೇಕು ಈ ಧ್ಯೇಯವಾದಿತ್ವ? ಗೋಪಾಲಯ್ಯ ಹೇಳಿದಂತೆ ಬಂದ ಸುಖವನ್ನು ಅನುಭವಿಸಿ ಸಂತಸದಿಂದರುವುದೇ ಒಳಿತು, ಆದ್ದರಿಂದಲೇ ಕಡುಬಡವನಾದರೂ ಗೋಪಾಲಯ್ಯ ಸದಾ ಸುಖಿಯಂತೆ ಸಂತೋಷದಿಂದಿರುತ್ತಾನೆ. ಅವನಿಗೆ ವಿದ್ಯೆಯಿಲ್ಲ, ದುಡ್ಡಿಲ್ಲ, ಆದರೂ ಅವನು ಹರುಷದಿಂದಿರುತ್ತಾನೆ.

ತನಗೆ ವಿದ್ಯೆಯಿದೆ, ನೂರೈವತ್ತು ರೂಪಾಯಿ ವೇತನವಿದೆ. ಆದರೂ ತನ್ನಗತಿ ಚಿರಂತನ ಚಿಂತನೆಯೇ. ಇವೆಲ್ಲಕ್ಕೂ ಏನು ಕಾರಣ?....ತನ್ನ ಆದರ್ಶವಾದವೇ ಕಾರಣ, ಅದಿಲ್ಲದಿದ್ದರೆ ವಾರ ವಾರವೂ ಜೇಬಿಗೆ ಹಣ ಬೀಳುತ್ತಿದ್ದಿತು, ಬೇಕು ಬೇಕಾದ ಹೆಣ್ಣುಗಳ ಸಂಗ ಬೇರೆ.

ರತ್ನಮ್ಮ, ಪಾರ್ವತಿ, ಶಿವಮ್ಮ ಸೌಂದರ್ಯದ ಮೆಟ್ಟಲುಗಳಂತೆ ಈ ಮೂರು ಹೆಣ್ಣುಗಳು. ಶಿವಮ್ಮ! ಆ ರೂಪ ರಾಶಿ, ಹಳ್ಳಿಯ ಹೆಣ್ಣಿನಲ್ಲಿ ಆ ರೂಪ, ಇಪ್ಪತ್ತರ ಯೌವ್ವನ!

ಛೆ!....ಎಂತಹ ಕೀಳು ಭಾವನೆ.

ಶಾಂತಪ್ಪನ ವಿಚಾರ ಚಕ್ರ ಮುಂದುರಳಲಿಲ್ಲ; ಸಾಹುಕಾರರು ಶಾನುಭೋಗರು ಒಳಗೆ ಬಂದಿದ್ದರು, ಕುರ್ಚಿಯ ಮೇಲೆ ಕುಳಿತ ನಂತರ ಸಾಹುಕಾರರೆಂದರು.

"ಏನಯ್ಯ ಚನ್ನಯ್ಯ, ಒಳ್ಳೆಯವರ ಮಾನ ಹಳ್ಳೀಲಿ ಹೋಯ್ತು ಅನ್ನೋ ಹಾಗೆ ಮಾಡಿಬಿಟ್ಟೆ. ನಿನ್ನನ್ನ ಏನು ಮಾಡಿದರೂ ನಂಗೆ ದುಃಖ

ವಾಗೊಲ್ಲ!" ಸಾಹುಕಾರರ ಕೋಪವನ್ನು ನೋಡಿ ಚನ್ನಯ್ಯನ ಬೆಂಬಲಿಗರೆಲ್ಲ ಹೆದರಿದರು.

"ಏನು ಸಾರ್ ಹಾಗೆಂದ್ರೆ?" ನೆಲೆಯನ್ನೇ ಕಳೆದುಕೊಂಡವನಂತೆ ಚನ್ನಯ್ಯನೆಂದ.

"ಹೆಚ್ಚು ಮಾತಾಡದೇ ಹೊರಟುಹೋಗು. ಇನ್ನು ನನ್ನ ಮುಂದೆ ನಿಂತುಕೊಂಡರೆ ನಿನ್ನ ಮೂಳೇನ ಚೂರು ಚೂರು ಮಾಡಿಬಿಡ್ತೀನಿ," ಎಂದ ಸಾಹುಕಾರರ ಮಾತಿಗೆ ಚನ್ನಯ್ಯ ಉತ್ತರವೀಯದೇ ಅಲ್ಲಿಂದ ಹೊರಟು ಹೋದ.

"ನಿಮಗೆ ಹೀಗಾದ್ದಕ್ಕೆ ನಂಗೆ ತುಂಬ ದುಃಖವಾಗ್ತಿದೆ ಮಿಸ್ಟರ್ ಶಾಂತಪ್ಪ," ಸಾಹುಕಾರರೆಂದರು.

"ಏನು ಮಾಡೋದು ಸಾರ್. ಸತ್ಯವಾಗಿರೋದೂ ಸಹ ತಪ್ಪು ಈಗ !" ಶಾಂತಪ್ಪನೆಂದ.

"ಅವರದು ಭೂಮಿ ತೂಕದ ಮಾತು ಸಾರ್," ಎಂದರು ಶಾನುಭೋಗರು.

ಶಾಂತಪ್ಪ ತನ್ನ ಪ್ರಶಂಸೆಗೆ ನಾಚಿ ತಲೆ ತಗ್ಗಿಸಿದ. ತಗ್ಗಿಸಿದ ಅವನ ತಲೆಯಲ್ಲಿ ಮೊದಲಿನ ಭಾವನೆಗಳೇ ಪುನಃ ಮೇಲೆದ್ದುವು.

## ೧೩

## ವೆಂಕಟಪ್ಪನ ಮರಣ - ಶೀರಿತು ಗಣಿಯ ಋಣ

ಆ ದಿನ ಶಾಂತಪ್ಪ ಖಾನನೊಡನೆ ಗಣಿಗೆ ಹೊರಟಿದ್ದಾಗ, ದಾರಿಯಲ್ಲಿ ಹತ್ತಾರು ಕೂಲಿಗಾರರ ಗುಡಿಸಲುಗಳನ್ನು ಹಾದು ಹೋಗುತ್ತಿದ್ದ. ಒಂದು ಗುಡಿಸಿಲಿನ ಮುಂದೆ ಅವನು ಬಂದಾಗ, ಒಳಗಿನಿಂದ 'ಅಯ್ಯೋ, ಅಯ್ಯೋ' ಎನ್ನುತ್ತಾ ಬಾಲಕಿಯೋರ್ವಳು ಬೀದಿಗೆ ಓಡಿಬಂದಳು. ಬಾಗಿಲ ಬಳಿ ಬರುತ್ತಿದ್ದಂತೆಯೇ ಅವಳು ನೆಲದ ಮೇಲೆ ಕುಸಿದು ಕುಳಿತು, ವಾಂತಿ ಮಾಡಿಕೊಂಡಳು. ಕೊಡ ನೀರು ಚೆಲ್ಲಿದಂತೆ ನೆಲದ ಮೇಲೆ ಹರಡಿಕೊಂಡಿದ್ದ ಆ ವಾಂತಿ ನೀರನ್ನು ನೋಡಿ ಶಾಂತಪ್ಪ ಘಾಬರಿಗೊಂಡ. 'ಅಯ್ಯಪ್ಪ........

ಅವ್ವಾ....ಸುಸ್ತಾಗ್ತೈತೆ" ಎಂದು ಕೂಗುತ್ತಾ ಆ ಹುಡುಗಿ ಸಂಕಟಪಡುತ್ತಿದ್ದುದನ್ನು ನೋಡಿ ಶಾಂತಪ್ಪನಿಗೆ ಅಲ್ಲಿಯೇ ಒಂದು ನಿಮಿಷ ನಿಂತು ವಿಚಾರಿಸೋಣವೆನ್ನಿಸಿತು.

"ಈ ಇಲ್ಲಿ ಎಲ್ಲಾ ಕೂಲಿಯೋರ ಗುಡಿಸಿಲ್ನಲ್ಲೂ ಬೇನೆ ತುಂಬಿವೆ ಸಾರ್" ಖಾನನೆಂದ.

"ಅದಕ್ಕೆ ಕಾರಣವೇನು ಇರಬಹುದು ?"

"ಏನಿಲ್ಲ ಸಾರ್. ಈ ಕಾಲದಲ್ಲಿ ಗುಡ್ಡದ ಹವಾನೇ ಹಾಗೆ ಸಾರ್. ತಂಗಳುಪಂಗಳು ತಿಂದು ಗುಡ್ಡಕ್ಕೆ ಈ ಬಿಸಿಲಿನಲ್ಲಿ ಬರ್ತಾವೆ. ಇನ್ನು ಖಾಯಿಲೆ ಬೀಳದೆ ಏನು ಸಾರ್. ಅವೇನು ಹಾಲು ಮೊಸರು ತಿಂದು ಜೀವಿಸೋಕಾಗ್ತೈತ ?"

ಹೌದು! ತಾನು ಅಡಿಗೆಯುವನಿಂದ ತಯಾರಿಸಿದ ಪುಷ್ಕಳ ಭೋಜನ ಉಂಡರೂ, ಒಂದೊಂದು ಬಾರಿ ಜ್ವರ ಬರುತ್ತದೆ. ಕೆಲವು ದಿನಗಳ ಹಿಂದೆ ಒಂದು ವಾರದ ಮೇಲೆ ಖಾಹಿಲೆ ಮಲಗಿದ್ದುದಾಗಿತ್ತು. ಇನ್ನು ಈ ನಿರ್ಗತಿಕ ಕೂಲಿಯುವರ ಪಾಡು ಹೇಗಿರಬೇಕು ಪಾಪ ?

"ಅಷ್ಟು ಯಾಕೆ ಸಾರ್. ನಮ್ಮ ಗಣೀಲಿ ವೆಂಕಟಪ್ಪಾಂತ ಒಬ್ಬ ಅದಾನೆ ಸಾರ್. ಅವನ ಒಂದು ಹುಡುಗಿ, ನಾಲ್ಕೈದು ವರ್ಷದ್ದು ನಿನ್ನೆ ಸತ್ತೋಯ್ತು" ಖಾನನೆಂದ ಪುನಃ.

"ಆ....ವೆಂಕಟಪ್ಪನ ಮಗು ಸತ್ತುಹೋಯ್ತೆ? ನಂಗೆ ಗೊತ್ತೇ ಇಲ್ಲ?"

"ಅವನದು ಒಂದೇ ಏನು ಸಾರ್. ಖಾಯಿಲೆಯಿಂದ ಒಟ್ಟು ಈ ಹಳ್ಳೀಲಿ ಸುಮಾರು ಇನ್ನೂರು ಮಕ್ಕಳು ಸತ್ತಿವೆ ಸಾರ್ ಈ ತಿಂಗಳಲ್ಲಿ! ಅವೂ ನಮ್ಮ ಕೂಲಿಯುವರವೇ ಜಾಸ್ತಿ."

"ಹಾಗೇನು ?" ಶಾಂತಪ್ಪನ ಜಂಘಾಬಲವೆ ಉಡುಗಿಹೋದಂತಾಯ್ತು. ಇನ್ನೂರು ಎಳೆ ಜೀವಗಳ ಬಲಿ. ಅದರಲ್ಲಿ ಕೂಲಿಗಾರರವೇ ಹಲವು. ಔಷಧೋಪಚಾರವಿಲ್ಲದೇ ಮಡಿದ ಜೀವಗಳು ಎಲ್ಲಾ. ತಮ್ಮ ಕೂಲಿಗಾರರು ಅಷ್ಟೊಂದು ಮಕ್ಕಳನ್ನು ಕಳೆದುಕೊಂಡರೂ ತಮಗೇ ಈ ಸುದ್ದಿ ಗೊತ್ತಿಲ್ಲ. ಅಯ್ಯೋ.....ಎಂತಹ ದುಃಖ ಸಂಗತಿ....ಎಂತಹ ರುದ್ರನರ್ತನ ಈ ಹಳ್ಳಿಗರ ಮೇಲೆ! ಒಂದು ತಿಂಗಳಿನಲ್ಲಿ ಮೃತ್ಯು ನಾಲಿಗೆ ಚಾಚಿ ಇನ್ನೂರು ಬಡ ಜೀವಿಗಳನ್ನು ನೆಕ್ಕಿಹೋಗಿತ್ತು.....ಇನ್ನೂ ನಾಲಿಗೆ ಚಾಚಿದೆ.....ಇದು ನಿಲ್ಲುವು

ದೆಂತು ?....ಎಂತು ?....ತಮ್ಮ ಕೂಲಿಗಾರರಿಗೆ ಔಷಧೋಪಚಾರ ಒದಗಿಸು ವುದು ತಮ್ಮ ಕರ್ತವ್ಯ. ಆದರೆ ಸಾಹುಕಾರರು ಇಷ್ಟೊಂದು ಔಷಧಕ್ಕೆ ಹಣ ಸುರಿಯಲು ಒಪ್ಪುವರೆ ?....ಒಪ್ಪುವರೆ ?....

"ಬೆಳಿಗ್ಗೆ ಐದು ಗಂಟೇಗೆ ಎದ್ದು ಮುದ್ದೆ, ಹಿಂಡಿ ತಯಾರುಮಾಡ್ತಾರೆ. ಆರು ಗಂಟೇಗೆ ಗಣೀಗೆ ಹೊಂಟ್ರೆ ಎಂಟು ಗಂಟೇಗೆ ಅಲ್ಲಿ ಸೇರ್ತಾರೆ. ಎಂಟ ರಿಂದ ಸಂಜೆ ಆರು ಗಂಟೆ ಗಂಟೆ ಕೂಲಿ ಮಾಡೋದೇ ಆಗತ್ತೆ. ಇನ್ನು ಅವರು ಮಕ್ಕಳಿಗೆ ಮದ್ದು ತರೋಕೆ ಎಲ್ಲಿ ಹೋಗ್ತಾರೆ ಸಾರ್ ?" ಖಾನ್ ಪುನಃ ಹೇಳಿದ.

"ಇಲ್ಲಿ ಔಷಧಿ ತರಬೇಕಾದ್ರೆ ಎಲ್ಲಿಂದ ತರಬೇಕು ?"

"ರಾಮಪುರದಲ್ಲಿ ಸರ್ಕಾರಿ ಆಸ್ಪತ್ರೆ ಐತೆ ಸಾರ್. ಆದ್ರೆ ದಿನಾ ಅಲ್ಲಿಗೆ ಯಾರು ಹೋಗ್ತಾರೆ ಒಂದಿನಾ ಅಲ್ಲಿಗೆ ಹೋದ್ರೆ ಇಲ್ಲಿ ಒಂದಿನದ ಕೂಲಿಗೆ ಖೋತಾ ಆಗ್ತೈತೆ."

ಶಾಂತಪ್ಪ ಸುಮ್ಮನಿದ್ದುದನ್ನು ನೋಡಿ ಖಾನನೆಂದ ಪುನಃ,

"ಈ ಜನ ಇದಕ್ಕೆ ಮಾರಿ ಬೇನೇಂತ ಹೇಳ್ತಾರೆ ಸಾರ್. ಗಣಿ ಕೂಲಿ ಯೋರೆಲ್ಲ ಸೇರಿ ಊರಿನ ಮುಂದಿರೋ ಅಮ್ಮನಿಗೆ ಕ್ವಾಣ ಒಂದನ್ನ ಬಲಿ ಕೊಡಬೇಕೂಂತ ಮಾಡವ್ರೆ, ಈ ಹುಣ್ಣಿಮೆ ದಿನ....ಹೋದ ವರ್ಷ ಸಾವ ಕಾರ್ರು ಐದು ರೂಪಾಯಿ ಕಾಣಿಕೆ ಕೊಟ್ಟಿದ್ರಂತೆ, ಕ್ವಾಣನ ಬಲೀಗೆ!"

ಶಾಂತಪ್ಪನಿಗೆ ಒಮ್ಮೆ ನಗು ಬಂದಿತು, ಒಮ್ಮೆ ಅಚ್ಚರಿಯಾಯಿತು. ಅಷ್ಟರಲ್ಲಿ ಅವರು ಗಣಿಯ ಬಳಿ ಬಂದಿದ್ದರು. ಕಬ್ಬಿಣದ ಗಾಡಿಗಳ ಧಡಧಡ, ಹಾರೆ ಗುದ್ದಲಿ ಪಿಕಾಸಿಗಳ ಧನಧನ, ಹೆಣ್ಣಾಳುಗಳ ಸುತ್ತಿಗೆಯ ಠಣಠಣ ಶಬ್ದಗಳು ಮಿಶ್ರವಾಗಿ ಕೇಳಿಬರುತ್ತಿದ್ದುವು. ಮೇಸ್ತ್ರಿಗಳ ಕೂಗಾಟ, ಚನ್ನಯ್ಯನ ಅಬ್ಬರ ಎಲ್ಲವೂ ಏರಿದ್ದುವು.

ಆ ವಾತಾವರಣದಲ್ಲಿ ಕಾಲಿಟ್ಟಕೂಡಲೆ ಶಾಂತಪ್ಪನಿಗೆ ಮೊದಲಿನ ನೆನಪೆಲ್ಲ ಸ್ಫುರಿಸಿದುವು. ಚನ್ನಯ್ಯನ ಆ ಪುಂಡ ಮುಖ ಕಣ್ಣೆದುರು ಬಂದು ಕುಣಿಯಿತು, ಪಾರ್ವತಿಯ ಕೃತ್ರಿಮ ಕಣ್ಣೆದುರು ಫಳಫಳನೆ ಹೊಳೆಯಿತು. ಪರ್ವತದ ಗಹ್ವರಗಳಿಂದ ಹತ್ತಾರು ಬಾರಿ ಪ್ರತಿಧ್ವನಿ ಬಂದಂತೆ ಅವೇ ನುಡಿಗಳು ಹತ್ತಾರು ಬಾರಿ ಪ್ರತಿಧ್ವನಿ ಬಂದಂತೆ ಅವೇ ನುಡಿಗಳು ಹತ್ತಾರು ಬಾರಿ ಪ್ರತಿಧ್ವನಿ ಬಂದಂತೆ ಅವೇ ನುಡಿಗಳು ಹತ್ತಾರು ಬಾರಿ ಕಿವಿಯ ಮೇಲೆ ಬಿದ್ದಂತಾದುವು.

"ಏನು ಸಾರ್, ಆ ಹೆಣ್ಣನ್ನ ಜಾತಿ ಕೆಡಿಸಿದ್ದಲ್ಲದೇ ಅವಳನ್ನ ಹೆದರಿಸ್ತೀರಾ ?"

"ನನ್ನ ಲಂಚ ಕೇಳಿದ್ರಿ......ನಿಮಗೆ ಆಗದವರ ಮೇಲೆ ಚಾಡಿ ಹೇಳಿದ್ರಿ .....ಆ ದೇವರಂಥ ದೊರೆಗೆ ಮೋಸ ಮಾಡಿದ್ರಿ....." ಒಂದೊಂದೂ ನುಡಿಗಳು ಭರ್ಜಿಯ ಮೊನೆಯಂತೆ ಕಿವಿಗೆ ಬಂದು ಹೊಕ್ಕು ಕಿವಿಯಲ್ಲಿ ಸುತ್ತತೊಡಗಿದುವು. ಮಧ್ಯೆ ಮತ್ತೊಂದು ಮಾತು,

"ಮೇನೇಜರು ದೇವರಂಥ ಮನುಷ್ಯರು ಸಾರ್....ಇದೆಲ್ಲ ಸುಳ್ಳು.... ನಂಬಬೇಡಿ...." ವೆಂಕಟಪ್ಪನ ಆ ದೀನಮುಖದಿಂದ ಹೇಳಿದ ಶಬ್ದದಿಂದ ಅವನ ಬಗ್ಗೆ ಮರುಕ ಕೋಡಿಯೊಡೆದು ಹರಿದಿತ್ತು, ಶಾಂತಪ್ಪನ ಹೃದಯದಲ್ಲಿ.

ಶಾಂತಪ್ಪ ಗಣಿಯ ಗಂಭೀರ ವಾತಾವರಣಕ್ಕೆ ಕಾಲಿಟ್ಟಾಗ ಚನ್ನಯ್ಯ ಒಂದೆಡೆ, ಅವನನ್ನು ನೋಡದವನಂತೆಯೇ ನಿಂತಿದ್ದ. ಆಳುಗಳೆಲ್ಲರೂ ತಲೆ ತಗ್ಗಿಸಿಕೊಂಡಿದ್ದರು. ಹೆಂಗಸರೆಲ್ಲರೂ ಶಾಂತಪ್ಪನನ್ನೇ ನೋಡುತ್ತಿದ್ದವರು, ಅವನು ಅತ್ತ ತಿರುಗಿದಾಕ್ಷಣವೇ ತಲೆ ತಗ್ಗಿಸಿಕೊಂಡು ಅದಿರನ್ನೊಡೆಯತೊಡಗಿದರು. ಪಾರ್ವತಿ ಆ ದಿನ ಬಂದಿರಲಿಲ್ಲ. ಶಾಂತಪ್ಪ ಗಣಿಯತ್ತ ನೋಡಿದ.

ಗಣಿಯ ಒಂದು ಮೂಲೆಯಲ್ಲಿ ದೈತ್ಯಾಕಾರದ ಬಂಡೆಯೊಂದು ನಿಂತಿದ್ದಿತು. ಅದರ ಬಳಿಯಲ್ಲಿಯೇ ಉತ್ತಮ ದರ್ಜೆಯ ಅದಿರಿನ ಸೆಲೆ ಹಾದು ಹೋಗಿದ್ದಿತು. ಅಲ್ಲಿಯೇ ಕೆಲವರು ಕೆಲಸ ಮಾಡುತ್ತಿದ್ದರು. ಇನ್ನು ಒಂದೆರಡು ಟನ್ನು ಅದಿರನ್ನು ಅಲ್ಲಿಂದ ಹೊರಗೆಳೆದರೆ ಮೇಲಿದ್ದ ಬಂಡೆ ಕೆಳಗುರುಳಿ ಕೆಲಸಗಾರರನ್ನು ಪುಡಿಪುಡಿ ಮಾಡಿಬಿಡುವುದು ಸ್ಪಷ್ಟವಾಗಿತ್ತು. ಶಾಂತಪ್ಪ ತಕ್ಷಣ ಚನ್ನಯ್ಯನಿಗೆ ಹೇಳಿದ,

"ಅಲ್ಲಿ ಕೆಲಸ ನಿಲ್ಲಿಸಿಬಿಡು ಚನ್ನಯ್ಯ. ಮೇಲಿನ ಆ ಬಂಡೆ ಮೊದಲು ಉರುಳಿಸಿ ಆಮೇಲೆ ಕೆಳಗಿರೋ ಅದಿರು ತೆಗೆಸು."

"ಅದೇನೂ ಆಗೋಲ್ಲ ಸ್ವಾಮಿ. ಅಲ್ದೇ ಈಗ ಅಲ್ಲಿ ಕೆಲಸ ನಿಲ್ಸಿದರೆ ಒಳ್ಳೇ 'ಕಲ್ಲು' ಈ ವಾರ ಬೇರೆ ಎಲ್ಲೂ ಸಿಕ್ಕೋಹಾಗಿಲ್ಲ. ಆದ್ದರಿಂದ ಅಲ್ಲಿ ನಿಲ್ಲಿಸೋಕಾಗೋಲ್ಲ."

"ಹೇಳಿದಷ್ಟು ಕೇಳು ಚನ್ನಯ್ಯ. ಅಲ್ಲಿ ಕೂಲಿಯೋರು ಸತ್ತುಹೋದ್ರೆ ನಾಳೆ ನೀನು ಅವರಿಗೆ ಜೀವ ಕೊಡೋದಿಲ್ಲ" ಗಡುಸಾಗಿ ಹೇಳಿ ಶಾಂತಪ್ಪ ಅಲ್ಲಿ ನಿಲ್ಲದೇ ಹೊರಟುಹೋದ. ಅವನ ಹಿಂದೆಯೇ ಚನ್ನಯ್ಯನ ಸ್ವರ ಬಂದಿತು,

"ಸರಿ. ಅಲ್ಲಿ ಕೆಲಸ ನಿಲ್ಸಿ ಎಲ್ಲ ಈಚೆ ಕಡೆ ಬನ್ರೋ!"

* * *

ಮಧ್ಯಾಹ್ನ ಊಟಕ್ಕೆ ಆಳುಗಳನ್ನ ಬಿಟ್ಟಾಗ ಎರಡು ಗಂಟೆಯಾಗಿದ್ದಿತು. ಶಾಂತಪ್ಪ ಹೋಗಿ ದೂರದ ಮರವೊಂದರ ಬದಿಯಲ್ಲಿ ಕುಳಿತುಕೊಂಡ. ಸುತ್ತಲಿನಿಂದ ತಣ್ಣನೆಯ ಗಾಳಿ ಬೀಸಿಬರುತ್ತಿದ್ದಿತು. ಎತ್ತಲೂ ಕಾಣುತ್ತಿದ್ದ ಗುಡ್ಡಗಳಲ್ಲಿ ಬಿಸಿಲ್ಗುದುರೆಗಳ ಕುಣಿತ ತುಂಬಿದ್ದಿತು, ಒಂದೊಂದು ಗುಡ್ಡದ ಮೇಲೆ ಒಣಗಿದ ಹುಲ್ಲುಗಳು, ದನ ಕಾಯುವವರ ಬೀಡಿಯ ಬೆಂಕಿ ತಾಗಿದುದರಿಂದಲೋ ಏನೋ, ಹೊತ್ತಿಕೊಂಡು ಉರಿಯುತ್ತಿದ್ದುದರ ಹೊಗೆಯು ಮೇಲೆದ್ದು ಮುಗಿಲಿಗೆ ಹೋಗಿ ಬೆರೆಯುತ್ತಿದ್ದಿತು. ಇದನ್ನು ನೋಡುತ್ತ ನೋಡುತ್ತ ಶಾಂತಪ್ಪನಿಗೆ ನಿದ್ರೆ ಬಂದುಬಿಟ್ಟದ್ದಿತು. ಅವನಿಗೆಚ್ಚರವಾದುದು ಯಾರೋ ಕೂಗಿದಂತಾದಾಗಲೇ.

"ಸಾರ್.... ಸಾರ್...."

ಶಾಂತಪ್ಪ ಕಣ್ಣುಬಿಟ್ಟು ನೋಡಿದಾಗ ಎದುರಿಗೆ ನಿಂತಿದ್ದ ವೆಂಕಟಪ್ಪ ಕಾಣಿಸಿಕೊಂಡ.

"ಏನು ವೆಂಕಟಪ್ಪ? ಊಟ ಆಯ್ತೇನಪ್ಪ?"

"ಆಯ್ತು ಸಾರ್."

"ಈಗ ನೀರು ಸರಿಯಾಗಿ ಸಪ್ಲೈ ಆಗ್ತಿದೆಯೇ ಇಲ್ಲಿಗೆ?"

"ತಮ್ಮ ದಯದಿಂದ ಎಲ್ಲಾ ಆಗ್ತಿದೆ ಸಾರ್."

"ನನ್ನ ದಯವೇನು ಬಂತು. ಸಾವಕಾರ್ರ ದಯಾನ್ನು."

"ತಾವು ಇಷ್ಟೆಲ್ಲ ತಮ್ಮ ತಂದೆಯ ಅಂಗೆ ನೋಡಿಕೊಳ್ದಿದ್ರೆ ನಾವು ಕೂಲಿಯೋರೆಲ್ಲ ಇಲ್ಲ ಚನ್ನಯ್ಯನ ಕೈಲಿ ನತ್ತುಹೋಗ್ತಿದ್ವಿ ಸಾರ್."

"ಅದೆಲ್ಲ ಏನಿಲ್ಲಪ್ಪ. ಚನ್ನಯ್ಯನೂ ಒಳ್ಳೆಯೋನೇ."

"ಸಾರ್....ತಮಗೆ ಒಂದು ಮಾತುಯೇಳೋಕೆ ಬಂದೆ ಈಗ. ತಾವು ಇದೊಂದು ದಿನಾ ನಾನು ಹೇಳಿದ್ದಂಗೆ ಕೇಳಬೇಕು ಸಾರ್. ತಮ್ಮ ಕಾಲಿಗೆ ಬಿದ್ದು ಕೇಳಿಕೋತೀನಿ" ಎಂದು ಕೈಮುಗಿದ ವೆಂಕಟಪ್ಪ.

"ಏನಪ್ಪ ಅದು?"

"ಈವತ್ತು ನಿಮಗೆ ಚೆನ್ನಾಗಿ ಒಡೆಸಿ ಕೈ ಕಾಲು ಮುರೀಬೇಕೂಂತ ಮಾಡಿದಾನೆ ಸಾರ್ ಚನ್ನಯ್ಯ. ಇದಕ್ಕೆ ಸುಬ್ಬಣ್ಣ, ಮಾಣಿಕ್ಯಮ್ಮ್‌ರ ಸಪೋ

ಲ್ಯಾ ಇದೆಯಂತೆ. ತಾವು ಮಧ್ಯಾಹ್ನ ಅಲ್ಲೀಗೆ ಬಂದಾಗ ಏನಾದ್ರೂ ಮಾಡಿ ಜಗಳಾ ತೆಗೆದು ನಿಮಗೆ ಒಡೀಬೇಕೂಂತ ಮಾಡಿದಾರೆ ಸಾರ್!

ತಾವು ದಯವಿಟ್ಟು ಈಗ ಒಂಟ್ಹೋಗಿ ಸಾರ್. ನಾನು ಅಲ್ಲಿಂದ ನಿಮ್ಮ ಖಾನರನ್ನ ಈಗ ಕಳಿಸ್ತೀನಿ.

ನೀವು ಇಂಗಿಂದ್ಹಿಂಗೇ ಹೊಂಟೋಗಿ...."

"ಏನು! ಚನ್ನಯ್ಯ ನಂನ್ನೇ ಹೊಡೆಸುತಾನೆಯೇ? ಇರಲಿ ನೋಡ್ತೀನಿ ಹೇಗೆ ಹೊಡೆಸುತಾನೇಂತ. ಅಯೋಗ್ಯ ಇಲ್ಲೀವರೆಗೂ ಬಂದನೇನು. ಇರಲಿ ನೀನು ಹೋಗು".

"ನಾನು ಓಗ್ತೀನಿ ಸಾರ್. ತಾವು ಕಂಡಿತಾ ಇಲ್ಲಿರಬೇಡಿ. ತಮ್ಮ ಪಾದ ಮುಟ್ಟಿ ಕೇಳಿಕೋತೀನಿ," ಎಂದು ಅವನು ಶಾಂತಪ್ಪನ ಪಾದವನ್ನು ಹಿಡಿದು ಬಿಟ್ಟ.

"ಛೆ....ಛೆ....ಇದೆಲ್ಲ ಏನು ವೆಂಕಟಪ್ಪ ಕಾಲು ಬಿಡು....ಹಾಗೆಲ್ಲ ಕಾಲು ಮುಟ್ಟಬಾರದು...." ಎಂದು ವೆಂಕಟಪ್ಪನ ಕೈ ಬಿಡಿಸಿ ಶಾಂತಪ್ಪ ಎದ್ದು ನಿಂತ.

ಅಷ್ಟರಲ್ಲಿ ಶಿಲ್ಪಿ ಯೂದಿದ ಶಬ್ದ ಕೇಳಿಸಿತು. ಆಳುಗಳೆಲ್ಲ ಕೆಲಸಕ್ಕೆ ಹೊರಟರು.

"ನಾನು ಹೋಗ್ತೀನಿ ಸಾರ್. ತಾವು ದಯುವಿಟ್ಟು ಅಲ್ಲಿ ಬರಬೇಡಿ ಈಗ...." ಎಂದು ವೆಂಕಟಪ್ಪ ಹೊರಟು ಹೋದ.

ಒಂದು ನಿಮಿಷ ಹಾಗೆಯೇ ನಿಂತಿದ್ದ ಶಾಂತಪ್ಪನ ಮನಸ್ಸು ಹಿಂದೆ ಮುಂದೆ ತುಯ್ದಾಡಿತು. ಅವನ ಮನಸ್ಸಂದಿತು,

"ಹೀನ ಜನರಿಗೆ ಹೆದರಿ ಓಡಿ ಹೋಗುವುದೇ?"

ತಕ್ಷಣ ಹೃದಯುವೆಂದಿತು, "ಆದರೆ ಈ ದುಷ್ಟರ ಮುಂದೆ ಈಗ ಹೋಗಿ ಪೆಟ್ಟು ತಿಂದು ಬರುವುದು ಮೂರ್ಖತನದ ಕುರುಹು."

"ಅವರೇನು ಮಾಡಬಲ್ಲರು? ಆ ಅಯೋಗ್ಯರು!"

"ಅವರು ಅಯೋಗ್ಯರಾದರೂ ಸಹ ಈಗ ಅವರ ಸಂಖ್ಯೆಯೇ ಹೆಚ್ಚಿದೆ. ಅವರನ್ನು ಈಗ ಎದುರಿಸುವುದು ಒಬ್ಬಿಬ್ಬರಿಂದ ಹೇಗೆ ಸಾಧ್ಯ?"

"ಹಾಗಾದರೆ ಹೇಡಿಯ ಹಾಗೆ ಓಡಿಹೋಗುವುದೇ?"

"ನನಗೆ ಕೂಲಿಗಾರರ ಬೆಂಬಲವಿದೆ. ಅವರು ಚನ್ನಯ್ಯನ ಪರವಿರಲಾರರು."

"ಅದನ್ನು ನಂಬುವುದು ಹೇಗೆ?........ಅವರಿಗೆ ಹೆಂಡ ಕುಡಿಯಲು ಚೆನ್ನಾಗಿ ಹಣ ಕೊಟ್ಟು ತನ್ನ ಕಡೆ ಒಲಿಸಿಕೊಂಡಿರಬಹುದು ಅವನು."

"ಹಾಗಾದರೆ ಓಡಿಹೋಗುವುದು ಹೇಡಿತನವಲ್ಲವೆ? ತಾನು ಈ ಗಣಿಯ ಮೇನೇಜರನಾಗಿ ಕಂಟ್ರಾಕ್ಟರೊಬ್ಬನಿಗೆ ಹೆದರಿ ಓಡುವುದೇ ?"

"ತನ್ನ ಶಕ್ತಿ ತೋರಿಸುವುದು ಈಗಲ್ಲ. ಅದಕ್ಕೆ ಬೇರೆ ರೀತಿಯಿದೆ, ಬೇರೆ ತಾಣವಿದೆ."

"ಹಾಗಾದರೆ....ಹಾಗಾದರೆ....ಏನು ಮಾಡುವುದು ?"

"ಹೊರಟುಹೋಗುವುದು....ಹೊರಟುಹೋಗಿ ಚನ್ನಯ್ಯನಿಗೆ ನಿರಾಶೆಗೊಳಿಸುವುದು."

ಅಷ್ಟರಲ್ಲಿ ಖಾನನು ಆತುರಾತುರವಾಗಿ ಬರುತ್ತಿರುವುದು ಕಾಣಿಸಿತು ಶಾಂತಪ್ಪನಿಗೆ. ಅವನು ಹತ್ತಿರ ಬಂದವನೇ ಹೇಳಿದ,

"ಸಾರ್........ನಾವು ಈಗ ಹೊಂಟ್ಹೋಗೋಣ ಸಾರ್........ಈಗ ಹೊಂಟ್ಹೋಗಿ ಸಂಜೆ ಊರಿಗೆ ಬಂದ ಚನ್ನಯ್ಯನ ಚಮ್ಡಾ ಸುಲಿಯೋಣ ಸಾರ್. ಬೇಕೂಫರು, ಹರಾಮರು, ನಮ್ಕಾಕ್‌ಹರಾಮರು!........" ಎಂದು ಖಾನನು ಶಬ್ದಾವಳಿಗಳನ್ನು ಪ್ರಾರಂಭಿಸಿದುದನ್ನು ನೋಡಿ ಶಾಂತಪ್ಪನಿಗೆ ನಗೆ ಬಂದಿತು.

"ಯಾಕೋ....ಯಾಕೋ....ಹಾಗೆ ರೇಗ್ತಿದಿ ?"

"ಸಾರ್, ನಾವು ಒಂದು ನಿಮ್ಷಾನೂ ಇಲ್ಲಿರೋದು ಬೇಡ. ಇನ್ನು ನಾವು ಗಣೀಗೆ ವಾಪಸು ಹೋದ್ರೆ ನಮ್ದು ಜಾನ್ ನಿಕಾಲ್ ಮಾಡಿಸಿ ಬಿಡ್ತಾನೆ ಸಾರ್ ಅವ್ನು. ನಂಗೆ ವೆಂಕಟಪ್ಪನ್ ಜೋಗೂ ಹೇಳಿದ್ನು........ ಇನ್ನೂ ಒಂದಿಬ್ಬರು ಹೇಳಿದ್ರು !"

"ನಿನ್ನ ಭಾಷೆ ಇವತ್ತು ಜೋರಾಗಿದೆಯಲ್ಲೋ ?"

"ತಾವು ತಮಾಷೆ ಮಾಡ್ಬೇಡಿ ಸಾರ್....ಬನ್ನಿ ಹಿಂಗೆ ಹೊಂಟ್ಹೋಗೋಣ. ಸಂಜೇಗೆ ಅವನ್ನ ನೋಡ್ಕೋತೀನಿ ನಾನು........" ಎಂದು ಖಾನ ಅಲ್ಲಿಂದ ಹೊರಟೇಬಿಟ್ಟ.

ಶಾಂತಪ್ಪನಿಗೆ ಏನು ಮಾಡಲೂ ತೋರಲಿಲ್ಲ. ಅವನೂ ಖಾನನೊಡನೆ ನಿಧಾನವಾಗಿ ಹೆಜ್ಜೆಯಿಟ್ಟ.

*   *   *   *

ಅವರು ಒಂದು ಮೈಲಿ ದೂರ ಹೋಗಿದ್ದರು. ಅಷ್ಟರಲ್ಲಿಯೇ ಅವರ ಹಿಂದೆ ಹುಡುಗನೊಬ್ಬನು ಓಡೋಡಿ ಬರುತ್ತಿದ್ದ. ಅವನು ಏನನ್ನೋ ಕೂಗಿ ಹೇಳುತ್ತಿದ್ದರೂ ಆ ಕೂಗು ಸ್ಪಷ್ಟವಾಗಿ ಕೇಳುತ್ತಿರಲಿಲ್ಲ. ಆದರೆ ಶಾಂತಪ್ಪ ಆ ಕೂಗು ಕೇಳಿ ಗಕ್ಕನೆ ನಿಂತುಕೊಂಡ. ಆ ಹುಡುಗ ಹತ್ತಿರ ಬಂದು ಏದುತ್ತಾ ಹೇಳಿದ,

"ಸಾರ್....ವೆಂಕಟಪ್ಪ ಸತ್ತುಹೋದ !"

"ಆ.....ಸತ್ತುಹೋದನೆ........ಹೇಗೆ?" ಸ್ತಂಭೀಭೂತನಾದವನಂತೆ ನಿಂತು ಕೇಳಿದ ಶಾಂತಪ್ಪ.

"ಏಯ್.....ನಿಜ ಹೇಳ್ತಿದೀಯೋ........ಅಥ್ವ ಹಿಂಗೆ ಹೇಳಿ ನಮ್ಮನ್ನ ವಾಪ್ಸು ಕರ್ಕೊಂಡ್ಪರೋಕೆ ಚನ್ನಯ್ಯ ಕಳ್ಸಿದಾನೋ?" ಖಾನ್ ಕೇಳಿದ.

"ಇಲ್ಲ ಸಾರ್....ಸತ್ಯವಾಗ್ಲೂ ಹೇಳ್ತೀನಿ.....ಅವನು ಆ ಬಂಡೇ ಕೆಳಕ್ಕೆ ಕೆಲಸ ಮಾಡೋಕೆ ಹೋದ, ಆ ಬಂಡೆ ಅವನ ಮೇಲೆ ಉರುಳಿಕೊಂಡ್ತು. ಅವನು ಸತ್ಹೋದ........" ಏದುತ್ತಾ ಹೇಳಿದ ಹುಡುಗನ ಮಾತಿನಲ್ಲಿ ನಂಬಿಕೆ ಬಂದ ಶಾಂತಪ್ಪ ಸರಸರನೆ ಮುಂದೆ ಹೊರಟ. ಅವನ ಹಿಂದೆಯೇ ಖಾನನೂ ನಡೆದ.

ಅವರು ಗಣಿಯ ಬಳಿ ಬಂದಾಗ ಮಣ್ಣು ರಾಶಿಯ ಮೇಲೆ, ಗುಡ್ಡದ ಮೇಲೆ ಸಾಲಾಗಿ ನಿಂತಿದ್ದ ಕೂಲಿಗಾರರ ಸಾಲು ಕಾಣಿಸಿತು. ಗಣಿಯಲ್ಲಿ ಗಾಳಿ ಬೀಸುವ ಶಬ್ದವುಳಿದು ಬೇರಾವುದೂ ಕೇಳಿಬರುತ್ತಿರಲಿಲ್ಲ. ಆ ಸ್ಮಶಾನ ಮೌನವೇ ತಿಳಿಸುತ್ತಿದ್ದಿತು, ಸಾವಿನ ಸಂದೇಶವನ್ನು.

ಶಾಂತಪ್ಪ ಗಣಿಯೊಳಗೆ ಕಾಲಿಟ್ಟಾಗ ಆ ಮೌನ ಇನ್ನೂ ರುದ್ರವಾಯಿತು. ಅವನು ಆ ಕುಣಿಯಲ್ಲಿಳಿದು ಹೋದಾಗ ಎದುರಿನಲ್ಲಿ ಆ ದೈತ್ಯಾಕಾರದ ಬಂಡೆ ಕೆಳಗುರುಳಿ ಬಿದ್ದಿದ್ದಿತು. ಅದರ ಕೆಳಗೆ ವೆಂಕಟಪ್ಪನ ದೇಹ ಸಿಕ್ಕಿಕೊಂಡಿದ್ದಿತು. ಅವನ ಕೈಯೊಂದು ಬಂಡೆಯಿಂದ ಹೊರ ಚಾಚಿಕೊಂಡಿದ್ದಿತು. ಅರ್ಧ ತಲೆ, ಒಂದು ಕಣ್ಣು ಹೊರ ಕಾಣುತ್ತಿದ್ದುವು. ಉಳಿದ ದೇಹಭಾಗವೆಲ್ಲವೂ ಬಂಡೆಯ ಬದಿಯಲ್ಲಿ ಸೇರಿಹೋಗಿದ್ದಿತು. ಸುತ್ತಲೂ ರಕ್ತವು ಮಡುವಿನಂತೆ ನಿಂತಿದ್ದಿತು. ದೂರದಲ್ಲಿ ಪಿಕಾಸಿಯೊಂದು ಬಿದ್ದಿತ್ತು.

ಶಾಂತಪ್ಪ ಹತ್ತಿರ ಹೋಗಿ ನಿಂತು ನೋಡಿದ. ಅದೇ ಕೈ, ಅದೇ ತಲೆ, ಅದೇ ಕಣ್ಣು....ಅವೇ ಶಬ್ದಗಳು ಪುನಃ ಕೇಳಿಬಂದವು........ "ಸಾರ್ ತಮ

ಪಾದ ಮುಟ್ಟಿ ಕೇಳಿಕೋತೀನಿ...." ದುಃಖ ತಡೆಯಲಾರದೇ ಶಾಂತಪ್ಪ ಕಣ್ಣೊರಸಿಕೊಂಡ. ಅದನ್ನು ನೋಡಿ ಹಲವರ ಕಣ್ಣುಗಳೂ ಒದ್ದೆಯಾದುವು. ಅವನ ತೇವವಾದ ಕಣ್ಣ ಮುಂದೆಯೇ ಇದ್ದಕ್ಕಿದ್ದಂತೆ ವೆಂಕಟಪ್ಪ ಬಂಡೆಯನ್ನು ಸರಿಸಿ ಹೊರಬಂದು ನಿಂತು ಹೇಳಿದ,

"ಸಾರ್......ತಮ್ಮ ಮೇಲಿನ ದ್ವೇಷ ನನ್ನ ಮೇಲೆ ಬಂತು ಸಾರ್....!"

"ಹೇಗೆ ?"

"ನನ್ನ ಇಲ್ಲಿ ಕೆಲಸ ಮಾಡೋಕೆ ಕಳಿಸಿದ ಚನ್ನಯ್ಯ. ನಾನು ಸಾಯ್ತೀನೀಂತ ಅವನಿಗೆ ಗೊತ್ತಿತ್ತು. ನಾನು ಸಾಯಲೀಂತಲೇ ಅವನು ಇಲ್ಲಿ ನನ್ನ ಕೆಲಸಕ್ಕೆ ಹಾಕಿದ...." ಎಂದವನೇ ಪುನಃ ಹೋಗಿ ಬಂಡೆಯ ಅಡಿಯಲ್ಲಿ ಬಿದ್ದುಕೊಂಡ. ಅವನ ಛಿದ್ರವಾದ ಮೈಯಿಂದ ಬಿಸಿ ರಕ್ತ ಬಸಿಯತೊಡಗಿತು.

ಶಾಂತಪ್ಪ ಕಣ್ಣುಜ್ಜಿಕೊಂಡು ಪುನಃ ನೋಡಿದ. ಅದೇ ರಕ್ತಗೆಂಪು ಬಸಿಯುತ್ತಿತ್ತು. ರಕ್ತ ಹೆಚ್ಚಿ ಕೋಡಿ ಹರಿಯಿತು. ಅದು ಅಲ್ಲೆಲ್ಲಾ ತುಂಬಿಕೊಂಡಿತು ಹಾಗೆಯೇ ಎಲ್ಲೆಲ್ಲಿಯೂ ತುಂಬಿಕೊಂಡಿತು. ಕೆಂಪು....ರಕ್ತಗೆಂಪು....ಎಲ್ಲೆಲ್ಲಿಯೂ ರಕ್ತಗೆಂಪು........ಎಷ್ಟು ತಡೆದರೂ ಅದೇ ಕೆಂಪು ಎಲ್ಲೆಲ್ಲಿಯೂ !....ಅಷ್ಟರಲ್ಲಿಯೇ ಆರ್ತನಾದವೊಂದು,

"ಅಯ್ಯೋ ಬುದ್ಧೀ....ನಾವು ಹಾಳಾಗಿಹೋದೆವು...."

ಶಾಂತಪ್ಪ ಪುನಃ ಕಣ್ಣು ಹೊಸಕಿಕೊಂಡು ನೋಡಿದ. ವೆಂಕಟಪ್ಪನ ಹೆಂಡತಿ ಎದೆ ಎದೆ ಹೊಡೆದುಕೊಂಡು ಅಳುತ್ತಿದ್ದಳು.

"ಅಯ್ಯೋ....ನಮ್ಮ ಗತಿಯೇನು....ನಾನು ಈ ಮಕ್ಳು....ಅಯ್ಯೋ ....ಬುದ್ಧೀ" ಆಳುಗಳು ಕೆಲವರು ಅವಳು ಶಾಂತಪ್ಪನ ಬಳಿಗೆ ಬರದಂತೆ ಅವಳನ್ನು ಅಡ್ಡಗಟ್ಟುತ್ತಿದ್ದರು. ಶಾಂತಪ್ಪ ಅವಳನ್ನು ಬಿಟ್ಟುಬಿಡುವಂತೆ ಹೇಳಿದ. ಆಗಲೇ ಅವನಿಗೆ, ಅವಳನ್ನು ಹಾಗೆ ಅಡ್ಡಗಟುತ್ತಿದ್ದವರ ನಡುವೆ ಚನ್ನಯ್ಯನಿದ್ದುದ್ದು ಕಾಣಿಸಿದುದು. ಚನ್ನಯ್ಯನ ಆ ಮುಖದ ಮೇಲೆ ಒಂದೇ ಒಂದು ಕ್ಷಣ ಯಾವುದೋ ಒಂದು ವಿಕಾರದ ಗೆರೆ ಮೂಡಿ ಮಾಯವಾದುದನ್ನೂ ಅನಂತರ ಅವನು ತಕ್ಷಣ ತೋರಿದ ಕೃತ್ರಿಮ ಮುಖವಾಡವನ್ನು ಶಾಂತಪ್ಪ ಗಮನಿಸಿದ. ಅವನನ್ನು ಹತ್ತಿರ ಕರೆದು ಶಾಂತಪ್ಪ ಕೇಳಿದ,

"ಯಾಕೆ ಹೀಗಾಯ್ತು ?"

"ಅವನೇ ಬೇಕೂಂತ ಇಲ್ಲಿ ಕೆಲಸ ಮಾಡೋಕೆ ಹೋದ ಸಾರ್.

ನಾನು ಎಷ್ಟು ಬೇಡವೆಂದರೂ ಕೇಳಲಿಲ್ಲ. ಇಲ್ಲಿ ಒಳ್ಳೆ ಕಲ್ಲು ಸಿಕ್ಕುತ್ತೆ ತೆಗೀತೀನೀಂತ ಹೇಳಿಹೋದ. ಅವನು ಪಿಕಾಸೀಲಿ ಹತ್ತಾರು ಪೆಟ್ಟು ಹಾಕಿದಾಗ ಮೇಲಿಂದ ಈ ಬಂಡೆ ಉರುಳಿಕೊಂಡುಬಿತ್ತು.

"ಹಾಗಾದರೆ ನೀನು ಅವನನ್ನು ಇಲ್ಲಿ ಕೆಲಸಕ್ಕೆ ಬಿಡಲಿಲ್ಲ ?"

"ಪ್ರಮಾಣವಾಗಿ ಇಲ್ಲ ಸಾರ್....ಈಶ್ವರ ಸಾಕ್ಷಿಯಾಗಿ ಇಲ್ಲ ಸಾರ್....'

"ಹೋಗ್ಲಿ....ಈಗ ಮುಂದೇನು ಮಾಡಬೇಕೂಂತ ಹೇಳು" ಶಾಂತಪ್ಪನಿಗೆ ಅವನೊಂದಿಗೆ ಹೆಚ್ಚು ಮಾತನಾಡಲು ಇಚ್ಛೆಯಿರಲಿಲ್ಲ.

"ತಾವೇ ಹೇಗೆ ತಿಳಿದರೆ ಹಾಗೆ ಮಾಡಿ ಸಾರ್. ತಾವು ಹೇಳಿದಂತೆ ನಾವು ಕೇಳ್ತೀವಿ !

"ಇದು ನೀನೇ ಮಾಡಿದ ಕೆಲಸಾಂತ ಗೊತ್ತಾದ್ರೆ ನಿನ್ನ ಗತಿ ಏನಾಗುತ್ತೆ ಗೊತ್ತ ?" ಶಾಂತಪ್ಪ ಚನ್ನಯ್ಯನನ್ನು ಒಮ್ಮೆ ಕ್ರೂರವಾಗಿ ನೋಡಿ ಎದುರಿನಲ್ಲಿ ಬಿದ್ದಿದ್ದ ಹೆಣವನ್ನು ತೋರಿದ.

ಚನ್ನಯ್ಯ ಆ ಹೆಣವನ್ನು ಪುನಃ ನೋಡಿದ. ಗಣಿಯ ಒಣಮಣ್ಣು ರಕ್ತದೊಡನೆ ಕಲಸಿಕೊಂಡಿದ್ದಿತು. ಅಲ್ಲಿದ್ದ ಹೊಳೆಯುವ ಅದಿರೆಲ್ಲವೂ ರಕ್ತದಿಂದ ತೊಯ್ದು ದ್ದಿತು. ಹೆಣದ ಹಣೆಯೊಡೆದು ರಕ್ತ ಹೊರಚೆಲ್ಲಿತ್ತು. ಕಣ್ಣಿನ ಒಂದು ಭಾಗಕ್ಕೆ ಪೆಟ್ಟು ತಗುಲಿ ಕಣ್ಣಗುಡ್ಡೆ ಒಡೆದುಹೋಗಿ, ಕುಣಿಕೆಯ ಒಳಗೆಂಪು ಭಯಂಕರವಾಗಿ ಕಾಣುತ್ತಿದ್ದಿತು. ಒಂದು ಕೈ ಹೊರಬಿದ್ದುದು ಜಜ್ಜಿಹೋಗಿ, ಮಾಂಸಖಂಡಗಳೆಲ್ಲವೂ ಹೊರಗೆ ಇಣುಕುತ್ತಿದ್ದುದರ ಜೊತೆಗೆ ಮೂಳೆಯ ಬಿಳಿ ಚೂರೊಂದು ಹೊರಗೆ ಕಾಣುತ್ತಿದ್ದಿತು. ಹೆಣದ ಆ ಮುಖ !

ಚನ್ನಯ್ಯನಿಗೆ ಒಮ್ಮೆಗೇ ಛಳಿಯು ಮೈಹೊಕ್ಕಂತಾಗಿ ಅವನು ನಡುಗುವಂತಾಯಿತು. ಅದೇ ಕಂಪಿತ ಸ್ವರದಲ್ಲಿ ಹೇಳಿದ,

"ನನ್ನದು ತಪ್ಪಿಲ್ಲ ಸಾರ್....ಈಶ್ವರ...."

"ಸಾಕು ನಿನ್ನ ಆಣೆ ಪ್ರಮಾಣಗಳು. ಈಗೇನು ಮಾಡೋದೂಂತ ಹೇಳು."

"ತಮಗೆ ತೋರಿದಂತೆ ಮಾಡಿ ಸಾರ್."

ಶಾಂತಪ್ಪ ಒಂದು ನಿಮಿಷ ಯೋಚಿಸಿದ. ಅವನಿಗೆ ಇದು ಹೊಸ ಅನುಭವ. ಮಾಡುವುದೇನೆಂಬುದೇ ತಿಳಿಯಲಿಲ್ಲ. ಆದರೆ ತಕ್ಷಣ ಜೇಬಿನಿಂದ ಒಂದು ಕಾಗದದ ಚೂರೊಂದನ್ನು ತೆಗೆದು ಬೆಂಗಳೂರಿನ ಸಾಹುಕಾರರಿಗೆ

ತಂತೀ ವರ್ತಮಾನವನ್ನು ಬರೆದು ತಕ್ಷಣ ರಾಮಪುರಕ್ಕೆ ಹೋಗಿ ಕೊಟ್ಟು ಬರುವಂತೆ ಆಳೊಬ್ಬನನ್ನು ಕಳುಹಿಸಿದ.

ಅನಂತರ ಬಂಡೆಯನ್ನು ಸರಿಸಿ ದೇಹವನ್ನು ಹೊರತೆಗೆಯುವಂತೆ ತಿಳಿಸಿದ. ಐದಾರು ಜನರು ಮುಂದೆ ಬಂದರು. ಸುತ್ತಲೂ ರುದ್ರಮೌನ ನೆಲಸಿತ್ತು. ನೂರಾರು ಜೊತೆ ಕಂಗಳು ಭಯ ಕುತೂಹಲಗಳಿಂದ ಇತ್ತಲೇ ನೋಡತೊಡಗಿದುವು.

ಆ ಬಂಡೆಯನ್ನು ಉರುಳಿಸುವುದು ಆ ಐದಾರು ಜನರಿಂದ ಸಾಧ್ಯವಾಗಲಿಲ್ಲ. ಹತ್ತಾರು ಜನರು ಸೇರಿ ಅದನ್ನು ಸರಿಸುವಾಗ ದೇಹದಿಂದ ಮತ್ತಷ್ಟು ರಕ್ತ ಚೆಲ್ಲಿಕೊಂಡಿತು. ನಾಲ್ಕಾರು ಜನ ಅದರ ಕೈಕಾಲುಗಳನ್ನು ತುಳಿದರು. ಕೊನೆಗೆ ಬಂಡೆ ಅತ್ತ ಉರುಳಿದಾಗ ಆ ದೃಶ್ಯವನ್ನು ನೋಡಲಾರದೇ ಎಲ್ಲರೂ ಹೆದರಿ ದೂರ ಸರಿದರು.

ಎದೆಯ ಮೇಲೆ ಬಂಡೆ ಬಿದ್ದುದರಿಂದ ಎದೆಯ ಎಲುಬುಗಳು ಬುಟ್ಟಿಯ ಕಡ್ಡಿಗಳಂತೆ ಮುರಿದಿದ್ದುವು. ಬಲ ತೊಡೆ ಜಜ್ಜಿಹೋಗಿ ಅರ್ಧ ಭಾಗ ದೇಹದಿಂದ ಕತ್ತರಿಸಿದ್ದಿತು. ಆ ವೃದ್ಧ ದೇಹ ಲಾರಿಯ ಅಡಿಯಲ್ಲಿ ಸಿಕ್ಕಿಕೊಂಡ ಬಾಳೆಹಣ್ಣಿನಂತಾಗಿದ್ದಿತು.

"ಅಯ್ಯೋ ದೇವರೇ...." ವೆಂಕಟಪ್ಪನ ಹೆಂಡತಿ ಓಡಿ ಬಂದು ಆ ವಿರೂಪವಾದ ಹೆಣದ ಮೇಲೆ ಬಿದ್ದು ಗೋಳಾಡತೊಡಗಿದಳು. ಆ ಸಂಕಟವನ್ನು ನೋಡಲಾರದ ಶಾಂತಪ್ಪ ದೂರ ಹೊರಟುಹೋದ.

ಎಲ್ಲರೂ ಸೇರಿ ಚರ್ಚಿಸಿದನಂತರ, ಹೆಣವನ್ನು ಊರಿಗೆ ಸಾಗಿಸಿಬಿಡಬೇಕೆಂದು ನಿರ್ಧರಿಸಿದರು. ನೀರಿನ ಬಾನಿಯನ್ನು ತುಂಬಿ ತಂದಿದ್ದ ಗಾಡಿಯಲ್ಲಿ ಹೆಣವನ್ನು ಸಾಗಿಸುವ ಏರ್ಪಾಟು ಮಾಡಿದರು.

ಆ ಹೆಣದ ಮೆರವಣಿಗೆ ಗಣಿಯಿಂದ ಊರಿಗೆ ನಡೆಯಿತು. ಆದರೆ ಊರ ಬಾಗಿಲಿನಲ್ಲಿಯೇ ಪಟೇಲರು ಮತ್ತಿತರರು ಅವರನ್ನು ತಡೆದು, ಹೆಣವನ್ನು ಊರೊಳಗೆ ತರಲು ಬಿಡುವುದಿಲ್ಲವೆಂದೂ, ದೇವರು ಇರೋ ಊರಿನಲ್ಲಿ ಹೆಣವನ್ನು ತರುವುದು ಅಮಂಗಳಕರವೆಂದು ಹೇಳಿದರು. ಈಗಾಗಲೇ ಊರಿನಲ್ಲಿ ಹಲವಾರು ಜನ ರೋಗದಿಂದ ಸತ್ತಿದ್ದಾರೆ, ಈ ಅಮಂಗಳಕರ ಕೆಲಸದಿಂದ ಊರೇ ನಾಶವಾದೀತು !

ಊರಾಚೆ ಮಂಟಪವೊಂದರ ಬಳಿ ಹೆಣದ ಗಾಡಿ ನಿಂತಿತು. ಆ

ವೇಳೆಗೆ ಸಂಜೆಯಾಗುತ್ತಿದ್ದುದರಿಂದ ಎಲ್ಲ ಕೂಲಿಗಾರರೂ ತಮ್ಮ ಮನೆಗಳಿಗೆ ಹೊರಟುಹೋದರು. ವೆಂಕಟಪ್ಪನ ಹೆಂಡತಿ ಮತ್ತು ಖಾನ್, ಹೆಣದ ಬಳಿ ಉಳಿದಿದ್ದರಷ್ಟೆ.

ಬಿಡಾರಕ್ಕೆ ಹೋದ ಶಾಂತಪ್ಪ ಕುರ್ಚಿಯ ಮೇಲೆ ಕುಳಿತುಬಿಟ್ಟ. ಅವನಿಗೆ ಈ ಹೊಸ ಅನುಭವವೊಂದು ಭಾರವಾಗಿ ಹೃದಯದಲ್ಲಿ ಸೇರಿಕೊಂಡಿತ್ತು. ಅವನೂ ಬೆಂಗಳೂರಿನಲ್ಲಿ ಅನೇಕ ಸಾವನ್ನು ಕಂಡಿದ್ದ. ಹಲವು ಅಪಘಾತಗಳನ್ನು ಕೇಳಿದ್ದ ಮನೆಗಳ ಮಾಳಿಗೆಯ ಮೇಲೆ ನೇಣು ಹಾಕಿಕೊಂಡು ಸತ್ತವರ ದೇಹ ತೂಗುತ್ತಿದ್ದುದನ್ನೂ ಕಂಡಿದ್ದ. ಆದರೆ ನಗರದ ಯಾಂತ್ರಿಕ ಜೀವನ ಅವನನ್ನು ಈ ಘಟನೆಗಳತ್ತ ಮನಸ್ಸುಗೊಡಿಸದೇ ಮುಂದೆ ದೂಡಿತ್ತು. ಆದರೆ ಈ ಸಾವು ?....ಇದು ಅವನನ್ನು ಸೆರೆ ಹಿಡಿದಿತ್ತು.

ಅಷ್ಟರಲ್ಲಿಯೇ ಕಾರು ಬಂದ ಶಬ್ದ ಕೇಳಿಬಂದಿತು. ಶಾಂತಪ್ಪ ಎದ್ದು ಹೊರನಡೆದ. ಬಾಗಿಲಿನಲ್ಲಿ ಕಾರು ಬಂದು ನಿಂತಿತು. ಕಾರಿನಿಂದ ಗೋಪಾಲಯ್ಯ, ಸುಬ್ಬಣ್ಣ ಇಳಿದರು. ಸಾಹುಕಾರರು ಬಂದಿರಲಿಲ್ಲ. ಸುಬ್ಬಣ್ಣ ಪತ್ರವೊಂದನ್ನು ಶಾಂತಪ್ಪನ ಕೈಗಿತ್ತು ಒಳನಡೆದ. ಶಾಂತಪ್ಪ ತಕ್ಷಣ ಪತ್ರವನ್ನೊಡೆದು ಪುನಃ ಪುನಃ ಓದಿದ. ಅವನ ಉದ್ವಿಗ್ನಮನಕ್ಕೆ ಆ ಪತ್ರದ ಅರ್ಥವಾಗಲೇ ಇಲ್ಲ. ಮನೆಗೊಮ್ಮೆ ನಿಧಾನವಾಗಿ ಓದಿಕೊಂಡ—

"ನನಗೆ ಈ ದಿನ ಇಲ್ಲಿ ಕೆಲಸವಿರುವುದರಿಂದ ಬರಲಾಗುವುದಿಲ್ಲ. ನಾಳೆ ಬರುತ್ತೇನೆ. ನೀವು ಆ ಹೆಣದ ಅಂತ್ಯಕ್ರಿಯೆ ನಡೆಸಲು ಏರ್ಪಡಿಸಿ. ಸತ್ತವನ ಹೆಂಡತಿಯ ಹತ್ತಿರ ಅಂತ್ಯಕ್ರಿಯೆಗೆ ಹಣವಿಲ್ಲದಿದ್ದರೆ ಹತ್ತು ರೂಪಾಯಿಗಳನ್ನು ಕೊಟ್ಟರಿ...."

"ಇದೇನು ಸಾಹುಕಾರರ ಪತ್ರವೇ ?....ಅಥವಾ ಬೇರೆ ಯಾರಾದರೂ ಹಾಗೆ ಹೇಳಿ ಬರೆಸಿದರೋ....ಇವರಿಗೇನು ಸಾವೆಂದರೆ ಸಾಮಾನ್ಯ ಸಂಗತಿಯೆ ....ಸಾಹುಕಾರರೇ ಇದನ್ನು ಬರೆದಿರಲಾರರು. ಶಾಂತಪ್ಪ ಅದೇ ಉದ್ವಿಗ್ನಾವಸ್ಥೆಯಲ್ಲಿ ಒಳನಡೆದು ಸುಬ್ಬಣ್ಣನನ್ನು ಕೇಳಿದ,

"ಈಗೇನು ಮಾಡೋದು ಸುಬ್ಬಣ್ಣನೋರೇ....ಸಾಹುಕಾರ್ರು ಹೀಗೆ ಬರೆದುಬಿಟ್ಟಿದಾರಲ್ಲ."

"ಅಯ್ಯೋ....ನೀವೇಕೆ ಇಷ್ಟು ಘಾಬರಿಯಾಗ್ತೀರಿ ಸಾರ್. ಗಣೇಲಿ ಒಬ್ಬ ಕೂಲಿಯೋನು ಸತ್ತರೆ ಹೀಗೇಕೆ ಭಯಬೀಳ್ತೀರಿ ?" ಸುಬ್ಬಣ್ಣನ ಮಾತೂ ಆಶ್ಚರ್ಯಕರವಾಗಿತ್ತು.

"ಪಾಪ........ನಿಮಗೆ ಅನುಭವ ಸಾಲದು. ಗಣೇಲಿ ಇಂಥ ಸಾವು ಆಗ್ತಲೇ ಇರುತ್ತೆ. ಈಗಾಗಲೇ ಇಲ್ಲಿ ಎಂಟು ಹತ್ತು ಸಾವಾಗಿದೆ!....ಹೋಗಿ ಹೆಣ ಎಲ್ಲಿದೆ ಹೇಳಿ?" ಸುಬ್ಬಣ್ಣನ ಆ ಮಾತು ಕೇಳಿ ಶಾಂತಪ್ಪ ಹುಚ್ಚನಂತೆ ಗೋಪಾಲಯ್ಯನ ಮುಖ ನೋಡಿದ. ಗೋಪಾಲಯ್ಯನನ್ನು ಅದುವರೆಗೂ ಅವನು ಮಾತನಾಡಿಸಿಯೇ ಇರಲಿಲ್ಲ. ಗೋಪಾಲಯ್ಯನೂ ನಗುತ್ತಾ ಅವನ ಮುಖ ನೋಡುತ್ತಿದ್ದ.

"ಹೋಗ್ಲಿ ಚನ್ನಯ್ಯನ್ನ ಕರೆದು ಅವನ ಕೈಗೆ ಎಂಟು ಹತ್ತು ರೂಪಾಯಿ ಹಾಕಿಬಿಡಿ. ಹೆಣಾನ ಎಲ್ಲಾದರೂ ಹೂಳಿಸಿಬಿಡ್ತಾನೆ" ಎಂದ ಸುಬ್ಬಣ್ಣ. ಆದರೆ ಅಷ್ಟರಲ್ಲಿಯೇ ಬಂದು ಅಲ್ಲಿ ನಿಂತಿದ್ದ ಚನ್ನಯ್ಯನೆಂದ,

"ನಾನು ವಿಚಾರಿಸಿದೆ ಸ್ವಾರ್. ಈಗ ಯಾರೂ ಬರೋರಿಲ್ಲ. ಊರಾಚೆ ಮಾದಿಗರಪಾಳ್ಯಕ್ಕೆ ಹೇಳಿಕಳಿಸಿದೀನಿ ಯಾವೋನಾದರೂ ಬಂದರೆ ಸರಿ ಇಲ್ದಿದ್ರೆ ದೂರ ತಗೊಂಡುಹೋಗಿ ಯಾವುದಾದರೂ ಮರದ ಹತ್ರ ಎಸೆದು ಬಿಡೋಕೆ ಏರ್ಪಾಟು ಮಾಡ್ತೀನಿ."

ಈ ಮಾತು ಕೇಳಿ ಶಾಂತಪ್ಪನಿಗೆ ಸಂಕಟವಾಯಿತು. ಆದರೆ ಸುಬ್ಬಣ್ಣನೆಂದ,

"ಭೇಷ್!.....ಅಷ್ಟಾದರೂ ಮಾಡಿಸು ಸಧ್ಯ. ಬೇಗ ಮುಗಿದರೆ ಸಾಕು. ನಾಳೆ ಸಾವಕಾರ್ರು ಬಂದಾಗ ಈ ತರಲೆ ಯಾವುದೂ ಉಳಿದಿರದಿದ್ರೆ ಆಯಿತು."

ಆದರೆ ಶಾಂತಪ್ಪನಿಗೆ ತಡೆಯಲಾಗಲಿಲ್ಲ. ಅವನೆಂದ,

"ಎಸಿಯೋದು ಬೇಡ ಚನ್ನಯ್ಯ. ಹತ್ತು ರೂಪಾಯಿ ಖರ್ಚಾದರೂ ಚಿಂತೆಯಿಲ್ಲ. ಹೂಳಿಸಿಬಿಡು. ಪಾಪ....ಕಾಡಿನ ಹೆಣವಾಗೋದು ಬೇಡ!"

"ಹೋಗ್ಲಿ ಕೆರೆ ನೀರು ಹೇಗಿದ್ರೂ ಒಣಗಿದೆ. ಅಲ್ಲಿ ನೆಲ ಮೆತ್ತಗಿರುತ್ತೆ. ಮೇಲೆ ಸ್ವಲ್ಪ ಕೆರೆದರೇ ಸಾಕು, ಗುಂಡಿಯಾಗುತ್ತೆ. ಅಲ್ಲೇ ಹೂತುಬಿಡ್ಲಿ" ಸುಬ್ಬಣ್ಣನೆಂದ.

ಚನ್ನಯ್ಯ ಸುಬ್ಬಣ್ಣನ ಮುಖ ನೋಡಿ ನಗುತ್ತಾ ಹೊರಟುಹೋದ.

ಒಂದೆರಡು ಗಂಟೆಗಳಾದ ಮೇಲೆ ಅವನು ಪುನಃ ಬಂದು, ಹೆಣವನ್ನು ಹೂಳಿಸಿಯಾಯಿತೆಂದು ಹೇಳಿ ಶಾಂತಪ್ಪನಿಂದ ಇಪ್ಪತ್ತು ರೂಪಾಯಿ ಪಡೆದ.

ಆಗಲೇ ಶಾಂತಪ್ಪ ಮುಖ ತೊಳೆದು ಕಾಫಿ ಕುಡಿದುದು.

* * * *

ಮೂಗನೆಯ ದಿನ ಬಂದ ಸಾಹುಕಾರರೆಂದರು,

"ನೀವು ಇಂಥ ಸಣ್ಣ ವಿಷಯಾನೆಲ್ಲಾ ನನ್ನ ಬಳಿ ತರಬಾರದು ಮಿಸ್ಟರ್ ಶಾಂತಪ್ಪ. ಹೇಗೋ ಹಾಗೆ ಗುಟ್ಟಾಗಿ ಮುಗಿಸಿಬಿಡಬೇಕು. ನೋಡಿ ಈಗ ಈ ಸಾವಿನ ವಿಷಯ ಪಕ್ಕದ ಹಳ್ಳೀಗೂ ತಿಳಿದುಬಿಟ್ಟಿದೆ. ಇನ್ನು ಗಣಿ ಇನಸ್ಪೆಕ್ಟರಿಗೆ ನಾವು ತಿಳಿಸದೇ ವಿಧಿಯಿಲ್ಲ. ಇದುವರೆಗೆ ಎಂಟು ಹತ್ತು ಸಾವಾಗಿದೆ. ಸುಬ್ಬಣ್ಣನೋರು ಒಂದು ಚೂರೂ ಗುಟ್ಟುಬಿಡದಂತೆ ಕೆಲಸ ನಡೆಸಿಬಿಟ್ಟಿದ್ರು....ನೀವು ವಿದ್ಯಾವಂತರು ನೀವು ಇನ್ನೂ ಚುರುಕಾಗಿರಬೇಕು!"

ಶಾಂತಪ್ಪ ಸುಮ್ಮನೇ ಮಾತು ಕೇಳುತ್ತಿದ್ದ. ಅವರೇ ಪುನಃ ಹೇಳಿದರು,

"ಅದಿರ್ಲಿ ನಾನು ಹೇಗಾದರೂ ಸರಿಮಾಡ್ತೀನಿ....ಈಗ ನೀವು ಒಂದು ಕೆಲಸ ಮಾಡಿ, ಆ ಸತ್ತವನ ಹೆಂಡತಿ ಇದಾಳಲ್ಲ ಅವಳಿಗೆ ಚೆನ್ನಾಗಿ ತಿಳಿಯೋ ಹಾಗೆ ಹೇಳಿ, ನಾಳೆಯೇನಾದರೂ ಇನ್‌ಸ್ಪೆಕ್ಟರು ಬಂದರೆ ಹೀಗೆ ಹೇಳಬೇಕೂಂತ...."

"ಏನಂತ?"

"ಗಣಿಯವರದು ಯಾರದೂ ಏನೂ ತಪ್ಪಿಲ್ಲ. ಅವರು ಈ ಗಣೀಲಿ ಕೆಲಸ ನಿಲ್ಲಿಸಿ ಆರು ತಿಂಗಳಾಗಿತ್ತು. ಅವರು ಎಷ್ಟು ಬೇಡವೆಂದರೂ ತನ್ನ ಗಂಡನೇ ಹೋಗಿ ಆ ಬಂಡೆಯ ಕೆಳಗೆ ದಿನಾ ಊಟದ ಪಾತ್ರೆ ಇಡ್ತಿದ್ದ. ನಿನ್ನೆ ದಿನ ಅವನು ಆ ಊಟದ ಪಾತ್ರೇನ ತರೋಕೆ ಆ ಬಂಡೆಯ ಕೆಳಗೆ ಹೋದಾಗ ಅದು ಉರುಳಿ ಅವನ ಮೇಲೆ ಬಿದ್ದುಬಿಡ್ತೂಂತ, ಅವಳು ಹೇಳಬೇಕು....ನಿಮಗೆ ಚೆನ್ನಾಗಿ ಅರ್ಥವಾಯಿತು ತಾನೆ?," ಎಂದು ಸಾಹುಕಾರರು ಆ ಪಾಠವನ್ನೇ ಪುನಃ ಹೇಳಿಕೊಟ್ಟರು ಶಾಂತಪ್ಪನಿಗೆ.

"ಆಮೇಲೆ?" ಶಾಂತಪ್ಪ ಕೇಳಿದ.

"ಅವಳು ಹಾಗೆ ಒಪ್ಪಿಕೊಂಡರೆ, ಅವಳು ಹಾಗೆ ಹೇಳಿದ್ದಕ್ಕಾಗಿ ಅವಳಿಗೆ ಐವತ್ತು ರೂಪಾಯಿ ಕೊಟ್ಟುಬಿಡೋಣ! ಮೊದಲು ಬೇಕಾದರೆ ಇಪ್ಪತ್ತೈದು ಕೊಡೋಣ. ಆಮೇಲೆ ಇಪ್ಪತ್ತೈದು ಕೊಡೋಣ. ಆದರೆ ಇನ್ಸ್‌ಪೆಕ್ಟರ ಮುಂದೆ ಮಾತ್ರ ಐನೂರು ರೂಪಾಯಿ ಕೊಟ್ಟರೂಂತ ಹೇಳಬೇಕು. ಅವಳು ಹಾಗೆ ಹೇಳದಿದ್ದರೆ ಅವಳನ್ನ ನಾಳೆಯಿಂದ ಕೂಲಿಗೆ ಬರೋದು ಬೇಡ ಅಂತ ಹೇಳಿಬಿಡಿ!........ಆಮೇಲೆ ಅವಳೇ ಒಪ್ಪಿಕೊಳ್ತಾಳೆ! ಎಲ್ಲಾ ಗೊತಾಯ್ತು ತಾನೇ?"

ಶಾಂತಪ್ಪ ಈ ಮಾತುಗಳನ್ನು ಕೇಳಿ ಸ್ತಂಭೀಭೂತನಾದ. ಆದರೆ ಉತ್ತರ ಕೊಡಲು ಅವನ ನಾಲಗೆ ಹೊರಳಲಿಲ್ಲ. ಸಾಹುಕಾರರು ತಮ್ಮ ಮಠದ ಬಳಿಯಿದ್ದ ಬಿಡಾರಕ್ಕೆ ಕಾರಿನಲ್ಲಿ ಕುಳಿತು ಹೊರಟುಹೋದರು.

* * * *

ಆ ದಿನ ರಾತ್ರಿ ಅವನು ಮಲಗಿದ್ದರೂ ಅವನಿಗೆ ನಿದ್ರೆ ಬರಲಿಲ್ಲ. ಹಿಂದೆ ನಡೆದ ಭಯಂಕರ ಘಟನೆ, ಮುಂದೆ ತಾನು ನಡೆಸಬೇಕಾದ ಭೀಕರ ಕೃತಿ ಇವುಗಳು ಅವನ ಚಿತ್ತದಲ್ಲಿ ಪುನಃ ಪುನಃ ಬರತೊಡಗಿದ್ದುವು.

"ಹ್ಹ....ಹ್ಹ....ಹ್ಹ....ಹ್ಹಾ...." ಬಾಗಿಲ ಬಳಿ ಯಾರೋ ನಕ್ಕಂತಾಯಿತು. ಶಾಂತಪ್ಪ ಕತ್ತಲಿನಲ್ಲಿ ಕಣ್ಣುಬಿಟ್ಟು ನೋಡಿದ. ಬಾಗಿಲಿನ ಬಳಿ ಯಾರೋ ನಿಂತಿದ್ದರು. ತನ್ನ ಕಣ್ಣನ್ನು ತಾನೇ ನಂಬಲಾರದವನಂತೆ ಪುನಃ ಕಣ್ಣು ಹೊಸಕಿಕೊಂಡು ನೋಡಿದ. ನಿಂತವರು ನಿಂತೇ ಇದ್ದರು.

"ನೀವು ಯಾರು ?" ಎನ್ನಬೇಕೆನ್ನಿಸಿತವನಿಗೆ. ಆದರೆ ಪುನಃ ಸ್ವರ ಅತ್ತಲಿಂದಲೇ ಬಂದಿತು.

"ಗೊತ್ತಾಗಲಿಲ್ಲವೇ ನಾನು ನಿಮ್ಮ ನಂಬಿಕಸ್ತ ಸೇವಕ. ನಿಮ್ಮ ಬಟ್ಟೆ ಒಗೆಯುತ್ತಿದ್ದೆ....ನೀವು ಹೇಳಿದ ಕೆಲಸಗಳನ್ನೆಲ್ಲ ಮಾಡುತ್ತಿದ್ದೆ....ನಿನ್ನೆ ನಿಮ್ಮ ಪ್ರಾಣವುಳಿಸಿದೆ ನಾನು....ಆದರೆ ನಿಮ್ಮ ಮೇಲಿನ ದ್ವೇಷ ನನ್ನನ್ನು ತಿಂದಿತು!"

ಶಾಂತಪ್ಪ ಸುಮ್ಮನೆ ಆಲಿಸುತ್ತಿದ್ದ.

"ಈಗ ನನ್ನ ಪಾಡು ?....ನನ್ನ ಹೆಂಡತಿ ಮಕ್ಕಳ ಗತಿಯೇನು ?.... ನನ್ನಂತಹವರ ಹೆಂಡತಿ ಮಕ್ಕಳ ಗತಿಯೇನು ?...."

"ನಿನ್ನಂತಹವರ ಹೆಂಡತಿ ಮಕ್ಕಳ ವಿಷಯ ನನಗೇಕೆ ? ನನ್ನ ಹೆಂಡತಿ ಮಕ್ಕಳಿಗೆ ಸಾಹುಕಾರರು ದುಡ್ಡು ಕೊಟ್ಟೇ ಕೊಡ್ತಾರೆ. ಅವರಿಗೆ ಇನ್ನು ಮುಂದೂ ಕೆಲಸ ಕೊಡ್ತಾರೆ."

"ಆದರೆ ಆ ದುಡ್ಡಿಗಾಗಿ ಅವರು ಹೇಳಬೇಕಾದಂತಹ ಭಯಂಕರ ಸುಳ್ಳು ಎಂಥಾದ್ದು. ಕೆಲವಾರು ರೂಪಾಯಿಗೆ ಅವಳು ತನ್ನ ಪ್ರೀತಿಯ ಗಂಡನಿಗೆ ಮೋಸಮಾಡಬೇಕೆ? ತನ್ನ ಹೃದಯವನ್ನು ಹರಿದುಹಾಕಿ ಸುಳ್ಳುಹೇಳಬೇಕೆ?"

ಶಾಂತಪ್ಪ ಸುಮ್ಮನಿದ್ದ.

"ಅದಕ್ಕಾಗಿ ನೀವೂ ಅಂಥ ಸುಳ್ಳು ಹೇಳ್ತೀರಾ ಸಾರ್ ?....ನಾನೇ

ಬೇಕೆಂತ ಹೋಗಿ ಸತ್ತೆನೆ? ನಾನು ಅಲ್ಲಿ ಊಟದ ಪಾತ್ರೆ ತರೋಕೆ ಹೋದೆನೆ? ....ನಿಮ್ಮ ಕಂಪನಿಯವರದು ಯಾರದೂ ಏನೂ ತಪ್ಪಿಲ್ಲವೆ ? ಅಲ್ಲಿ ಆ ಗಣೀಲಿ ಆರು ತಿಂಗಳಿಂದ ಕೆಲಸ ನಿಲ್ಲಿಸಿದ್ದಿರಾ ?....ನನ್ನ ಹೆಂಡತಿಗೆ ಐದು ನೂರು ರೂಪಾಯಿ ಕೊಟ್ಟಿದೀರಾ ?...."

ಒಂದೊಂದೂ ಪ್ರಶ್ನೆಗಳು ಶಾಂತಪ್ಪನ ಎದೆಯ ಮೇಲೆ ಪಿಕಾಸಿಯ ಹೊಡೆತವನ್ನು ಹಾಕಿದುವು.

"ಇಲ್ಲಿ ನೋಡಿ....!" ಆ ಮಾತು ಕೇಳಿ ಶಾಂತಪ್ಪ ಅತ್ತ ನೋಡಿದ.

ಅಲ್ಲಿ ಕಂಡುದು ಬೆಂಗಳೂರಿನ ದೊಡ್ಡ ಮಹಲೊಂದು ; ಅದರ ಮುಂದೆ 'ಬ್ಯೂಕು' 'ಕ್ರಿಸ್ಲರ್' ಕಾರುಗಳೆರಡು. ಆ ಕಾರುಗಳ ಒಳಗೆ, ಹಿಂಬದಿಯಲ್ಲಿ ನೋಟಿನ ಕಂತೆಗಳು. ಅವನ್ನು ನೋಡು ನೋಡುತ್ತಿದ್ದಂತೆಯೇ ಅವು ಕರಗಿ ಹೋದಂತಾಯಿತು. ಆ ಮಹಲಿನ, ಕಾರುಗಳ, ನೋಟುಗಳ ಕೋಟಿ ಕೋಟಿ ಅಣುಗಳು ಕಣ್ಣೆದುರೇ ನೀರಾಗಿ ತೇಲಿದುವು. ಆ ಅಣುಗಳೆಲ್ಲವೂ ಇದ್ದಕ್ಕಿದ್ದಂತೆಯೇ ಬೆವರ ಹನಿಗಳಾಗಿ ಕಂಬನಿಗಳಾಗಿ ಒಂದಕ್ಕೊಂದು ಹನಿ ಸೇರಿ ದೊಡ್ಡದೊಂದು ಮಾಲೆಯಾಗಿ ಭೂಮಿಗೂ ಗಗನಕ್ಕೂ ಒಂದುಗೂಡಿ ನಿಂತಿತು. ಒಂದೆರಡು ನಿಮಿಷಗಳ ನಂತರ, ಪುನಃ ಆ ನೀರ ಹನಿಗಳು ಮಾಯವಾದುವು! ಆದರೆ ಇದೇನು ?....ಕಣ್ಣೆದುರು ಕಾಣುತ್ತಿರುವುದು ರಕ್ತವೇ ?....ಅಯ್ಯೋ ಹೌದು....ರಕ್ತ....ರಕ್ತ....ಇದು ಯಾರ ರಕ್ತ ?

"ಹ್ಹ....ಹ್ಹ....ಹ್ಹ....ಇದು ನಮ್ಮದೇ ರಕ್ತ.....ನಮ್ಮದೇ ರಕ್ತ !" ಹತ್ತಾರು ಮುಖಗಳು ಕಾಣಿಸಿಕೊಂಡು ಕೂಗಿಕೊಂಡುವು. ಹತ್ತಾರು ಕೈಗಳು, ಹತ್ತಾರು ಕಾಲುಗಳು, ಛಿದ್ರ ಛಿದ್ರವಾಗಿದ್ದುವು. ಅವು, ಆ ರಕ್ತದಲ್ಲಿ ತೇಲಿ ಹೋದುವು. ಮೂಳೆಯ ಚೂರುಗಳು ಕಂಡು ಮರೆಯಾದುವು. ಗುದ್ದಲಿ, ಪಿಕಾಸಿ, ಗಡಾರಿ—ಎಲ್ಲವೂ ರಕ್ತಸಿಕ್ತವಾದ ಆಯುಧಗಳು ಧನ್‌ಧನ್ನೆಂದುವು. ಪುನಃ ಅವೇ ಮುಖಗಳು ಕಾಣಿಸಿಕೊಂಡು ಅರಚಿಕೊಂಡುವು,

"ಹೌದು, ಇದು ನಮ್ಮದೇ ನೆತ್ತರು....ನಮ್ಮದೇ ಕಣ್ಣೀರು....ನಮ್ಮದೇ ಬೆವರು."

ಆ ಮಧ್ಯೆ ವೆಂಕಟಪ್ಪನ ಮುಖ, ಮುಖದ ಮುಂದೆಯೇ ಬಂದು ಎಂದಿತು, "ನೀವು ನಾಳೆ ಸುಳ್ಳು ಹೇಳುತ್ತೀರಿ....ಈ ನರಹತ್ಯೆಯ ಬಗ್ಗೆ ಸಟೆ

ನುಡಿಯುವಿರಿ....ನೀವು ಕೇವಲ ಸಂಬಳದ ಗುಲಾಮರು....ನಿಮ್ಮಲ್ಲಿ ರಕ್ತಕ್ಕೆ ಬೆಲೆಯಿಲ್ಲ, ಸಾವಿಗೆ ಲೆಕ್ಕವಿಲ್ಲ, ನಿಮ್ಮಂತಹ ಮನುಷ್ಯರೇ ಆದ ಕೂಲಿಗಾರರು ನಿಮ್ಮ ಪುಷ್ಟಿಗಾಗಿಯೇ ಹುಟ್ಟಿದ ಹುತ್ತದ ಹುಳುಗಳು....ಅವುಗಳನ್ನು ಕರಗಿಸಿ ನೀವು ದಪ್ಪನಾಗುವಿರಿ....ನೀವೂ ಸುಳ್ಳು ಹೇಳುವಿರಿ....ಹ್ಹ....ಹ್ಹ....ಹ್ಹಾ....ಸುಳ್ಳು....ಹ್ಹಾಹ್ಹಾಹ್ಹಾ."

ರಕ್ತದ ಬಾಯಿಂದ ಬಂದ ಭಯಂಕರ ನಗೆಗೆ ಶಾಂತಪ್ಪ ನಡುಗುವಂತಾಯಿತು. ಅವನಿಗೆ ನಿದ್ರೆಯೇ ಬರಲಿಲ್ಲ. ಆ ನಿದ್ರೆಗಣ್ಣಿನಲ್ಲಿಯೇ ಎದ್ದು ಕುಳಿತುಕೊಂಡ. ಆದರೆ ಕಣ್ಣೊಳಗೇ ಆ ದೃಶ್ಯ ಕುಣಿಯುತ್ತಿದ್ದಿತು. ಕಿವಿಯೊಳಗೇ ಆ ಶಬ್ದ ಮೊರೆಯುತ್ತಿದ್ದಿತು.

ಅವನು ಕಣ್ಣು ಬಿಟ್ಟಾಗ ಎದುರಿಗೇ ಬಾನಂಚಿನಲ್ಲಿ ಕೆಂಪು ತುಂಬಿತ್ತು. ಕಣ್ಣು ಕೆಂಪಾಗಿದ್ದರೂ ಅವನು ಮೇಲೆದ್ದು, ಅರುಣೋದಯವನ್ನು ನೋಡುತ್ತಾ!

* * *

ಶಾಂತಪ್ಪ ಬೆಳಿಗ್ಗೆ ಲ್ಯಾಂಪಿಯೊಂದರಲ್ಲಿ ಕುಳಿತು ಸಾಹುಕಾರರಿದ್ದ ಮಠದ ಬಿಡಾರಕ್ಕೆ ನೇರವಾಗಿ ನಡೆದ. ಅವನೆದುರೇ ಸ್ವಾಮಿಗಳು ಬಂದರು. ಶಿವಗಂಗಮ್ಮ ಕಣಗಲು ಹೂಗಳನ್ನು ಆಗಿನ್ನೂ ಕೊಯ್ದು ಬುಟ್ಟಿಯಲ್ಲಿ ತುಂಬಿಕೊಂಡು ದೇವಾಲಯದ ಕಡೆಗೆ ನಡೆಯುತ್ತಿದ್ದಳು. ಈ ಯಾವುದರೆಡೆಯೂ ಅವನ ಗಮನ ಬರಲಿಲ್ಲ.

ಅವನು ನೇರವಾಗಿ ಸಾಹುಕಾರರಿದ್ದೆಡೆಗೇ ನಡೆದ. ಅವರು ಕುರ್ಚಿಯೊಂದರ ಮೇಲೆ ಕುಳಿತುಕೊಂಡು ಉಪಹಾರ ತೆಗೆದುಕೊಳ್ಳುತ್ತಿದ್ದರು. ಶಾಂತಪ್ಪನನ್ನು ನೋಡಿ "ಓ....ಬನ್ನಿ ಮಿಸ್ಟರ್ ಶಾಂತಪ್ಪ. ನೀವು ಬಂದಿದ್ದು ಒಳ್ಳೇದೇ ಆಯಿತು. ನಾನು ನಿನ್ನೆ ನಿಮಗೆ ಒಂದು ಮಾತು ಹೇಳೋದನ್ನೇ ಮರೆತುಬಿಟ್ಟಿದ್ದೆ....ನೋಡಿ ಆ ಇನಸ್ಪೆಕ್ಟರು ನಾಳೆ ಬರಬಹುದು...... ಅವನಿಗೆ ಈಗ ಒಂದು ಸಾವಿರವಾದರೂ ಕೊಡಲೇಬೇಕಾಗುತ್ತೆ. ಆದರೆ ನೀವೂ ಸಹ, ಆ ಕೂಲಿಯವನಿಗೆ ಕೆಲಸಮಾಡೋಕೆ ಅಲ್ಲಿ ಹೋಗಬೇಡ, ಅಲ್ಲಿ ಊಟದ ಪಾತ್ರೆಯಿಡಬೇಡಾಂತ ಹೇಳಿದೆ, ಅಂತ ಹೇಳಬೇಕು ಮತ್ತು ನಿಮ್ಮ 'ಡೈಲಿ ರಿಪೋರ್ಟು' ಪುಸ್ತಕದಲ್ಲೂ ಇದನ್ನ ಬರೀಬೇಕು, ಅರ್ಥವಾಯಿತೆ?....ಕೃಷ್ಣಾ, ಒಂದು ಕುರ್ಚಿ ತಂದು ಹಾಕು....ಹಾಗೇ ಇನ್ನೊಂದು ಪ್ಲೇಟು ತಿಂಡಿ ತಂದು ಕೊಡು....". ಸಾಹುಕಾರರ ಮಾತನ್ನೇ ಕೇಳುತ್ತಿದ್ದ ಶಾಂತಪ್ಪನೆಂದ,

"ನಾನು ಈ ವಿಷಯಕ್ಕೇ ಬಂದೆ ಸಾರ್!"

"ಓ !....ಹಾಗೇನು ? ನೀವೂ ಇದೇ ವಿಷಯ ಕೇಳೋಕೆ ಬಂದಿರಾ. ಗುಡ್, ನೀವೂ ಹಾಗೇ ಬರೆಯೋದೂಂತ ಯೋಚಿಸಿದ್ದಿರೇನು ?"

"ಇಲ್ಲ ಸಾರ್."

"ಹಾಗಾದರೆ ?"

"ನನಗೆ ಹಾಗೆ ಹೇಳೋಕೆ ಇಷ್ಟವಿಲ್ಲ ಸಾರ್."

"ಹಾಗಂದ್ರೆ !?"

"ಈ ಸುಳ್ಳು ಹೇಳೋಕೆ ನನ್ನ ಮನಸ್ಸು ಒಪ್ಪೋದಿಲ್ಲ ಸಾರ್, ಕ್ಷಮಿಸಿ!"

"ಇದೇನ್ರಿ ನೀವು ಹೇಳ್ತಿರೋದು ?" ಆಶ್ಚರ್ಯಚಕಿತರಾದ ಸಾಹುಕಾರರು ಉಪಹಾರದ ತಟ್ಟೆಯನ್ನು ಹಾಗೆಯೇ ಮೇಜಿನ ಮೇಲಿಟ್ಟು ಶಾಂತಪ್ಪನ ಮುಖ ನೋಡಿದರು.

"ಹೌದು ಸಾರ್. ಈ ವಿಷಯದಲ್ಲಿ ನಾನು ಅನ್ಯಾಯ ಮಾಡೋಕೆ ಸಿದ್ಧನಾಗಿಲ್ಲ. ನನ್ನ ರಾಜಿನಾಮೆ ಪತ್ರ ಬೇಕಾದರೆ ತೆಗೆದುಕೊಳ್ಳಿ."

"ನೀವು ಹಾಗೆ ಹೇಳೋಕಾಗೋಲ್ಲ !" ಸಾಹುಕಾರರು ಕಟುವಾಗಿ ಹೇಳಿದರು.

"ನಾನು ನೀವು ಹೇಳಿದಂತೆ ಸುಳ್ಳು ಹೇಳಲು ಇಷ್ಟಪಡೋದಿಲ್ಲ ಸಾರ್. ನನ್ನ ಕ್ಷಮಿಸಿ." ಶಾಂತಪ್ಪನ ನೇರ ಉತ್ತರ ಸಾಹುಕಾರರನ್ನು ಕೋಪಾವಿಷ್ಟರನ್ನಾಗಿ ಮಾಡಿತು.

"ಮಿಸ್ಟರ್ ಶಾಂತಪ್ಪ ! ನೀವು ಈ ರೀತಿ ಮೋಸ ಮಾಡ್ತೀರೀಂತ ನಾನು ಮೊದಲೇ ನಿರೀಕ್ಷಿಸಿದ್ದೆ. ನಿಮ್ಮ ನಡವಳಿಕೆ ನೋಡಿ ನಾನು ನಿಮ್ಮ ವಿಷಯದಲ್ಲಿ ಅನುಮಾನಪಟ್ಟಿದ್ದೆ. ನೀವು ನಮ್ಮ ಹಿತ ನೋಡೋಲ್ಲಾಂತ ಭಾವಿಸಿದ್ದೆ. ನಾನು ಹಾವನ್ನು ಸಾಕಿಕೊಂಡ ಹಾಗಾಯಿತು, ನಿಮ್ಮನ್ನು ಕೆಲಸಕ್ಕಿಟ್ಟುಕೊಂಡು !"

ದೂರದೂರದಲ್ಲಿ ನಿಂತುಕೊಂಡು ಕೃಷ್ಣ, ಮಾಣಿಕ್ಯಮ್ ಅಪ್ರತಿಭರಾಗಿ ಸಾಹುಕಾರರ ಕೋಪಾವೇಶದ ಮಾತುಗಳನ್ನು ಕೇಳುತ್ತಿದ್ದರು. ದೇವಾಲಯದ ಜಗಲಿಯ ಮೇಲೆ ಶಿವಗಂಗಮ್ಮ ನಿಂತು ಇತ್ತಲೇ ನೋಡುತ್ತಿದ್ದಳು. ಒಳಗೆ ಕುಳಿತು ಶಿವಪಂಚಾಕ್ಷರೀ ಜಪ ಮಾಡುತ್ತಿದ್ದ ಸ್ವಾಮಿಗಳು ಇತ್ತಲೇ ದೃಷ್ಟಿ ಹರಿಸಿದ್ದರು.

ಈ ವಾತಾವರಣದಲ್ಲಿರಲು ಶಾಂತಪ್ಪನಿಗೆ ಅಸಹ್ಯವುಕ್ಕಿ ಬಂದಿತು.

"ಅಷ್ಟು ದೂರ ಮಾತು ಬೇಡ ಸಾರ್. ನಾನು ಇದುವರೆಗೆ ನಿಮಗೆ ಯಾವ ದ್ರೋಹವನ್ನೂ ಬಗೆದಿಲ್ಲ. ಇನ್ನು ಮೇಲೆ ನನಗೆ ಇಲ್ಲಿ ಕೆಲಸ ಮಾಡಲು ಇಷ್ಟವಿಲ್ಲ."

"ಆದರೆ ಇನ್‌ಸ್ಪೆಕ್ಟರು ಬಂದು ಹೋಗೋವರೆಗೆ ದಯವಿಟ್ಟು ಇರಿ ಮಿಸ್ಟರ್ ಶಾಂತಪ್ಪ. ಆ ಮೇಲೆ ಮಾರನೇ ದಿನವೇ ಹೊರಟು ಹೋಗಿ ಬೇಕಾದರೆ."

ಆ ಮಾತುಗಳ ಹಿಂದೆಯೇ ಶಾಂತಪ್ಪನಿಗೆ ತಾನು ಹೇಳಬೇಕಾದ ಸುಳ್ಳಿನ ಒಂದೊಂದೇ ಶಬ್ದಗಳು ಬೆಂಕಿಯ ಉಂಡೆಗಳಂತೆ ತೂರಿ ಬಂದುವು. ಅವನು ತಕ್ಷಣವೆಂದ,

"ದಯವಿಟ್ಟು ಕ್ಷಮಿಸಿ ಸಾರ್. ನಾನು ಇನ್ನು ಒಂದು ನಿಮಿಷವೂ ಇರಲಾರೆ !"

ಮಾಣಿಕ್ಯಂ, ಶಿವಗಂಗೆ, ಸ್ವಾಮಿಗಳು, ಸಾಹುಕಾರರು, ಒಬ್ಬೊಬ್ಬರೂ ಕ್ಷುದ್ರತನ, ಅನೀತಿ, ವ್ಯಭಿಚಾರ, ಸುಲಿಗೆಗಳ ಮೂರ್ತಿವೆತ್ತ ಸ್ವರೂಪಗಳಂತೆ ಕಂಡರು, ಅವನ ಕಂಗಳಿಗೆ ! ಅವನಿಗೆ ಅಲ್ಲಿಂದ ಓಡಿಹೋಗಬೇಕೆನ್ನಿಸಿತು.

ಅವನು ಅಲ್ಲಿಂದ ಸರಸರನೆ ರಾಮನಾಯ್ಕನ ಹಳ್ಳಿಯ ದಿಕ್ಕಿನಲ್ಲಿ ಹೊರಟು ಹೋದ. ಅವನ ಹಿಂದೆಯೇ ಸಾಹುಕಾರರ ದೂಷಣಾ ಸ್ವರ ಕೇಳಿಬಂದಿತು.

* * *

ರಾಮನಾಯ್ಕನ ಹಳ್ಳಿಗೆ ಹಿಂದಿರುಗಿದ ನಂತರ ಗೋಪಾಲಯ್ಯನೊಡನೆ ಹಲವಾರು ಬಾರಿ ಚರ್ಚೆಯಾಯಿತು. ಗೋಪಾಲಯ್ಯ ಶಾಂತಪ್ಪನ ನಿಲುವನ್ನು ಒಪ್ಪಿದ್ದ. ಆದರೆ ಶಾಂತಪ್ಪ ತನ್ನ ನೌಕರಿಗೆ ರಾಜೀನಾಮೆ ಕೊಡುವುದು ಅವನಿಗೆ ಒಪ್ಪಿಗೆಯಿರಲಿಲ್ಲ. ಅವನಿಗೆ ಶಾಂತಪ್ಪನೆಂದರೆ ಯಾವುದೋ ಒಂದು ಪ್ರೀತಿಭಾವವುಕ್ಕಿ ಬರುತ್ತಿದ್ದಿತು. ಕೊನೆಗೆ ಹೇಳಿದ.

"ನೋಡು ಶಾಂತಪ್ಪ. ನನ್ನ ನಿನ್ನ ಜಾತಿ ಬೇರೆ. ರೀತಿ ಬೇರೆ. ಆದರೆ ನಮ್ಮಿಬ್ಬರಲ್ಲಿ ಈ ವಿಶ್ವಾಸ ಬೆಳೆಯೋಕೆ ಏನು ಕಾರಣ ?"

ಆ ಕಾರಣವಾವುದೆಂಬುದು ಈರ್ವರಿಗೂ ತಿಳಿಯದು. ಅವರ ಚರ್ಚೆಯಲ್ಲಿ ಮಧ್ಯೆ ಇದ್ದಕ್ಕಿದ್ದಂತೆ ಅಡಿಗೆಯವನು ಓಡಿ ಬಂದು ಹೇಳಿದ,

"ಸಾರ್....ತಮಗೆ ಒಂದು ವಿಷಯ ಹೇಳಬೇಕೂಂತಿದ್ದೆ. ಆ ಚನ್ನಯ್ಯ, ಸುಬ್ಬಣ್ಣ ಇಬ್ಬರೂ ವೆಂಕಟಪ್ಪನ ಹೆಂಡತೀನ ಕರಕೊಂಡು ಯಾವುದೋ ಹಳ್ಳಿಗೇಂತ ಹೋದರಂತೆ. ಇಂಥ ಕಡೆ ನಾನು ಇನ್ನು ಮೇಲೆ ಕೆಲಸಮಾಡಲಾರೆ."

"ಅರೆ!....ಸುಬ್ಬಣ್ಣ, ಚನ್ನಯ್ಯ ಹೋದರೇನು ? ಹು, ಅವಳಿಗೂ ಈಗ ಯಾರೂ ದಿಕ್ಕಿಲ್ಲ. ಪಾಪ ಕಾಪಾಡಬೇಕಲ್ಲ ಅಂತಹವಳನ್ನ !" ಗೋಪಾಲಯ್ಯನೆಂದ.

"ಇದೇನು ಸಾರ್ ಅನ್ಯಾಯ ? ನಾನು ಇಂಥ ಕಡೆ ಅಡಿಗೆಮಾಡೋಲ್ಲ. ನಾನು ಹೊರಟು ಹೋಗ್ತೀನಿ."

"ಓ! ನೀನೂ ನಿಮ್ಮ ಮ್ಯಾನೇಜರ ಜೊತೇಲೆ ಕೆಲಸಬಿಡ್ತೀಯೇನು ?"

"ಹಾಗಂದ್ರೇನು ಸಾರ್ ? ಮ್ಯಾನೇಜರೂ ಬಿಟ್ಟು ಬಿಡ್ತಾರೆಯೇ?" ಅಡಿಗೆಯವನು ಆಶ್ಚರ್ಯದಿಂದ ಶಾಂತಪ್ಪನ ಕಡೆ ನೋಡಿದ.

"ಹೌದ್ರೀ....ನಿಮ್ಮನ್ನೆಲ್ಲ ಬಿಟ್ಟು ಹೋಗಬೇಕಾಗಿದೆ" ಎಂದ ಶಾಂತಪ್ಪ.

ಅಡಿಗೆಯವ, ಗೋಪಾಲಯ್ಯ ಇಬ್ಬರ ಕಣ್ಣಿನಲ್ಲೂ ಫಳಕ್ಕನೆ ಒಂದೊಂದು ಹನಿಗಳು ಬಂದುವು.



# ಭಾಗ ೨

# ಕಾಡು ಕುಸುಮದ ಸೌರಭ

## ೧

## ಇಲ್ಲಿಯೂ ಅದೇ ಕಥೆ

ಶಾಂತಪ್ಪ ರೈಲಿನ ಕಿಟಕಿಯ ಬಾಗಿಲು ತೆರೆದು ಎದ್ದು ಹೊರಗೆ ನೋಡಿದ. ರೈಲು ಶಿವಮೊಗ್ಗೆಯ ಬಳಿ ತುಂಗಾನದಿಯ ಸೇತುವೆಯ ಮೇಲೆ ಗಡಗಡನೆ ಶಬ್ದಿಸುತ್ತಾ ಹೋಗುತ್ತಿದ್ದಿತು. ದೂರದಲ್ಲಿ ಸೂರ್ಯ ಮೇಲೇರಿ ಬರುತ್ತಿದ್ದ. ಇನ್ನೂ ಹೊಸ ದಿನದ ಕಾರ್ಯಕ್ರಮಗಳು ಪ್ರಪಂಚದಲ್ಲಿ ಪೂರ್ಣವಾಗಿ ಪ್ರಾರಂಭವಾಗಿರಲಿಲ್ಲ.

ಒಳಗೆ ಪುನಃ ಕುಳಿತಾಗ ಅವನ ಹೃದಯ ನೆನಪಿನ ಹೊರೆ ಹೊತ್ತು ಭಾರವಾಗಿದ್ದಿತು. ರಾತ್ರಿಯೆಲ್ಲ ಚಿಂತಿಸಿ ಚಿಂತಿಸಿ ಕಾಲ ಕಳೆದದ್ದರಿಂದ ನಿದ್ರೆ ಬಾರದೇ ಕಣ್ಣುಗಳೆಲ್ಲ ಕೆಂಪಾಗಿದ್ದುವು. ಪುನಃ ಮಲಗಿ ನಿದ್ರಿಸಬೇಕೆನಿಸುತಿದ್ದಿತವನಿಗೆ. ಆದರೆ ಶಿವಮೊಗ್ಗೆಯ ನಿಲ್ದಾಣಬಂದುದರಿಂದ ಏಳಲೇಬೇಕಾಯಿತು. ಎದ್ದು ಗಾಡಿಯಿಂದಿಳಿದು ನಿಲ್ದಾಣದ ಎದುರಿಗೇ ಕಾದು ನಿಂತಿದ್ದ ಹೊನ್ನೂ

ರಿನ ಬಸ್ಸನ್ನು ಹತ್ತಲೇ ಬೇಕಾಗಿದ್ದಿತು. ಆದಿನ ಅವನು ತನ್ನ ಹೊಸ ಕಂಪೆನಿಯ ಗಣಿಯಲ್ಲಿ ನೌಕರಿಯನ್ನು ಸ್ವೀಕರಿಸಲೇ ಬೇಕಿದ್ದಿತು.

* * *

ಲಂಬಾಣಿಗರ ತಾಂಡವಾಗಿದ್ದ ಹೊನ್ನೂರು ಮಲೆನಾಡಿನ ಹೃದಯ. ನಗರದ ಯಾವ ಯುವಕ ಪದವೀಧರನೂ ಹೋಗಲು ಹಿಂಜರಿಯುತ್ತಿದ್ದಂತಹ ಸ್ಥಳವದು. ಆದ್ದರಿಂದಲೇ ಶಾಂತಪ್ಪನನ್ನು ಆ ಕಂಪೆನಿಯ ಮೇನೇಜರು ಹೊನ್ನೂರಿನ ಗಣಿಗೆ ಅವನು ಹೋಗಲು ಒಪ್ಪುತ್ತಿದ್ದಂತೆಯೇ ನೂರೈವತ್ತು ರೂಪಾಯಿ ಸಂಬಳವೆಂದು ಗೊತ್ತು ಪಡಿಸಿ ತಕ್ಷಣ ನೌಕರಿಗೆ ತೆಗೆದು ಕೊಂಡರು. ಇಷ್ಟಾದರೂ ಶಾಂತಪ್ಪನಿಗೇಕೋ ಹೊನ್ನೂರಿಗೆ ಹೋಗುವ ಮೊದಲೇ ಆ ಸ್ಥಳದ ಬಗ್ಗೆ ಪ್ರೀತಿಯೊಂದು ಉದಯವಾಗಿದ್ದಿತು. ದೇಶದ ಮೂಲೆಯಲ್ಲಿ, ಬೆಂಗಳೂರಿಗೆ ದೂರವಾಗಿ ಹೋಗಿ ವಾಸಿಸಲು ಅವನ ಮನ ಹಾತೊರೆಯುತ್ತಿದ್ದಿತು. ಹಾಗೆಯೇ ಅವನು ಅಲ್ಲಿಗೆ ಹೋಗುತ್ತಿದ್ದಂತೆಯೇ ಅಲ್ಲಿನ ನಿಸರ್ಗ ರಾಗ ಅವನ ಮನಸ್ಸನ್ನು ಸೆರೆ ಹಿಡಿಯಿತು.

ಹೊನ್ನೂರಿನ ಗಣಿಗಳಿದ್ದ ಗುಡ್ಡಗಳೇ ಬೇರೆ ತೆರನಾಗಿದ್ದುವು. ಆ ಗುಡ್ಡಗಳಲ್ಲಿ ಭೂಮಿಯ ಮೇಲೆಯೇ ಅದಿರು ಹೊರಗೆ ಹಣಿಕಿ ನೋಡುತ್ತಿದ್ದಿತು. ಆದರೆ ಎಲ್ಲವೂ ಕಡಿಮೆ ದರ್ಜೆಯವೇ ಆಗಿದ್ದುವು. ಅನುಭವಿಯಾದ ಶಾಂತಪ್ಪನು ಶ್ರೇಷ್ಠ ದರ್ಜೆಯ ಅದಿರನ್ನು ಹುಡುಕಿ ತೆಗೆಯಿಸಬೇಕೆಂದು ಕಂಪೆನಿಯ ಮೇನೇಜರು ಹೇಳಿದ್ದರು. ಅವನು ಈ ಕಾರ್ಯಕ್ಕಾಗಿಯೇ ದಿನವೂ ಗುಡದಿಂದ ಗುಡ್ಡಕ್ಕೆ ಓಡಾಡುತ್ತಿದ್ದ. ಹಾಗೆ ಓಡಾಡಲು ಅವನ ಮನಕ್ಕೊಂದು ಹರುಷ, ಎತ್ತಲೂ ತೇಗ, ಜಾಲಿ ಗಂಧದಮರಗಳಿಂದ ಆವೃತವಾದ ಆಕಾಡು ಅವನಿಗೆ ಪ್ರಿಯವಾಗಿತ್ತು. ಹೊನ್ನೂರಿನ ಈ ಗುಡ್ಡಗಳ ಮೇಲೆ ನಿಂತು ಅತ್ತ ಕಡೆ ನೋಡಿದರೆ ದೂರದಲ್ಲಿ ನಳಿನೀಪುರದ ಬೆಟ್ಟದ ಸಾಲು ಕಾಣುತ್ತಿದ್ದಿತು. ಆ ಬೆಟ್ಟಗಳ ಮೇಲಿನ ಕಾಡಿನ ಮಧ್ಯೆ ಒಂದೆಡೆ ಸಣ್ಣ ದೇವಾಲಯವೊಂದು ಬೆಳ್ಳಗೆ ಗೋಚರವಾಗುತ್ತಿದ್ದಿತು. ಈ ಬೆಟ್ಟ ಸಾಲುಗಳ ಮಧ್ಯೆಯಿದ್ದ ಬಾಣಲೆಯಂತಹ ಭೂಮಿಯಲ್ಲಿದ್ದಿತು ಹೊನ್ನೂರು. ಅಲ್ಲಿಗೆ ಬರುತ್ತಿದ್ದುದು ದಿನಕ್ಕೆ ಎರಡು ಬಸ್ಸುಗಳು. ಒಂದು ಬೆಳಿಗ್ಗೆ ಶಿವನೊಗ್ಗೆಯತ್ತಣಿಂದ ಬರುತ್ತಿದ್ದಿತು. ಮತ್ತೊಂದು ಸಂಜೆ ಶಿವಮೊಗ್ಗೆಗೆ ಹೋಗುತ್ತಿದ್ದಿತು. ಇಷ್ಟೇ ಹೊರ ಪ್ರಪಂಚಕೆ ಹೊನ್ನೂರಿನ ಕೊಂಡಿ. ಇದನ್ನುಳಿದರೆ ಪ್ರಪಂಚದಲ್ಲಿ ಪ್ರಳಯವೇ ಆದರೂ ಸಹ

ಹೊನ್ನೂರಿಗೆ ಆ ನೀರು ಕೊಚ್ಚಿಕೊಂಡು ಬರುವವರೆಗೂ ಯಾವ ವದಂತಿಯೂ ಬರುತ್ತಿರಲಿಲ್ಲ. ಆದರೂ ಈ ರಮಣೀಯತೆಯಲ್ಲಿ ತನ್ಮಯನಾದ ಶಾಂತಪ್ಪ ನಿಗೆ ಹೊನ್ನೂರೇ ಸ್ವರ್ಗವಾಗಿದ್ದಿತು.

ಒಂದು ದಿನ ಶಾಂತಪ್ಪನೊಬ್ಬನೇ 'ಇಂಗ್ಲೀಷು ಗುಡ್ಡ'ದತ್ತಣಿಂದ ಇಳಿದು ಬರುತ್ತಿದ್ದ. ಆ ಗುಡ್ಡದ ಮೇಲೆ ಮೊದಲು ಆಂಗ್ಲರು ಗಣಿ ತೋಡಿ ಅತ್ಯು ತ್ತಮ ಕೆಲಸ ಮಾಡಿದ್ದರು; ಅವರು ಆ ಗುಡ್ಡದ ಮೇಲೆಯೇ ತಮ್ಮ ಡೇರೆ ಗಳನ್ನು ಹೊಡೆದು ವಾಸಿಸುತ್ತಿದ್ದುದರಿಂದ ಸುತ್ತಲಿನ ಲಂಬಾಣಿಗರು ಆ ಗುಡ್ಡ 'ಇಂಗ್ಲೀಷರ ಗುಡ್ಡ'ವೆಂದರು ಅದೇ ಈತಲೆ ಮಾರಿನಲ್ಲಿ 'ಇಂಗ್ಲೀಷು ಗುಡ್ಡ' ವಾಗಿದ್ದಿತು. ಈ ಇಂಗ್ಲೀಷು ಗುಡ್ಡದ ವಿಷಯವನ್ನು ಚಿಂತಿಸುತ್ತಾ ನಿಧಾನ ನವಾಗಿ ಬರುತ್ತಿದ್ದ ಶಾಂತಪ್ಪ ಅವನು ಬರುತ್ತಿದ್ದುದು ದಟ್ಟವಾಗಿ ಮರಗಳು ಬೆಳೆದ ಕಾಡಿನ ಭಾಗದಲ್ಲಿ ಅವರ ಮುಂದೆಯೇ ಇದ್ದ ಗುಡ್ಡದಲ್ಲಿಯೇ ಗಣಿ ಯಿದ್ದುದು. ಅದು ಮೇಲುಗಡೆಯಿದ್ದುದರಿಂದ ಯಾವ ಶಬ್ದವೂ ಕೇಳಿ ಬರು ವಂತಿರಲಿಲ್ಲ; ದಟ್ಟವಾದ ಕಾಡಾದುದರಿಂದ ಏನೂಕಾಣುವಂತೆಯೂ ಇರಲಿಲ್ಲ. ಆದರೆ ಅವನು ಕೇಳಿದ ಹೆಣ್ಣಿನ ಸ್ವರವೊಂದರಿಂದ ಅವನು ಚಕಿತನಾಗಿ ಹಾಗೆಯೇ ನಿಂತ.

"ಸಾವ್ಕಾರ್ರೆ. ನೀವು ದಿನಾ ನನ್ನ ಇಲ್ಲೀಗೆ ಕರ್ಕೊಂಡು ಬಂದ್ಬಿಡ್ತೀರಿ. ಅಲ್ಲಿ ನಮ್ಮ ತಾಂಡದವರೆಲ್ಲಾ ನನ್ನ ಹಾಸ್ಯ ಮಾಡ್ತಾರೆ." ಮೋಹವನ್ನು ಬೀರಿ ಲಂಬಾಣಿ ಹೆಣ್ಣು ಹೇಳಿದ ಮಾತು ಅದು.

"ಯಾವೋಳು ಏನಾದರೂ ಅನ್ನಲಿ ಬಿಡು. ನಾನು ಸಧ್ಯದಲ್ಲೇ ನಿನ್ನ ಶಿವಮೊಗ್ಗಾಕ್ಕೇ ಕರಕೊಂಡು ಹೋಗಿ ಇಟ್ಕೊಂಡು ಬಿಡ್ತೀನಿ." ಗಂಡಸಿನ ಧ್ವನಿ.

"ಆ....ಹಾಗಾ....ನನ್ನ ನಿಮ್ಮ ಸೀಮೆಗೆ ಕರಕೊಂಡು ಹೋಗ್ತೀರಾ?"

"ಹೌದು. ಆದರೆ ಅಲ್ಲಿ ನೀನು ಈ ಇಷ್ಟು ದಪ್ಪದ ಲಂಗ ಹಾಕಿಕೊಂಡಿ ರಕೂಡದು. ಈ ಗಾಜಿನ ಚೂರಿನ ರವಕೆ ಹಾಕಿಕೊಂಡಿರಕೂಡದು. ಈ ಕವ ಡೆಯ ಸರ ತೆಗೆದು ಬಿಡಬೇಕು. ಈ ದಂತದ ಬಳೆ, ಬೆಳ್ಳಿ ಉಂಗುರ ಎಲ್ಲಾ ತೆಗೆದು ಒಗಾಯಿಸಿ ಬಿಡಬೇಕು."

"ಹಾಗೇ ಆಗಲಿ ಸಾವ್ಕಾರ್ರೆ ಇಲ್ಲಿ ನಮಗೆಲ್ಲಾ ಇದನ್ನ ತೆಗೆದು ಒಗಾಸಿ ಬಿಟ್ಟು ನಿಮ್ಮ ಜನದ ಹಂಗೇ ಸೀರೆ ಉಟ್ಕೊಬೇಕೊಂತ ಆಸೆ. ಆದರೆ ನಮ್ಗ

ಗುರು ನಮ್ಮನ್ನ ಜಾತಿಯಿಂದ ತೆಗೆದುಬಿಡ್ತಾನೆ. ನಮಗೆಲ್ಲಾ ಜುಲ್ಮಾನೆ ಹಾಕಿಸಿಬಿಡ್ತಾನೆ."

"ಅಲ್ಲಿ ನಿಂಗೆ ಇದೆಲ್ಲಾ ಭಯಾನೇ ಇಲ್ಲ."

"ಹಾಗಾದ್ರೆ ಬೇಗ ಕರಕೊಂಡು ಹೋಗಿ ಬಿಡಿ ಸಾವ್ಕಾರ್ರೆ. ನಂಗೆ ಈ ಗಂಡನ ಕೈಲಿ ಸಾಕಾಗಿದೆ. ಈ ಆರು ಜನ ಸವತೀರ ಕಾಟ ಬೇರೆ."

"ಪರವಾಗಿಲ್ಲ ಕಣೇ. ಲಂಬಾಣಿ ಜಾತಿಯವನಾದ್ರೂ ನಿನ್ನ ಗಂಡ ಆರು ಜನ ಒಳ್ಳೇ ಹುಡೀಗೀರನ್ನೇ ಮದುವೆಯಾಗಿದಾನೆ."

"ಆದರೇನು ಸಾವ್ಕಾರ್ರೆ. ಒಬ್ಬರಿಗೂ ಅವನಿಂದ ಮಕ್ಕಳೇ ಆಗಿಲ್ಲ."

"ನನ್ನಿಂದ ?"

"ಥೂ. ಇದೇನು ಹೀಂಗೆ ಕೇಳ್ತೀರಾ ?"

"ಸೋಮ್ಲಿ....ನೀನು ನಮ್ಮ ಜಾತೀಲಿ ಹುಟ್ಟಬೇಕಾಗಿತ್ತು ಕಣೆ. ಸಾವಕಾರ್ರೆಲ್ಲ ನಿನಗೋಸ್ಕರ ಬಾಯಿ ಬಾಯಿ ಬಿಡುತ್ತಿದ್ದರು."

"ಹೌದು. ಅದಕ್ಕೆಲ್ಲ ಪುಣ್ಯ ಮಾಡಿರಬೇಕಂತೆ. ನಾನು ಎಷ್ಟು ಪಾಪ ಮಾಡಿ ಈ ಲಂಬಾಣಿ ಜಾತೀಲಿ ಹುಟ್ದೆ !"

"ಆದರೇನು ನೀನು ಎಷ್ಟು ಸುಂದರವಾಗಿದ್ದಿ, ನಿನ್ನ ಈ...."

"ಥು....ಇದೇನು ಸಾವ್ಕಾರ್ರೆ ಇವತ್ತು ಏನೇನೋ ಹೇಳ್ತೀರಿ.... ಈವತ್ತು ನಿಮ್ಮ ಸೀಮೆಯಿಂದ ಬಂದಿದೀರಿ. ಏನೇನೋ ಮಾತು ಜೊತೇಲಿ ತಗೊಂಡು ಬಂದಿದೀರಾ ?"

ಇಬ್ಬರೂ ಖೊಳ್ಳೆಂದು ನಕ್ಕರು. ಲಂಬಾಣಿ ಹೇಳಿದಳು,

"ಹೊಸ ಸಾವ್ಕಾರು ಬಂದಿದಾರೆ ಸೀಮೆಯಿಂದ. ಅವರು ಬಂದು ಐದಾರು ದಿನ ಆಯ್ತು. ಅವರು ದಿನಾ ಒಬ್ರೇ ಗುಡ್ಡಾನೆಲ್ಲಾ ಸುತ್ತುತ್ತಾರೆ."

"ಈಗ ಗಣೀಲಿದಾರ ?"

"ಇಲ್ಲ. ಆಗಲೇ ಎಲ್ಲೋ ಹೋಗಿಬಿಟ್ರು. ಅವರು ತುಂಬಾ ಚುರುಕು ಸಾವಕಾರ್ರೆ !"

"ಯಾಕೆ ಹಾಗೆ ಹೇಳ್ತಿ ? ಯಾರನ್ನಾದರೂ ?....!"

"ಥು....ನಿಮಗೆ ಅದೇ....ಪಾಪ ಅವರು ಒಬ್ಬರನ್ನ ಕಣ್ಣೆತ್ತಿ ನೋಡಾಕಿಲ್ಲ....ಸದಾ ಗಣೀಲೇ ಇರ್ತಾರೆ. ಅಲ್ಲಿ ಇಲ್ಲಿ ಓಡಾಡ್ತಿರ್ತಾರೆ. ತುಂಬಾ ಕೆಲಸ ಮಾಡ್ತಾರೆ. ಪಾಪ....ಸೀಮೇಲಿ ಹೆಂಡಿರಿದಾರೋ ಏನೋ.... ಲಗ್ನಾ ಆಗೈತೋ ಇಲ್ವೋ....!"

"ಲಗ್ನ ಆಗದಿದ್ರೆ ಯಾರನ್ನಾದರೂ ಕೊಡಿಸ್ತೀಯಾ ?"

"ಅವರು ಮಾಡ್ಕೊಣೂದಾದ್ರೆ ನಮ್ಮ ತಾಂಡದ ಹುಡುಗೀರು ಏಸು ಜನಾ ಅವರ ಹತ್ರ ಹೋಗಾಕಿಲ್ಲಾ ! ಅಂಥ ಸಾವ್ಕಾರ್ರ ಹತ್ರ ಹೋಗಾದೇ ಒಂದು ಪುಣ್ಯ ನಮ್ಮ ಜನಕ್ಕೆ "

ಶಾಂತಪ್ಪನಿಗೆ ಈ ಮಾತುಗಳನ್ನು ಕೇಳಿ ನಗೆ ಬಂದಿತು. ಹಾಗೆಯೇ ವಿಸ್ಮಯವೂ ಆಯಿತು. ಮಾತನಾಡುತ್ತಿದ್ದ ಹೆಣ್ಣು ಸೋಮ್ಲಿ ಎಂಬ ಲಂಬಾಣಿ; ಅವನು ಬಹುಶಃ ಕಂಟ್ರಾಕ್ಟರು ಕೃಷ್ಣಯ್ಯನಿರಬಹುದು. ಅವನಿಗೆ ಕಂಪೆನಿಯವರು ಕಂಟ್ರಾಕ್ಟ ಕೊಟ್ಟಿದ್ದರು, ಅದರೆ ಅವನು ಹೊನ್ನೂರಿನಲ್ಲಿ ಹೆಚ್ಚು ದಿನವಿರುತ್ತಿರಲಿಲ್ಲ. ವಾರಕ್ಕೆ ಒಂದೆರಡು ದಿನ ಹೊನ್ನೂರಿನಲ್ಲಿರುತ್ತಿದ್ದ. ಉಳಿದ ದಿನಗಳನ್ನು ಶಿವಮೊಗ್ಗೆಯಲ್ಲಿಯೇ ತನ್ನ ಮನೆಯಲ್ಲಿ ಕಳೆಯುತ್ತಿದ್ದ. ಅವನು ಈ ದಿನ ಹಿಂದಿರುಗಿ ಬಂದಿರಬಹುದು. ಆದರೆ ಇಲ್ಲಿಯೂ ಸಹ ಇದೇ ಕಥೆಯೇ ?

ಅವನಿಗೆ ಕರಡಿ ಮಠದ ಸ್ವಾಮಿಗಳ ನೆನಪಾಯ್ತು. ಆದಿನ ರಾತ್ರಿಯೂ ಸಹ ಶಿವಗಂಗೆಯ ಮಾತುಗಳು ಹೀಗೆಯೇ ಕಿವಿಯ ಮೇಲೆ ಬಿದ್ದಿದ್ದುವು; ಸ್ವಾಮಿಗಳ ಉದ್ರೇಕಿತ ಶಬ್ದಗಳೂ ಹೀಗೆಯೇ ಕಿವಿಯ ಮೇಲೆ ಬಿದ್ದಿದ್ದುವು. ಆದರೆ ಅವರು ಮಠದ ಒಳಗೆ ಹೋಗಿದ್ದರು ಯಾರಾದರೂ ನೋಡಿಯಾರೆಂಬ ಭಯದಿಂದ. ಇಲ್ಲಿ ಇವರು ಇಲ್ಲಿಯೇ....

"ಸಾವ್ಕಾರ್ರೆ ನಿಮ್ಮ ಹೆಂಡಿರು ನಿಮ್ಕನ್ನ ಬಯ್ಯಾಕಿಲ್ವೆ? ಅವರ ಹತ್ತಿರಾನೂ ಹೀಗೇನೆ ಎಲ್ಲಾ ಆಡ್ತೀರಾ ? ..." ಸೋಮ್ಲಿ ಕೇಳುತ್ತಿದ್ದಳು!

ಶಾಂತಪ್ಪನಿಗೆ ಅಸಹ್ಯವಾಯಿತು. ಹಾಗೆಯೇ ಹಿಂದಕ್ಕೆ ಹೊರಟು ಹೋಗಿ ಬೇರೆ ಹಾದಿಯಿಂದ ಗುಡ್ಡದ ಮೇಲೆ ಹೊರಟ. ಇಲ್ಲಿಯೂ ಇದೇ ಕಥೆ. .. ಎಲ್ಲೆಲ್ಲಿಯೂ ಇದೇ ಕಥೆ. ಮಲೆನಾಡಾದರೇನು,ಬಯಲಾದರೇನು? ಕಾಡಾದರೂ ಒಂದೇ, ಊರಾದರೂ ಒಂದೇ. ಎಲ್ಲಿಯೂ ಇದೆ ಕಥೆ. ಹೆಣ್ಣು ಗಂಡು ಒಂದನ್ನೊಂದು-ಕಂಡರೆ ಇದೆ, ಇದೆಯೇ ನಡವಳಿಕೆ. ಆ ಪ್ರಕೃತಿ ಮಾನವನಲ್ಲಿ ಆರ್ಷೇಯ ಕಾಲದಿಂದ ತುಂಬಿ ಬಂದಿದೆ........

ಶಾಂತಪ್ಪ ಯೋಚಿಸುತ್ತಾ ಗುಡ್ಡವೇರುತ್ತಿದ್ದಾಗ ಒಮ್ಮೆ ಹಿಂದಿರುಗಿ ನೋಡಿದ. ಕೆಳಗೆ ದೂರದಲ್ಲಿ ಮರಗಳ ಸಂದಿನಲ್ಲಿ ಸೋಮ್ಲಿ ಕೃಷ್ಣಯ್ಯರ ಬಟ್ಟೆಗಳು ಕಾಣುತ್ತಿದ್ದುವು. ಅವನು ಹಿಂದಿರುಗಿ ಪುನಃ ನೋಡದೆ ಗುಡ್ಡವೇರಿ ಗಣಿಯತ್ತ ಹೊರಟುಹೋದ.

ಲಂಬಾಣಿಗರು ಕಾಡು ಜನ ; ಆದರೆ ಸಂಗೀತ, ಕಸೂತಿ, ಚಿತ್ತಾರ ಮೊದಲಾದ ಕಲೆಗಳ ವಿಷಯದಲ್ಲಿ ಅತಿ ಆಸಕ್ತಿಯವರಿಗೆ. ಇಲ್ಲಿಯೂ ಅದಿರನ್ನು ಒಡೆಯುತ್ತಿದ್ದವರು ಹೆಂಗಸರೇ. ಹಾಗೆ ಒಡೆಯುವಾಗ ಎಲ್ಲ ಹೆಣ್ಣುಗಳೂ ಒಟ್ಟಿಗೇ ಹಾಡುತ್ತಾ ಇರುವಾಗ ತಾಳಬದ್ಧವಾಗಿ ಬೀಳುತ್ತಿದ್ದ ಅವರ ಸುತ್ತಿಗೆಯೇಟು ಅವರ ಸಂಗೀತ ಜ್ಞಾನವನ್ನು ತೋರುತ್ತಿದ್ದುವು. ಕುಳಿತಂತೆಯೇ ಹಾಡು ಕಟ್ಟಿ ಹೇಳುವುದರಲ್ಲಿ ಅವರು ಪ್ರವೀಣೆಯರಾಗಿದ್ದರು. ಒಂದೊಂದು ದಿನ ಹೇಳುತ್ತಿದ್ದರು,

"ಗಾಂಧಿ ಟೋಪಿವಾಲಾರೆ, ಸಿಲ್ಕು ಟೋಪಿವಾಲಾರೆ
ವೋಟು ಪೂಛನೇಕೊ ಆಯಾರೆ........
ಡುಬೇ........ಡುಬೇ........"

ಇವನ್ನು ಕೇಳಿ ಶಾಂತಪ್ಪ ಬಿದ್ದು ಬಿದ್ದು ನಗುತ್ತಿದ್ದ. ಒಂದು ದಿನ ಹಾಗೆ ಹೇಳುತ್ತಿದ್ದ ಯುವತಿಯೋರ್ವಳನ್ನು ಕೇಳಿದ,

"ಅದೇನು, ನೀನು ಹೇಳುವುದರ ಅರ್ಥ ?"

ಅವನ ಪ್ರಶ್ನೆ ಕೇಳಿ ಎಲ್ಲರೂ ಖೊಳ್ಳನೆ ನಕ್ಕರು. ಪಕ್ಕದಲ್ಲೇ ಕುಳಿತಿದ್ದ ಅವಳ ತಾಯಿಯೆಂದಳು,

"ನೀವು ಅದನ್ನ ಕೇಳಿದರೆ ನಗ್ತೀರಾ ಸಾವ್ಕಾರ್ರೆ."

"ಪರವಾಗಿಲ್ಲ ಹೇಳು. ಕೇಳೋಣ."

"ಬೋಲ್ ಬಾಯ್ನಿ !" ತಾಯಿ ಮಗಳಿಗೆ ಹೇಳಿದಳು.

"ಇಲ್ಲಿಗೆ ನಿಮ್ಮ ಸೀಮೆಯಿಂದಾ ಓಟು ಕೇಳೋಕೆ ಜನಾ ಬಂದಿದು ಸಾವ್ಕಾರ್ರೆ. ಅವರು ಬಂದೋರೆಲ್ಲಾ ಗಾಂಧಿ ಟೋಪಿ ಮಡಕ್ಕೊಂಡಿದ್ರು. ಅವರಲ್ಲಿ ಒಬ್ಬ ಸಿಲ್ಕಿನ ಟೋಪಿ ಮಡಕ್ಕೊಂಡಿದ್ರು. ಅವರು ಬಂದು ತುಂಬಾ ಮಾತಾಡಿದ್ರು....ಭಾಷಣ ಹೇಳಿದ್ರು. ನಿಮಗೆ ಮನೆ ಕೊಡಿಸ್ತೀವಿ, ಜಮೀನು ಕೊಡಿಸ್ತೀವಿ, ನೀವು ಕಾಡು ಜನ ನಿಮ್ಮನ್ನ ಸೀಮೆ ಜನರನ್ನಾಗಿ ಮಾಡ್ತೀವಿ, ನಿಮ್ಮನ್ನ ಮುಂದೆ ತರ್ತೀವೀಂತ, ಏನೇನೋ ಹೇಳಿದ್ರು. ಇಲ್ಲಿ ಎರಡು ದಿನಾ ಇದ್ದು ನಮ್ಮ ತಾಂಡದ ಎಲ್ಲಾರ ಮನೇಲೂ ಹಾಲು ಮೊಸರು ಖಾಲಿ ಮಾಡಿ ಹೊಂಟೋದ್ರು. ನಾವು ಅವರಿಗೇ ಓಟು ಕೊಟ್ಟೆವು. ಈಗ ಅವರು ಬಂದು ಎಲ್ಡು ವರ್ಸ ಆತು. ಅವರ ಪತ್ತೇನೆ ಇಲ್ಲ. ಮನೇ ಜಮೀನು ಎಲಾ ಅವರ ಹತ್ರಾನೇ ಉಳ್ಕೊಂತು !....ನಾವು ಕಾಡು ಜನಾನೇ ಆಗಿದೀವಿ...."

ಬಾಯ್ನಿ ಮಾತು ನಿಲ್ಲಿಸಿದಳು. ಪುನಃ ಎಲ್ಲರೂ ಖೊಳ್ಳನೆ ನಕ್ಕರು.

"ಇನ್ನೊಂದು ಸಲ ವೋಟು ಕೇಳಾಕೆ ಬಂದರೆ ಕೇಳ್ತೀವಿ ಬಿಡೋಕಿಲ್ಲ" ಎಂದಳು ಪುನಃ ಬಾಯ್ನಿ.

"ಏನು ಕೇಳ್ತಿ ?"

"ಮನೆ ಜಮೀನು ಎಲ್ಲಾ ಎಲ್ಲಿ ಅಂತ!" ಬಾಯ್ನಿ ಧೈರ್ಯವಾಗೆಂದಳು. ಶಾಂತಪ್ಪನೂ ನಕ್ಕ. ಅವನು ಮೇಲೆ ಗಣಿಯ ಬಳಿ ಹೋದಾಗ ಕೆಲಸಗಾರರು ಹಲವರು ಅವನನ್ನು ನೋಡಿ ಗೌರವ ಪೂರ್ಣವಾಗಿ ನಡೆದುಕೊಂಡರು. ಅಲ್ಲಿಯೇ ನಿಂತಿದ್ದ ಕೃಷ್ಣಯ್ಯ ಅವನನ್ನೇ ನೋಡುತ್ತಿದ್ದವನು ಬೇರೆಡೆಗೆ ಮುಖ ತಿರುಗಿಸಿಕೊಂಡ. ಅಲ್ಲಿ ತನಗೆ ದೊರೆವ ಗೌರವ ಕೃಷ್ಣಯ್ಯನಿಗಿರಲಿಲ್ಲ ವೆಂದು ಶಾಂತಪ್ಪ ಮನಗಂಡಿದ್ದ. ಕೆಲಸಗಾರರೆಲ್ಲರಿಗೂ ಕೃಷ್ಣಯ್ಯ-ಸೋಮ್ಲಿ ಯರ ಈ ಸಂಬಂಧ ತಿಳಿದಿದ್ದಿತು. ಅವರೆಲ್ಲರೂ ಸುಮ್ಮನಿರುತ್ತಿದ್ದರು; ಆದರೆ ಕೃಷ್ಣಯ್ಯನ ಬಗೆಗೆ ಅವರಲ್ಲಿ ಗೌರವವಿರಲಿಲ್ಲ.

ಕೃಷ್ಣಯ್ಯ ವಿದ್ಯಾವಂತ. ಶಿವಮೊಗ್ಗೆಯಲ್ಲಿ ರಾಜಕೀಯ ಮುಂದಾ ಳಾಗಿದ್ದವನು. ಆದರೆ ರಾಜಕೀಯದಲ್ಲಿ ಅವನು ಎಲ್ಲೆಲ್ಲಿಯೂ ಸೋಲನ್ನೇ ಅನುಭವಿಸಿದವನು. ಅವನು ಸಮಾಜವಾದಿಯೆಂದು ಹೇಳಿಕೊಂಡು ಕಾರ್ಮಿ ಕರ ಸಂಬಂಧ ಬೆಳೆಸಿದ್ದ ಕೆಲದಿನ. ತನ್ನ ಕಾರ್ಮಿಕ ಮುಖಂಡತ್ವದ ಉಪ ಯೋಗ ಪಡೆದುಕೊಂಡು ಸರ್ಕಾರದಲ್ಲಿ ತನಗೆ, ತನ್ನ ಶ್ರೀಮಂತ ಮಿತ್ರರನೇಕ ರಿಗೆ ಸೌಲಭ್ಯ ಕಲ್ಪಿಸಿಕೊಂಡ. ಈಚೆಗೆ ಸಮತಾವಾದ, ಸಮಾಜವಾದ ತತ್ವಗಳ ವಿರುದ್ಧವಾಗಿ ಗಣಿಯ ಕಂಟ್ರಾಕ್ಟು ಪಡೆದುಕೊಂಡು ಕೂಲಿಗಾರರ ಹಣದಲ್ಲಿ ಪಾಲುಗೊಳ್ಳುತಿದ್ದನೆಂದು ಅವನಲ್ಲಿ ಕಾರ್ಮಿಕರ ಪ್ರೀತಿ ಸಂಪೂರ್ಣ ಮಾಯವಾಗಿತ್ತು.

ಈಗವನು ಶಿವಮೊಗ್ಗೆಯಸಾರ್ವಜನಿಕ ದೃಷ್ಟಿಯಲ್ಲಿ 'ತರಲೆ ಕೃಷ್ಣಯ್ಯ'. ತನ್ನ ಹುಟ್ಟೂರಿನಲ್ಲಿ ಗೌರವ ಕಳೆದುಕೊಂಡಿದ್ದುದರಿಂದ ಹೊನ್ನೂರಿನಲ್ಲಿ ಬಂದು ಇರತೊಡಗಿದ್ದ. ಇಲ್ಲಿ ಅವನಿಗೆ ಸೋಮ್ಲಿ ಗಂಟುಬಿದ್ದಿದ್ದಳು. ಶಾಂತ ಪ್ಪನೂ ಅವಳನ್ನು ನೋಡಿದ್ದ. ಅವಳಿಗೆ ಸುಮಾರು ಇಪ್ಪತ್ತೈದು ವರ್ಷ ವಯಸ್ಸಿರಬಹುದು. ಲಂಬಾಣಿಯಾದರೂ ಅವಳ ಆ ರೂಪ ಎಂತಹವನನ್ನಾ ದರೂ ಆಕರ್ಷಿಸುತ್ತಿದ್ದಿತು. ಆ ರೂಪಕ್ಕೆ ಕೃಷ್ಣಯ್ಯ ಮರುಳಾಗಿದ್ದ. ಮರು ಳಾಗಿ ತನ್ನ ಕೂಲಿಗಾರರಲ್ಲಿ ಗೌರವ ಕಳೆದುಕೊಂಡಿದ್ದ.

ಹೊನ್ನೂರಿನ ಸುತ್ತಲಿದ್ದ ತಾಂಡಗಳ ಲಂಬಾಣಿಗರ ಸೌಂದರ್ಯವೇ

ಹಾಗಿದ್ದಿತು. ಪಟ್ಟಣಗಳಲ್ಲಿ ಶಾಂತಪ್ಪ ನೋಡಿದ್ದಂತಹ ಲಂಬಾಣಿಗರಂತಿರಲಿಲ್ಲ ಅವರು. ಬಿಳುಪಾಗಿ, ಅಂಗಾಂಗಗಳಲ್ಲಿ ಸೌಂದರ್ಯ ತುಂಬಿಕೊಂಡು ನೋಡಿದವರನ್ನಾಕರ್ಷಿಸುತ್ತಿದ್ದರು. ಅವರ ಬಿಳಿ ಕೈಗಳ ಮೇಲೆ, ಗಲ್ಲಗಳ ಮೇಲೆ ಅವರು ಬರೆಸಿಕೊಳ್ಳುತ್ತಿದ್ದ ಚಿತ್ರಗಳ ಕರಿ ಮಚ್ಚೆಗಳು ದೂರಕ್ಕೇ ಎದ್ದು ಕಾಣುತ್ತಿದ್ದುವು. ತಮ್ಮ ಲಂಗ 'ದುಪ್ಪಟ್ಟ'ಗಳ ಮೇಲೆ ಅವರು ರಚಿಸುತ್ತಿದ್ದ ಕಸೂತಿ ಚಿತ್ರಗಳು ಅವರ ಚತುರತೆಯ ಪ್ರದರ್ಶನಗಳಾಗಿದ್ದುವು.

"ನಿಮ್ಗೆ ಏಸು ಮಕ್ಕಳು ಸಾವ್ಕಾರ್ರೆ ?" ಒಂದು ದಿನ ಮುದುಕಿಯೋರ್ವಳು ಕೇಳಿದ್ದಳು. ಬೇರೆ ಯಾರಾದರೂ ಆ ಪ್ರಶ್ನೆ ಕೇಳಿದ್ದರೆ ಶಾಂತಪ್ಪನು ಆ ಉದ್ಧಟತನಕ್ಕೆ ತಕ್ಕ ಉತ್ತರ ಕೊಡುತ್ತಿದ್ದನೇನೋ. ಹಾಗೆ ಸ್ವಂತ ವಿಷಯಗಳನ್ನು ಕೇಳುವುದು ನಾಗರೀಕ ವರ್ತನೆಯಲ್ಲ. ಆದರೆ ಮುದುಕಿಯ ಮುಗ್ಧತೆ, ಮತ್ತು ಕುತೂಹಲಗಳನ್ನು ನೋಡಿ ನಕ್ಕು ಶಾಂತಪ್ಪನೆಂದ,

"ನಂಗೆ ಮದ್ವೇನೆ ಆಗಿಲ್ಲ ಮುದುಕಮ್ಮ !"

"ಇದೇನು ಸಾವ್ಕಾರ್ರೇ ಹೀಂಗೆ ಹೇಳ್ತೀರಿ. ನಮ್ಮ ಜನದಾಗೆ ಹದಿನೆಟ್ಟಕ್ಕೇ ಮದ್ವಿ ಮಾಡಿಬಿಡ್ತೀವಿ. ನೀವು ಇನ್ನಾ ದೊಡ್ಡೋರು, ಇನ್ನೂ ಲಗ್ನ ಆಗಿಲ್ಲಾ...."

"ನನಗೆ ಯಾರೂ ಹೆಣ್ಣು ಕೊಡೋದಿಲ್ಲ ಮುದುಕಮ್ಮ."

"ಯಾಡೀ....ಅದ್ಯಾಕೆ ಕೊಡಾಕಿಲ್ಲ ಸಾವ್ಕಾರ್. ನೀವು ದೇವರಿದ್ದಂಗೆ ಅದೀರ. ಈಸೊಂದು ದೊಡ್ಡ ಗಣೀ ಸಾವ್ಕಾರ್ರಾಗಿದೀರಿ. ಸೀಮೇಲಿ ದೊಡ್ಡ ದೊಡ್ಡ ಪರೀಕ್ಷೆ ಓದಿದೀರಿ." ಬಯಲು ಸೀಮೆಯ ಜನದ ಬಗ್ಗೆ ಮಲೆನಾಡಿನ ಮಧ್ಯಭಾಗದ ಈ ಅನಾಗರೀಕ ಮುದುಕಿ ತಳೆದಿದ್ದ ಭಾವಗಳ ಬಗ್ಗೆ ಶಾಂತಪ್ಪ ವಿಸ್ಮಯಗೊಂಡ.

"ಆದರೂ ಸಹ ನಮ್ಮ ಕಡೆ ಹುಡುಗೀರಿಗೆ ಯಾವಾಗಲೂ ಮಿನಿಸ್ಟರನ್ನೇ ಮದ್ವೆ ಆಗಬೇಕೂಂತ ಇಷ್ಟ. ಅವರಿಗೆ ಸಾವಿರಾರು ರೂಪಾಯಿ ಸಂಬಳ ತರೋರೇ ಗಂಡನಾಗಬೇಕು !" ಶಾಂತಪ್ಪನೆಂದ.

"ಮಿನಿಸ್ಟರೆಂದರೆ ಯಾರು ಸಾಪ್ಕಾರ್ರೆ?"

"ಅದೇ ನಿಮ್ಮ ಹುಡುಗೀರು ಹೇಳ್ತಾರಲ್ಲ 'ಗಾಂಧಿ ಟೋಪಿ'ವಾಲರು ಅವರೇ ಈಗ ದೇಶ ಆಳೋರು."

"ಹಾಗಂದ್ರೆ ಈಗ ಅವರೇ ಮಹಾರಾಜರೇನು ?"

"ಮಹಾರಾಜರಲ್ಲ. ಆದರೂ ಅವರೇ ರಾಜ್ಯ ಆಳೋರು."

"ಹಾಗಾದ್ರೆ ಮಹಾರಾಜರೆಲ್ಲಿದಾರೆ ಈಗ ?"

"ಮಹಾರಾಜರೂ ಇದಾರೆ ಮೊದಲಿದ್ದ ಹಾಗೇನೆ. ಈ ಗಾಂಧಿ ಟೋಪಿಯೋರು ಈಗ ಮಂತ್ರಿಗಳು."

"ಅದೇನೋ ನಮಗೆಲ್ಲಾ ಅರ್ಥವಾಗೋಕಿಲ್ಲ ಸಾವ್ಕಾರ್ರೆ. ನಮ್ಮ ರೇಖ್ಯಾನ ಅಣ್ಣ ಬೆಂಗಳೂರು ಸೀಮೇಲಿ ಅದಾನಂತೆ. ಅವನಿಗೆಲ್ಲ ಗೊತ್ತಿರಬೇಕು. ಅವನ ಹೆಸ್ರು ಹೆಮ್ಲ್ಯ ಅಂತ. ನಿಮಗೆ ಅವನು ಗೊತ್ತಾ ?"

"ಅವನು ಎಲ್ಲಿದಾನೆ ಈಗ ?"

"ಬೆಂಗಳೂರಿನಲ್ಲಿ ಬಟ್ಟೆ ಮಾಡೋ ಗಿರಣಿ ಅಂತಲ್ಲ. ಅಲ್ಲಿದಾನೆ. ಇಲ್ಲೇ ಇದ್ದಿದ್ರೆ ಆಗೋದು ಸಾವ್ಕಾರ್ರೇ....ಮುಂಡೇದು ಅವರಪ್ಪನ ಹತ್ರ ಜಗಳ ಮಾಡಿಕೊಂಡು ಒಂದು ದಿನ ರಾತ್ರೆ ಓಡಿಹೋಯ್ತು."

"ಜಗಳ ಯಾಕೆ ಮಾಡಿದ ?"

"ಅಯ್ಯೋ, ಅದೊಂದು ದೊಡ್ಡ ಕತೆ. ಈ ಬಾಯ್ನಿ ಅದಾಳಲ್ಲ. ಅವರ ಅಕ್ಕನ ಮದ್ವೆ ಮಾಡ್ಕೋಬೇಕೂಂತ ಅವನ ಆಸೆಯಿತ್ತು. ಅವನಪ್ಪ ಆ ಹಾಲೀನೆ ಮಾಡ್ಕೋಬೇಕೂಂತ ಹೇಳಿದ. ಹೇಮ್ಲ್ಯ ಒಪ್ಪಲಿಲ್ಲ. ಒಂದು ರಾತ್ರೆ ಅಪ್ಪ ಮಕ್ಕಳಿಗೆ ಜಗಳಾ ಆತು. ಅವನು ಓಡಿಹೋದ. ಅವ ಓಡಿ ಹೋದ ಮ್ಯಾಲೆ ಬಾಯ್ನಿ ಅಕ್ಕ, ಸೀತ್ಲೀಂತ ಅವಳ ಹೆಸರು, ಅವಳು ಕೆರೆಗೆ ಬಿದ್ದು ಪ್ರಾಣಬಿಟ್ಟಳು....ಅನ್ಯಾಯವಾಗಿ ಒಂದು ಜೀವ ಸತ್ತೋಯ್ತು !" ಮುದುಕಿ ಕಣ್ಣೊರೆಸಿಕೊಂಡಳು. ಶಾಂತಪ್ಪನಿಗೂ ಯಾವುದೋ ಒಂದು ತೆರನಾದ ವೇದನೆಯಾಯಿತು. ಮುದುಕಿ ಪುನಃ ಹೇಳಿದಳು,

"ಆಮೇಲೆ ಹೇಮ್ಲ್ಯನ ಅಪ್ಪ, ಅವ ನನ್ನ ಗಂಡ, ಸೀತ್ಲಿ ಅಪ್ಪನ ಸಂಗಡ ಜಗಳಾ ಮಾಡ್ದ, ನನ್ನ ಮಗ ಓಡಿಹೋಗೋಕೆ ನೀನೇ ಕಾರಣಾಂತ. ಅವನು ಪಾಪ ಮಗಳು ಸತ್ತುಹೋದ್ದಕ್ಕೆ ಅಳ್ತಿದ್ದ. ಇವನ ಮಾತು ಕೇಳಿ ಇವಂಗೆ ಚೆನ್ನಾಗಿ ಹೊಡೆದು ಕಳಿಸ್ಬಿಟ್ಟ. ಅಷ್ಟಕ್ಕೇ ನನ್ನ ಗಂಡ ಅವನ್ನ ಒಂದು ರಾತ್ರೆ ಮರಕ್ಕೆ ನೇತುಹಾಕಿಸಿಬಿಟ್ಟ !"

"ಛೆ....ಮರಕ್ಕೆ ನೇತು ಹಾಕಿಸಿಬಿಟ್ಟನೆ ?"

"ಹೌದು ಸಾವ್ಕಾರ್ರೆ. ಅದೂ ಗೊತ್ತಾದ್ದು ಒಂದಿನಾ ನಳಿನೀಪುರಕ್ಕೆ ನಾನು ಹೋಗ್ತಿದ್ದಾಗ. ಆ ದೊಡ್ಡಮರದ ಮೇಲಿಂದ ಗಬ್ಬು ವಾಸನೆ ಬರ್ತಿತ್ತು.

ಆಗ ನೋಡಿದೆ. ಮೇಲೆ ಹೆಣ ತೂಗಾಡ್ತಿತ್ತು. ಹೆಣದ ತುಂಬಾ ಹುಳುಗಳು ಬಂದುಬಿಟ್ಟಿದ್ವು. ಅಯ್ಯಪ್ಪ!........ಜ್ಞಾಪಿಸಿಕೊಂಡ್ರೇ ಭಯವಾಗ್ತೈತೆ."

"ಅದು ಹೋಗ್ಲಿ. ಹಾಗೆಲ್ಲಾ ಬೇರೆ ಯಾರ ಕೈಲೂ ಹೇಳಬೇಡ ಮುದ್ಕಿ. ನಿನ್ನ ಗಂಡನಿಗೆ ಇದರಿಂದ ತೊಂದರೆಯಾಗುತ್ತೆ."

"ತೊಂದರೆಯಾಗಾಕೆ ಅವನು ಇದ್ದರೆ ತಾನೇ ಈಗ. ನೇಣುಹಾಕಿಸಿ ಕೊಂಡೋನು ದೆವ್ವ ಆಗಿ ಬಂದು ನನ್ನ ಗಂಡನ್ನ ತಿಂದ್ಕೊಂಡು ಹೋದ!"

ಈ ಕಥೆ ಕೇಳಿ ಶಾಂತಪ್ಪನಿಗೆ ಭಯ, ಆಶ್ಚರ್ಯಗಳಾದುವು. ಸೌಂದರ್ಯ, ಕ್ರೌರ್ಯಗಳ ಮಿಶ್ರಣ ಈ ಕಾಡು ಜನರು. ಅದರೊಡನೆಯೇ ಮೌಢ್ಯ ತುಂಬಿದೆಯಿವರಲ್ಲಿ.

ಒಂದೊಂದು ದಿನ ಶಾಂತಪ್ಪನಿಗೆ ಬೇಸರ ಬಂದುಬಿಡುತ್ತಿದ್ದಿತು. ಹಾಡು ಹೇಳುತ್ತಾ ಕಸೂತಿ ಹಾಕುತ್ತಾ ಕುಳಿತ ಲಂಬಾಣಿಗರನ್ನು ಕೆಲಸಕ್ಕೆ ಹಚ್ಚ ಬೇಕಾದರೆ ಮೇಸ್ತ್ರಿಗಳಿಗೆ ಸಾಕುಬೇಕಾಗುತ್ತಿದ್ದಿತು. ಎಷ್ಟೋ ಬಾರಿ ಆ ಹೆಂಗ ಸರನ್ನು ಹೊಡೆದು ಬಡೆದು, ಅವರ ಕಸೂತಿ ಸಾಮಗ್ರಿಗಳನ್ನು ಕಿತ್ತೆಸೆದು ಮೇಸ್ತ್ರಿಗಳು ಅವರನ್ನು ಕೆಲಸದಲ್ಲಿ ತೊಡಗಿಸುತ್ತಿದ್ದರು. ಒಂದು ದಿನ ಶಾಂತಪ್ಪ ಗಣಿಯಲ್ಲಿ ನಿಂತು ಕೆಲಸ ನೋಡುತ್ತಿದ್ದ:

"ಏ ರೇಖ್ಯಾ ಆ ದೊಡ್ಡ ಬಂಡೆ ಮೊದಲು ಉರುಳಿಸು. ಆಮೇಲೆ ಬುಡದಲ್ಲಿರೋ ಅದಿರು ತೆಗೆ. ಇಲ್ಲದಿದ್ರೆ ಬಂಡೆ ಮೇಲುರುಳಿಕೊಂಡೀತು," ಎನ್ನುತ್ತಿದ್ದ.

"ಕೃಷ್ಣಯ್ಯ ಸಾವ್ಕಾರ್ರು ಮೊದಲು ಅದಿರು ತೆಗೀಂತ ಹೇಳಿ ಹೋಗ್ಯಾರೆ ಸಾರ್!" ರೇಖ್ಯಾನೆಂದ. ಅವನೊಡನೆಯೇ ಲಚ್ಚ, ರಾಮ್ಯಾ, ಎಲ್ಲರೂ ಹೌದೆಂದರು.

"ಅವರು ಹೇಳಿದ್ರೆ ಹೇಳಲಿ. ಈಗ ನಾನು ಹೇಳಿದ್ಹಾಗೆ ಮಾಡಿ" ಎಂದ ಶಾಂತಪ್ಪನ ಮಾತು ಕೇಳಿ ಅವರಿಗೆ ವಿಸ್ಮಯವಾಯಿತು. ಶಾಂತಪ್ಪ ಬರುವ ಮೊದಲು ಗಣಿಯಲ್ಲಿ ಯಾರೂ ಮೇನೇಜರಾಗಲೀ ಭೂಗರ್ಭ ಶಾಸ್ತ್ರಜ್ಞ ರಾಗಲೀ ಇರಲಿಲ್ಲ. ಅದುವರೆಗೆ ಕಂಟ್ರಾಕ್ಟರಾದ ಕೃಷ್ಣಯ್ಯನೇ ಎಲ್ಲವನ್ನೂ ನೋಡಿಕೊಂಡು ಹೋಗುತ್ತಿದ್ದ ; ಅವನೇ ಬೆಂಗಳೂರಿನ ಕಂಪೆನಿಯ ಕಚೇರಿ ಯಿಂದ ಹಣ ತಂದು ಬಟವಾಡೆ ಮಾಡುತ್ತಿದ್ದ. ಆದ್ದರಿಂದ ಅವನೇ ಗಣಿಯ ಮಾಲೀಕನೆಂದು ಕೂಲಿಗಾರರು ಭಾವಿಸಿದ್ದರು. ಆದರೆ ಹೊಸದಾಗಿ ಬಂದ ಈ ಹುಡುಗ ಕೃಷ್ಣಯ್ಯನವರ ಆಜ್ಞೆಯ ವಿರುದ್ಧ ಹೇಳುತ್ತಿದ್ದಾನೆ !

"ಹಾಗೆ ಮಾಡಿದರೆ ಕೃಷ್ಣಯ್ಯ ಸಾವ್ಕಾರ್ರು ಏನೂ ಅನ್ನೋಕಿಲ್ಲವಾ ಸಾರ್?" ಅವರು ಕೇಳಿದರು ಕುತೂಹಲದಿಂದ ಶಾಂತಪ್ಪನ ಮುಖವನ್ನೇ ನೋಡುತ್ತಾ.

"ಹೇಳಿದಷ್ಟು ಕೆಲಸಮಾಡ್ರೋ. ಅವರು ಕೇಳಿದರೆ ನಾನು ಹೇಳಿದೇಂತ ಹೇಳಿ," ಎಂದು ಶಾಂತಪ್ಪ ರೇಗಿ ಹೇಳಿದ. ಕೂಲಿಗಾರರೆಲ್ಲಾ ಅವನ ಅನುಜ್ಞೆಯಂತೆ ಕೆಲಸ ಮಾಡ ತೊಡಗಿದರು. ಆದರೆ ಇವರಿಬ್ಬರಲ್ಲಿ ಯಾರು ಹೆಚ್ಚು? ವಯಸ್ಸಿನಲ್ಲಿ ಹಿರಿಯನಾಗಿ ಮೊದಲಿಂದಲೂ ಗಣಿ ನಡೆಸುತ್ತಿರುವ, ಸೋಮ್ಲಿಯನ್ನು ಇಟ್ಟುಕೊಂಡಿರುವ, ಕೃಷ್ಣಯ್ಯ ಸಾಹುಕಾರರೋ ಈ ಹುಡುಗನ ಹಾಗೆ ಕಾಣುತ್ತಿರುವ ಹೊಸ ಮೇನೇಜರರೋ?

ಸ್ವಲ್ಪ ಹೊತ್ತಿನನಂತರ ಎಲ್ಲಿಯೋಹೋಗಿದ್ದ ಕೃಷ್ಣಯ್ಯಹಿಂದಿರುಗಿ ಬಂದ. ಬಂದವನು ಗಣಿಯ ಕೆಲಸದ ರೀತಿಯನ್ನು ನೋಡಿ ಕೋಪಗೊಂಡು ಕೇಳಿದ,

"ಯಾಕೋ ಕತ್ತೆಗಳಾ....ಹೀಗೆ ಕೆಲಸ ಮಾಡ್ತಿದೀರಿ? ನಾನು, ಮೊದಲು ಆ ಅದಿರು ತೆಗೆದು ಬಿಟ್ಟು ಆ ಮೇಲೆ ಮೇಲಿನ ಬಂಡೆಯುರುಳಿಸಿ ಅಂತ ಹೇಳಿರಲಿಲ್ಲವೆ?"

ಕೂಲಿಗಾರರು ಮುಖ ಮುಖ ನೋಡಿಕೊಂಡರು. ಉತ್ತರ ಕೊಡುವುದರ ಔಚಿತ್ಯದ ಬಗ್ಗೆ ಯೋಚಿಸಿದರು. ಅವರ ಆ ಮೌನದಿಂದ ಇನ್ನೂ ಕೋಪಗೊಂಡ ಕೃಷ್ಣಯ್ಯ ಇನ್ನೂ ರಭಸವಾಗಿಯೇ ಕೇಳಿದ,

"ಯಾಕೆ ಸುಮ್ಮನಾದ್ರಿ. ಬೊಗಳಿ. ನಾನು ಏನು ಹೇಳಿದ್ದೆ?"

"ಆ ಹೊಸಬರು ಹೀಗೆ ಹೇಳಿದರು ಸಾರ್!" ರೇಖ್ಯಾ ಉತ್ತರವಿತ್ತ.

ಕೃಷ್ಣಯ್ಯ ಒಂದು ಕ್ಷಣ ನಿಂತು ಯೋಚಿಸುವಂತಾಯ್ತು. ತನ್ನ ಆಜ್ಞೆ, ಶಾಂತಪ್ಪನ ಬದಲಾವಣೆಗಳೆನ್ನು ತೂಗಿ ತೂಗಿ ನೋಡಿದ. ತನ್ನ ಗೌರವ ಹೊಸಬನ ಪ್ರಾಬಲ್ಯಗಳ ಪ್ರಶ್ನೆಗಳೂ ಪ್ರಾಮುಖ್ಯತೆ ಪಡೆದಿದ್ದುವು ಈ ತೂಗುವಿಕೆಯಲ್ಲಿ. ಕೊನೆಗೆ ಅವನು ಶಾಂತಪ್ಪನಿಗಾಗಿ ತಿರುಗಿನೋಡಿದ. ಶಾಂತಪ್ಪ ಆಗ ಹೆಂಗಸರ ಗುಡಿಸಲಿನಲ್ಲಿ ಅದಿರೊಡೆಯುವುದನ್ನು ಪಾಠ ಹೇಳಿ ಕೊಡುತ್ತಿದ್ದ ಒಬ್ಬಿಬ್ಬರಿಗೆ. ತಾನು ನಿಂತಲ್ಲಿಗೇ ಶಾಂತಪ್ಪನನ್ನು ಕರೆಯ ಬೇಕೆನಿಸಿತು ಒಮ್ಮೆ ಅವನಿಗೆ. ಆದರೆ ತಾನೇ ಗುಡಿಸಿಲಿನತ್ತ ನಡೆದ ನಿಧಾನವಾಗಿ. ಗಣಿಯ ಕೆಲಸಗಾರರಿಗೆ ಇದೊಂದು ಸೋಜಿಗದ ಸಂಗತಿ ಯಾಯಿತು.

ಶಾಂತಪ್ಪ—ಕೃಷ್ಣಯ್ಯರ ಮಾತುಕತೆಗಳ ರೀತಿಯೇ ಅವರ ಅನುಮಾನವನ್ನು ಬಗೆ ಹರಿಸುವಂತಿದ್ದುವು.

ಅಷ್ಟರಲ್ಲಿ ಶಾಂತಪ್ಪ ಸೋಮ್ಮಿಯತ್ತ ತಿರುಗಿದ್ದ. ಅವಳು ಕಬ್ಬಿಣದ ತುಣುಕುಗಳನ್ನು ಬಾಣಲೆಯಲ್ಲಿ ತುಂಬಿ, ಮ್ಯಾಂಗನೀಸಿನ ತುಣುಕುಗಳನ್ನು ಬಿಸುಡುತ್ತಿದ್ದಳು. ಅದನ್ನು ಹಲವಾರು ಬಾರಿ ನೋಡಿ ಶಾಂತಪ್ಪ ಕೊನೆಗೆ ಸಹಿಸದೇ ಅವಳ ಬಳಿ ನಡೆದ. ಅವಳು ಅವನು ಹತ್ತಿರ ಬರುತ್ತಿದ್ದಂತೆಯೇ ಬಾಣಲೆಯನ್ನು ಅವನ ಪರಿಶೀಲನೆಗಾಗಿ ಮುಂದಿಟ್ಟಳು. ಶಾಂತಪ್ಪ ಒಂದು ಹಿಡಿ ತುಣುಕುಗಳನ್ನು ಕೈಲಿ ತೆಗೆದುಕೊಂಡು ಒಂದೊಂದನ್ನೂ ನೋಡಿ ದೂರ ತುಯ್ದು ಬಿಸುಡುತ್ತಿದ್ದ. ಕೊನೆಗೆ ಕೇಳಿದ.

"ನಿನಗೆ ಕಬ್ಬಿಣ ಯಾವುದು ಮ್ಯಾಂಗನೀಸು ಯಾವುದು ಅನ್ನೋದು ಗೊತ್ತಿದೆಯಾ?"

"ಚೆನ್ನಾಗಿ ಗೊತ್ತಿದೆ ಸಾವ್ಕಾರ್ರೆ. ನಾನೇ ಇವರೆಲ್ರಿಗೂ ಹೇಳಿ ಕೋಡ್ತೀನಿ!" ಸೋಮ್ಮಿಯೆಂದಳು. ಅವಳ ಮಾತಿನಲ್ಲಿ ತುಂಬಿದ್ದ ಆ ಬೆಡಗು, ಮುಖದಲ್ಲಿ ಅವಳು ತುಂಬಿಕೊಂಡಿದ್ದ ಆಕರ್ಷಣೀಯ ನಗೆ, ಯಾವ ತಡೆಯೂ ಇಲ್ಲದೆ ಉಬ್ಬಿಕೊಂಡು ಸಡಿಲವಾದ ರವಿಕೆಯೊಂದರಿಂದ ಅರ್ಧ ಮರೆಯಾಗಿದ್ದರೂ, ನಿಂತಿದ್ದ ಶಾಂತಪ್ಪನಿಗೆ, ಕಾಣುತ್ತಿದ್ದ ಅವಳ ಹಾಲಿ ನಂತಹ ಎದೆ ಎಲ್ಲವೂ ನೋಡಿದವರಿಗೆ ಒಂದು ಕ್ಷಣ ಅವಳ ತಪ್ಪನ್ನು ಮರೆಸು ವಂತಿದ್ದುವು.

"ನೀನು ಮೊದಲು ಚೆನ್ನಾಗಿ ಕಲಿ. ಆ ಮೇಲೆ ಬೇರೆಯವರಿಗೆ ಹೇಳಿಕೊಡು."

"ಯಾಕೆ ಸಾವ್ಕಾರ್ರೇ. ಇದು ಚೆನ್ನಾಗಿಲ್ವ?"

"ನೀನು ಮ್ಯಾಂಗನೀಸನ್ನೆಲ್ಲಾ ಬಿಸಾಕಿ ಕಬ್ಬಿಣಾನ ಮಾತ್ರ ಬಾಣ ಲೇಲಿ ತುಂಬುತ್ತಿದಿ" ಶಾಂತಪ್ಪ ಹೇಳಿದ ಮಾತಿನಿಂದ ಅವಳಿಗೆ ನಿರಾಶೆಯಾ ಯಿತು. ತಾನು ಎಲ್ಲರಿಗೂ ಗುರುವೆಂದು ಅವಳು ಅದುವರೆಗೂ ಭಾವಿಸಿ ದ್ದಳು. ತನಗಿದ್ದ ಕೃಷ್ಣಯ್ಯನ ಬಲದಿಂದ ಅವಳು ಅಲ್ಲಿ ಕೆಲಸ ಮಾಡುತ್ತಿದ್ದ ಹೆಂಗಸರನ್ನೆಲ್ಲಾ ಆಳುತ್ತಿದ್ದಳು ಈಗ ಅವರೆಲ್ಲರೆದುರಿಗೇ ತನಗೆ ಮುಖ ಭಂಗವಾಗುತ್ತಿರುವುದರ ಅರಿವುಂಟಾಗಿ ಅವಳು ನಿರಾಶಳಾಗಿದ್ದಳು. ಆದರೆ ಶಾಂತಪ್ಪನ ಹಿಂದೆಯೇ ನಿಂತಿದ್ದ ಕೃಷ್ಣಯ್ಯ ತಕ್ಷಣ ಕೇಳಿದ,

"ಯಾಕೆ ಮಿಸ್ಟರ್ ಶಾಂತಪ್ಪ. ಅದು ಒಳ್ಳೆಯ ಅದಿರಲ್ಲವೆ?"

"ಯಾರು ಹೇಳಿದರು ಹಾಗಂತ! ಅದು ಬರೀ ಕಬ್ಬಿಣ. ಮ್ಯಾಂಗನೀಸಲ್ಲ."

"ನಿಮಗೆ ಗೊತ್ತಿಲ್ಲ ಮಿಸ್ಟರ್ ಕೃಷ್ಣಯ್ಯ. ಅದು ಬರೀ ಕಬ್ಬಿಣ. ಈ ಮ್ಯಾಂಗನೀಸಿನ ವಿಷಯವೇ ಹಾಗೆ. ಇದು ತುಂಬಾ ಮೋಸದ ಅದಿರು. ನೋಡೋಕೆ ಒಳ್ಳೆ ಗ್ರೇಡಿನ ಅದಿರಿನ ಹಾಗೇ ಕಾಣುತ್ತೆ. ಆದರೆ ಕಬ್ಬಿಣವಾಗಿರುತ್ತೆ."

"ಅದೇನೋ ಇರಬಹುದು. ಆದರೆ ಇದು ಮಾತ್ರ ಒಳ್ಳೇ ಮ್ಯಾಂಗನೀಸೇ. ಅವಳು ಒಡೀತಿರೋದು ಒಳ್ಳೇ ಅದಿರು!" ಕೃಷ್ಣಯ್ಯ ಸವಾಲು ಹಾಕುವವನಂತೆ ಹೇಳಿದ.

"ನಿಮಗೆ ಅಷ್ಟೊಂದು ಅನುಮಾನವಿದ್ದರೆ ಅಷ್ಟನ್ನೂ ತೆಗೆದುಕೊಂಡು ಹೋಗಿ ಬೆಂಗಳೂರಿನಲ್ಲಿ 'ಅನಲೈಸ್' ಮಾಡಿಸಿ. ಆಮೇಲೆ ನಿಮಗೇ ಗೊತ್ತಾಗುತ್ತೆ," ಎಂದು ಶಾಂತಪ್ಪ ಆ ತುಣುಕುಗಳನ್ನು ತೆಗೆದು ಕೃಷ್ಣಯ್ಯನ ಕೈಗಿತ್ತ. ಕೃಷ್ಣಯ್ಯ ಅವುಗಳನ್ನು ಹಾಗೆಯೇ ಜೇಬಿಗೆ ಹಾಕಿಕೊಂಡು ಹೊರಟುಹೋದ. ನಾಲ್ಕಾರು ನಿಮಿಷಗಳನಂತರ ಶಾಂತಪ್ಪ ಪುನಃ ಮೇಲೆ, ಗಣಿಯತ್ತ ಹೊರಟ. ಅಲ್ಲಿ ಕೃಷ್ಣಯ್ಯ ನಿಂತಿದ್ದ. ಶಾಂತಪ್ಪನು ಬಂದುದನ್ನು ನೋಡಿ ಕೂಲಿಗಾರರೆದುರಿಗೆ ಪ್ರಶ್ನಿಸಿದ,

"ನೀವು ಈ ಬಂಡೆಯನ್ನು ಮೊದಲು ತೆಗೀರೀಂತ ಹೇಳಿದ್ರ?"

"ಹೌದು ನಾನೇ ಹೇಳಿದ್ದೆ."

"ನಮಗೆ ಮೊದಲು ಅದಿರುಬೇಕು ಶಾಂತಪ್ಪನೋರೆ. ಆಮೇಲೆ ಬಂಡೆ ತೆಗೆದರಾಗುತ್ತೆ. ನೋಡಿ ಬೆಳಗಿನಿಂದ ಕೆಲಸ ಮಾಡಿದಾರೆ. ನಾಲ್ಕು ಟನ್ನು ಅದಿರು ತೆಗೆದಿಲ್ಲ."

"ಇವತ್ತು ಅದಿರು ತೆಗೆಯದೇ ಇರಬಹುದು. ಆದರೆ ಇಷ್ಟು ದಿನಾನೂ, ತಲೆಯಮೇಲೇ ಬೀಳೋ ಹಾಗಿರೋ ಆ ಬಂಡೇನ ಯಾಕೆ ಹಾಗೆ ಬಿಡಬೇಕಾಗಿತ್ತು? ಅದು ಅಪಾಯಕರವಲ್ಲವೆ?,ಅಕಸ್ಮಾತ್ ಇದ್ದಕಿದ್ದಂತೆ ಗಣಿ ಇನಸ್ಪೆಕ್ಟರು ಬಂದರೆ ನಿಮಗೆ ಎಂಥಾ ಕೆಟ್ಟ ಹೆಸರು ಇದರಿಂದ ಗೊತ್ತೆ?"

"ಈಗ ರೂಲ್ಸು ಗೀಲ್ಸು ಬೇಡ. ನಮಗೆ ಕೆಲಸ ಮುಖ್ಯ!" ಗಡುಸಾಗಿ ಹೇಳಿದ ಕೃಷ್ಣಯ್ಯ.

"ನಿಮಗೆ ಗೊತ್ತಿಲ್ಲ ಮಿಸ್ಟರ್ ಕೃಷ್ಣಯ್ಯ...." ಎಂದು ಅಷ್ಟೇ ಗಡುಸಾಗಿ ಹೇಳಿ, ಇಂಗ್ಲೀಷಿನಲ್ಲಿ ರಾಮನಾಯ್ಕನ ಹಳ್ಳಿಯಲ್ಲಿನ ವೆಂಕಟಪ್ಪನ ಸಾವಿನ ಸುದ್ದಿ ಹೇಳಿದ. ಕನ್ನಡದಲ್ಲಿ ಹೇಳಿದರೆ ಕೂಲಿಗಾರರು ಅದ ್ನ ಕೇಳಿ ಭಯ ಗೊಂಡಾರೆಂದು ಅವನು ಭಾವಿಸಿದ್ದ.

"ಓ!....ಅಲ್ಲಿದ್ದಿರಾ ನೀವು. ಹಾಗಾದರೆ ನೀವೇಕೆ ಆ ಗಣಿ ಬಿಟ್ಟು ಬಂದಿರಿ?"

"ನನಗೆ ಅಲ್ಲಿರಲು ಇಷ್ಟವಿರಲಿಲ್ಲ. ರಾಜೀನಾಮೆ ಕೊಟ್ಟು ಬಂದೆ," ಎಂದು ಶಾಂತಪ್ಪನೆಂದು ಬೇರೆಡೆಗೆ ಹೊರಟು ಹೋದ.

ಅಂದಿನಿಂದ ಒಂದಲ್ಲ ಒಂದು ಕಾರಣದಿಂದಾಗಿ ಅವರಿಬ್ಬರಲ್ಲಿ ದಿನವೂ ವಾದ ವಿವಾದಗಳಾಗುತ್ತಿದ್ದುವು. ಶಾಂತಪ್ಪನು ಗಣಿಯ ಅಧಿಕೃತ ಮೇನೇಜ ರಾಗಿದ್ದ—ಕೃಷ್ಣಯ್ಯನು ಕಂಪೆನಿಯಲ್ಲಿ ತನಗಿರುವ ಪ್ರಭಾವದಿಂದ ತಾನೇ ಗಣಿಯ ಮಾಲೀಕನೆಂಬಂತೆ, ಶಾಂತಪ್ಪ ತನ್ನ ಕೈ ಕೆಳಗಿನವನೆಂಬಂತೆ ವರ್ತಿಸ ತೊಡಗಿದ್ದ. ಶಾಂತಪ್ಪನಿಗೆ ಈ ರೀತಿ ಒಪ್ಪಿಗೆಯಾಗುತ್ತಿರಲಿಲ್ಲ. ಅವನಿಗೆ ಕೃಷ್ಣಯ್ಯನ ಸ್ನೇಹ ಬೇಕಿದ್ದಿತು. ಅವನೊಡನೆ ಸ್ನೇಹಿತನಂತೆ ವರ್ತಿಸಬೇ ಕೆಂದು ಅವನಿಚ್ಛೆ. ಆದರೆ ಕೃಷ್ಣಯ್ಯ ತಾನೇ ಮೇಲಿನವನೆಂಬಂತೆ ದರ್ಪ ತೋರಿಸುತ್ತಿದ್ದ, ಇದವನಿಗೆ ಸಹಿಸುತ್ತಿರಲಿಲ್ಲ. ಒಂದು ದಿನ ಗಣಿಯಲ್ಲಿನ ಕಾರ್ಯಕ್ರಮ ಪ್ರಾರಂಭವಾಗಿ ಆಗಿನ್ನೂ ಒಂದುಗಂಟೆ ಕಳೆದಿದ್ದಿತು. ಅದಿರಿನಲ್ಲಿ ಬೆಣಚುಕಲ್ಲು, ಕಬ್ಬಿಣಗಳೇ ಹೆಚ್ಚಾಗಿರುತ್ತಿದ್ದುದರಿಂದ, ಅದನ್ನು ಸ್ವಚ್ಛಗೊಳಿ ಸಲು ತಾನೇ ಅದಿರಿನ ರಾಶಿಯ ಬಳಿ ನಿಂತು, ಒಬ್ಬಿಬ್ಬರು ಕೆಲಸಗಾರರನ್ನು ತೊಡಗಿಸಿಕೊಂಡು ತಾನೂ ಕೆಲಸ ಮಾಡುತ್ತಿದ್ದ. ಕಂಟ್ರಾಕ್ಟು ಕೊಟ್ಟಿದ್ದುದ ರಿಂದ ಗಣಿಯ ಯಾವ ಕೆಲಸವನ್ನೂ ತಾನು ನೋಡಿಕೊಳ್ಳಬೇಕಾಗಿರಲಿಲ್ಲವಾ ದರೂ ಕಂಪೆನಿಯ ಹಿತದೃಷ್ಟಿಯಿಂದ ಅಷ್ಟೊಂದು ಆಸ್ಥೆವಹಿಸುತ್ತಿದ್ದ ಅವನು. ಅವನು ರಾಶಿಯ ಬಳಿ ಹಾಗೆ ಕೆಲಸದಲ್ಲಿ ತೊಡಗಿದ್ದಾಗ ಗಣಿಯಲ್ಲಿನಿಂದ ಕೃಷ್ಣಯ್ಯ ಇಳಿದು ಬಂದು ಹೇಳಿದ,

"ನಾನು ಈಗಿನ ಬಸ್ಸಿನಲ್ಲಿ ಶಿವಮೊಗ್ಗಕ್ಕೆ ಹೋಗಿ ಬೆಂಗಳೂರಿಗೆ ಹೋಗಿ ಬಟವಾಡೆಗೆ ದುಡ್ಡು ತರುತೀನಿ."

"ಆಗ್ಲಿ. ಹೋಗಿಬನ್ನಿ" ಶಾಂತಪ್ಪನೆಂದ. ಕೃಷ್ಣಯ್ಯ ಬೆಂಗಳೂರಿಗೆ ಹೋಗದಿದ್ದರೂ ಸಹ ಅಂಚೆಯ ಮೂಲಕ ಶಾಂತಪ್ಪನಿಗೇ ಬಟವಾಡೆ

ಹಣವನ್ನು ಕಂಪೆನಿಯವರು ಕಳುಹಿಸುತ್ತಿದ್ದರು. ಆದರೆ ತಾನೇ ಹಣ ತಂದು ಕೊಡುವವನೆಂಬ ದೊಡ್ಡತನವನ್ನು ಕೆಲಸಗಾರರಲ್ಲಿ ಪ್ರದರ್ಶಿಸಿಕೊಳ್ಳಲು ಕೃಷ್ಣಯ್ಯ ವಾರವಾರವೂ ಬೆಂಗಳೂರಿಗೆ ಹೋಗುತ್ತಿದ್ದ.

"ನಾನು ಹೋದಮೇಲೆ ಆ ಸೋಮ್ಮಿ ಏನಾದರೂ ಮನೆಗೆ ಹೋಗ ಬೇಕೂಂದ್ರೆ ಕಳಿಸಿಕೊಟ್ಟುಬಿಡಿ. ಪಾಪ ಅವಳ ತಮ್ಮನಿಗೇನೋ ಖಾಯಿಲೆ ಯಂತೆ. ನೋಡೋಕ್ಕೆ ಹೋಗಬೇಕಂತೆ!"

ಕೃಷ್ಣಯ್ಯನ ಈ ಮಾತುಗಳ ಸತ್ಯತೆಯೆಷ್ಟೆಂಬುದು ಶಾಂತಪ್ಪನಿಗರಿ ವಿದ್ದಿತು. ಆ ದಿನ ತಾನು ಊರಿಗೆ ಹೋಗುವವನಿದ್ದುದರಿಂದ, ಬಿಡಾರದ ಬಳಿ ಬರಲು ಅವಳಿಗೆ ಕೃಷ್ಣಯ್ಯ ಹೇಳಿದ್ದಿರಬೇಕು. ಆದರೆ ಶಾಂತಪ್ಪನು ಇಂತಹ ಪ್ರವೃತ್ತಿಯನ್ನು ಬೆಳೆಯುಗೊಡಬಾರದೆಂಬ ಇಚ್ಛೆಯುಳ್ಳವನಾಗಿದ್ದ.

"ನಾನು ಅವಳಿಗೆ ಹೇಳೋಕೆ ಹೋಗೋಲ್ಲ ಮಿಸ್ಟರ್ ಕೃಷ್ಣಯ್ಯ. ಅವಳು ಬೇಕಾದರೆ ಹೋಗಲಿ. ಆದರೆ ಈಗ ಗಣೀಲಿ ಕೆಲಸ ಶುರುವಾಗಿ ಇನ್ನೂ ಒಂದು ಗಂಟೆಯಾಗಿರಬಹುದು ಅಷ್ಟೆ. ಈಗ ಅವಳು ಮನೆಗೆ ಹೋಗೋದಾದರೆ ನಾನು ಅವಳಿಗೆ ಈವತ್ತು ಗೈರುಹಾಜರಿ ಹಾಕ್ತೇನೆ!"

"ಇವತ್ತು ಒಂದಿನಾ ಕಳಿಸಿಬಿಡಿ. ದಿನಾ ದಿನಾ ಅವಳು ಹಾಗೆಲ್ಲಾ ಕೇಳುಲ್ಲ."

"ಅವಳು ದಿನಾ ಕೇಳ್ತಾಳೋ ಬಿಡ್ತಾಳೋ ನಂಗೆ ಗೊತ್ತಿಲ್ಲ. ನಾನು ಅವಳೊಬ್ಬಳಿಗೆ ಈ ಭೇದ ತೋರಿಸೋಕಾಗೋಲ್ಲ. ಬೇರೆ ಕೆಲಸಗಾರರ ಹಾಗೆ ಅವಳೂ ಸಹ" ಎಂದು ಕಟುವಾಗಿ, ಅರ್ಥಗರ್ಭಿತವಾಗಿ ಶಾಂತಪ್ಪ ಹೇಳಿ ತನ್ನ ಕೆಲಸದಲ್ಲಿ ತೊಡಗಿದ.

ಎದುರಿಗೆ ಅದಿರನ್ನಾರಿಸುತ್ತಾ ಕುಳಿತಿದ್ದ ಕೆಲಸಗಾರರು ಮುಖ ಮುಖ ನೋಡಿಕೊಂಡರು. ಕೃಷ್ಣಯ್ಯ ಹೊರಟುಹೋದ.

* * *

ಒಂದೆರಡು ವಾರಗಳ ನಂತರ ಶಾಂತಪ್ಪ ಗಣಿಯನ್ನೆಲ್ಲ ಸುತ್ತಿ ಬಂದು ಈಗ ಕೃಷ್ಣಯ್ಯ ಕೆಲಸ ಮಾಡಿಸುತ್ತಿರುವ ಗುಡ್ಡದ ಅದಿರೆಲ್ಲ ಕಡಿಮೆ ದರ್ಜೆಯ ದೆಂದು, ಈ ಗುಡ್ಡದ ಹಿಂದಿರುವ ಇಂಗ್ಲೀಷು ಗುಡ್ಡದಲ್ಲಿ ಉತ್ತಮ ಅದಿರಿರುವು ದೆಂದು, ನಿರ್ಧಾರಕ್ಕೆ ಬಂದಿದ್ದ. ಹಾಗೆಯೇ ಬೆಂಗಳೂರಿನ ಕಂಪೆನಿಯ ಕಚೇರಿಗೆ ಬರೆದ. ಆದರೆ ಕೃಷ್ಣಯ್ಯನು, ಈಗ ಕೆಲಸ ಮಾಡಿಸುತ್ತಿರು

ಗಣಿಯಲ್ಲಿಯೇ ಉತ್ತಮ ಅದಿರು ದೊರೆಯುವುದೆಂದೂ ಇಂಗ್ಲೀಷು ಗುಡ್ಡದಲ್ಲಿ ಅದಿರೇ ಇಲ್ಲವೆಂದೂ ತಿಳಿಸಿದ್ದ ವಿಷಯ ಶಾಂತಪ್ಪನಿಗೆ ತಿಳಿದೇ ಇರಲಿಲ್ಲ. ಅವನು ಬರೆದ ಪತ್ರಕ್ಕೆ ಕಂಪೆನಿಯ ಕಚೇರಿಯಿಂದ ಯಾವ ಉತ್ತರವೂ ಬರಲಿಲ್ಲ !

ಒಂದು ದಿನ ಕೆಲವು ಕೆಲಸಗಾರರೊಂದಿಗೆ ಶಾಂತಪ್ಪ ಇಂಗ್ಲೀಷು ಗುಡ್ಡದಲ್ಲಿ ಪ್ರಯೋಗಕ್ಕಾಗಿ ಒಂದೆರಡು ಕುಣಿಗಳನ್ನು ತೋಡಿಸಿದ. ಅಲ್ಲಿ ಅವನಿಗೆ ಶ್ರೇಷ್ಠ ದರ್ಜೆಯ ಅದಿರು ದೊರೆಯುವುದೆನಿಸಿತ್ತು. ಸ್ಫೋಟಕನೊಡನೆ ಸ್ಫೋಟಕ ವಸ್ತುಗಳನ್ನು ತೆಗೆದುಕೊಂಡು ಹೋಗಿದ್ದ. ಒಂದೆಡೆಯಲ್ಲಿ ದೊಡ್ಡದಾದ ಬಂಡೆಯೊಂದರ ಬದಿಯಲ್ಲಿ ಬೆಳ್ಳಿಯಂತೆ ಹೊಳೆಯುತ್ತಿದ್ದ ಅದಿರು ಹಾದುಹೋಗಿದ್ದಿತು ; ಅದರ ಜಾಡನ್ನೇ ಹಿಡಿದುಹೋಗಿ ಆಶಾದಾಯಕವಾದ ಸ್ಥಳವೊಂದರಲ್ಲಿ ಗುಂಡಿ ತೋಡಿಸಿ ಒಳಗಿದ್ದ ಬಂಡೆಗೆ 'ಡೈನಮೆಂಟ್'ಇಡಿಸಿದ. ಎಲ್ಲರೂ ದೂರ ಹೋಗಿ ನಿಂತನಂತರ ಸ್ಫೋಟಕನು 'ಡೈನಮೆಂಟ'ಗೆ ಬೆಂಕಿ ಇಟ್ಟು ಓಡಿಬಂದು ಶಾಂತಪ್ಪನ ಬಳಿ ನಿಂತ. ದೂರದಲ್ಲಿ ತಗ್ಗಿನಲ್ಲಿ ಡೈನಮೈಟಿನ ಬತ್ತಿ ನಿಧಾನವಾಗಿ ಹೊಗೆಯಾಡುತ್ತಿದ್ದಿತು ಶಾಂತಪ್ಪನ ಕುತೂಹಲವೂ ಹಾಗೆಯೇ ಹೊಗೆಯಾಡುತ್ತಿದ್ದಿತು. ಈ ಹೊಸ ಸ್ಥಳದಲ್ಲಿ ಅದಿರು ದೊರೆವ ಕುರುಹುಕಂಡರೆ ತನ್ನ ಭವಿಷ್ಯ ಪ್ರಭಾಮಯವಾಗಿದೆ; ಇಲ್ಲವಾದರೆ ತಾನು ಭೂಗರ್ಭಶಾಸ್ತ್ರಜ್ಞನಾಗಿ, ಅನುಭವಿಯಾಗಿ ಇಲ್ಲಿ ಎಲ್ಲರೆದುರಿಗೆ ಕೃಷ್ಣಯ್ಯನೆದುರಿಗೆ ನಿಷ್ಫಲನಾಗಿ ಅಪಮಾನ ಹೊಂದಬೇಕಾಗುವುದು....

ಅವನಿಗೆ ರಾಮನಾಯ್ಕನಹಳ್ಳಿಯ ಮೊದಲ ದಿನದ ನೆನಪಾಯಿತು. ಮೊದಲು ತಾನು ತೋಡಿಸಿದ ಆ ಕುಣಿ. ಅಲ್ಲಿ ಬೆಣಚುಕಲ್ಲೇ ದೊರೆತು ಶ್ರೇಷ್ಠ ಅದಿರು ದೊರೆತಿರಲಿಲ್ಲ, ತಾನು ನೂರಾರು ರೂಪಾಯಿ ಕಂಪೆನಿಯ ಹಣದಲ್ಲಿ ವೆಚ್ಚಮಾಡಿ, ಎಲ್ಲರೆದುರಿನಲ್ಲಿಯೂ ಸೋತು ಅಪಮಾನಹೊಂದುವ ಸ್ಥಿತಿ ಬಂದಾಗ ಗೋಪಾಲಯ್ಯ ಬಂದು ಕಾಪಾಡಿದ್ದ. ಈಗ ಅಂತಹ ಸ್ಥಿತಿ ಬಂದರೆ ?

"ಅಲ್ಲಿ ನೋಡಿ ಸಾರ್", ಸ್ಫೋಟಕ ರಾಮೇಗೌಡನೆಂದ.

"ಏನು ?"

"ಅಲ್ಲಿ ನೋಡಿ ಸಾರ್, ಇನ್ನೇನು ಹೊಗೆ ನಿಂತುಹೋಯ್ತು. ಒಡೆಯುತ್ತೆ" ಎಂದವನೆಂದಾಗಲೇ ಢಢಾರ್ ಢಢಾರ್ ಎಂದು ಎರಡು ಬಾರಿ

ಸ್ಫೋಟವಾದ ಶಬ್ದ ಕೇಳಿ, ಒಂದು ಬಾರಿ ಮದ್ದು ಉರಿದು ಹೊಗೆಯಾದುದು ಕಂಡಿತು.

"ಎರಡು ಒಡೀತು. ಒಂದು ಹುಸಿಯಾಯ್ತು" ಎಂದು ರಾಮೇಗೌಡ ನೆಂದ. ಅವರು ಹತ್ತಿರ ಹೋಗಿ ನೋಡಿದರು. ಅಲ್ಲಿನ ಬಂಡೆ ಸೀಳಿ ಒಂದೆಡೆ ನಾಲ್ಕಾರು ಹೋಳುಗಳು ಹಾರಿಹೋಗಿದ್ದುವು. ಒಳಗೆ ಬೆಳ್ಳಿಯಂತಹ ಆ ಅದಿರು ಹಾಸಿಗೆಯಂತೆ ಮಲಗಿದ್ದಿತು.

"ಇಲ್ಲಿ ನೋಡು ರಾಮೇಗೌಡ!" ಶಾಂತಪ್ಪ ಸಂತೋಷದಿಂದ ಕೂಗಿ ಕೊಂಡ.

"ಪರವಾಗಿಲ್ಲ ಸಾರ್. ಈ ಗಣೀಲೂ ಇಂಥ ಅದಿರು ಸಿಕ್ಕುತ್ತೆ. ಬರೀ 'ಲೋ ಗ್ರೇಡು' ಅದಿರೇ ಇಲ್ಲಿ ಎಲ್ಲಾ ಕಡೇಲೂ ಸಿಗುತ್ತಿತ್ತು ಇದುವರೆಗೆ" ರಾಮೇಗೌಡನೆಂದ.

"ಹೌದು. ಆ ರಾಮನಾಯ್ಕನಹಳ್ಳಿ ಗಣೀಲಿ ಇಂಥದೇ ಅದಿರು ಸುರಂಗ ದಲ್ಲಿ ಸಿಕ್ಕುತ್ತೆ."

"ಏನು ಸಾರ್! ರಾಮನಾಯ್ಕನ ಹಳ್ಳಿ ಗಣೀಲಿ ನೀವಿದ್ರಾ?"

"ಹೌದು. ಇದುವರೆಗೇ ಅಲ್ಲೇ ನಾನಿದ್ದುದು."

"ಅದೇ ಆ ಸುಬ್ಬಣ್ಣ, ಚನ್ನಯ್ಯ, ಮಾಣಿಕ್ಯಂ?"

"ಹೌದು, ಹೌದು. ಅವರೇ ಅಲ್ಲಿರೋದು!"

"ಈಗ್ಲೂ ಅವರೆಲ್ಲ ಇದಾರೇನು ಸಾರ್?"

"ಇದಾರೆ. ಯಾಕಪ್ಪ ನಿಂಗೆ ಗೊತ್ತೇನು ಅವರೆಲ್ಲ?"

"ಗೊತ್ತು ಸಾರ್. ನಾನೂ ಸಹ ಅಲ್ಲೇ ಪಕ್ಕದ ಗಣೀಲೇ ಇದ್ದೆ."

"ಆದರೆ ಯಾಕೆ ಅಲ್ಲಿ ಬಿಟ್ಟು ಈ ಮೂಲೇಗೆ ಬಂದು ಸೇರಿಕೊಂಡೆ?" ಶಾಂತಪ್ಪ ಕೇಳಿದ ಈ ಪ್ರಶ್ನೆಗೆ ರಾಮೇಗೌಡ ನಾಲ್ಕಾರು ಕ್ಷಣ ಯೋಚಿಸಿ ಕೊನೆಗೆ ತನ್ನ ಕಥೆ ಹೇಳಿಕೊಂಡ.

ರಾಮೇಗೌಡ ಶಾಂತಪ್ಪನಿದ್ದ ಪಕ್ಕದ ಗಣಿಯಲ್ಲಿ ಕೆಲಸಗಾರನಾಗಿದ್ದ ಆ ಗಣಿಯ ಮಾಲೀಕ ಬೊಂಬಾಯಿನ ಒಬ್ಬ ಮಾರವಾಡಿ. ಅವನಿಗೆ ಆ ಸುತ್ತಲೆಲ್ಲಾ ಸುಮಾರು ಹದಿನಾರು ಚದುರ ಮೈಲಿ ಜಾಗ ಗಣಿಗೆ ಕೊಡ ಲ್ಪಟ್ಟಿತ್ತು! ಆ ಗಣಿಯಲ್ಲಿ ರಾಮೇಗೌಡನೇ ಎಲ್ಲವನ್ನೂ ನೋಡಿಕೊಳ್ಳು ತ್ತಿದ್ದ. ತಿಂಗಳಿಗೊಂದು ದಿನ ಮಾರವಾಡಿ ಬಂದು ಕೆಲಸಗಾರರ ಸಂಬ

ಬಟವಾಡೆ ಮಾಡುತ್ತಿದ್ದ. ರಾಮೇಗೌಡ ಗಣಿಯ ಬಳಿಯಲ್ಲಿಯೇ ಗುಡಿಸಲು ಹಾಕಿಕೊಂಡು ನಾಲ್ಕಾರು ಜನರೊಂದಿಗೆ ವಾಸವಾಗಿದ್ದ. ಅವನ ಗಣಿಯ ಲ್ಲಿಯೂ ಶ್ರೇಷ್ಠದರ್ಜೆಯ ಅದಿರು ದೊರೆಯುತ್ತಿದ್ದಿತು. ಆಗ ಪಕ್ಕದ, ಸಾಹುಕಾರರ ಗಣಿಯಲ್ಲಿ ಕಡಿಮೆ ಅದಿರೇ ದೊರೆಯುತ್ತಿದ್ದುದು. ಒಂದು ದಿನ ರಾತ್ರಿ ಸುಮಾರು ಹನ್ನೆರಡು ಗಂಟೆಯ ಸಮಯದಲ್ಲಿ ಗುಡಿಸಲಿನಲ್ಲಿ ಮಲಗಿದ್ದ ರಾಮೇಗೌಡನಿಗೆ ಇದ್ದಕ್ಕಿದ್ದಂತೆ ಎಚ್ಚರವಾಯಿತು. ಅವನಿಗೆ ದೂರದಲ್ಲಿ ಲಾರಿಗಳು ಓಡಾಡುತ್ತಿದ್ದ ಶಬ್ದ ಕೇಳಿಸಿತು. ಅವನು ಎದ್ದು ಹೊರಹೊರಟ.

ಹೊರಗೆ ಕವಿದಿದ್ದ ಕತ್ತಲೆಯ ಮಧ್ಯೆ ಅವನಿಗೆ ಸ್ಪಷ್ಟವಾಗಿ ಯಾವುದೂ ಕಾಣುತ್ತಿರಲಿಲ್ಲ. ಸುಮಾರು ಒಂದು ಮೈಲು ದೂರದಲ್ಲಿದ್ದ ಅದಿರಿನ ರಾಶಿ ಯಿಂದ ಆ ಶಬ್ದ ಕೇಳಿಬರುತ್ತಿದ್ದಿತು. ರಾಮೇಗೌಡನಿಗೆ ತಮ್ಮ ಅದಿರನ್ನು ಯಾರೋ ಕದಿಯುತ್ತಿರುವರೆನ್ನಿಸಿತು. ಅವನು ತನ್ನ ಬಳಿಯಿದ್ದ ಟಾರ್ಚು ತೆಗೆದುಕೊಂಡು, ಒಬ್ಬಿಬ್ಬ ಕೆಲಸಗಾರರೊಡನೆ ಶಬ್ದ ಬಂದೆಡೆಗೆ ಓಡಿದ. ಅವರು ಅರ್ಧ ರಸ್ತೆಯಲ್ಲಿದ್ದಾಗಲೇ ಲಾರಿಗಳು ಹೊರಟ ಶಬ್ದ ಕೇಳಿಸಿತು. ಅವರು ಅಲ್ಲಿ ತಲುಪುವುದರೊಳಗಾಗಿ ಲಾರಿಗಳು ಹೊರಟುಹೋಗಿದ್ದುವು. ಆ ವಾರದಲ್ಲಿ ತೆಗೆದಿದ್ದ ಸುಮಾರು ಎಂಭತ್ತು ಟನ್ನು ಶ್ರೇಷ್ಠ ಅದಿರಿನ ರಾಶಿಯಲ್ಲಿ ಅರ್ಧ ಕಳುವಾಗಿದ್ದಿತು. ಅದು ಸುಮಾರು ಐದು ಸಾವಿರ ರೂಪಾಯಿಗಳ ಮೌಲ್ಯದ ಅದಿರು !

ಮಾರನೆಯ ದಿನ ಬೆಳಗಿನ ನಸು ಬೆಳಕಿನಲ್ಲಿ ಅವರು ಲಾರಿಗಳ ಚಕ್ರದ ಜಾಡನ್ನು ಗುರುತಿಸಿದಾಗ ಅದು ಸಾಹುಕಾರರ ಗಣಿಗಳತ್ತ ತಿರುಗಿದ್ದಿತು.

ಪುನಃ ಒಂದು ದಿನ ರಾತ್ರಿ ಹೀಗೆಯೇ ಶಬ್ದ ಕೇಳಿದಾಗ ರಾಮೇಗೌಡ ನಾಲ್ಕಾರು ಜನರೊಂದಿಗೆ ಓಡಿ ಹೋಗಿ ಲಾರಿಯನ್ನು ನಿಲ್ಲಿಸಿದ. ಅಲ್ಲಿ ಮಾಣಿ ಕ್ಯಮ್, ಸುಬ್ಬಣ್ಣ ಕುಳಿತಿದ್ದರು. ರಾಮೇಗೌಡನ ಕಡೆಯವರು ದೊಡ್ಡ ಮರ ವೊಂದನ್ನು ಕಡಿದು ರಸ್ತೆಯ ಮಧ್ಯೆ ಉರುಳಿಸಿ ಲಾರಿಯನ್ನು ನಿಲ್ಲಿಸಿದ್ದರು; ಅದನ್ನು ಕಂಡು ಕೋಪಗೊಂಡ ಸುಬ್ಬಣ್ಣ ಮಾಣಿಕ್ಯಮ್ ರಾಮೇಗೌಡನನ್ನು ದುರುಗುಟ್ಟಿಕೊಂಡು ನೋಡಿದರು.

"ಏನ್ರಲಾ ನೋಡ್ತೀರಾ ? ನಿಮ್ಮ ಯೋಗ್ತಿಗೆ ಬೆಂಕಿ ಹಾಕ. ನಿಮ್ಮ ಸಾವಕಾರ ಬೆಂಗಳೂರಾಗೆ ಬಂಗ್ಲೆ ಕಟ್ಟಿಸಿರೋದು ಈ ಕೆಲಸದಿಂದಲೇನ ?" ರಾಮೇಗೌಡ ಕೇಳಿದ.

"ಏಯ್ ಹೆಚ್ಚು ಮಾತಾಡಿದರೆ ನೋಡು ನಿನ್ನ ತೀರಿಸಿಬಿಡ್ತೇವೆ!" ಲಾರಿಯಲ್ಲಿದ್ದವರು ಹೆದರಿಸಿದರು.

"ಎಲಾ ಇವ್ರ! ನಮ್ಮ ಗಣೇಲೇ ನಮ್ಮನ್ನ ತೀರಿಸ್ತಾರಂತೆ. ನಿಮ್ಮ ಸಾವಕಾರನ ಅಪ್ಪನ ಮನೇದೇನ್ರೋಗಣಿ, ಬೋಳಿ ಮಕ್ಕಳ್ರಾ?" ರಾಮೇಗೌಡ ಅಷ್ಟು ಹೇಳಿದ್ದೇ ಅವನಿಗೆ ಅವನ ಕಡೆಯವರಿಗೆ ತಿಳಿವು. ಇದ್ದಕ್ಕಿದ್ದಂತೆ ಅವರ ತಲೆಯಮೇಲೆ ಪೆಟ್ಟುಗಳು ಬಿದ್ದವು. ಅವರಿಗೆ ಎಚ್ಚರವಾದಾಗ ತಣ್ಣನೆ ಗಾಳಿ ಬೀಸುತ್ತಿದ್ದಿತು. ಆಕಾಶದಲ್ಲಿ ಬೆಳ್ಳಿ ಮೂಡಿದ್ದಿತು.

ರಾಮೇಗೌಡ ತನ್ನ ಗಣಿ ಮಾಲೀಕ ಮಾರವಾಡಿಗೆ ಬರೆದು ಪೋಲೀಸಿಗೆ ದೂರು ಕೊಡಿಸಿದ. ಒಂದು ದಿನ ಗಣಿಗೆ ಪೋಲೀಸರು, ಸಾಹುಕಾರರೊಡನೆ ಅವರ ಕಾರಿನಲ್ಲೇ ಬಂದರು. ರಾಮೇಗೌಡನನ್ನು ವಿಚಾರಿಸಿದರು. ಅವನಿಗೆ ಸಾಹುಕಾರರನ್ನು ನೋಡುತ್ತಿದ್ದಂತೆಯೇ ಉಂಗುಷ್ಠದಿಂದಲೇ ಕೋಪ ಉಕ್ಕಿ ಬಂದಿದ್ದಿತು.

"ಏನ್ರೀ ನೀವು ಸಾವ್ಕಾರ್ರಾಗಿ ನಮ್ಮ ಗಣೇಲಿ ನಮ್ಮ ಕಲ್ಲನ್ನೇ ಕಳ್ತನಾ ಮಾಡಿಸಿದ್ರಲ್ಲಾ ನಿಮಗೆ ನಾಚ್ಕೆ ಆಗ್ಲಿಲ್ಲವ?" ಎಂದು ಕೇಳಿದ.

ಸಾಹುಕಾರರು ಅಲ್ಲಿದ್ದ ಪೋಲೀಸಿನವರನ್ನು ಗಮನಿಸದೆಯೇ ಮುಂದೆ ಬಂದು ರಾಮೇಗೌಡನನ್ನೆಳೆದುಕೊಂಡು ಫಳೀರ್ ಫಳೀರನೆ ಅವನ ಕೆನ್ನೆಗೆ ಬಾರಿಸಿದರು. ರಾಮೇಗೌಡ ಆ ಏಟುಗಳಿಗೆ ತತ್ತರಿಸಿ ಹೋದ. ಪೋಲೀಸಿನವರು ಸುಮ್ಮನಿದ್ದರು!

"ಬಾಯಿ ಮುಚ್ಚಿಕೊಂಡು ಈ ಕಾಗದಕ್ಕೆ ರುಜು ಹಾಕಿದರೆ ಬದುಕಿಕೊಂಡೆ. ಇಲ್ಲದಿದ್ರೆ ನೀನು ನಾಳೆ ಬೆಳಗ್ಗೆ ಹೊತ್ತಿಗೆ ಜೀವದಿಂದ ಇರೋದಿಲ್ಲ." ಎಂದು ಸಾಹುಕಾರರು ಬರೆದಿದ್ದ ಕಾಗದವೊಂದನ್ನು ಅವನ ಮುಂದೆ ಹಿಡಿದರು.

ರಾಮೇಗೌಡನ ಗಣಿಯಲ್ಲಿದ್ದವರೆಂದರೆ ಎಪ್ಪತ್ತು-ಎಂಭತ್ತು ಜನ ಕೂಲಿಗಾರರು. ಆದರೆ ಸಾಹುಕಾರರ ಗಣಿಯಲ್ಲಿ ಎಂಟುನೂರು ಜನರಿದ್ದರು. ರಾಮೇಗೌಡನಿಗೆ ನಾಲ್ಕು ಮಕ್ಕಳಿದ್ದುವು. ಹೆಂಡತಿ ಐದನೆಯ ಬಾರಿ ಗರ್ಭಿಣಿ. ಅವನಿಗೆ ಬೇರೆ ಯಾರೂ ದಿಕ್ಕಿರಲಿಲ್ಲ. ಇದೆಲ್ಲವನ್ನೂ ನೆನೆದು ದುಃಖ ಕೋಪಗಳು ಉಕ್ಕಿ ಬಂದುವವನಿಗೆ.

"ಏಯ್! ಏನೋ ನೋಡ್ತೀಯ ಭಾಂಛೋತ್....ರುಜು ಹಾಕ್ತೀಯೋ

ಇಲ್ವೋ?" ಸಾಹುಕಾರರು ಕೆಂಡಾಮಂಡಲವಾಗಿದ್ದರು. ರಾಮಯ್ಯ ಪೋಲೀಸಿನವರತ್ತ ದೈನ್ಯತೆಯಿಂದ ನೋಡಿದ.

"ಯಾಕಯ್ಯಾ ಇಂಥ ದೊಡ್ಡವರ ಹತ್ರ ನಿಂಗೆ ದ್ವೇಷ? ಅವರಿಗೆ ಒಳ್ಳೆಯೋನಾಗಿದ್ರೆ ನಿಂಗೂ ಒಳ್ಳೇದಲ್ಲವೇನಯ್ಯಾ ?" ಪೋಲೀಸಿನವರು ರಾಮಯ್ಯನನ್ನೇ ಕೇಳಿದರು !

ರಾಮೇಗೌಡ ಆ ಪತ್ರವನ್ನು ನೋಡಿದ. ಅದು ಪೋಲೀಸರಿಗೆ ಅವನು ಬರೆದುಕೊಟ್ಟಂತಿದ್ದ ಪತ್ರ. ತನಗೆ ಯಾವ ವಿಧವಾದ ತೊಂದರೆಯೂ ಆಗಲಿಲ್ಲ, ತನ್ನ ಗಣಿಯಲ್ಲಿ ಅದಿರು ಕಳ್ಳತನವಾಗಲಿಲ್ಲ, ತಾನು ಹೆಂಡ ಕುಡಿದ ಯಾವುದೋ ಅಮಲಿನಲ್ಲಿ ಹಾಗೆ ದೂರು ಕೊಟ್ಟಿದ್ದನೆಂದಿದ್ದಿತು, ಆ ಪತ್ರದಲ್ಲಿ. ಅವನು ಯೋಚಿಸಿದ.

"ನೋಡು ನಮಗೆ ಹೊತ್ತಾಗುತ್ತೆ. ಈ ನಿರ್ಜನ ಪ್ರದೇಶದಲ್ಲಿ ನಿನ್ನ ಗೋಳು ಕೇಳೋರು ಯಾರೂ ಇಲ್ಲ. ಬಾಯಿ ಮುಚ್ಚಿಕೊಂಡು ರುಜು ಹಾಕು. ಇಲ್ಲವಾದರೆ...."ಎಂದು ಸಾಹುಕಾರರು ಆಗ ತಾನೇ ನಾಲ್ಕಾರು ಲಾರಿಗಳಲ್ಲಿ ಬಂದಿದ್ದ ಹಲವು ಕೂಲಿಗಾರರ ಮುಖ ನೋಡಿದರು. ಅವರೆಲ್ಲರೂ ಹಸಿದ ಸಿಂಹಗಳು ಹಸುವನ್ನು ನೋಡುವಂತೆ ರಾಮೇಗೌಡನನ್ನು ನೋಡಿದರು. ಪೋಲೀಸಿನವರು ಸುಮ್ಮನೆ ನಿಂತಿದ್ದರು.

ಅಂಜಿದ ರಾಮೇಗೌಡನು ರುಜು ಹಾಕಿದ. ಸಾಹುಕಾರರು ಪತ್ರವನ್ನು ಮಡಿಸಿ ಜೇಬಿನಲ್ಲಿಟ್ಟುಕೊಂಡು ಹೇಳಿದರು.

"ಇಗೋ ಈ ಹತ್ತು ರೂಪಾಯಿ ತಗೋ. ನಾಡಿದ್ದು ಬೆಳಗ್ಗೆ ಹೊತ್ತಿಗೆ ನೀನು ಗಣೀ ಬಿಟ್ಟು ಹೊರಟು ಹೋಗಬೇಕು. ಇಲ್ಲದಿದ್ರೆ ನಿನ್ನ ಹೆಂಡ್ತಿ ಮಕ್ಕಳು ನಿನ್ನ ಹೆಣ ನೋಡಬೇಕಾಗುತ್ತೆ" ಎಂದು ನೋಟಿಸೆದು ಕಾರಿನಲ್ಲಿ ಕುಳಿತರು.

ಲಾರಿಗಳು ವಾಪಸ್ಸು ಹೋಗುವಾಗ ಪೋಲೀಸಿನವರ ಮನೆಗಳಿಗಾಗಿ ಗಣಿಯ ಸುತ್ತಲಿನ ಒಣ ಮರಗಳನ್ನೆಲ್ಲ ಕಡಿಸಿ ಲಾರಿಗಳ ಭರ್ತಿ ಸೌದೆ ತುಂಬಿಸಿಕೊಂಡು ಹೋದರು.

ಜೀವಕ್ಕೆ ಅಂಜಿದ ರಾಮೇಗೌಡ ಓಡಿಬಂದ. ಯಾರೂ ಕಾಣದ ಕೇಳದ ಈ ಮಲೆನಾಡಿನ ಮೂಲೆಯ ಹೊನ್ನೂರಿಗೆ.

ಈ ಸಂಕಟಮಯ ಭೀಕರ ಕತೆಯನ್ನು ಕೇಳಿದ ಶಾಂತಪ್ಪ. ತನ್ನ

ಮೊದಲ ಗಣಿಯ ಸಾಹುಕಾರರು ಇಷ್ಟೊಂದು ಕ್ರೂರಿಗಳೇ ? ಇಷ್ಟೊಂದು ರಾಕ್ಷಸೀ ಹೃದಯಿಯೆ ?

"ಅದಿರ್ಲಿ ಸಾರ್. ಈಗ ಈ ಇಂಗ್ಲೀಷು ಗುಡ್ಡದಲ್ಲಿ ಕೆಲಸ ಯಾವಾಗ ಶುರು ಮಾಡಿಸ್ತೀರಿ ಸಾರ್ ? ಒಳ್ಳೆ ಅದಿರು ಸಿಕ್ಕಿದೆಯಲ್ಲ ಇಲ್ಲಿ." ರಾಮೇ ಗೌಡನ ಮಾತು ಕೇಳಿ ಶಾಂತಪ್ಪ ಎದುರಿನ ಅದಿರಿನತ್ತ ನೋಡಿ, ಅಲ್ಲಿಂದ ಕೆಲವು ತುಣುಕುಗಳನ್ನು ತೆಗೆದುಕೊಂಡು ಹೊನ್ನೂರಿನ ಬಿಡಾರಕ್ಕೆ ನಡೆದ. ಆ ದಿನವೇ ಆ ತುಣುಕುಗಳನ್ನು ರಸಾಯನಿಕ ವಿಶ್ಲೇಷಣೆಗಾಗಿ ಬೆಂಗಳೂರಿನ ಕಂಪೆನಿಯ ಕಚೇರಿಗೆ ಕಳುಹಿದ.

* * * *

ಶಾಂತಪ್ಪ ದಿನ ದಿನವೂ ಹೊಸ ಹೊಸ ಅದಿರಿನ ಪ್ರದೇಶಗಳನ್ನು ಪತ್ತೆ ಮಾಡುವ ಸಲುವಾಗಿ ಗುಡ್ಡಗಳನ್ನೆಲ್ಲ ಸುತ್ತತೊಡಗಿದ. ಕೃಷ್ಣಯ್ಯನಿಗೆ ಅವನ ಮೇಲೆ ದೂರು ಕೊಡಲು ಇದೊಂದು ಕಾರಣವಾಯಿತು. ಅವನು ಗಣಿಯಲ್ಲಿ ಕೆಲಸ ನೋಡಿಕೊಳ್ಳುವುದಿಲ್ಲ. ಸರಿಯಾಗಿ ಗಣಿಗೆ ಬರುವುದೇ ಇಲ್ಲವೆಂದು ಕಂಪೆನಿಯ ಕಚೇರಿಗೆ ತಿಳಿಸಿದ. ಗುಡ್ಡಗಳಲ್ಲಿ ಬೇರೆ ಎಲ್ಲಿಯೂ ಒಳ್ಳೆಯ ಅದಿರು ದೊರೆಯುವುದಿಲ್ಲವಾದರೂ ಕೂಲಿಗಾರರನ್ನು ಕರೆದೊಯ್ದು ಕುಣಿಗಳನ್ನು ತೋಡಿಸಿ ಹಣ ವೆಚ್ಚ ಮಾಡುತ್ತಿರುವನೆಂದೂ ಒಮ್ಮೆ ತಿಳಿಸಿದ.

ಶಾಂತಪ್ಪ-ಕೃಷ್ಣಯ್ಯರ ಈ ವಿರುದ್ಧಾರ್ಥ ಪತ್ರಗಳನ್ನು ನೋಡಿ ಕಂಪೆ ನಿಯ ಬೆಂಗಳೂರು ಮೇನೇಜರಿಗೆ ಯಾವುದೂ ಅರ್ಥವಾಗಲಿಲ್ಲ. ಅವರಿಗೆ ಕೃಷ್ಣಯ್ಯನಲ್ಲಿ ಹಲವು ವರ್ಷಗಳಿಂದ ಸ್ನೇಹವಿದ್ದಿತು. ಆದರೆ ಶಾಂತಪ್ಪನಲ್ಲಿ ನಂಬಿಕೆಯಿದ್ದಿತು. ಅಲ್ಲದೇ ಶಾಂತಪ್ಪ ಕಳುಹಿಸಿದ್ದ ಇಂಗ್ಲೀಷು ಗುಡ್ಡದ ಅದಿರಿನ ನಮೂನೆಯು ಶೇಕಡ ಐವತ್ತು ಮ್ಯಾಂಗನೀಸಿನ ಅಂಶವನ್ನು ಹೊಂದಿ ದ್ದಿತು. ಇದರಲ್ಲಿ ಯಾರನ್ನು ನಂಬುವುದು ?

ಕೃಷ್ಣಯ್ಯನು ಶಾಂತಪ್ಪನ ಮೊದಲಿನ ಗಣಿಯ ವಿಷಯಗಳನ್ನೆಲ್ಲ ಕೇಳಿ ತಿಳಿದುಕೊಂಡು ಕಂಪೆನಿಯ ಮೇನೇಜರಿಗೆ ಹೇಳಿದ್ದ,

"ಶಾಂತಪ್ಪ ತುಂಬಾ ಅಪಾಯಕಾರಿ ಮನುಷ್ಯ. ಆ ಗಣಿಯ ಸಾಹು ಕಾರರಿಗೆ ಮೋಸ ಮಾಡಿಬಿಟ್ಟ; ಗಣಿಯ ಇನ್‌ಸ್ಪೆಕ್ಟರಿಗೆ ಅವರ ವಿರುದ್ಧವಾಗಿ ವರ್ತಮಾನ ಕೊಟ್ಟಿದ್ದನಂತೆ. ಗಣೀಲಿ ಯಾವ್ರೋನೋ ಅಪಘಾತವಾಗಿ ಸತ್ತುಹೋದಾಂತ ಬೇರೆ ತಿಳಿಸಿದ್ದ. ಇದನ್ನೆಲ್ಲ ಕೇಳಿಕೊಂಡು ಇನ್ಸ್ಪೆಕ್ಟರು

ಬಂದು ಗಣಿ ನೋಡಿದರು. ಅವರಿಗೂ ಅನುಮಾನ ಬರುವ ಹಾಗಿದ್ದರಿಂದ ಗಣಿ ನಿಲ್ಲಿಸೋಕೆ ಆರ್ಡರು ಮಾಡ್ತೀನೀಂತ ಹೇಳಿದರು. ಆದ್ದರಿಂದ ಆ ಸಾಹುಕಾರರು, ಪಾಪ, ಇನ್ಸ್‌ಪೆಕ್ಟರಿಗೆ ಒಂದು ಸಾವಿರ ರೂಪಾಯಿ ಲಂಚ ಕೊಡಬೇಕಾಯಿತು....ಶಾಂತಪ್ಪನನ್ನು ನಂಬುವ ಹಾಗಿಲ್ಲ !"

## ೨

## ಅನುರಾಗದ ಅಂಕುರ

ಆ ದಿನ ಮಧ್ಯಾಹ್ನ ಶಾಂತಪ್ಪ ಗಣಿಯಲ್ಲಿ ಊಟ ಮಾಡುತ್ತಿದ್ದಾಗ ಇದ್ದಕ್ಕಿದ್ದಂತೆ ಯಾರೋ ದೂರದಲ್ಲಿ "ಅಯ್ಯೋ!" ಎಂದು ಕೂಗಿಕೊಂಡಂತೆ ಕೇಳಿಸಿತು. ಅವನು ಊಟದ ತಟ್ಟೆಯನ್ನು ಹಾಗೆಯೇ ನೆಲದಮೇಲಿಟ್ಟು ಹೊರಹೋಗಿ ನೋಡಿದ. ಎಲ್ಲರೂ ದೂರದಲ್ಲಿ ಮರಗಳ ಬದಿಯಲ್ಲಿ ಕುಳಿತು 'ಭಾಟಿ' ತಿನ್ನುತ್ತಿದ್ದರು. ಊಟ ತಂದಿದ್ದ ಅಡಿಗೆಯಾಳು ಅಲ್ಲಿಯೇ ಮರವೊಂದರ ನೆರಳಿನಲ್ಲಿ ಮಲಗಿ ನಿದ್ರಿಸುತ್ತಿದ್ದ. ಯಾರಿಗೂ ಆ ಕೂಗು ಕೇಳಿ ರಲಿಲ್ಲ. ಅಷ್ಟರಲ್ಲಿ ಹತ್ತಿರದ ಗಿಡಗಳ ಸಂದಿನಿಂದ ಬಾಯ್ನಿ ತನ್ನ ಕಾಲನ್ನು ಕೈನಲ್ಲಿ ಹಿಡಿದುಕೊಂಡು ಅಳುತ್ತಾ ಓಡಿಬಂದಳು. ಶಾಂತಪ್ಪ ಅತ್ತ ನೋಡಿದ. ಅವಳ ಕಾಲಿನ ಮೀನ ಖಂಡ ಕತ್ತರಿಸಿಹೋಗಿದ್ದಿತು. ಒಳಗಿನ ಮಾಂಸ ಹೊರಗೆ ಕಾಣುತ್ತಿದ್ದು ಧಾರಾಕಾರವಾಗಿ ರಕ್ತ ಸೋರುತ್ತಿದ್ದಿತು. ತಕ್ಷಣ ಅವನೆಂದ,

"ಅಯ್ಯೊ....ಇದೇನು ಬಾಯ್ನಿ ?"

"ಅಲ್ಲಿ ಸೌದೀ ಕಡಿಯೋಕೆ ಹೋಗಿದ್ದೆ ಸಾವ್ಕಾರ್ರೆ. ಸೌದಿ ಕಡಿಯೋ ವಾಗ ಮಚ್ಚು ಕಾಲಿಗೆ ತಗುಲಿಬಿಡ್ತು....ನೋವಾಗ್ತದೆ....ಯಾಡೀ........" ಅವಳು ಸಂಕಟಪಡತೊಡಗಿದಳು. ಅದನ್ನು ನೋಡಿದ ಊಟ ಮಾಡುತ್ತಿದ್ದ ಹಲವರೂ ಓಡಿಬಂದಿದ್ದರು. ಶಾಂತಪ್ಪ ತಕ್ಷಣ, ತಾನು ದಿನವೂ ಹೊತ್ತು ತರುತ್ತಿದ್ದ ತನ್ನ ಸ್ವಂತ ಪ್ರಥಮ ಚಿಕಿತ್ಸೆಯ ಪೆಟ್ಟಿಗೆಯಿಂದ ಕೆಲವು ಔಷಧ ಗಳನ್ನು ತೆಗೆದು ಚಿಕಿತ್ಸೆ ಮಾಡಿ ಬಟ್ಟೆ ಕಟ್ಟಿದ.

"ಈ ಘಾಯ ವಾಸಿಯಾಗಬೇಕಾದರೆ ತುಂಬಾ ದಿನ ಬೇಕು. ದಿನಾ

ಬಂದು ನಮ್ಮ ಹತ್ತಿರ ಔಷಧಿ ಹಾಕಿಸಿಕೊಂಡು ಹೋಗು. ಇದು ವಾಸಿ ಯಾಗೋವರೆಗೆ ಕೆಲಸಕ್ಕೆ ಬರಬೇಡ", ಎಂದ ಶಾಂತಪ್ಪ ಆಳವಾಗಿದ್ದ ಆ ಘಾಯವನ್ನೇ ನೋಡುತ್ತಾ.

"ಸಾವ್ಕಾರ್ರೇ ಅವಳು ದಿನಾ ಕೆಲಸಕ್ಕೆ ಬರದೆಹೋದ್ರೆ ನಮ್ಮ ಹೊಟ್ಟೆ ಪಾಡೇನು ?" ಬಾಯ್ನಿಯ ತಾಯಿ ಕೇಳಿದಳು. ಅವಳ ಮುಖದಲ್ಲಿ ಆ ಬಡ ತನದ ಬೇಗೆಯೇ ಕಾಣುತ್ತಿದ್ದಿತು. ಅವಳಿಗೆ ಕಂಪೆನಿಯವರು ಕೊಡುತ್ತಿದ್ದ ಕೂಲಿ ದಿನಕ್ಕೆ ಹನ್ನೆರಡಾಣೆ. ಆರು ಕೆಲಸದ ದಿನಗಳ ಒಂದು ವಾರಕ್ಕೆ ಬರು ತ್ತಿದ್ದುದು ನಾಲ್ಕೂವರೆ ರೂಪಾಯಿ. ಒಬ್ಬೊಬ್ಬರದೂ ಸೇರಿ ತಾಯಿ ಮಗಳು ಒಂಭತ್ತು ರೂಪಾಯಿಗಳಲ್ಲಿ ಜೀವನ ನಡೆಸಿ, ಬಾಯ್ನಿಯ ಮದುವೆಗೂ ಒಂದೆರಡು ರೂಪಾಯಿ ತೆಗೆದಿಡುತ್ತಿದ್ದರು. ಆದರೆ ಬಾಯ್ನಿ ಕೆಲಸ ಮಾಡದಿ ದ್ದರೆ ಜೀವನಕ್ಕೇ ತೊಂದರೆ.

"ಗಾಯವಾಗಿರೋರು ಕೆಲಸ ಮಾಡಬಾರದೂಂತ ಕಾನೂನಿದೆ," ಶಾಂತಪ್ಪನೆಂದ.

"ನಮ್ಮ ಹುಡುಗೀದೇನು ತಪ್ಪು ಸಾವ್ಕಾರ್ರೇ ? ಅವಳು ಬೇಕೂಂತ ಪೆಟ್ಟು ಮಾಡಿಕೊಂಡಿಲ್ಲ. ಅವಳು ಗಾಯ ಮಾಡಿಕೊಂಡಿದ್ಕೆ ಅವಳಿಗೇ ಕೆಲಸ ಇಲ್ಲವಾ ? ಹಾಗೆ ಮಾಡಬ್ಯಾಡಿ ದೇವ್ರೇ ?"

"ಅವಳದ್ದು ತಪ್ಪು ಅಂತ ನಾನು ಹೇಳಿಲ್ಲಮ್ಮ. ಗಾಯವಾದೋರಿಗೆ ವಿಶ್ರಾಂತಿ ಬೇಕು. ಆದ್ರಿಂದ ಒಂದು ವಾರ ಮನೇಲಿ ವಿಶ್ರಾಂತಿ ತಗೊಂಡು, ಮುಂದಿನ ವಾರ ಬರಲಿ."

"ನಮ್ಮಂಥ ಬಡವ್ರಿಗೆ ಮನೇಲಿ ಕೂರೋಕಾಗ್ತದ ಸಾವ್ಕಾರ್ರೇ!"

ಶಾಂತಪ್ಪನಿಗೆ ಏನೂ ಹೇಳಲು ತೋರಲಿಲ್ಲ. ಅವಳ ಘಾಯ ನೋಡಿ ದರೆ ಅವನಿಗೇ ಭಯವಾಗುತ್ತಿದ್ದಿತು. ಸುಮಾರು ಒಂದೂವರೆ ಅಂಗುಲ ಆಳ ವಾಗಿದ್ದ ಘಾಯವದು. ಅದು ಮಾಯಬೇಕಾಗಿದ್ದರೆ ಕೆಲವು ದಿನಗಳು ಬೇಕೇ ಆಗಿದ್ದುವು. ಆದರೆ ನೋವಿನ ಜೊತೆಗೆ, ನಡೆದ ನೋವೂ ಸೇರಿದರೆ ಆ ತರುಣಿಯ ಗತಿ ?

"ಇರಲಿ ನೋಡೋಣ. ಕೆಲಸಕ್ಕೆ ಹೋಗಿ ಎಲ್ಲಾ. ಹೊತ್ತಾಗಿದೆ. ನೀನು ನೆರಳಿನಲ್ಲಿ ಕೂತ್ಕೊ ಬಾಯ್ನಿ........." ಎಂದು ಎಲ್ಲರನ್ನೂ ಕಳುಹಿಸಿದ ಶಾಂತಪ್ಪ.

"ನಾನು ಸುಮ್ಮನೆ ಕೂತುಕೊಂಡ್ರೆ ನಂಗೆ ಈವತ್ತಿನ ಕೂಲಿ ಕೊಡ್ತೀರಾ ಸಾಪ್ಕಾರ್?" ಕುಂಟುತ್ತಾ ನಡೆಯುತ್ತಿದ್ದ ಬಾಯ್ನಿ ಕೇಳಿದಳು.

"ಕೊಡ್ತೀನಿ. ಸುಮ್ಮನೆ ಕೂತುಕೋ ಹೋಗು' ಎಂದು ಶಾಂತಪ್ಪ ಊಟ ಮಾಡಲು ಹೊರಟ.

ಆ ದಿನ ರಾತ್ರಿ ಶಾಂತಪ್ಪನಿಗೆ ನಿದ್ರೆಯೇ ಬರಲಿಲ್ಲ. ಬಾಯ್ನಿಯು ಗಣಿಗೆ ಬರುವುದು ಅವನಿಗಿಷ್ಟವಿರಲಿಲ್ಲ. ಆದರೆ ಬಾರದಿದ್ದರೆ ಅವಳ ಜೀವನಕ್ಕೆ ಬಹಳ ತೊಂದರೆಯಾಗುತ್ತಿದ್ದಿತು, ಅವಳು ಕೆಲಸ ಮಾಡದೇ ಗುಡಿಸಿಲಿನಲ್ಲಿರಲು ಇಚ್ಛಿಸಿರಲಿಲ್ಲ. ಅವನು ಮತ್ತೂ ಒಂದು ಯೋಚನೆ ಮಾಡಿದ.

ಬಾಯ್ನಿಗೆ ತನ್ನ ಕೈಯಿಂದಲೇ ಅವಳ ಎರಡು ವಾರಗಳ ಕೂಲಿ ಕೊಡುವುದಕ್ಕೆ ನಿರ್ಧರಿಸಿದ. ಆದರೆ ಅವಳು—ಅವಳತಾಯಿ ಈ ವಿಷಯವನ್ನು ಯಾರಿಗೂ ತಿಳಿಸಕೂಡದು.

ಬಟವಾಡೆಯ ದಿನ ಗಣಿಗೆ ರಜ. ಆ ದಿನ ಕೂಲಿಗಾರರೆಲ್ಲರೂ ತಮ್ಮ ಹಣ ತೆಗೆದುಕೊಂಡು ಹತ್ತಿರವಲ್ಲಿದ್ದ ಪುರದ ಸಂತೆಗೆ ಹೋಗುತ್ತಿದ್ದರು. ಆ ದಿನ ತಾಂಡವೆಲ್ಲವೂ ಖಾಲಿಯಾಗಿರುತ್ತಿದ್ದಿತು, ಹೊನ್ನೂರಿನಲ್ಲಿ ಹೆಚ್ಚು ಜನರು ಕಾಣುತ್ತಿರಲಿಲ್ಲ ಅಂದು. ಆ ಒಂದು ದಿನ ಕಂಪೆನಿಯ ಬಿಡಾರದಲ್ಲಿ ಮಧ್ಯಾಹ್ನ ಊಟ ಮಾಡಿ ಶಾಂತಪ್ಪ ಕುಳಿತಿದ್ದ. ಅಲ್ಲಿ ಕೃಷ್ಣಯ್ಯನೂ ಇರಲಿಲ್ಲ, ಪುರದ ಸಂತೆಗೆಂದು ಅವನೂ ಹೋಗಿದ್ದ! ಅವನಿದ್ದರೆ, ತಮ್ಮ ಹೃದಯದಲ್ಲಿ ಏನೇ ಇದ್ದರೂ, ಇಬ್ಬರೂ ಸಹ ರಾಷ್ಟ್ರದ ರಾಜಕೀಯ ಮೊದಲಾದ ವಿಷಯಗಳನ್ನು ಚರ್ಚಿಸುತ್ತಿದ್ದರು. ಆದರೀದಿನ ಶಾಂತಪ್ಪನಿಗೆ ಬೇಸರವಾಯಿತು.

ಅವನೆದ್ದು ಹೊರಹೊರಟ. ಶಿವಮೊಗ್ಗೆಯ ರಸ್ತೆಯಲ್ಲಿ ಉದ್ದಕ್ಕೂ ಹೊರಟ. ಅಲ್ಲಿ ಸಣ್ಣದೊಂದು ಹಳ್ಳವಿದ್ದಿತು, ಅದರಲ್ಲಿ ಅರ್ಧ ತುಂಬಿ ನೀರು ಹರಿಯುತ್ತಿದ್ದಿತು. ಅದರ ಮೇಲೆ ಸೇತುವೆಯೊಂದನ್ನು ನಿರ್ಮಿಸಿದ್ದರು. ಶಿವಮೊಗ್ಗೆಯ ರಸ್ತೆ ಆ ಸೇತುವೆಯನ್ನು ಹಾದುಹೋಗಿದ್ದಿತು. ಸೇತುವೆಯ ಬಳಿ ದಟ್ಟವಾಗಿ ಬೆಳೆದ ನೇರಳೆ, ಗೋಣಿ, ಆಲದ ಮರದ ಗುಂಪೊಂದಿದ್ದಿತು. ಆ ಗುಂಪಿನ-ಬದಿಯಲ್ಲಿಯೇ ಹಳ್ಳದ ನೀರು ತಿಳಿಯಾಗಿದ್ದು, ಸುತ್ತಲ ಕಾಡಿನಿಂದ ಜಿಂಕೆಗಳೂ, ಒಮ್ಮೊಮ್ಮೆ ಹುಲಿಗಳೂ ಸಹ ನೀರು ಕುಡಿಯಲು ರಾತ್ರೆ ಬರುತ್ತಿದ್ದುವು. ಶಾಂತಪ್ಪ ಮರಗಳ ಆ ಗುಂಪಿನ ಬಳಿ ಹೋಗಿ ಕಲ್ಲೊಂದರ ಮೇಲೆ

ಕುಳಿತು ಸುತ್ತಲೂ ನೋಡಿದ. ಮಲೆನಾಡಿನ ಆ ಪೃಶ್ಯ ಅವನಿಗೆ ಸಂತೋಷ ತಂದಿತು, ಹಾಗೆಯೇ ನೋಡುತ್ತಿದ್ದಾಗ ಹಿಂದಣಿಂದ ಹೆಣ್ಣು ಸ್ವರವೊಂದು ಕೇಳಿಸಿ ತವನಿಗೆ:

"ಹೇಯ್....ಹೇಯ್....ಬ್ಯಾ...."

ಅವನು ತಿರುಗಿನೋಡಿದ. ಬಾಯ್ನಿ ಮೇಕೆಗಳನ್ನಟ್ಟಿಕೊಂಡು ಬರುತ್ತಿದ್ದಳು. ಆ ದಿನ ವಾರದ ರಜಾ ದಿನವಾದ್ದರಿಂದ ಅವಳು ಸ್ನಾನ ಮಾಡಿ ಒಗೆದ ಬಟ್ಟೆಗಳನ್ನುಟ್ಟಿದ್ದಳು. ಕಿತ್ತಿಳೆ ಬಣ್ಣದ ವಸ್ತ್ರ ದುಪ್ಪಟ್ಟ ಅವಳು ಹೊದ್ದಿದ್ದುದು ಅವಳ ಮುಖಕ್ಕೆ ಚೆನ್ನಾಗಿ ಒಪ್ಪುತ್ತಿದ್ದಿತು. ಸೀಗೆಪುಡಿಯುಜ್ಜಿ ಸ್ನಾನ ಮಾಡಿದ್ದ ಅವಳ ದೇಹ ಶುಭ್ರವಾಗಿ ಕಾಣುತ್ತಿದ್ದಿತು. ಪೂರ್ಣಿಮಾ ರಾತ್ರಿಯಲ್ಲಿನ ಚಂದ್ರನಂತೆಯೇ ಇದ್ದ ಅವಳ ಮುಖ, ಅದರ ಹಿಂದೆ ಚೆಲ್ಲಿಕೊಂಡಿದ್ದ ಕಪ್ಪು ಕೇಶರಾಶಿ, ಎಲ್ಲವೂ ಶಾಂತಪ್ಪನನ್ನು ಆಕರ್ಷಿಸಿದುವು. ಅವಳ ಕಾಲಿನಲ್ಲಿ ಕಟ್ಟಿದ್ದ ಬಟ್ಟೆಯ ಪಟ್ಟಿಯು ಇನ್ನೂ ಹಾಗೆಯೇ ಇದ್ದಿತು.

ಶಾಂತಪ್ಪನ ಮುಖವನ್ನು ನೋಡುತ್ತಿದ್ದಂತೆಯೇ ಅವಳ ಕಣ್ಣಿನಲ್ಲಿ ಫಳಕ್ಕನೆ ನೀರುದುರಿತು. ಅದನ್ನು ತೋರ್ಗೊಡದಂತೆ ಅವಳು ತಲೆ ತಗ್ಗಿಸಿಕೊಂಡಳು. ಆದರೆ ಶಾಂತಪ್ಪ ಅವಳ ಈ ವರ್ತನೆಯನ್ನು ಕಂಡು ಆಶ್ಚರ್ಯಗೊಂಡು ಕೇಳಿದ,

"ಯಾಕೆ ಬಾಯ್ನಿ ಅಳುತ್ತಿದ್ದೀಯೆ?"

"ಏನಿಲ್ಲ ಸಾವ್ಕಾರ್ರೆ!" ಹಾಗೆಂದು ಅವಳು ಹೇಳಿದರೂ ಅವೇಕೋ ಮುಖ ಒತ್ತರಿಸಿಕೊಂಡು ಬಂದು, ತಗ್ಗಿಸಿದ ತಲೆಯನ್ನವಳು ಎತ್ತಲೇ ಇಲ್ಲ.

ಶಾಂತಪ್ಪನ ಮನಸ್ಸಿನಲ್ಲಿ ಕಸಿವಿಸಿಯಾಯಿತು. ತಕ್ಷಣ ಅವನೆದ್ದು ಬಾಯ್ನಿಯ ಬಳಿಗೆ ಹೋಗಿ ಅವಳ ಗಲ್ಲವನ್ನು ಹಿಡಿದೆತ್ತಿ ಮುಖವನ್ನು ನೋಡಿದ. ಹಾಲಿನಂತೆ ಬೆಳ್ಳಗಿದ್ದ ಅವಳ ಆ ನುಣ್ಣು ಗಲ್ಲಗಳನ್ನು ಅವನು ಹಾಗೆಯೇ ಹಿಡಿದು ತನ್ನೆಡೆಗೆ ಮುಖವೆತ್ತಿದಾಗ ಅವಳ ಕಣ್ಣಿನಲ್ಲಿ ಕಾಣುತ್ತಿದ್ದ ಆ ನಕ್ಷತ್ರ ಕಾಂತಿ ಇನ್ನೂ ಹೆಚ್ಚಿತು. ಆಗಿನ್ನೂ ಹದಿನೇಳು-ಹದಿನೆಂಟರ ಹೊಸ್ತಿಲಲ್ಲಿ ಕಾಲಿಟ್ಟಿದ್ದ ಅವಳ ದೇಹರಾಗ್ಯವು ಅವನಿಗೆ ಕಾಲೇಜಿನ ನೆನಪೊಂದನ್ನು ತಂದಿತು.....

ಕಾಲೇಜಿನಲ್ಲಿ ರಸಾಯನ ಶಾಸ್ತ್ರದ ವಿದ್ಯಾರ್ಥಿನಿಯಾಗಿದ್ದಳು ಆ ಮೈನಾ. ಮೈನಾವತಿ ಮಂಗಳೂರಿನ ಕಡೆಯವಳು. ಅವಳಿಗೆ ಇಪ್ಪತ್ತು ವಯಸ್ಸಿರಬಹುದು. ಅವಳೂ ಹೀಗೆಯೇ ಅನುಪಮ ಸುಂದರಿ; ಬುದ್ಧಿ

ವಂತೆಯೂ ಸಹ. ಅವಳು ಕಾಲೇಜಿನ ಅಂಗಳದಲ್ಲಿ ಕಾಲಿಟ್ಟರೇ ಸಾಕು ಅವಳ ಸೌಂದರ್ಯದ ವಿದ್ಯುದಲೆಗಳು ಎಲ್ಲೆಡೆಗೂ ಹರಡಿದಂತೆಯೇ ತಕ್ಷಣ ಎಲ್ಲ ವಿದ್ಯಾರ್ಥಿಗಳ ದೃಷ್ಟಿಯೂ ಅವಳತ್ತಲೇ ಹರಿಯುತ್ತಿದ್ದುವು. ತನ್ನ ಸೌಂದರ್ಯದ ಬಗ್ಗೆ ಅವಳಿಗೊಂದು ಹೆಮ್ಮೆ. ಬೇಕೆಂತಲೇ ಬಿಂಕದಿಂದ ಹಂಸವನ್ನನುಕರಿಸಿವಂತೆ ನಡೆಯುತ್ತಾ ಯಾರನ್ನೂ ತಲೆಯೆತ್ತಿ ನೋಡದಿದ್ದರೂ ಮೈಯೆಲ್ಲಾ ಕಣ್ಣಾಗಿ ನಡೆಯುತ್ತಿದ್ದಳು. ಅವಳ ಸಹಜ ಸೌಂದರ್ಯಕ್ಕೆ ಅವಳು ಸೇರಿಸುತ್ತಿದ್ದ ಆ ಬಾಹ್ಯಾಡಂಬರದ ಹೊರೆಯನ್ನು ಕಂಡು ಶಾಂತಪ್ಪ ಎಷ್ಟೋ ವೇಳೆ ಅಸಹ್ಯಪಡುತ್ತಿದ್ದರೂ ಅವಳ ಲಾವಣ್ಯಕ್ಕೆ ಬೆರಗಾಗಿದ್ದ. ಆದರೆ ಈ ಹಳ್ಳಿಯ ಹೆಣ್ಣು ಬಾಯ್ನಿ-ಇವಳಿಗೆ ವಿದ್ಯೆಯಿರಲಿಲ್ಲ, ಬಹಿರಾಡಂಬರ ಇವಳಿಗೆ ನಿಲುಕದ ವಿಷಯ. ಆದರೂ ಇವಳು ಅನುಪಮ ಸುಂದರಿ. ಯಾರೂ ಕಾಣದಿದ್ದರೂ ತಾನೇ ಬಿರಿದು ಮೆರೆವ ಕಾಡು ಗುಲಾಬಿಹೂವಿನಂತೆ. ಆ ಲಂಬಾಣಿ ಹೆಣ್ಣಿಗೆ, ಮನಸ್ಸಿನಲ್ಲಿಯೇ ಕುಪ್ಪಸ ತೊಡಿಸಿ, ಸೀರೆಯುಡಿಸಿ, ಮುಡಿ ಕಟ್ಟಿಸಿ ಅವಳನ್ನು ಪಟ್ಟಣದ ರೂಪಸಿಯನ್ನಾಗಿಸಿ ನೋಡಿದ. ಅಬ್ಬ! ಅದೆಂತಹ ರೂಪರಾಶಿ.

ಶಾಂತಪ್ಪನಿಗೆ ಇದ್ದಕ್ಕಿದ್ದಂತೆ ನಗು ಬಂದಿತು. ತಾನು ಹೀಗೆ ಲಂಬಾಣಿ ಹುಡುಗಿಯೊಂದಿಗೆ ನಿಂತಿರುವುದನ್ನು ಬೆಂಗಳೂರಿನ ತನ್ನ ಜನರಾರಾದರೂ ನೋಡಿದ್ದರೆ, "ಅಯ್ಯೋ ಏನು ಹೇಳೋಣ. ಶ್ರೇಷ್ಠ ಲಿಂಗಾಯಿತರ ಮನೆಯಲ್ಲಿ ಹುಟ್ಟಿ ಹಾಳು ಲಂಬಾಣಿಯೊಂದಿಗೆ ಸರಸವಾಡ್ತಾನೆ" ಎನ್ನುತ್ತಿದ್ದರು. ತನ್ನನ್ನು ಬ್ರಾಹ್ಮಣನೆಂದು ಭ್ರಮಿಸಿದ್ದ ಉತ್ತಮ ಕುಲಜರಾರಾದರೂ ಕಂಡಿದ್ದರೆ "ಏನು ಕರ್ಮವಪ್ಪ ಇದು! ಬ್ರಾಹ್ಮಣನಾದವನು ಲಂಬಾಣಿಯ ಸಂಗಡ ಹೀಗೆ ನಿಂತಿದಾನೆ. ಎಲ್ಲಾ ಪಾಪಶೇಷ!" ಎನ್ನುತ್ತಿದ್ದರು.

"ಯಾಕೆ ಸಾವ್ಕಾರ್ರೆ. ಹೀಂಗೆ ನಗ್ತಿದೀರಾ?" ಬಾಯ್ನಿ ಕೇಳಿದ ಮಾತಿನಿಂದ ಶಾಂತಪ್ಪ ಎಚ್ಚರಗೊಂಡವನಂತಾದ. ಅವಳ ಗಲ್ಲದ ಮೇಲಿದ್ದ ಅವನ ಕೈಗಳನ್ನು ಅವನು ಹಿಂತೆಗೆದುಕೊಳ್ಳಲು ಮನಸ್ಸೇ ಬಾರದಂತಿದ್ದಿತು. ಅವಳ ಕಣ್ಣುಗಳನ್ನು ನೋಡಿ ಅವನೆಂದ,

"ನೀನೇಕೆ ಅಳುತ್ತಿದ್ದೆ ಹೇಳು?"

"ನನ್ನ ರೇಖ್ಯಾನಿಗೆ ಕೊಟ್ಟು ಮದ್ವಿ ಮಾಡ್ತಾರಂತೆ!" ಹಾಗೆಂದು ಪುನಃ ಅವಳು ಗಳಗಳನೆ ಅತ್ತುಬಿಟ್ಟಳು. ಶಾಂತಪ್ಪನಿಗೂ ಅವನ ಹೃದಯವನ್ನು ಮೆಲ್ಲನೆ ಕುಟುಕಿದಂತಾಯಿತು.

"ನಿಮ್ಮ ತಾಯಿ ಒಪ್ಪಿಕೊಂಡಿದ್ದಾಳಾ ?"

"ಅವಳನ್ನ ಒಪ್ಪಿಸೋಕೆ ನಮ್ಮ ಗುರು ಬರ್‍ತಾನಂತೆ. ಅವನು ಇವತ್ತು ಪುರದ ಸಂತೆಗೆ ಬರ್‍ತಾನೆ. ಅಲ್ಲೀ ಅವನ್ನ ಕಂಡು ನಮ್ಮ ತಾಂಡದೋರೆಲ್ಲ ಮಾತಾಡ್ತಾರಂತೆ. ನಮ್ಮ ತಾಯಿ ಈ ಮದುವೆಗೆ ಒಪ್ಪದಿದ್ರೆ ನಮ್ಮನ್ನ ಜಾತೀಯಿಂದ ಹೊರಗೆ ಹಾಕ್ತಾರಂತೆ !"

"ನಿಮ್ಮ ತಾಯಿ ಒಪ್ಪಿದರೆ ನೀನು ಮಾಡ್ಕೊಳ್ತೀಯ ?"

ಬಾಯ್ನಿ ತಲೆಯಾಡಿಸಿದಳು. ಅವಳಿಗೆ ಇಚ್ಛೆಯಿರಲಿಲ್ಲ.

"ಯಾಕೆ ನಿಂಗೆ ಇಷ್ಟವಿಲ್ಲವೇನು ?"

"ಇಲ್ಲ ಸಾವ್ಕಾರ್ರೆ. ಅವನು ಶುದ್ಧ ಕುಡುಕ. ವಾರದ ಕೂಲೀನೆಲ್ಲಾ ಕಳ್ಳು ಕುಡಿಯೋಕೆ ದಂಡಾ ಮಾಡ್ತಾನೆ. ಇಲ್ಲಿ ಸರ್‍ಕಾರದೋರು ಹೆಂಡ ನಿಲ್ಸಿದಾರೆ. ಅದ್ಕೇ ಪುರದ ಪಟೇಲನ ಮನ್ಯಾಗೆ ಕಳ್ಳಭಟ್ಟಿ ಇಳಿಸ್ತಾರೆ. ಅದನ್ನ ಕುಡೀತಾನೇ ಆ ರೇಖ್ಯಾ !"

ಶಾಂತಪ್ಪ ಸುಮ್ಮನಿದ್ದ ಅವಳೇ ಪುನಃ ಹೇಳಿದಳು,

"ಕುಡಿದು ಬಂದು ಎಲ್ರೂ ಹೆಂಡಿರನ್ನ ಹೊಡೀತಾರೆ ಸಾವ್ಕಾರ್ರೆ. ಅವರು ಮನೆಗೆ ಕಾಳು ಕಡ್ಡಿ ತರಾಕಿಲ್ಲ."

"ನಿನಗೆ ಬೇರೆ ಯಾರನ್ನ ಮದುವೆಯಾಗೋಕೆ ಇಷ್ಟವಿದೆ ?"

"ಯಾರ್‍ನೂ ಇಲ್ಲ !" ಬಾಯ್ನಿ ತಲೆತಗ್ಗಿಸಿಕೊಂಡು ಹೇಳಿದಳು.

ಶಾಂತಪ್ಪನಿಗೆ ಅವಳ ಉತ್ತರದಿಂದ ಆಶ್ಚರ್ಯವಾಯಿತು. ಆದರೂ ಅವಳನ್ನು ಪುನಃ ಏನೂ ಕೇಳಲು ಇಷ್ಟಪಡಲಿಲ್ಲ ಅವನು. ಪುರದ ಸಂತೆಗೆ ಹೋಗಿದ್ದವರು ಕೆಲವರು ಹಿಂದಿರುಗುತ್ತಿದ್ದುದು ದೂರದಲ್ಲಿ ಕಾಣಿಸಿತು. ಅದನ್ನು ಕಂಡು ಬಾಯ್ನಿ ಮೇಕೆಗಳನ್ನಟ್ಟಿಕೊಂಡು ಹೊರಟುಹೋದಳು.

ಆ ಒಂದು ವಾರ ಕಳೆದು ಪುನಃ ರಜೆಯ ದಿನ ಬಂದಿತು. ಅಂದೂ ಮಧ್ಯಾಹ್ನ ಶಾಂತಪ್ಪ ಸೇತುವೆಯ ಬಳಿ ಹೋಗಿ ಕುಳಿತುಕೊಂಡ. ಒಂದೊಂದೇ ಕಲ್ಲುಗಳನ್ನು ನೀರಿಗೆಸೆಯುತ್ತಾ ಅಲ್ಲಿ ಉದಯವಾಗುತ್ತಿದ್ದ ಅಲೆಗಳನ್ನು ನೋಡುತ್ತಾ ಕುಳಿತಿದ್ದ. ಚೈತ್ರಮಾಸದ ಬಿಸಿಲು ರಣರಣ ಸುಡುತ್ತಿದ್ದಿತು. ದೂರದಲ್ಲಿ ನಳಿನೀಪುರ, ಕಾಗಿನೆಲೆ ಮೊದಲಾದ ಬೆಟ್ಟಸಾಲುಗಳು ನೀಲವರ್ಣವಾಗಿ ಕಾಣುತ್ತಿದ್ದುವು. ಮೇಲೆ ಆಕಾಶದಲ್ಲಿ ಬಿಳಿಯದಾದ ಬರಡುಮೋಡಗಳು ಗಂಭೀರವಾಗಿ ತೇಲಿಹೋಗುತ್ತಿದ್ದುವು, ಕಾಲಿನ ಬದಿಯಲ್ಲಿ, ನೀರಿನ

ದಡದ ಮರಳಿನ ಮೇಲೆ ಹಿಂದಿನ ರಾತ್ರಿ ನೀರು ಕುಡಿದು ಹೋಗಿದ್ದ ಜಿಂಕೆಗಳ ಗುಂಪಿನ ಹಲವು ಗುರುತುಗಳು ಕಾಣುತ್ತಿದ್ದುವು. ದೂರ ದೂರದಲ್ಲಿ ನಾಲ್ಕಾರು ದೈತ್ಯಾಕಾರದ ಹುತ್ತಗಳು ತಮ್ಮ ಹಲವು ಬಾಯಿಗಳನ್ನು ತೆರೆದು ಕೊಂಡು ನಿಂತಿದ್ದುವು. ಎಲ್ಲೆಲ್ಲಿಯೂ ತೆಳುವಾದ, ಗಾಜಿನಂತೆ ಕಾಣುತ್ತಿದ್ದ ಎಲೆಗಳು ತುಂಬಿಕೊಂಡಿದ್ದ ಗಿಡಗಳು ಹರಡಿಕೊಂಡಿದ್ದುವು. ಇಷ್ಟೊಂದು ನಿಸರ್ಗ ರಂಜನೆಯು ಸುತ್ತಲೂ ಇದ್ದರೂ ಸಹ ಶಾಂತಪ್ಪನ ಮನಸ್ಸು ಮಾತ್ರ ಸಂತೋಷದಲ್ಲಿರಲಿಲ್ಲ. ಯಾವುದೋ ಅರ್ಥವಿಲ್ಲದ ಬೇಸರ, ಕಾರಣರಹಿತ ಚಿಂತೆಗಳು ಅಲ್ಲಿ ಮನೆಮಾಡಿಕೊಂಡಿದ್ದುವು. ತನ್ನ ಜೀವನದಲ್ಲಿ ಯಾವುದೋ ಒಂದು ಕೊರತೆಯಿದೆಯೆಂದವನಿಗೆನಿಸುತ್ತಿದ್ದಿತು!

"ಇದೇನು ಸಾವ್ಕಾರ್‍ರೆ ಹೀಂಗೆ ಕುಂತಿದ್ದೀರಿ ಇಲ್ಲಿ!"

ಆ ಮಾತುಗಳು ಬಂದೆಡೆ ಶಾಂತಪ್ಪ ತಿರುಗಿ ನೋಡಿದ. ಬಾಯ್ನಿಯ ತಾಯಿ ಮೇಕೆಗಳನ್ನು ಬಯಲಿನ ಕಡೆಗೆ ಓಡಿಸುತ್ತಾ ನಿಂತಿದ್ದಳು. ಅವನನ್ನು ಕಂಡು ಅವಳು ಪುನಃ ಹೇಳಿದಳು.

"ಈ ಮಧ್ಯಾನದಲ್ಲಿ ಹಿಂಗೆಲ್ಲಾ ಕೂತಿರಬಾರ್ದು ಸಾವ್ಕಾರ್‍ರೆ. ಇಲ್ಲಿ ಭೂತ ಓಡಾಡ್ತೈತೆ."

ಆ ಮಾತುಗಳನ್ನು ಕೇಳಿ ಶಾಂತಪ್ಪ ಪಕಪಕನೆ ನಕ್ಕುಬಿಟ್ಟ. ಆದರೂ ಅವಳು ಗಂಭೀರವಾಗಿಯೇ ಹೇಳಿದಳು,

"ನೀವು ನಗ್ತೀರಿ ಅಷ್ಟೆ. ಇದು ನಿಜ ಸಾವ್ಕಾರ್‍ರೆ ಇಲ್ಲೆಲ್ಲಾ ಭೂತ್ರಿಗಳು ಓಡಾಡ್ತವೆ!"

"ಓಡಾಡ್ಲಿ ಪರ್ವಾಗಿಲ್ಲ. ನಾನೂ ನೋಡ್ತೀನಿ....ಇಲ್ಲಿ ಭೂತ ಓಡಾಡೋದಾದ್ರೆ ನೀನು ಯಾಕೆ ಬಂದೆ? ನಿಂಗೇನೂ ಆಗೋದಿಲ್ವೆ?"

"ನನ್ನ ಯಾವ ಭೂತ ಹಿಡಕೊಳ್ಳುತ್ತೆ ಸಾವ್ಕಾರ್‍ರೆ? ಅದು ಪಾಪಿ ಮುಂಡೇದು. ಎಲ್ಲಾ ಒಳ್ಳೆಯವರ್ನೇ ನೋಡುತ್ತೆ."

"ಬಾಯ್ನಿ ಎಲ್ಲಿ?" ಶಾಂತಪ್ಪ ಇದ್ದಕ್ಕಿದ್ದಂತೆ ಕೇಳಿದ.

"ಅವಳು ಗುಡಿಸಿಲ್ನಾಗೇ ಇದಾಳೆ" ಎಂದು ಅವಳು ಸುತ್ತಲೂ ನೋಡಿ ಯಾರೂ ಅಲ್ಲಿ ಬರುತ್ತಿಲ್ಲವೆಂಬುದನ್ನು ಖಚಿತ ಮಾಡಿಕೊಂಡವಳಂತೆ, ಹತ್ತಿರ ಬಂದು ಹೇಳಿದಳು,

"ಸಾವ್ಕಾರ್‍ರೆ ನಿಮ್ಮನ್ನ ಕಂಡ್ರೆ ನಮ್ಮ ಬಾಯ್ನಿ ಪ್ರಾಣಬಿಡ್ತಾಳೆ."

"ಹಾಗಂದ್ರೇನು ?"

"ನೀವು ಮನ್ಯಾಗೆ ಕೂರಿಸಿ ಎಲ್ಟು ವಾರ ಅವಳ ಕೂಲಿ ಕೊಟ್ರಿ. ನೀವು ಅವಳಿಗೆ ದೇವರ ಹಂಗೆ ಆಗಿದೀರಿ."

"ಅದಿರ್ಲಿ. ನಾನು ಹಾಗೆ ಕೊಟ್ಟಿದ್ದನ್ನು ಯಾರಿಗೂ ಹೇಳಬೇಡ. ಕೆಟ್ಟ ಜನ ಏನಾದರೂ ಮಾತನಾಡಿಕೊಂಡಾರು."

"ನಾನು ಯಾರಿಗೂ ಹೇಳಾಕಿಲ್ಲ ಸಾವ್ಕಾರ್ರೆ....ಆದರೂ ಒಂದು ಮಾತು ನಿಮ್ಮ ಮುಂದೆ ಹೇಳ್ಬೇಕಾಗಿದೆ" ಅವಳು ಅನುಮಾನಿಸುತ್ತಾ ಹೇಳಿದಳು.

"ಏನದು? ಹೇಳು !"

"ನಮ್ಮ ಬಾಯ್ಮೀಗೆ ಲಗ್ನಾ ಮಾಡಿಬಿಡಬೇಕು ಅಂತ ನಮ್ಮ ತಾಂಡದ ಹಿರಿಯೋರೆಲ್ಲಾ ಹೇಳ್ತಾ ಅವ್ರೆ. ಅದೂ ಆ ರೇಖ್ಯಾನಿಗೆ ಕೊಡಬೇಕಂತೆ."

"ನಿಮಗೆ ಇಷ್ಟವಿದ್ರೆ ಮಾಡಿಬಿಡಿ. ನಂಗೆ ಯಾಕೆ ಹೇಳ್ತೀರಿ ಅದನ್ನ?"

"ಹಂಗಲ್ಲ ದೇವ್ರೆ. ಅವಳು ಯಾರನ್ನೂ ಮದ್ವೆಯಾಗಾಕಿಲ್ಲ, ಯಾರಿಗಾದಲೂ ಕೊಟ್ಟು ಲಗ್ನಮಾಡಿದ್ರೆ ಬಾವಿಗೆ ಬಿದ್ದು ಪ್ರಾಣ ಕಳ್ಕೊಂತೀನಿ ಅಂತಾಳೆ" ಎಂದು ಅವಳು ಕಣ್ಣಿನಲ್ಲಿ ನೀರು ತಂದುಕೊಂಡಳು. ಯಾವುದೋ ನೆನಪು ಅವಳನ್ನು ಬಾಧಿಸುತ್ತಿತ್ತು.

"ಹಾಗಾದ್ರೆ ನಿನ್ನ ಇಷ್ಟ ಏನಿದೆ ಈಗ ?"

"ಅವಳು ನೀವೂಂದ್ರೆ ಪ್ರಾಣಾ ಬಿಡ್ತಾಳೆ ಸಾವ್ಕಾರ್ರೆ. ನೀವೇ ಅವಳನ್ನ 'ಇಟ್ಟು' ಕೊಂಡು ಬಿಡಿ."

ಶಾಂತಪ್ಪನಿಗೆ ಚೇಳು ಕುಟುಕಿದಂತಾಯ್ತು. "ಥೂ, ಇದೇನು ಹೀಗೆ ಹೇಳ್ತಿ ?" ಎಂದ.

"ಅದಕ್ಕೆ ನಮ್ಮವರು ಯಾರೂ ಏನೂ ಅನ್ನಾಕಿಲ್ಲಾ ಸಾವ್ಕಾರ್ರೆ. ಈಗ ಕೃಷ್ಣಯ್ಯನೋರು ಸೋಮ್ಲೀನ ಇಟ್ಕೊಂಡಿಲ್ವ. ಅವಳ ಗಂಡಾನೂ ಸುಮ್ಕೇನೆ ಇದಾನೆ. ನಿಮ್ಮಂಥ ಸಾವ್ಕಾರ್ರು ನಮ್ಮ ತಾಂಡದ ಹೆಂಗಸರನ್ನ ಇಟ್ಕೊಂಡ್ರೆ ನಮ್ಮವರಿಗೆ ಒಂದು ಪುಣ್ಯ !"

ಶಾಂತಪ್ಪ ಸುಮ್ಮನಿದ್ದ. ಅವಳೇ ಪುನಃ ಹೇಳಿದಳು,

"ನೀವು ಇಟ್ಕೊಂಡ್ರೆ ಅವಳಿಗೆ ಮದ್ವೆ ಮಾಡೂಂತ ಯಾರೂ ಹೇಳೋಕಿಲ್ಲ ಸಾವ್ಕಾರ್ರೆ !"

ಇಟ್ಟುಕೊಳ್ಳುವುದು; ಆ ಪದವನ್ನು ಕೇಳಿ ಶಾಂತಪ್ಪನಿಗೆ ಅಸಹ್ಯವಾ

ಯಿತು. ವೇಶ್ಯಾವಾಟಿಕೆಗಳನ್ನು ಉತ್ತೇಜಿಸುವ ನೀಚ ಜನರಿಂದ ಸೃಷ್ಟಿಯಾದ ಪದ ಅದು. ಸಮಾಜವಾದಿಯಾದ ಕೃಷ್ಣಯ್ಯ ಸೋಮ್ಲಿಯನ್ನು ಇಟ್ಟುಕೊಂಡಿದ್ದ, ಧಾರ್ಮಿಕ ಗುರುಗಳಾದ ಕರಡಿ ಮಠದ ಸ್ವಾಮಿಗಳು ಶಿವಗಂಗೆಯನ್ನು ಇಟ್ಟುಕೊಂಡಿದ್ದರು. ಇನ್ನು ಗಣಿಯಲ್ಲಿ....ಛೆ, ಎಂತಹ ಕ್ಷುದ್ರ ಸಮಾಜದ ರಚನೆಯಿದು.

"ನಾನು ಇಂತಹ ಕೆಲಸಗಳಿಗೆಲ್ಲ ಬರೋವನಲ್ಲಮ್ಮ." ಶಾಂತಪ್ಪನೆಂದ.

"ಹಂಗಾದ್ರೆ ಬಾಯ್ನೀನ ರೇಖ್ಯಾನಿಗೆ ಕೊಟ್ಟು ಲಗ್ನ ಆಗ್ತೈತೆ. ಇದಕ್ಕೆ ಒಪ್ಪದಿದ್ರೆ ನಮ್ಮನ್ನ ಜಾತಿಯಿಂದ ಹೊರಗೆ ಹಾಕ್ತಾರೆ. ಇಷ್ಟೇ ಅಲ್ಲ, ನಾವು ಜಾತಿಯಿಂದ ಹೊರಗೆ ಹೋದ್ರೂ, ಈ ಹಳ್ಳೀಲಿ ಜೀವದಿಂದ ಉಳಿಯೋ ಹಂಗಿಲ್ಲ. ನಮ್ಮನ್ನ ಉಳಿಸಾಕಿಲ್ಲ!...." ಅವಳು ಪುನಃ ಕಣ್ಣಿನಲ್ಲಿ ನೀರು ತಂದುಕೊಂಡು ಬೇರೆಡೆಗೆ ಮುಖ ತಿರುಗಿಸಿಕೊಂಡು ಹೇಳಿದಳು,

"ರೇಖ್ಯಾನಿಗೆ ಆಗೋಕೆ ಇಷ್ಟಾ ಇಲ್ದೆ ಬಾಯ್ನಿ ಬಾವಿಗೆ ಹಾರಿ ಕೋತಾಳೆ. ಅವಳು ಹಂಗೆ ಹೇಳಿದಾಳೆ."

ಹೃದಯಕ್ಕೆ ಆಘಾತವಂತೆ ಬಂದ ಈ ಮಾತುಗಳನ್ನು ಕೇಳಿ ಶಿಲಾ ಮೂರ್ತಿಯಂತೆ ಶಾಂತಪ್ಪ ನಿಂತುಬಿಟ್ಟ. ಬಾಯ್ನಿಯ ತಾಯಿ ಹೊರಟು ಹೋದರೂ ಹಾಗೆಯೇ ನಿಂತಿದ್ದ. ಬಾಯ್ನಿ, ಅವಳ ಸೌಂದರ್ಯ, ಅವಳು ತನ್ನಲ್ಲಿಟ್ಟಿದ್ದ ಭಕ್ತಿಭಾವ ಎಲ್ಲವೂ ಒಂದೊಂದಾಗಿ ಅವನ ಮನದಲ್ಲಿ ಹಾದು ಹೋದುವು.

ಆದರೂ ತಾನು ಕಂಪೆನಿಯವನಾಗಿ ಕೈಕೆಳಗಿನ ಕೆಲಸಗಾತಿಯನ್ನು ಕೂಡುವುದೇ? ಧ್ಯೇಯವಾದಿಯಾದ ತಾನು ಈ ಹೀನ ಕಾರ್ಯಕ್ಕಿಳಿಯುವುದೇ?

* * *

ಆ ಹದಿನೈದು ದಿನಗಳನ್ನೂ ಮೈಮೇಲೆ ಯಾವುದೋ ಭಾರ ಹೊತ್ತಂತೆ ಶಾಂತಪ್ಪ ಕಳೆದ. ಬಾಯ್ನಿಯನ್ನು ರೇಖ್ಯಾನಿಗೆ ಕೊಟ್ಟು ವಿವಾಹ ಮಾಡಬೇಕೆಂದು ಅವರ ಗುರುವೊಬ್ಬನು ನಿರ್ಧರಿಸಿದ್ದನು. ಆ ಗುರು ಬಂದ ದಿನವನ್ನು ನೆನೆನೆನೆದು ಶಾಂತಪ್ಪನಿಗೆ ನಗು ಬರುತ್ತಿದ್ದಿತು. ಆ ದಿನ ತಾಂಡದಲ್ಲಿ ದೊಡ್ಡ ಹಬ್ಬವನ್ನಾಚರಿಸಿದ್ದರು, ಹತ್ತಾರುಕುರಿ ಕೋಳಿಗಳನ್ನು ಕೊಯ್ದಿದ್ದರು, ಪುರದಿಂದ ಕಳ್ಳಭಟ್ಟಿಯ ಸಾರಾಯಿಯ ಪೀಪಾಯೊಂದನ್ನೇ ತರಿಸಿದ್ದರು. ಆ ಗುರುವು ಯಥೇಚ್ಛವಾಗಿ ತಿಂದು, ಕುಡಿದು, ತಾಂಡದ ಭಕ್ತೆಯರ ಸೇವೆ

ಕೈಗೊಂಡನು! ಮೂರನೆಯ ದಿನ ಅವನು ಹೊರಡುವಾಗ ಎಲ್ಲರೂ ಅವನಿಗೆ ಧನಧಾನ್ಯಗಳ ಕಾಣಿಕೆಯನ್ನರ್ಪಿಸಿದ್ದರು. ಹೊರಡುವ ಮುನ್ನ ತಾಂಡದಲ್ಲಿ ಹಲವು ವಿಚಾರಣೆಗಳನ್ನು ಮಾಡಿ ತೀರ್ಪುಕೊಟ್ಟಿದ್ದ. ಅವುಗಳಲ್ಲಿ ಬಾಯ್ನಿ-ರೇಖ್ಯಾರ ವಿವಾಹವೂ ಒಂದು.

ಅದು ಕಳೆದು ಹದಿನೈದು ದಿನಗಳಾಗಿದ್ದುವು. ಮೂರನೆಯ ದಿನವೇ ವಿವಾಹ. ಆ ದಿನ ಹತ್ತಿರ ಹತ್ತಿರ ಬರುತ್ತಿದ್ದಂತೆ, ಕಾಡಿನ ಮಧ್ಯದಲ್ಲಿ ತಾನು ಸಿಕ್ಕಿಕೊಂಡಾಗ ಸುತ್ತಲಿಂದ ದಾವಾನಲವು ನಿಧಾನವಾಗಿ ತನ್ನನ್ನು ಸುಡಲು ಬರುತ್ತಿರುವಂತೆನಿಸುತ್ತಿದ್ದಿತವನಿಗೆ. ಈಗ ಕೆಲವೇ ಅಡಿಗಳ ದೂರದಲ್ಲಿದ್ದಿತು ಆ ಉರಿ. ಇಷ್ಟೆಲ್ಲ ಏಕೆ?

ಕೂಲಿಗಾರ್ತಿಯೋರ್ವಳಿಗೆ ಮದುವೆಯಾದರೆ ತನಗೇಕೆ ಹೃದಯ ಭಾರವಾಗಬೇಕು? ಅವಳ ವಿವಾಹವೆಂಬ ಕಲ್ಪನೆಯಾದರೆ ಸಾಕು ಸುತ್ತಲಿನ ಪ್ರಪಂಚವೇ ನಿಸ್ಸಾರವಾದಂತೆ ಕಾಣಬೇಕೇಕೆ? ತನ್ನ ಮನೆಯಿಂದ ಯಾವುದೋ ಅಮೂಲ್ಯ ವಸ್ತುವೊಂದು ಕಳುವಾಗಿ ಹೋಗುತ್ತಿರುವುದೇನೋ ಅದನ್ನು ಕಂಡೂ ಸಹ ತಾನು ಏನೂ ಮಾಡಲಾರದ ಅಸಹಾಯ ಸ್ಥಿತಿಯಲ್ಲಿರುವೆನೇನೋ ಎಂಬಂತೆ ದುಃಖಿಸಬೇಕೇಕೆ?

ನಿಧಾನವಾಗಿ ಆ ದಿನ ರಾತ್ರಿ ಕವಿದುಕೊಂಡಿತು. ಆ ರಾತ್ರೆ ಕಳೆದರೆ ಮೂರನೆಯ ದಿನವೇ ಲಗ್ನ. ತಾಂಡದ ಮಧ್ಯೆ ಇದ್ದ ಭೂತರಾಯನ ದೇವಾಲಯವೊಂದರಲ್ಲಿ ಆ ಸಮಾರಂಭ. ಹತ್ತಾರು ಕುರಿ ಕೋಳಿಗಳನ್ನು ಅಡುಗೆಗೆ ಒದಗಿಸಿ, ಒಂದು ಸೀಸಾಯಿ ಕಳ್ಳನ್ನೂ ಸಹ ತರಲು ಏರ್ಪಡಿಸಿದ್ದಳು ಬಾಯ್ನಿಯ ತಾಯಿ. ಆ ರಾತ್ರಿ ಅವನಿಗೇಕೋ ನಿದ್ರೆಯೇ ಬರಲಿಲ್ಲ. ಈ ಹದಿನೈದು ದಿನಗಳಲ್ಲಿ ನಡೆದ ಒಂದೊಂದು ಘಟನೆಗಳೂ ಅವನ ನೆನಪಿನಲ್ಲಿ ಬಂದುವು.....

ಒಂದು ದಿನ ರಾಶಿಯ ಬಳಿ ಅವನು ನಿಂತಿದ್ದ. ಅದಿರನ್ನು ತುಂಬಿದ ಬಾಣಲೆ ಹೊತ್ತುಕೊಂಡು ಬಾಯ್ನಿ ಅಲ್ಲಿಗೆ ಬಂದವಳು, ಬಾಣಲೆಯನ್ನು ಖಾಲಿ ಮಾಡಿ ಹೊರಡಲನುವಾಗಿ ಅಲ್ಲಿಯೇ ನಿಂತು ಒಮ್ಮೆ ಶಾಂತಪ್ಪನ ಮುಖ ನೋಡಿ ಹೇಳಿದಳು,

"ಸಾವ್ಕಾರ್ರೆ ನನ್ನ ಮೊದ್ವಿಗೆ ಲಗ್ನ ಕಟ್ಟಬಿಟ್ರು!" ಅಷ್ಟು ಹೇಳಿ ಅವಳು ತನ್ನ ಕಣ್ಣೊರೆಸಿಕೊಂಡಳು.

"ಮದ್ವೆ ಗೊತ್ತಾದ್ರ ನಗಬೇಕು. ನೀನು ಅಳ್ತಿದೀಯಲ್ಲ. ಹಾಗೆಲ್ಲ ಅಳಬಾರದು," ಅವನು ಬಲವಂತದಿಂದ ಮುಖದ ಮೇಲೆ ನಗೆಯನ್ನು ಎಳೆದು ತಂದು ಕೊಂಡು ಹೇಳಿದ.

"ನಂಗೆ ರೇಖ್ಯಾ ಇಷ್ಟಾ ಇಲ್ಲ ಸಾವ್ಕಾರ್ರೇ...." ಹಾಗೆಂದು ಸಂಕಟ ದಿಂದ ಅವಳು ಹೊರಟುಹೊದಳು.

ಶಾಂತಪ್ಪನೂ ಕೆಲವಾರು ನಿಮಿಷಗಳು ಅಲ್ಲಿಯೇ ನಿಂತಿದ್ದ. ಅನಂತರ ನಿಧಾನವಾಗಿ ಮೇಲೆ ಗಣಿಯತ್ತ ಹೊರಟ. ಅಲ್ಲಿ ಅವನು ಹೋದಾಗ ರೇಖ್ಯಾ ಹಾರೆ, ಗುದ್ದಲಿಗಳನ್ನು ಹಿಡಿದು ಕೆಲಸ ಮಾಡುತ್ತಿದ್ದ. ಆರೂವರೆ ಅಡಿ ಎತ್ತರವಿದ್ದ ಅವನ ವಯಸ್ಸು ಮಾತ್ರ ಕೇವಲ ಇಪ್ಪತ್ತನಾಲ್ಕೇ ಆಗಿದ್ದಿತು. ಅವನು ಒಂದು ಬಾರಿ ಹಾರೆಯಿಂದ ಹೊಡೆದನೆಂದರೆ ಎಂತಹ ಬಂಡೆಯೂ ಪುಡಿಪುಡಿಯಾಗಿಬಿಡುತ್ತಿದ್ದಿತು. ಪಿಕಾಸಿ, ಗುದ್ದಲಿಗಳನ್ನೆತ್ತಿ ಭೂಮಿಗೆ ಹೊಡೆಯುವಾಗ ಅವನ ಕೈಗಳಲ್ಲಿನ ಮಾಂಸ ಖಂಡಗಳು ಉಬ್ಬಿ ಕೊಂಡು ಅವನ ದೇಹದಾರ್ಢ್ಯವನ್ನು ಸೂಚಿಸುತ್ತಿದ್ದುವು. ಒಂದೊಂದು ದಿನ ಊಟದ ಸಮಯದಲ್ಲಿ ಅವನು ಎತ್ತರದ ಗುಡ್ಡದ ಮೇಲೆ ಕುಳಿತು ಕೊಂಡು ಹಾಡು ಹೇಳುತ್ತಿದ್ದುದೂ ಶಾಂತಪ್ಪನಿಗೆ ಕೇಳುತ್ತಿದ್ದಿತು :

"ಗಾಂಧಿ ಟೋಪಿ ವಾಲಾರೆ, ಸಿಲ್ಕಿ ಟೋಪಿ ವಾಲಾರೆ
ವೋಟು ಪೂಛನೇಕೊ ಆಯಾರೇ....ಆಯಾರೇ....
ಡುಬೇ....ಡುಬೇ...."

ಅವನ ಆ ಮಧುರ ಸ್ವರದೊಂದಿಗೇ ಸುತ್ತಲೂ ರೊಟ್ಟಿ ತಿನ್ನುತ್ತ ಕುಳಿತಿದ್ದವರೆಲ್ಲರೂ ಖೊಳ್ಳನೆ ನಗುತ್ತಿದ್ದರು. ಆ ಸ್ವರಕ್ಕೆ ಶಾಂತಪ್ಪನೂ ತಲೆದೂಗುತ್ತಿದ್ದ. ಅಂತಹವನನ್ನು ವಿವಾಹವಾಗಲು ಈ ಬಾಯ್ಗಿಗೆ ಇಚ್ಛೆಯಿರಲಿಲ್ಲ.

ಈಗ ರೇಖ್ಯಾ ಭೂಮಿಯಲ್ಲಿ ಅದೇ ದೊರೆಕಿದ್ದ ಅದಿರಿನ ಬಂಡೆಯೊಂದನ್ನು ಎಬ್ಬಿಸುತ್ತಾ ಕೇಳಿದ, "ಈ ಕಲ್ಲು ಚೆನ್ನಾಗಿದ್ಯಾ ಸಾರ್ ?"

"ಓ!....ಚೆನ್ನಾಗಿದೇಕಣಯ್ಯಾ....ಜೇಗ ತೆಗೆ....ಏ ಲಚ್ಚ ನೀನು ಬಾ ಇಲ್ಲಿ. ಈ ಬಂಡೆಯೆಬ್ಬಿಸಿ ಅದರ ಕೆಳಗೆ ಒಳ್ಳೇ ಕಲ್ಲು ಇದೆಯೇನೋ ನೋಡ್ರಿ....," ಶಾಂತಪ್ಪ ತಕ್ಷಣ ತನ್ನ ಕೆಲಸದಲ್ಲಿ ನಿರತನಾದ. ರೇಖ್ಯಾನ ದೈತ್ಯಾಕೃತಿಯು ಮರೆತುಹೋಯಿತು.

ಹತ್ತಾರು ಸಣ್ಣ ದೊಡ್ಡ ಬಂಡೆಗಳು ಅಂತಹುವೇ ದೊರಕಿದುವು.

ಹೊನ್ನೂರಿನ ಗಣಿಯಲ್ಲಿ ಅಂತಹ ಒಳ್ಳೆಯ ಅದಿರು ಅದುವರೆಗೂ ದೊರೆತಿರಲಿಲ್ಲ. ಆ ಬಂಡೆಗಳ ಬದಿಯಲ್ಲಿ ಪುನಃ ಕೀಳು ದರ್ಜೆಯ ಅದಿರೇ ದೊರೆಯಲು ಪ್ರಾರಂಭವಾಯಿತು.

"ಇಲ್ಲಿ ಅಷ್ಟೇ ಒಳ್ಳೆಯ ಬೌಲ್ಡರುಗಳು ಸಿಕ್ಕಿದ್ದು. ಪುನಃ ಲೋಗ್ರೇಡು ಕಲ್ಲು ಶುರುವಾಗಿಬಿಡ್ತು." ಶಾಂತಪ್ಪ ನಿರಾಶನಾಗಿ ಹೇಳಿದ. ಎಲ್ಲರೂ ಹೌದೆಂದರು.

ಆವೇಳೆಗೆ ಒಡೆಯಲು ಅದಿರನ್ನು ತೆಗೆದುಕೊಂಡು ಹೋಗಲು ಹೆಂಗಸರ ತಂಡವು ಅಲ್ಲಿಗೇ ಬಂದಿತು. ಪ್ರತಿದಿನವೂ ಕಡಿಮೆ ದರ್ಜೆಯ ಅದಿರನ್ನೇ ಒಡೆದು, ಅದರಲ್ಲಿದ್ದ ಕಬ್ಬಿಣ ಚೆಣಚು ಕಲ್ಲುಗಳನ್ನು ಬೇರ್ಪಡಿಸಿ ಅವರಿಗೂ ಬೇಸರ ಬಂದಿದ್ದಿತು. ಈಗ ದೊಡ್ಡ ದೊಡ್ಡ ಬಂಡೆಗಳಲ್ಲಿ ಉತ್ತಮ ಅದಿರು ದೊರೆತುದನ್ನು ಕಂಡು ತಮ್ಮ ಸ್ಥಳಗಳಿಂದ ಓಡಿಬಂದಿದ್ದರು, ಅದನ್ನು ತೆಗೆದು ಕೊಂಡು ಹೋಗಲು. ಅವರಿಗೂ ಒಳ್ಳೆಯ ಅದಿರನ್ನುಕಂಡು ಸಂತೋಷ ವಾಗಿದ್ದಿತು.

ದೊಡ್ಡ ದೊಡ್ಡ ಚಮ್ಮಟಿಗೆಗಳಿಂದ ಬಂಡೆಗಳನ್ನು ಒಡೆದು ಹಾಕಲು ರೇಖ್ಯಾ ಲಚ್ಚ ಇಬ್ಬರೂ ನಿಂತರು. ಮಧ್ಯೆ ಒಮ್ಮೆ ರೇಖ್ಯಾ ಕೂಗಿ ಹೇಳಿದ,

"ಏ ಬಾಯ್ನಿ ಇಧರ್ ಆ! ಅಚ್ಛ ಭಾಟಾ ಹೈ."

ಬಾಯ್ನಿ ಅವನ ಮಾತು ಕೇಳಿ ಹತ್ತಿರ ಬಂದು ಅವನು ಆಗತಾನೇ ಒಡೆದುಹಾಕಿದ್ದ ನೀಲ ವರ್ಣದ ಅದಿರನ್ನಾಯ್ದುಕೊಂಡಳು. ರೇಖ್ಯಾ ಅವ ಳನ್ನೇ ನೋಡುತ್ತಿದ್ದ. ಅದನ್ನು ನೋಡಿದ ಲಚ್ಚನೆಂದ,

"ಏ! ಯಾಕೋ ಹಂಗೆ ನೋಡ್ತಿ ಅವಳ್ನ. ಇನ್ನು ಒಂದು ಹನ್ನೆ ರಡು ದಿನ ತಡಿ ಸಾಕು!" ಆ ಮಾತನ್ನು ಕೇಳಿದ ಬಾಯ್ನಿ ಕೆಣಕಿದ ಸಿಂಹಿಣಿ ಯಂತೆ ತಲೆಯೆತ್ತಿ ನೋಡಿ, ಹೇಳಿದಳು.

"ಏ! ಲಚ್ಚ. ತಲೆಯೆಲ್ಲಾ ಮಾತಾಡಬೇಡ. ಅವನ್ನ ನಾನು ಮಾಡ್ಕೊಳಾಕಿಲ್ಲ!"

"ಓ!....ಮಾಡ್ಕೊಳಾಕಿಲ್ವ? ಇಲ್ಲಿ ನೋಡ್ತೀನಿ." ಎಂದು ನಗುತ್ತಾ ಹೇಳಿದ ಲಚ್ಚ.

"ಯಾಕೆ ಮಾಡ್ಕೊಳಾಕಿಲ್ಲ ಬಾಯ್ನಿ. ಅವನು ಏನಾಗಿದಾನೆ. ರಾಜಾ ಇದ್ದಂಗಿದಾನೆ." ಎಂದು ಪಕ್ಕದಲ್ಲೇ ನಿಂತಿದ್ದ ರಾಮ್ಯಾ ಹೇಳಿದ.

"ಆ ಆಕಾಶ ಮುಟ್ಟೋವನನ್ನ ಮಾಡ್ಕೊಂತಾರಾ ಯಾರಾದ್ರೂ? ಅವನು ನಿಂತಿದ್ರೆ ಅವನ ಕಿವಿ ಒಳಗೆ ಆಕಾಶದಲ್ಲಿ ಹಾರಾಡೋ ಹದ್ದೂ ಹೋಗಿಬಿಡುತ್ತೆ." ಎಂದು ಬಾಯ್ನಿಯೆಂದು ಹೊರಟುಹೋದಳು.

ಎಲ್ಲರೂ ಅವಳ ಮಾತು ಕೇಳಿ ಬಿದ್ದು ಬಿದ್ದು ನಕ್ಕರು. ಶಾಂತಪ್ಪನೂ ನಕ್ಕ. ಈ ಹೊಸ ಗಣಿಯಲ್ಲಿನ ವಾತಾವರಣವೇ ಹೀಗಿದ್ದಿತು. ಸದಾ ನಗು, ಸಂತೋಷಗಳ ನಡುವೆ ದಿನದ ಕೆಲಸಗಳು ಕಳೆದುಹೋಗುತ್ತಿದ್ದುವು. ಈ ಸಂತೋಷದಲ್ಲಿ, ಅವರೆಲ್ಲರೂ ದೇಹದಿಂದ ಧಾರಾಕಾರವಾಗಿ ಸುರಿಸುತ್ತಿದ್ದ ಬೆವರಾಗಲೀ, ಶ್ರಮವಾಗಲೀ ಒಮ್ಮೊಮ್ಮೆ ಆಯುಧಗಳಿಂದಾದ ಗಾಯಗಳಿಂದ ಹರಿಯುತ್ತಿದ್ದ ರಕ್ತವಾಗಲೀ, ಕಾಣುತ್ತಿರಲಿಲ್ಲ. ಆದರೆ ಈ ದಿನಗಳಲ್ಲಿ ಶಾಂತಪ್ಪನಿಗೇಕೋ ಸಂತೋಷವಿರಲಿಲ್ಲ. ಅವನಲ್ಲಿ ಲವಲವಿಕೆಯಿರಲಿಲ್ಲ. ಗಣಿಯಲ್ಲಿ ಲಂಬಾಣಿ ಕೂಲಿಗಾರರೆಲ್ಲರೂ ದಿನಗಳೆದಂತೆ ನಗುತ್ತಾ ನಲಿಯುತ್ತಿದ್ದರೆ ಶಾಂತಪ್ಪನಿಗೆ ದಿನವೂ ದೇಹದಲ್ಲಿ ಭಾರ ಹೆಚ್ಚಾದಂತೆನಿಸುತ್ತಿದ್ದಿತು.

ಒಂದು ದಿನ ಶಾಂತಪ್ಪ ಊಟಕ್ಕೆ ಕುಳಿತಿದ್ದ. ಹತ್ತಿರದಲ್ಲಿಯೇ ಹರಿಯುತ್ತಿದ್ದ ಸಣ್ಣ ಝರಿಯೊಂದರಲ್ಲಿ ನೀರು ತರಲು ಬಾಯ್ನಿ ಅತ್ತ ಹೋದುದನ್ನು ಅವನು ಕಂಡಿದ್ದ. ನಾಲ್ಕಾರು ನಿಮಿಷಗಳು ಕಳೆದಿರಬಹುದು, ಹೆಂಗಸು ಯಾರೋ ಕೂಗಿಕೊಂಡ ಶಬ್ದ ಅವನಿಗೆ ಕೇಳಿದಂತಾಯ್ತು. ಅವನು ಸುತ್ತಲೂ ನೋಡಿದ. ಕೂಲಿಗಾರರೆಲ್ಲರೂ ರೊಟ್ಟಿ ತಿನ್ನುತ್ತಾ ತಮ್ಮ ಹೆಂಡಿರು, ಗೆಳೆಯರೊಡನೆ ಹರಟುತ್ತಿದ್ದರು. ಒಬ್ಬರಿಗೆ ಹೆಚ್ಚಾದ ಸೀಗೆ ಸೊಪ್ಪಿನ ಪಲ್ಯವನ್ನು ಬೇರೊಬ್ಬರಿಗೆ ಕೊಡುತ್ತಿದ್ದರು. ಆದರೆ ಯಾರೂ ಕೂಗು ಬಂದುದನ್ನು ಕೇಳಲಿಲ್ಲ. ಪುನಃ ಕೂಗಿಕೊಂಡ ಶಬ್ದ ಬಂದಿತು. ಎಲ್ಲರೂ ಸುಮ್ಮನಿದ್ದರು.

ಶಾಂತಪ್ಪನು ತನ್ನ ಗುಡಿಸಿಲಿನಿಂದೆದ್ದು ಝರಿಯತ್ತ ಹೊರಟ. ಅವನು ಝರಿಯ ಬಳಿ ಹೋದಾಗ ರೇಖ್ಯಾ, ಬಾಯ್ನಿಯ ಕೈ ಹಿಡಿದುಕೊಂಡಿದ್ದುದೂ ಅವಳು ಕೈಬಿಡಿಸಿಕೊಳ್ಳಲು ಪ್ರಯತ್ನಿಸುತ್ತಾ ಅವನನ್ನು ದೂಷಿಸುತ್ತಿದ್ದುದೂ ಕಾಣಿಸಿತು; ಅವನು ನಗುತ್ತಾ ಅವಳನ್ನು ಕೀಟಲೆಗೊಳಿಸುತ್ತಿದ್ದ. ಶಾಂತಪ್ಪ ಬಂದುದನ್ನು ಕಂಡು ರೇಖ್ಯಾ ಅಪರಾಧಿಯಂತೆ ತಲೆ ತಗ್ಗಿಸಿಕೊಂಡ. ಶಾಂತಪ್ಪ ಕೈಕಾಲು ತೊಳೆದುಕೊಂಡು ಹೊರಡುವಾಗ ರೇಖ್ಯಾ ತಲೆ ತಗ್ಗಿಸಿಕೊಂಡು ಅಪರಾಧಿಯಂತೆ ಅವನ ಹಿಂದೆಯೇ ಬಂದ. ಅದನ್ನು ಕಂಡು ಶಾಂತಪ್ಪನಿಗೆ ನಗು ಬಂದಿತು.

"ಇಲ್ಲೆಲ್ಲಾ ಕರಡಿಗಳು ತುಂಬಾ ಓಡಾಡ್ತ್ವೈತೆ ಸಾವ್ಕಾರ್ರೆ"; ಅವನು ಶಾಂತಪ್ಪನೊಂದಿಗೆ ಮಾತನಾಡಲು ಯಾವುದಾದರೊಂದು ವಿಷಯವನ್ನು ಹುಡುಕಿತಿದ್ದು, ಹೇಳಿದ.

"ಹೌದು. ಆದರೆ ನಿನ್ನ ನೋಡಿ ಎಂಥಾ ಕರಡಿಯಾದ್ರೂ ಓಡಿ ಹೋಗುತ್ತೆ." ಶಾಂತಪ್ಪನೆಂದ ನಗುತ್ತಾ.ರೇಖ್ಯನೂ ತಲೆ ತಗ್ಗಿಸಿಕೊಂಡು ನಕ್ಕ.

"ನೀನು ಈಗಲೇ ಆರೂವರೆ ಅಡಿ ಎತ್ತರ ಇದಿ. ಇನ್ನು ಇಪ್ಪತ್ತೈದು ವರ್ಷ ಕಳೆದರೆ ಹದಿಮೂರಡಿ ಆಗಿಬಿಡ್ತೀಯೋನೋ!" ಎಂದು ಅವನೆಂದಾಗ ಪುನಃ ಇಬ್ಬರಿಗೂ ನಗು ಬಂದಿತು. ಅಷ್ಟರಲ್ಲಿ ಅವರು ಗಣಯ ಬಳಿ ಬಂದಿದ್ದರು. ರೇಖ್ಯಾ ಬಂದುದನ್ನು ನೋಡಿ ಅವನಿಗಾಗಿ ಕಾದು ನಿಂತಿದ್ದ ಆರೇಳು ಜನ ಹಿರಿಯರು, ಅವನನ್ನು ಕರೆದರು.

ಶಾಂತಪ್ಪ ಬೇರೆಡೆಗೆ ಹೋದರೂ ರೇಖ್ಯಾನಿಗ ಅವರೆಲ್ಲರೂ ಛೀಮಾರಿ ಹಾಕುತ್ತಿದ್ದುದೂ, ಬುದ್ಧಿವಾದ ಹೇಳುತ್ತಿದ್ದುದೂ ಕೇಳಿಸಿತು.

ಪುನಃ ಒಂದು ದಿನ. ರಾಮೇಗೌಡ ಕೆಲವು ಬಂಡೆಗಳಿಗೆ ಡೈನಮೈಟ್ ಇಟ್ಟಿದ್ದ. ಎಲ್ಲರೂ ದೂರ ದೂರ ಹೋಗಿ ನಿಂತಿದ್ದರು. ಶಾಂತಪ್ಪನು ಡೈನಮೈಟು ಇಟ್ಟ ಸ್ಥಳಕ್ಕೆ ಹೋಗಿ ಬೆಂಕಿ ಹಚ್ಚಿಸಿ ರಾಮೇಗೌಡನೊಡನೆ ತಾನೂ ಓಡಿಬಂದಿದ್ದ. ಅವನು ಒಂದು ದೊಡ್ಡ ಬಂಡೆಯೊಂದರ ಹಿಂದೆ ನಿಂತು ಡೈನಮೈಟಿನ ಬತ್ತಿ ಹೊಗೆಯಾಡುತ್ತಿದ್ದುದನ್ನು ನೋಡುತ್ತಿದ್ದ. ಆಗ ಹಿಂದುಗಡೆಯಿಂದ ಯಾರೋ ಹೇಳಿದರು,

"ಸಾವ್ಕಾರ್ರೇ.....ಬಂದೂಕ ಹೊಡೆಯೋವಾಗ ಅಲ್ಲಿ ನೀವು ನಿಂತುಕೋಬೇಡಿ." ಶಾಂತಪ್ಪ, ರಾಮೇಗೌಡ ಹಿಂದಿರುಗಿ ನೋಡಿದರು. ಅಲ್ಲಿಯೇ ತಗ್ಗಿನಲ್ಲಿ ನಿಂತಿದ್ದ ಬಾಯ್ನಿ ಕಾಣಿಸಿಕೊಂಡಳು. ಅವಳು ಹೆದರಿದ ಹರಿಣಿಯಂತೆಯೇ ನಿಂತಿದ್ದಳು.

"ಬಂದೂಕ ಎಲ್ಲಿ ಹೊಡೀತಾರೆ ಬಾಯ್ನಿ?"

"ಅದೇ ಅಲ್ಲಿ. ಹೊಗೆಯಾಡ್ತಿಲ್ವ?"

"ಓ! ಡೈನಾಮೈಟನ್ನ ನೀನು ಹೇಳ್ತಿರೋದು", ಎಂದು ಅವರಿಬ್ಬರೂ ಹೊಟ್ಟೆ ತುಂಬ ನಕ್ಕರು. ಒಂದೂ ಅರ್ಥವಾಗದೇ ಬಾಯ್ನಿ ನೋಡುತ್ತಿದ್ದಳು.

"ನೀವು ಹಂಗೆಲ್ಲ ನಗಬ್ಯಾಡ್ರಿ ಸಾವ್ಕಾರ್ರೇ....ಬೇಕಾದ್ರೆ ನಿಮ್ಮ ಪಾದಕೆ

ಬಿದ್ದು ಕೇಳ್ಕೋತೀನಿ. ಅದು ಮೈಮೇಲೆ ಸಿಡಿದುಬಿಟ್ಟರೆ ಏನುಗತಿ ?" ಎಂದು ಅವಳು ಕೈಮುಗಿದಳು. ಅವಳ ಕಣ್ಣಿನಲ್ಲಿ ನೀರಿತ್ತು. ರಾಮೇಗೌಡ ಅವಳನ್ನು ನೋಡಿ ಹೇಳಿದ,

"ಪಾಪ! ಅದಿಕ್ಕೆ ನಿಮ್ಮನ್ನು ಕಂಡ್ರೆ ಎಷ್ಟು ಭಕ್ತಿ ಇದೆ ಸಾರ್ !"

ಶಾಂತಪ್ಪನಿಗೆ ತಕ್ಷಣ ರಾಮನಾಯ್ಕನ ಹಳ್ಳಿಯ ಗಣಿಯ ವೆಂಕಟಪ್ಪನ ನೆನಪಾಯಿತು. ಅವನೂ ಒಂದು ದಿನ ತನ್ನ ಪ್ರಾಣವನ್ನುಳಿಸುವ ಸಲುವಾಗಿ ಹೀಗೆಯೇ ಬೇಡಿಕೊಂಡಿದ್ದ.

"ಢಂ....ಢಂ....ಢಂ....ಢಂ"

"ನಾಲ್ಕೂ ಒಡೀತು ಸಾರ್. ಪರವಾಗಿಲ್ಲ. ಓ! ನೋಡಿ ಆ ಬಂಡೆ ಎಷ್ಟೆತ್ತರ ಹಾರಿತು" ಎಂದು ರಾಮೇಗೌಡನೆಂದಾಗ ದೊಡ್ಡ ಕಲ್ಲೊಂದು ಬಂಡೆಯಿಂದ ಸೀಳಿಕೊಂಡು ಬಾಣದಂತೆ ಗಗನಕ್ಕೆ ಹಾರಿತ್ತು.

"ಓ !....ಮೇಲೆ ಬೀಳ್ತದೆ....ಹೀಂಗೆ ಬನ್ನಿ ಸಾವ್ಕಾರ್ರೆ" ಎಂದು ಬಾಯ್ನಿ ಕೂಗಿಕೊಂಡಳು. ಆದರೆ ಕಲ್ಲು ಹತ್ತಾರು ಅಡಿಗಳ ದೂರದಲ್ಲಿ ಬಂದುಬಿದ್ದಿತು.

ಕೇವಲ ಎರಡು ದಿನಗಳ ಹಿಂದೆ ಅದೇ ಝರಿಯ ಬಳಿ ಶಾಂತಪ್ಪ ಕೈಕಾಲು ತೊಳೆಯಲು ಹೋಗಿದ್ದ. ಅಲ್ಲಿ ಯಾರೂ ಇರಲಿಲ್ಲ. ಗಣಿಯ ಬಳಿ ಎಲ್ಲರೂ ಊಟಕ್ಕೆ ಕುಳಿತಿದ್ದರು. ಅವನು ನೀರಿನಲ್ಲಿ ಕಾಲಿಟ್ಟಿದ್ದಾಗ, ಬಾಯ್ನಿಯೂ ಬಂದಳು. ಅವಳ ಕೈನಲ್ಲಿ ಮಡಕೆಯೊಂದಿದ್ದಿತು.

"ಸಾವ್ಕಾರ್ರೆ....ನನ್ನ ಇನ್ನು ಮೂರು ದಿನಕ್ಕೆ ರೇಖ್ಯಾನಿಗೆ ಕೊಟ್ಟು ಮದ್ವೆ ಮಾಡಿಬಿಡ್ತಾರೆ...." ಎಂದಳು. ಅವಳ ಮಾತು ಕೇಳಿ ಶಾಂತಪ್ಪನಿಗೆ ಯಾವುದೋ ಒಂದು ವಿಧವಾದ ಯಾತನೆಯುಂಟಾಯಿತು. ಅವನು ಏನೂ ಹೇಳಲಾರದೇ ಸುಮ್ಮನೇ ನಿಂತಿದ್ದ. ಎದುರಿಗೆ ಸ್ವಲ್ಪ ದೂರದಲ್ಲಿ ಝರಿಯಲ್ಲಿ ಬಹಳ ಆಳವಾಗಿದ್ದ ಸ್ಥಳದಿಂದ ಸುಳಿಯೇಳುತ್ತಿದ್ದಿತು! ಅದನ್ನೇ ಇಬ್ಬರೂ ಸ್ವಲ್ಪಹೊತ್ತು ನೋಡಿದರು. ಬಾಯ್ನಿಯೆಂದಳು ಪುನಃ,

"ಸಾವ್ಕಾರ್ರೇ ನಾಳಿದ್ದು ಬಟವಾಡೆ ದಿನ ನನ್ನ ಕರಕೊಂಡು ನಿಮ್ಮ ಸೀಮೆಗೆ ಹೊಂಟೋಗ್ರಿ !"

ಶಾಂತಪ್ಪ ಸರ್ರನೆ ತಿರುಗಿನೋಡಿದ. ದೈನ್ಯತೆಯಿಂದ ನೋಡುತ್ತಾ, ಕಂಬನಿ ಹರಿಸುತ್ತಿದ್ದಳು ಅವಳು. ಶಾಂತಪ್ಪ ಅವಳನ್ನು ನೋಡಿದಾಕ್ಷಣ ಅವಳು ಮುಂದೆ ಬಂದು ಅವನ ಕಾಲನ್ನು ಹಿಡಿದುಕೊಂಡು ಕುಳಿತು ಬಿಟ್ಟಳು.

"ನನ್ನ ಬೇಡಾನ್ನಬ್ಯಾಡಿ ಸಾವ್ಕಾರ್ರಿ! ನಂಗೆ ರೇಖ್ಯಾ ಇಷ್ಟವಿಲ್ಲ, ಅವನು ಭೂತ ಇದ್ದ ಹಂಗಿದಾನೆ." ಅವಳು ಹಾಗೆ ಅಂಗಲಾಚಿ ಬೇಡುತ್ತಿದ್ದು ದನ್ನು ನೋಡಿ ಶಾಂತಪ್ಪನಿಗೆ ಸಂಕಟವಾಯಿತು. ಅವನು ಏನೋ ಹೇಳ ಬೇಕೆಂದು ಬಾಯ್ತೆರೆದ. ಅಷ್ಟರಲ್ಲಿ ದೂರದಲ್ಲಿ ಆಳುಗಳಾರೋ ಬರುತ್ತಿರುವ ಶಬ್ದ ಕೇಳಿಸಿತು. ಅವಳು ಬೇಗ ಬೇಗ ಕಣ್ಣೊರಸಿಕೊಂಡು ಮಡಿಕೆಯಲ್ಲಿ ನೀರು ತುಂಬಿಕೊಂಡು ಹೊರಟುಹೋದಳು.

ಅವಳ ಕಿತ್ತಳೆ ಬಣ್ಣದ ದುಪ್ಪಟ್ಟ, ಹೂವುಹೂವಿನ ಲಂಗ, ಕನ್ನಡಿ ಚೂರುಗಳ ರವಿಕೆಗಳು ದೂರ ದೂರ ಹೋಗಿ ಮರಗಳ ಸಂದಿನಲ್ಲಿ ಮರೆಯಾ ಗುವವರೆಗೆ ನೋಡುತ್ತಲೇ ನಿಂತಿದ್ದ ಶಾಂತಪ್ಪ.

ಎರಡು ದಿನಗಳು ಕಳೆದರೂ ಶಾಂತಪ್ಪ ಇನ್ನೂ ನೋಡುತ್ತಲೇ ಇದ್ದ!

* * * *

"ಅಯ್ಯೋ! ಬಾಯ್ನಿ ನೀರಿಗೆ ಬಿದ್ದುಹೋದ್ಳು." ಆ ದಿನ ಬೆಳಗ್ಗೆಯೇ ಹೊರಗೆ ಬೀದಿಯಲ್ಲಿ ಯಾರೋ ಕೂಗಿದಂತಾಯ್ತು. ಶಾಂತಪ್ಪ ಮಲಗಿದ್ದ ವನು ಗಕ್ಕನೆದ್ದು ಬೇಗ ಬೇಗ ಮುಖ ತೊಳೆದುಕೊಂಡು ಬಾಗಿಲಿಗೆ ಹೋದ. ಅಲ್ಲಿ ನಿಂತಿದ್ದ ರಾಮ್ಯಾನೆಂದ, "ಸಾವ್ಕಾರ್ರೇ.....ಆ ಬಾಯ್ನಿ ನೀರಿಗೆ ಬಿದ್ದು ಕೊಂಡುಬಿಟ್ಳು. ಈವತ್ತು ಅವಳ ಲಗ್ನ ಇತ್ತು."

"ಎಲ್ಲಿ ಬಿದ್ದುಬಿಟ್ಟಳು?"

"ಅದೇ ಗಣೀ ಹಾದೀಲಿ ಆ ಝರಿ ಇದ್ಯಲ್ಲ. ಅಲ್ಲಿ ಒಂದು ಆಳವಾದ ಮಡು ಇದೆ. ಅಲ್ಲಿ ಬಿದ್ದುಬಿಟ್ಟಿದಾಳೆ. ಬೆಳಗ್ಗೆ ಬಿದ್ದಿರಬೇಕು. ಈಗ ಈಚೆಗೆ ಎಳೆದು ಹಾಕಿದಾರೆ."

ಶಾಂತಪ್ಪ ಸರಸರನೆ ಝರಿಯತ್ತ ಹೊರಟ.

ಅವನು ಝರಿಯ ಬಳಿಗೆ ಹೋದಾಗ ಅವನನ್ನು ಕಂಡು ಎಲ್ಲರೂ ದಾರಿ ಬಿಟ್ಟು ನಿಂತುಕೊಂಡರು. ಬಾಯ್ನಿಯ ತಾಯಿ ಕುಳಿತುಕೊಂಡು ಎದೆ ಯೆದೆ ಬಡಿದುಕೊಂಡು ಅಳುತ್ತಿದ್ದಳು. ಬಾಯ್ನಿಯ ದೇಹವೆಲ್ಲ ತೇವವಾಗಿ ದ್ದಿತು. ಒದ್ದೆಯಾದ ಬಟ್ಟೆಗಳು ಅವಳ ಮೈಗೆ ಅಂಟಿಕೊಂಡಂತಿದ್ದುವು. ದೇಹದ ಆ ಬಿಳಿ ಚರ್ಮದ ಮೇಲೆ ಅಲ್ಲಲ್ಲಿ ಕುಳಿತಿದ್ದ ನೀರಿನ ಹನಿಗಳು ಮುತ್ತಿನಂತೆ ಕಾಣುತ್ತಿದ್ದುವು. ಮೂಗು ದಪ್ಪನಾಗಿದ್ದು ಹೊಟ್ಟೆ ಸ್ವಲ್ಪ ಊದಿದಂತೆ ಕಾಣುತ್ತಿದ್ದಿತು. ಶಾಂತಪ್ಪ ಅವಳ ಎದೆಯನ್ನು ಒಂದೆರಡು ಕ್ಷಣ. ಮುಟ್ಟಿನೋಡಿದನಂತರ ಕೇಳಿದ,

"ಇವಳು ನೀರಿಗೆ ಬಿದ್ದು ಎಷ್ಟು ಹೊತ್ತಾಗಿತ್ತು?"

"ಬೆಳಗ್ಗೆ ಐದು ಗಂಟೇಗೆ ಎದ್ದು ಹೋದ್ಲು ಸಾವ್ಕಾರ್ರೆ. ನೀನು ಮದುವೆ ಹೆಣ್ಣು ಬೇಗ ವಾಪಸ್ಸು ಬಾ ಎಂದೆ ನಾನು. ಆಮೇಲೆ ಇಲ್ಲಿ ಬಂದು ಬಿದ್ದಿದಾಳೆ" ಅವಳ ತಾಯಿ ಅಳುತ್ತಾ ಹೇಳಿದಳು. ಅದನ್ನು ಕೇಳಿದ, ಸುತ್ತಲಿನ ಲಂಬಾಣಿಯರೂ ಗೊಳೋ ಎಂದು ಅಳತೊಡಗಿದರು.

ಶಾಂತಪ್ಪ ತಕ್ಷಣ ಒಬ್ಬನಿಗೆ, ಬಿಡಾರದಲ್ಲಿದ್ದ ಸೈಕಲ್ಲು ತೆಗೆದುಕೊಂಡು ಪುರಕ್ಕೆ ಹೋಗಿ ಡಾಕ್ಟರನ್ನು ಕರೆತರುವಂತೆ ಆಜ್ಞಾಪಿಸಿದ. ನಂತರ, ತನ್ನ ರಗ್ಗು ತರಿಸಿ, ಅದರಲ್ಲಿ ಬಾಯ್ಮಿಯ ದೇಹವನ್ನು ಸುತ್ತಿದ. ಕಂಪೆನಿಯಲ್ಲಿನಿಂದ ನೀಲಗಿರಿ ತೈಲವನ್ನು ತರಿಸಿ ಅವಳ ಪಕ್ಕೆಗಳ್ಗೆ ಉಜ್ಜಿದ.

ಧಾವಿಸಿ ಬಂದ ಡಾಕ್ಟರು, ಎಲ್ಲರನ್ನೂ ದೂರ ಸರಿಸಿ, ದೇಹವನ್ನು ಪರೀಕ್ಷಿಸಿದರು. ಎಲ್ಲರೂ ಕುತೂಹಲಮುಖಿಗಳಾಗಿ ಡಾಕ್ಟರನ್ನೇ ದೂರದಿಂದ ನೋಡುತ್ತಿದ್ದರು. ಆ ದಿನ ಎಲ್ಲರೂ ಮದುವೆಗಾಗಿ ಸಿದ್ಧರಾಗಿದ್ದರು. ದೇವಾಲಯದ ಚಪ್ಪರದಲ್ಲಿ ಒಬ್ಬೊಬ್ಬರಾಗಿ ಬಂದು ಸೇರುತ್ತಿದ್ದಾಗ ಈ ಸುದ್ದಿ ಕೇಳಿ ಎಲ್ಲರೂ ಘುರಿಂಯುತ್ತ ಓಡಿಬಂದಿದ್ದರು. ಅವರಿಗೆ ಈ ಸುದ್ದಿ ನಿರಾಶೆಯುಂಟು ಮಾಡಿದ್ದಿತು. ಬಾಯ್ಮಿಯ ಮೇಲೆ ಹಲವರಿಗೆ ಕೋಪವೂ ಬಂದಿದ್ದಿತು.

"ಸ್ವಲ್ಪ ಆಶೆಯಿದೆ ಸಾರ್! ಆದರೆ ಅಕಸ್ಮಾತ್ ಬದುಕಿದರೆ ಲಂಬಾ ದಿನ ವಿಶ್ರಾಂತಿ ತಗೋಬೇಕು," ಡಾಕ್ಟರೆಂದರು ಶಾಂತಪ್ಪನೊಡನೆ.

"ಆಗ್ಲಿ ಸಾರ್. ವಿಶ್ರಾಂತಿ ತಗೋಳೋಕೆ ಹೇಳ್ತೀನಿ. ದಯವಿಟ್ಟು ಉಳಿಸಿ." ಅವನ ಮಾತು ಕೇಳಿ ಅವರು ಪಿಸು ದನಿಯಲ್ಲಿ ಹೇಳಿದರು,"ಇದೇನು ಆಕಸ್ಮಿಕವೋ, ಆತ್ಮಹತ್ಯವೋ?.....ಆತ್ಮಹತ್ಯವಾದರೆ ಕೇಸು ಸ್ವಲ್ಪ ಕಷ್ಟ ಸಾರ್. ಪೋಲೀಸಿನವರ ವಿಷಯ ಗೊತ್ತಿದೆಯಲ್ಲ."

"ಆಕಸ್ಮಿಕವೇ ಇರಬೇಕು ಸಾರ್. ಆತ್ಮಹತ್ಯಕ್ಕೆ ಕಾರಣವಿಲ್ಲ. ಇವತ್ತು ಇವಳ ಮದುವೆ ಬೇರೆ ಇತ್ತು."

"ಮದುವೇನೆ? ಇದಕ್ಕೆ ಇವಳು ಒಪ್ಪಿದ್ದಳೇನು?"

"ಓಹೋ! ಒಪ್ಪಿದ್ದಳಂತೆ!" ಶಾಂತಪ್ಪನೆಂದರೂ ತನ್ನ ಹೃದಯವನ್ನು ಕ್ಷಮುಳ್ಳಿನಲ್ಲಿ ತಾನೇ ಚುಚ್ಚಿಕೊಂಡಂತೆ ಅವನು ನೋವನ್ನನುಭವಿಸಿದ.

"ಒಟ್ಟಿನಲ್ಲಿ ಹುಷಾರಾಗಿರೋ ಹಾಗೆ ಎಲ್ಲರಿಗೂ ಹೇಳಿ ಸಾರ್!"

"ಆಗ್ಲಿ ಹೇಳ್ತೀನೆ ಸಾರ್. ನೀವೂ ಪುರದ ಪೋಲೀಸಿನವರಿಗೆ ವಿಷಯ ತಿಳಿಸಬೇಡಿ."

"ಆಗಲಿ !"

ಡಾಕ್ಟರು, ಚಿಕಿತ್ಸೆ ನಡೆಸಿದನಂತರ ದೇಹವನ್ನು ಮನೆಗೆ ಕರೆದೊಯ್ಯುವಂತೆ ತಿಳಿಸಿದರು. ಮಧ್ಯಾಹ್ನ ಜ್ಞಾನ ಬಂದು ಅವಳು ಕಣ್ಣು ಬಿಟ್ಟಾಗ ಎದುರಿಗೆ ನಿಂತಿದ್ದ ಶಾಂತಪ್ಪನನ್ನು ನೋಡಿ ಕಿರುನಗೆ ಮೂಡಿತು ಅವಳ ತುಟಿಗಳಲ್ಲಿ. ಅವಳು ಬದುಕುವಳೆಂಬ ವಿಷಯ ತಿಳಿದ ರೇಖ್ಯಾನಿಗೆ ಹೋಗಿದ್ದ ಉತ್ಸಾಹ ಹಿಂದಿರುಗಿಬಂದಿತು !

## ೩

# ಹಿತ್ತಲ ಗಿಡದ ಮದ್ದು

ಕಂಪೆನಿಯ ಮೇನೇಜರಾದ ರಾಮನ್‌ಗೆ ಗಣಿಗಳ ವಿಷಯ ಸ್ವಲ್ಪವೂ ಪರಿಚಯವಿರಲಿಲ್ಲ. ಅವನು ಕೃಷ್ಣಯ್ಯನ ಮಾತಿನ ಮೇರೆಗೆ ಹೊನ್ನೂರಿನ ಗಣಿಗಳನ್ನು ಕೊಂಡು ಅದರಲ್ಲಿ ಸಹಸ್ರಾರು ರೂಪಾಯಿಗಳನ್ನು ಖರ್ಚು ಮಾಡಿದ್ದ. ಕೃಷ್ಣಯ್ಯ ರಾಮನ್ ಆಪ್ತಮಿತ್ರರಾದ್ದರಿಂದ, ರಾಮನ್ ಗಣಿಯಲ್ಲಿ ಅಷ್ಟೊಂದು ಹಣ ವೆಚ್ಚ ಮಾಡಿದ್ದ. ಹಣ ವೆಚ್ಚವಾದರೂ ಶ್ರೇಷ್ಠವಾದ ಅದಿರು ಬಾರದೆ ಲಾಭ ಕಾಣದ್ದರಿಂದ, ಮುಂಬಯಿಯಲ್ಲಿದ್ದ ಕಂಪೆನಿಯ ಕೇಂದ್ರ ಕಚೇರಿಯ ಡೈರೆಕ್ಟರು ರಾಮನ್‌ನ ಈ ದುಂದುವೆಚ್ಚವನ್ನು ಆಕ್ಷೇಪಿಸಿ ಬರೆದಿದ್ದರು. ಜೊತೆಗೆ ಮುಂಬಯಿಯಿಂದ ಓಗಲೆಯೆಂಬ ಭೂಗರ್ಭಶಾಸ್ತ್ರಜ್ಞನನ್ನು ಗಣಿಯ ಪರಿಶೀಲನೆಗಾಗಿ ಕಳುಹಿಸುವುದಾಗಿ ಬರೆದಿದ್ದರು. ಆದರೆ ಶಾಂತಪ್ಪನು ಗಣಿಯ ಬಗ್ಗೆ ಮೊದಲೇ ಬರೆದಿದ್ದ ನಿರಾಶಾದಾಯಕ ವರದಿಯನ್ನು ರಾಮನ್ ಗಮನಿಸಿರಲಿಲ್ಲ.

ಒಂದು ದಿನ ಶಾಂತಪ್ಪ ಕೃಷ್ಣಯ್ಯರಿಬ್ಬರೂ ಗಣಿಯಲ್ಲಿದ್ದಾಗ ಜೀಪು ಕಾರೊಂದು ಬಂದು ಗಣಿಯ ಬಳಿ ನಿಂತುದು ಕಾಣಿಸಿತು. ಇಬ್ಬರೂ ಇಳಿದು ಬಂದು ಕಾರಿನ ಬಳಿ ಬರುವಲ್ಲಿ, ರಾಮನ್. ಅವನೊಡನೆ ಬೇರೊಬ್ಬರು ಇಳಿಯುತ್ತಿದ್ದುದು ಕಾಣಿಸಿತು.

"ಇವರೇ ಮಿಸ್ಟರ್ ಕೃಷ್ಣಯ್ಯಾಂತ, ನಮ್ಮ ಕಂಟ್ರಾಕ್ಟರು. ಇವರು ಮಿಸ್ಟರ್ ಶಾಂತಪ್ಪ," ರಾಮುನ್ ಪರಿಚಯ ಮಾಡಿಕೊಟ್ಟ.

"ಇವರು ಮಿಸ್ಟರ್ ಓಗಲೆ; ನಿನ್ನೆ ಬೊಂಬಾಯಿಂದ ಏರೋಪ್ಲೇನಿನಲ್ಲಿ ಬೆಂಗಳೂರಿಗೆ ಬಂದರು."

ಪರಸ್ಪರ ಹಸ್ತಲಾಘವವಾದನಂತರ ಸಹಜವಾದ ಹಲವು ಮಾತುಕತೆಗಳಾದುವು. ಓಗಲೆ ಮುಂಬಯಿಯಲ್ಲಿ ಭೂಗರ್ಭ ಶಾಸ್ತ್ರದ ಸಂಶೋಧನಾಲಯವೊಂದನ್ನು ನಡೆಸುತ್ತಿದ್ದನು. ಅವನ ಕೈಲಿದ್ದ 'ಸ್ಟೈಯಿನ್‌ಲೆಸ್ ಸ್ಟೀಲಿನ' ಸುತ್ತಿಗೆ, ಮತ್ತು ಜೊತೆಯಲ್ಲಿ ತಂದಿದ್ದ 'ಅಯಸ್ಕಾಂತ ಸಲಕರಣೆ' (Magnetic Instrument)ಗಳನ್ನು ನೋಡಿದರೆ ಅವನು ಶ್ರೀಮಂತನೇ ಇರಬೇಕೆನಿಸುತ್ತಿದ್ದಿತು. ಹೊನ್ನೂರಿನ ಗಣಿಗಳೆಲ್ಲವನ್ನೂ ವೈಜ್ಞಾನಿಕ ಪರಿಶೀಲನೆಗೊಳಪಡಿಸಲು ಕಂಪೆನಿಯ ಮುಖ್ಯಕಚೇರಿಯಿಂದ ಅವನಿಗೆ ಆಜ್ಞೆ ಬಂದಿದ್ದಿತು. ಅವನು ಮಾತಿನ ಮಧ್ಯೆ ಮಧ್ಯೆ ಒಮ್ಮೊಮ್ಮೆ ಶಾಂತಪ್ಪನನ್ನು ಒಂದೊಂದು ಮಾತು ಕೇಳುತ್ತಿದ್ದನು. ಆದರೆ ಅವನ ಮಾತಿನ ಮೇರೆಗೆ, ಅವನಿಗೆ ಹೆಚ್ಚು ತಿಳಿವಳಿಕೆಯಿಲ್ಲವೆಂಬುದು ಶಾಂತಪ್ಪನಿಗೆ ಬೇಗ ವೇದ್ಯವಾಯಿತು. ಒಮ್ಮೆ ಅವನು ಹೇಳಿದ,

"ಈ ಮ್ಯಾಂಗನೀಸಿನಲ್ಲಿ ಕಬ್ಬಿಣದ ಅಂಶವು ಹೆಚ್ಚಾಗಿದ್ದರೆ, ಆ ಸ್ಥಳದಲ್ಲಿ ಇನ್ನೂ ಆಳವಾಗಿ ನೋಡಿದರೆ ಅಲ್ಲಿ ಒಳ್ಳೆ ಮ್ಯಾಂಗನೀಸು ದೊರಕುತ್ತೆ." ಈ ಮಾತು ಕೇಳಿ ಶಾಂತಪ್ಪನಿಗೆ ನಗು ಬಂದಿದ್ದಿತು, ಅವನು ತಕ್ಷಣ ಹೇಳಿದ,

"ನಾನು ನೋಡಿರುವ ಹಾಗೆ, ಕಬ್ಬಿಣ ಹೆಚ್ಚಾಗಿದ್ದರೆ ಮ್ಯಾಂಗನೀಸ ಸಿಕ್ಕೋದು ಅಪರೂಪ. ಇನ್ನೂ ಸಿಲಿಕಾ ಹೆಚ್ಚಾಗಿದ್ದರೆ ಅಲ್ಲಿ ಒಳ್ಳೆ ಮ್ಯಾಂಗನೀಸು ಸಿಕ್ಕಿದರೂ ಸಿಕ್ಕಬಹುದು."

"ಇದೇನು ಹೀಗೆ ಹೇಳ್ತೀರಿ! ಸಿಲಿಕಾ ಇದ್ದರೆ ಅಲ್ಲಿ ಮ್ಯಾಂಗನೀಸೇ ಇಲ್ಲ!" ಎಂದು ಓಗಲೆ ಗಡುಸಾಗಿ ಹೇಳಿದ.

ಶಾಂತಪ್ಪನಿಗೂ ಉತ್ತರ ಕೊಡಬೇಕೆನಿಸಿತು. ಆದರೆ ರಾಮುನ್, ಕೃಷ್ಣಯ್ಯ ಇಬ್ಬರೂ ಮಾತು ಇನ್ನೆಲ್ಲಿ ವಿಕೋಪಕ್ಕೆ ಹೋಗಿ, ಮುಂಬಯಿಯಿಂದ ಬಂದ ಭೂಗರ್ಭ ಶಾಸ್ತ್ರಜ್ಞರಿಗೆ ನಮ್ಮವರಿಂದ ಅಪಮಾನವಾದೀತೋ ಎಂದು, ಕಾತರದಿಂದ ಇತ್ತ ನೋಡುತ್ತಿದ್ದರು! ಶಾಂತಪ್ಪನು ಅವರನ್ನು ನೋಡುತ್ತಲೇ ಅವರು ಅವನಿಗೆ ಸುಮ್ಮನಿರಲು ಕಣ್ಣು ಸಂಜ್ಞೆ ಮಾಡಿದ್ದರಿಂದ ಅವನು ಸುಮ್ಮನಾಗಿದ್ದ.

ಅದೇ ದಿನ ಗಣಿಯೆಲ್ಲವನ್ನೂ ಸುತ್ತಿಕೊಂಡು ಇಂಗ್ಲೀಷು ಗುಡ್ಡದ ಬಳಿ ಶಾಂತಪ್ಪ ಇಳಿಸಿದ್ದ ಹೊಸ ಕುಣಿಯನ್ನೂ ನೋಡಿದರು. ಅದರಲ್ಲಿ ಹೊಳೆಯುತ್ತಿದ್ದ ಬೆಳ್ಳಿಯಂತಹ ಅದಿರನ್ನು ಕಂಡು ಓಗಲೆಯು 'ಇದು ಕಬ್ಬಿಣ'ವೆಂದಾಗ ಶಾಂತಪ್ಪನಿಗೆ ವಿಸ್ಮಯವಾಯಿತು. ರಾಮನ್‌ಗೂ ಸಹ ಹಾಗೆಯೇ ಆಯಿತು; ಏಕೆಂದರೆ ಅಲ್ಲಿನ ಅದಿರು ಶೇಕಡ ಐವತ್ತು ಮ್ಯಾಂಗನೀಸಿನ ಅಂಶದಿಂದಿದ್ದಿತ್ತೆಂಬುದು ಅವನಿಗೆ ತಿಳಿದಿದ್ದಿತು. ಆದರೆ ಮುಂಬಯಿನಿಂದ ಬಂದಿದ್ದ, ಆ ಭೂಗರ್ಭ ಶಾಸ್ತ್ರಜ್ಞನಿಗೆ ಒಂದು ಸಾವಿರ ರೂಪಾಯಿ ಶುಲ್ಕ ಕೊಡಬೇಕಾಗಿದ್ದಿತು, ಆತನ ಇತರ ಖರ್ಚುಗಳನ್ನುಳಿದು! ಅಷ್ಟೊಂದು ಬೆಲೆಯ ವಿಜ್ಞಾನಿಯಾದ್ದರಿಂದ ಆತನ ಮಾತು ನಿಜವಿರಬೇಕು, ಶಾಂತಪ್ಪನು ಹೇಳುವುದೇ ಸುಳ್ಳಿರಬೇಕೆಂದೆನಿಸಿತು ರಾಮನ್‌ಗೆ! ಆದರೆ ಅದೇ ಅದಿರು ಬೆಂಗಳೂರಿನ ವಿಜ್ಞಾನ ಮಂದಿರದಲ್ಲಿ ವಿಶ್ಲೇಷಿಸಿದಾಗ (Analyse)ಶೇಕಡ ಐವತ್ತು ಮ್ಯಾಂಗನೀಸಿನ ಪರಿಮಾಣವನ್ನು ತೋರಿದ್ದಿತು. ಬಹುಶಃ ಬೆಂಗಳೂರಿನಲ್ಲಿ ರಸಾಯನಿಕ ವಿಶ್ಲೇಷಣೆಯೂ ಸರಿಯಲ್ಲವೆಂದು ರಾಮನ್ ಭಾವಿಸಿದ!

"ಇಲ್ಲ ಸಾರ್. ಅದು ಶ್ರೇಷ್ಠವಾದ ಮ್ಯಾಂಗನೀಸ್ ಅದಿರು. ಈ ಎಲ್ಲಾ ಗಣಿಗಳಲ್ಲೂ ಇದೇ ಅತ್ಯುತ್ತಮವಾದದ್ದು," ತಡೆಯಲಾರದೇ ಹೇಳಿದ ಶಾಂತಪ್ಪ ಅವನ ಮಾತಿನಿಂದ ಓಗಲೆಗೆ ಕೋಪವೇ ಬಂದಿರಬೇಕು, ಆದ್ದರಿಂದ ಅವನೆಂದ,

"ನಿಮಗೆ ಇನ್ನೂ ಅನುಭವ ಸಾಲದೂಂತ ಕಾಣುತ್ತೆ, ಮಿಸ್ಟರ್ ಶಾಂತಪ್ಪ. ಇದು ಕಬ್ಬಿಣವೇ ಹೌದು. ಮ್ಯಾಂಗನೀಸಲ್ಲ."

"ಇಲ್ಲ ಸಾರ್. ಅದು ಮ್ಯಾಂಗನೀಸೇ! ಕಬ್ಬಿಣವಲ್ಲ. ಕಬ್ಬಿಣವಾಗಿದ್ದರೆ ಅದು ಕೆಂಪು ಗುರುತು ಕೊಡಬೇಕು. ಮ್ಯಾಂಗನೀಸಾದ್ದರಿಂದ ಅದು ಅಚ್ಚ ಕಪ್ಪು ಗುರುತು ಕೊಡುತ್ತೆ. ಇಲ್ಲಿ ನೋಡಿ," ಎಂದು ಅದಿರಿನ ಒಂದು ತುಣುಕನ್ನು ಹತ್ತಿರವಿದ್ದ ಬಿಳಿಯ ಕಲ್ಲೊಂದರ ಮೇಲೆ ಗೀರಿ ಅದರಿಂದ ಉಂಟಾದ ಕಪ್ಪು ರೇಖೆಯನ್ನು (Streak) ತೋರಿದ ಶಾಂತಪ್ಪ

"ಒಂದೊಂದು ಸಲ ಕಬ್ಬಿಣಾನೂ ಕಪ್ಪು 'ಸ್ಟ್ರೀಕು' ಕೊಡುತ್ತೆ, ಮಿಸ್ಟರ್ ಶಾಂತಪ್ಪ!" ಎಂದು ಮುಖವನ್ನು ಕೆಂಪಗೆ ಮಾಡಿಕೊಂಡು ಓಗಲೆ ಹೇಳಿದುದನ್ನು ಕೇಳಿ ಶಾಂತಪ್ಪನಿಗೆ ನಗು ಬರುವಂತಾಯಿತು. ಆದರೆ ಎದುರಿನಲ್ಲಿಯೇ ಕಾತರಗೊಂಡು ನಿಂತಿದ್ದ ರಾಮನ್‌ನ ಮುಖ ನೋಡಿ ಅವನು

ಸುನ್ಮ್ರನಾದ. ಅವನ ಈ ಚರ್ಚೆಯಿಂದ ರಾಮನ್‌ಗೆ ಅವನ ವಿಷಯದಲ್ಲಿ ಅಸಮಾಧಾನವೇ ಉಂಟಾಯ್ತು.

ಆ ದಿನ ಗಣಿಯಿಂದ ಎಲ್ಲರೂ ಹಿಂತಿರುಗಿದಾಗ ಒಬ್ಬರ ಮುಖದಲ್ಲಿಯೂ ಉತ್ಸಾಹವಿರಲಿಲ್ಲ. ಇಬ್ಬರು ಭೂಗರ್ಭ ಶಾಸ್ತ್ರಜ್ಞರ ಜೊತೆಗೆ ಅವರೆಲ್ಲರೂ ಸುತ್ತಿದರೂ ಸಹ ಹೊನ್ನೂರಿನ ಭೂಗರ್ಭದಲ್ಲಿ ಶ್ರೇಷ್ಠ ಅದಿರು ದೊರೆವ ಕುರುಹು ಇನ್ನೂ ಕಂಡು ಬಂದಿರಲಿಲ್ಲ. ಬಿಡಾರಕ್ಕೆ ಹಿಂದಿರುಗಿದನಂತರ ಎಲ್ಲರೂ ವಿಶ್ರಮಿಸಿಕೊಳ್ಳುತ್ತಿರುವಾಗ ಕೃಷ್ಣಯ್ಯ ರಾಮನ್‌ನನ್ನು ಇದ್ದಕ್ಕಿದ್ದಂತೆ ಹೊರಗೆ ಕರೆದು ನಾಲ್ಕಾರು ನಿಮಿಷ ಏನೋ ರಹಸ್ಯವಾಗಿ ಮಾತನಾಡಿ ಬಂದ.

ಆ ಸಂಜೆ ರಾಮನ್, ಕೃಷ್ಣಯ್ಯ ಇಬ್ಬರೂ ಜೀಪಿನಲ್ಲಿ ಸುತ್ತಾಡಿಕೊಂಡು ಬರಲು ಹೊರಟರು. ಅವರಿಬ್ಬರೂ ರಾತ್ರಿ ಬಿಡಾರಕ್ಕೆ ಹಿಂದಿರುಗುವವರೆಗೂ ಹೊನ್ನೂರಿನಲ್ಲಿ ಸೋಮ್ಮಿ ಮತ್ತು ಹಾಲಿಯರನ್ನು ಯಾರೂ ಕಾಣಲಿಲ್ಲ! ಜೀಪು ಹಳ್ಳಿಯಿಂದ ಅರ್ಧ ಮೈಲು ದೂರದಲ್ಲಿ ನಿಂತು ಇಬ್ಬರು ಹೆಂಗಸರನ್ನು ಇಳಿಸಿ ಅನಂತರ ಬಿಡಾರಕ್ಕೆ ಬಂದಿತೆಂದು ದೂರದಿಂದ ಕಂಡವರು ಮಾರನೆಯ ದಿನ ಹೇಳಿಕೊಂಡರು !

ಮಾರನೆಯ ದಿನವೂ ಗಣಿಯ ಪರಿಶೀಲನೆಯಾಗುವುದಿದ್ದಿತು. ಆದರೆ ಆ ದಿನ ನಡೆದ ಘಟನೆ ಆ ಗಣಿಯ ಕಥೆಯಲ್ಲಿ ಒಂದು ಹೊಸ ಅಧ್ಯಾಯವನ್ನೇ ಪ್ರಾರಂಭಿಸಿ ಬಿಟ್ಟಿತು :

ಗಣಿಯ ಕೂಲಿಗಾರ ಲಚ್ಚ ಐದಾರು ದಿನಗಳಿಂದ ಕಾಹಿಲೆ ಮಲಗಿದ್ದ. ದಷ್ಟಪುಷ್ಟನಾಗಿ ಬೆಳೆದಿದ್ದ ಅವನು ಹದಿನೈದು ದಿನಗಳಿಂದಲೂ ಎದೆ ನೋವಿನಿಂದ ನರಳುತ್ತಿದ್ದ, ಎಂಟು ದಿನಗಳಿಂದ ಪೂರ್ತಿ ಮಲಗಿಯೇಬಿಟ್ಟಿದ್ದ. ಅವನು ಕೆಲಸ ಮಾಡುತ್ತಿದ್ದ ಸ್ಥಳದಲ್ಲಿ ಅದಿರು ಗಟ್ಟಿಯಾದ ಕಲ್ಲಿನರೂಪದಲ್ಲಿರದೇ ಸಡಿಲವಾಗಿ, ಮುಟ್ಟಿದರೆ ಪುಡಿಯಾಗುವಂತಿದ್ದಿತು. ಆ ಅದಿರನ್ನು ಅವನೇ ಹಲವು ತಿಂಗಳುಗಳಿಂದ ತೆಗೆಯುತ್ತಿದ್ದ. ದಿನವೂ ಅಲ್ಲಿ ನಿಂತು ಕೆಲಸ ಮಾಡುವಾಗ ಪುಡಿಯಾದ ಅದಿರಿನ ಧೂಳು ಸ್ವಲ್ಪ ಸ್ವಲ್ಪವಾಗಿ ಅವನು ತೆಗೆದುಕೊಳ್ಳುವ ಉಸಿರಿನೊಡನೆ ಒಳಹೋಗುತ್ತಿದ್ದಿತು. ಅದಿರಿನ ಆ ಧೂಳು ದೇಹದ ಒಳಹೊಕ್ಕು ಶ್ವಾಸಕೋಶದ ಗೂಡುಗಳಲ್ಲಿ ಸೇರಿಕೊಳ್ಳುತ್ತಿದ್ದಿತು. ಅದು ಅಲ್ಲಿ ಬಹಳವಾಗಿ ಸೇರಿದ್ದರಿಂದ ಅವನಿಗೆ ಎದೆ ನೋವು ಪ್ರಾರಂಭವಾಗಿ ದಿನದಿನವೂ ಕೃಶವಾಗತೊಡಗಿದ. ಕೊನೆಗೆ ಅವನು ಹಾಸಿಗೆ ಹಿಡಿದನಂತರ

ಅವನ ದೇಹವೆಂದರೆ ಕೇವಲ ಮೂಳೆಯ ಹಂದರವಾಗಿದ್ದಿತು. ಉಸಿರಾಡಲು ಅವನು ಕಷ್ಟಪಡುವಾಗ ದೇಹದ ಒಳಗೆ ದಬ್ಬೆಗಳ ಸಾಲನ್ನು ಸೇರಿಸಿದಂತೆ ಕಾಣುತ್ತಿದ್ದಿತು. ಮಾಂಸಖಂಡಗಳಿಂದ ತುಂಬಿಕೊಂಡಿದ್ದ ಅವನ ದೇಹವನ್ನು ನೋಡಿದ್ದವರಿಗೆ ಅವನ ಈ ದುಸ್ಥಿತಿಯನ್ನು ನೋಡಿ ಕಣ್ಣೀರು ಬರುವಂತಿದ್ದಿತು. ಅವನು ಆ ದಿನ ತನ್ನ ಕೊನೆಯುಸಿರೆಳೆದಿದ್ದ.

"ಸಾವ್ಕಾರ್ರೇ ಲಚ್ಚ ಸತ್ಹೋದ !" ಬೆಳಿಗ್ಗೆಯೇ ಬಾಗಿಲಿನಲ್ಲಿ ಐದಾರು ಜನ ಕೂಲಿಗಾರರು ಬಂದು ಕೂಗಿಕೊಂಡರು.

"ಆ! .... ಅವನು ಸತ್ತುಹೋದನೇ ?" ಎಂದು ಶಾಂತಪ್ಪ ಎದ್ದು ಮುಖವೊರೆಸಿಕೊಂಡು ಹೊರಹೊರಟ.

ಲಚ್ಚನ ಮೃತದೇಹ ಅವನ ಗುಡಿಸಿಲಿನ ಮುಂದೆ ಬಿದ್ದಿದ್ದಿತು. ಹಲವು ಲಂಬಾಣಿಯರು ಅಲ್ಲಿ ಗೋಳಿಡುತ್ತಿದ್ದರು. ಆ ದೇಹವನ್ನು ನೋಡುನೋಡುತ್ತಿದ್ದಂತೆ ಶಾಂತಪ್ಪನಿಗೆ ಅವನ ಒಂದೊಂದೇ ಮಾತುಗಳು ನೆನಪಾದುವು. ಒಂದು ದಿನ ಬಾಯ್ನಿಯ ಎದುರಿಗೆ ರೇಖ್ಯಾನನ್ನು ಹಾಸ್ಯಮಾಡುತ್ತ, "ಸ್ವಲ್ಪ ದಿನ ತಾಳು !" ಎಂದಿದ್ದ.

ಆ ಜಟ್ಟಿಯ ದೇಹ ಈಗ ಒಂದು ಹಿಡಿಯಾಗಿ, ಮೂಳೆ ಚಕ್ಕಳದ ಗೊಂಬೆಯಂತೆ ಎದುರಿನಲ್ಲಿ ಬಿದ್ದಿದ್ದಿತು. ಅದನ್ನು ನೋಡಿ ಸಂಕಟವಾಯಿತು; ಶಾಂತಪ್ಪ ಬೇರೆಡೆಗೆ ಮುಖ ಮಾಡಿಕೊಂಡ. ಅಲ್ಲಿ ಅಳುತ್ತಾ ನಿಂತಿದ್ದ ರೇಖ್ಯಾನು ಕಾಣಿಸಿಕೊಂಡ. ಅಲ್ಲಿ ನಿಲ್ಲಲಾಗದೇ ಶಾಂತಪ್ಪ ಹೊರಟು ಹೋದ.

ಆದರೆ ಮಧ್ಯಾಹ್ನ ಕೂಲಿಗಾರರ ಗುಂಪೊಂದು ಬಿಡಾರದ ಮುಂದೆ ಬಂದಿತು. ಒಳಗೆ ಎಲ್ಲರೂ ಕುಳಿತು ಗಣಿಯ ವಿಷಯ ಮಾತನಾಡುತ್ತಿದ್ದರು. ಹೊರಗೆ ಕೇಳಿ ಬಂದ ಕೂಲಿಗಾರರ ಕೂಗು ಕೇಳಿ ಕೃಷ್ಣಯ್ಯ ಹೊರಹೊರಟ. ಅವರೆಲ್ಲ ಹೇಳಿದರು,

"ಲಚ್ಚ ಸತ್ತುಹೋದ ಸಾವ್ಕಾರ್ರೆ! ಅವನ ಹೆಂಡಿರು ಮಕ್ಕಳಿಗೆ ಯಾರು ಗತಿಯಿನ್ನು."

"ಪಾಪ! ಒಳ್ಳೆಯೋನು. ದೇವರು ತಗೊಂಡುಬಿಟ್ಟ."

"ಒಬ್ಬರಿಗೂ ಒಂದು ಕೆಟ್ಟದ್ದು ಮಾಡಿದೋನಲ್ಲ. ದೇವರಂಥ ಮನುಷ್ಯ"

"ಸದಾ ಕಂಪೆನಿ ಕೆಲಸದಲ್ಲಿ ಪ್ರೀತಿಯಿಟ್ಟಿದ್ದ."

ಅವರನ್ನು ಸಂತೈಸುವ ಸಲುವಾಗಿ ಕೃಷ್ಣಯ್ಯ ಹೇಳಿದ, "ಹೌದು. ಪಾಪ. ತುಂಬಾ ಒಳ್ಳೆಯವನು. ತುಂಬಾ ಶ್ರದ್ಧೆಯಿಂದ ಕೆಲಸ ಮಾಡ್ತಿದ್ದ."

"ಹೌದು ಸಾರ್. ತುಂಬಾ ಮನಸ್ಸಿಟ್ಟು ದುಡೀತಿದ್ದ" ರೇಖ್ಯನೆಂದ.

"ಏನು ಮಾಡೋದು ಪಾಪ. ದೇವರು ಕರೆಸಿಕೊಂಡ. ಕಂಪೆನಿಗೆ ಅವನ ಕೆಲಸದ ಋಣ ತೀರಿತು."

ಕೃಷ್ಣಯ್ಯನ ಉತ್ತರ ಕೇಳಿ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಕೊನೆಗೆ ರೇಖ್ಯ ಹೇಳಿದ,

"ಕಂಪೆನಿಗೆ ತುಂಬಾ ದುಡಿದಿದಾನೆ ಸಾರ್. ಆ ಕೆಲಸದಿಂದಲೇ ಅವನು ಸತ್ತಿದ್ದೂ ಸಹ. ಅವನ ಹೆಂಡಿರು ಮಕ್ಕಳಿಗೆ ಏನಾದರೂ ಹಣ ಕೊಡಿಸ್ಬೇಕು"

ಈ ಮಾತು ಕೇಳಿ ಕೃಷ್ಣಯ್ಯ ಗಾಬರಿಗೊಂಡ. ಈ ಕಾಡು ಜನರಿಗೆ ಈ ಬುದ್ಧಿ ಹೇಗೆ ಬಂದಿತು? ಕಂಪೆನಿಯವರೇ ಈ ಸಾವಿಗೆ ಜವಾಬ್ದಾರರೆಂದು ಇವರಿಗೆ ಹೊಳೆದುದೆಂತು? ಹಾಗೆ ಯಾರಾದರೂ ಹೇಳಿಕೊಟ್ಟಿರಬಹುದೆ? ಯಾರು ಹೇಳಿರಬಹುದು?

"ಕಂಪೆನಿಯೋರು ತಾನೇ ಏನುಮಾಡೋಕಾಗುತ್ತಪ್ಪ. ಅವನ ಕರ್ಮ ಅವನು ಅನುಭವಿಸಲೇಬೇಕು. ಅವನು ಹೋಗೋದಿದ್ದರೆ ನಾವು ಯಾರು ಏನು ಮಾಡಿದ್ದರೂ ಅವನು ಇರುತ್ತಿರಲಿಲ್ಲ!"

"ಅದೆಲ್ಲಾ ಸುಳ್ಳು ಸಾರ್. ಅವನ ಎದೇಲಿ ಬರೀ ಮ್ಯಾಂಗನೀಸು ತುಂಬಿಕೊಂಡಿತ್ತು. ಈ ಮ್ಯಾಂಗನೀಸಿಂದಲೇ ಅವನು ಸತ್ತಿದ್ದು! ಮ್ಯಾಂಗನೀಸಿಗೆ ಅವನು ಬರದಿದ್ರೆ ಅವನು ಸಾಯ್ತಾಲೇ ಇರಲಿಲ್ಲ. ಅವನು ಸತ್ತು ಹೋದ, ಇನ್ನೇನು ಮಾಡೋದು? ಅವನ ಹೆಂಡ್ತೀ ಮಕ್ಕಳಾದರೂ ಬದುಕಬೇಕಲ್ಲ?" ರೇಖ್ಯ ಒಂದೇ ಸಮನೆ ಹೇಳಿದ ಈ ಮಾತನ್ನು ಕೇಳಿ ಕೃಷ್ಣಯ್ಯನಿಗೆ ಕೋಪ ಬಂದಿತು. ಎದುರಿನಲ್ಲಿ ಆ ವೇಳೆಗೆ ಇನ್ನೂ ಹಲವಾರು ಕೂಲಿಗಾರರು ಬಂದು ಸೇರಿದ್ದರು. ಎಲ್ಲರೂ ರೇಖ್ಯನ ಮಾತನ್ನು ಒಪ್ಪಿದಂತೆ ನಿಂತಿದ್ದರು. ಕೃಷ್ಣಯ್ಯ ರೋಷವನ್ನು ತಡೆದುಕೊಂಡು ಹೇಳಿದ,

"ಅವನು ಸತ್ತುಹೋದ್ದಕ್ಕೆ ನಾವು ಜವಾಬ್ದಾರರಲ್ಲ. ಅವನು ಕೆಲಸ ಮಾಡಿದ್ದಕ್ಕೆ ಅವನಿಗೆ ಕೂಲಿ ಕೊಟ್ಟಿದ್ದೇವೆ. ಸತ್ತುಹೋದ ಕೂಲಿಯೋರ ಹೆಂಡತಿಮಕ್ಕಳೆಲ್ಲಾ ಕಂಪೆನಿಯ ಬಳಗ ಅಲ್ಲ!"

"ಬೆಂಗಳೂರಿನಲ್ಲಿ,ಕೂಲಿಯೋರು ಸತ್ತರೆ ಹಣ ಕೊಡ್ತಾರಂತಲ್ಲ ಸಾರ್! ನೀವೂ ಹಾಗೆ ಯಾಕೆ ಕೊಡಬಾರದು?" ರೇಖ್ಯಾ ಕೇಳಿದ.

"ನಿಂಗೆ ಯಾರು ಹೇಳಿದರು ಇವನ್ನೆಲ್ಲಾ?" ಅಪ್ರತಿಭನಾದ ಕೃಷ್ಣಯ್ಯ ಕೇಳಿದ. ಅವನಿದನ್ನು ನಿರೀಕ್ಷಿಸಿರಲಿಲ್ಲ.

"ಅವರ ಅಣ್ಣ ಅಲ್ಲಿ ಗಿರಣೀಲಿ ಕೆಲಸ ಮಾಡ್ತಾನೆ ಸಾರ್!" ಮತ್ತೊಬ್ಬನೆಂದ.

"ಇವೆಲ್ಲಾ ಸುಳ್ಳು. ನೀವು ಬರೀ ಕನಸು ಕಾಣ್ತಿದ್ದೀರಿ. ನಾವು ನಿಮಗೆ ಇಲ್ಲಿ ವಾರವಾರವೂ ಕೂಲಿ ಕೊಟ್ಟು ಪ್ರೀತಿಯಿಂದ ಮಾತಾಡಿಕೊಂಡು ಕೆಲಸ ಮಾಡಿಸ್ತಿದ್ದೀವಿ. ಅಲ್ಲಿ ಬೆಂಗಳೂರಿನಲ್ಲಿ ಕೆಲಸಗಾರರಿಗೆ ಛಡಿ ಏಟು ಬಿಗಿದು ಕೆಲಸ ಮಾಡಿಸ್ತಾರೆ. ಕೂಲಿ ಹಣ ಕೇಳಿದ್ರೆ ಜೈಲಿಗೆ ಹಾಕ್ತಾರೆ. ನಿಮಗೆ ಇದೆಲ್ಲ ಗೊತ್ತೇನು?" ಕೃಷ್ಣಯ್ಯನೆಂದ, ತನ್ನ ಬುದ್ಧಿವಂತಿಕೆಗೆ ತಾನೇ ಮೆಚ್ಚುತ್ತ. ಆವರೆ,

"ನೀವು ಬೆಂಗಳೂರು ನೋಡಿದೀರಾ ಸ್ವಾಮಿ?" ಎಂದು ಹೊಸಬನೊಬ್ಬ ಮುಂದೆ ಬಂದು ಕೇಳಿದ. ಅವನು ಖಾಕಿ ಷರಾಯಿ, ಬಿಳಿ ಷರಟು ಧರಿಸಿಕೊಂಡು, ಕ್ರಾಪು ಬಾಚಿಕೊಂಡು ಲಕ್ಷಣವಾಗಿ ಕಾಣುತ್ತಿದ್ದರೂ ಲಂಬಾಣಿಗರದರಂತೆಯೇ ಇದ್ದಿತು ಅವನ ಮುಖ. ಆದರೆ ಅವನನ್ನು ಕೃಷ್ಣಯ್ಯ ಗಣಿಯ ಕೂಲಿಗಾರರೊಡನೆ ಎಂದೂ ನೋಡಿರಲಿಲ್ಲ. ಅವನನ್ನೇ ಕಠಿಣವಾಗಿ ನೋಡುತ್ತಾ ಕೃಷ್ಣಯ್ಯ ಕೇಳಿದ,

"ಇಷ್ಟೊಂದು ಮಾತಾಡೋನು ನೀನು ಯಾರು?"

"ನಾನೂ ಬೆಂಗಳೂರಿನವನೆ!"

"ಇಲ್ಲಿಗೆ ಯಾಕೆ ಬಂದಿದ್ದೀಯೆ?"

"ಇದು ನಮ್ಮ ಹಳ್ಳಿ!"

"ನಿಮ್ಮ ಹಳ್ಳಿ! ಒಂದು ದಿನಾನೂ ಈ ಹಳ್ಳೀಲಿ ಇರದಿದ್ದರೂ ಸಹ ಇದು ನಿಮ್ಮದೇ ಹಳ್ಳಿ!"

"ಅವನು ನನ್ನ ಸ್ವಂತ ಅಣ್ಣ ಸಾರ್!" ರೇಖ್ಯಾ ತಕ್ಷಣ ಕೃಷ್ಣಯ್ಯನಿಗೆ ಉತ್ತರವಿತ್ತ.

"ಓಹೋ! ಬೆಂಗಳೂರಿನಲ್ಲಿ ಇಂಥ ಪುಂಡಾಟ ತೋರಿಸಿದ್ದಕ್ಕೋಸ್ಕರ ಒದ್ದು ಓಡಿಸಿದ್ದರಿಂದ ಇಲ್ಲಿ ಬಂದನೋ ಏನೋ. ಇಲ್ಲೂ ಇಂಥ ಪುಂಡುತನಾನೇ ತೋರಿಸೋಕೆ ಬಂದಿದಾನೆ."

"ಏನು ಸಾರ್. ನೀವು ಗೌರವಸ್ಥರಾಗಿ ಹೀಗೆಲ್ಲಾ ಬಾಯಿಗೆ ಬಂದ ಹಾಗೆ ಮಾತಾಡ್ತಿದೀರಿ. ಕೂಲಿಗಾರರ ಹಕ್ಕುಬಾಧ್ಯತೆಗಳನ್ನು ಕೇಳೋದೇ ಕೂಲಿಗಾರರ ತಪ್ಪೇನು ಹಾಗಾದರೆ ?"

"ನೀವು ಕೇಳಿದ್ದೆಲ್ಲಾ ಹಕ್ಕುಬಾಧ್ಯತೆಗಳೇನೇ ಹಾಗಾದರೆ ?"

"ನಿಮ್ಮ ವಿಷಯವೆಲ್ಲಾ ಪೂರ್ತಿ ಗೊತ್ತು ಸಾರ್ ನನಗೆ. ಶಿವಮೊಗ್ಗಾ ದಲ್ಲಿ ಸಮಾಜವಾದಿ ಪಕ್ಷದಲ್ಲಿ ನೀವಿದ್ದಿದ್ದು, ಅಲ್ಲಿ ಕೂಲಿಗಾರರ ಸಂಘದಲ್ಲಿ ದ್ದುದು, ಸರ್ಕಾರದಿಂದ ಲಂಚ ಪಡೆದದ್ದು, ಕೊನೆಗೆ ನಿಮ್ಮನ್ನು ನಿಮ್ಮ ಪಕ್ಷ ದಿಂದ ಹೊರಗೆ ಹಾಕಿದ್ದು...."

"ಸಾಕು ಬಾಯಿಮುಚ್ಚು, ರ್‍ಯಾಸ್ಕಲ್, ಬಾಯಿಗೆ ಬಂದದ್ದನ್ನೆಲ್ಲ ಬೊಗಳುತ್ತೀಯಾ ? ನಿನ್ನನ್ನು ಈ ಕ್ಷಣ ಅರೆಸ್ಟ್ಮಾಡಿಸಿಬಿಡಬಲ್ಲೆ ನಾನು. ಇಲ್ಲಿ ಬಂದು, ಏನೂ ತಿಳಿಯದ ಕೂಲಿಗಾರರನ್ನೆಲ್ಲಾ ಹಾಳುಮಾಡ್ತಿದೀಯ, ರೋಗ್ !"

"ಅವರಿಗೆ ಏನೂ ತಿಳಿಯದೂಂತಾನೇ ನೀವು ಅವರನ್ನ ಹೀಗೆ ಅಮಾನುಷವಾಗಿ ನಡೆಸಿಕೊಳ್ತಿರೋದು. ನೀವೂ ಒಂದು ಸಲ ಸಮಾಜವಾದಿಗಳಾಗಿದ್ದಿರಿ. ಯೋಚಿಸಿ ನೋಡಿ ಸಾರ್. ನಿಮಗೆ ಇದು ನ್ಯಾಯವೆ ? ನೀವು ಮನುಷ್ಯರೆ ?"

ಮಾತು ಮೇರೆ ಮೀರುತ್ತಿದ್ದಿತು. ಒಳಗೆ ಕುಳಿತು ಕೇಳುತ್ತಿದ್ದ ಶಾಂತಪ್ಪ ಮೇಲೆದ್ದ. ಆದರೆ ಹೊರಗೆ ಬರಲು ಧೈರ್ಯವಾಗದೇ ರಾಮನ್ ಒಳಗೇ ಕುಳಿತಿದ್ದ. ಓಗಲೆಗೆ ಕಾಲೇ ಏಳಲಿಲ್ಲ. ಒಳಗಿನಿಂದ ಬಂದ ಶಾಂತಪ್ಪ ನನ್ನು ನೋಡಿ ಕೂಲಿಗಾರರೆಲ್ಲ ಸುಮ್ಮನಾದರು. ಒಂದಿಬ್ಬರು ವಿನಯವಾಗಿ ಅವನೆದುರಿನಿಂದ ದೂರ ಸರಿದರು. ಶಾಂತಪ್ಪ ಆ ಹೊಸಬನನ್ನು ನೋಡಿದ. ಅವನ ಮುಖದಲ್ಲಿ ನಾಗರಿಕ ಕಳೆಯಿದ್ದಿತು, ಅದರೊಡನೆಯೇ ಮಾಲೀಕರೆದುರು ತೋರಿಸುವ ಔದ್ಧತ್ಯದ ಕಳೆಯೂ ಆ ಮುಖದಿಂದ ಚಿಮ್ಮುತ್ತಿದ್ದಿತು. ಅವನೂ ಸಹ ರೇಖ್ಯನಷ್ಟು ಎತ್ತರವಾಗಿರದಿದ್ದರೂ ಉಳಿದವರಿಗಿಂತ ಸ್ವಲ್ಪ ಎತ್ತರವಾಗಿದ್ದ. ಎದುರು ನಿಂತಿದ್ದ ಆ ಕೂಲಿಗಾರರೆಲ್ಲರ ಮುಖದಲ್ಲಿಯೂ ಯಾವುದೋ ಹೊಸ ಅರಿವಿನ ಕಿಚ್ಚು ಸ್ಪಷ್ಟವಾಗಿ ಕಾಣುತ್ತಿದ್ದಿತು. ಹೊಸ ನಿರ್ಧಾರವೊಂದರ ಛಾಯೆ ಎಲ್ಲರಲ್ಲಿಯೂ ಇದ್ದಿತು.

"ಏನು ರೇಖ್ಯಾ? ಈತ ಯಾರು ಹೊಸಬ ?" ಶಾಂತಪ್ಪ ನಗುನಗುತ್ತಾ ಕೇಳಿದ.

"ಇವನೇ ನಮ್ಮಣ್ಣ ಹೇಮ್ಲ್ಯ ಸಾರ್. ಬೆಂಗಳೂರಿನಿಂದ ಬಂದಿದಾನೆ," ರೇಖ್ಯನೆಂದ.

"ಓಹೋ ಸಂತೋಷ. ಈಗೇನಪ್ಪ ಬಂದೆ? ರಜ ತೆಗೆದ್ಕೊಂಡು ಬಂದೆಯೇನು ?" ಹೇಮ್ಲ್ಯ ಶಾಂತಪ್ಪನ ಮುಖವನ್ನೇ ನೋಡುತ್ತಿದ್ದವನು ಅವನ ಪ್ರಶ್ನೆಯಿಂದ ಮುಖ ಕೆಳಗೆ ಮಾಡಿದ.

"ಹೋಗ್ಲಿ ಬಿಡು. ಆ ವಿಷಯ ಬೇಡ. ಬೆಂಗಳೂರಿನಲ್ಲಿ ಎಲ್ಲಿ ಕೆಲಸ ಮಾಡ್ತಿದೀಯ ?"

"ಅದೇ ಸಾರ್, ಆ ಕುಸ್ನಿ ಮಿಲ್ಲಿನಲ್ಲಿ."

ಶಾಂತಪ್ಪ ಒಂದು ಕ್ಷಣ ಸುಮ್ಮನಾಗಿ ಕೃಷ್ಣಯ್ಯನ ಮುಖ ನೋಡಿದ. ಅವನ ಮುಖದಲ್ಲಿ ಆ ಅಪಮಾನದ ಬೇಗೆ ಉರಿಯುತ್ತಿದ್ದಿತು.

"ಅದಿರ್ಲಿ. ಈಗ ಏನು ಬಂದದ್ದು ?"

"ನಮ್ಮ ಲಚ್ಚ ಸತ್ತುಹೋದನಲ್ಲ ಸಾವ್ಕಾರ್ರೆ, ಅವನ ಹೆಂಡತಿ ಮಕ್ಕಳಿಗೆ ಏನಾದ್ರೂ ಹಣ ಕೊಡಬೇಕು ಸಾರ್. ಪಾಪ ಅವರಿಗೆ ಅವನ ಕೂಲೀನೇ ಗತಿಯಾಗಿತ್ತು ಸಾರ್. ಈಗ ಅವರಿಗೆ ತಿನ್ನೋಕೆ ಏನೂ ಇಲ್ಲ," ರೇಖ್ಯನೆಂದ. ಅವನು ಹಾಗೆ ಹೇಳಿದ ನಂತರ ಮುದುಕಿಯೊಬ್ಬಳು ಹೇಳಿದಳು,

"ಏಳು ಎಂಟು ತಿಂಗಳ ಬಸ್ರಿ ಬೇರೆ ಸಾವ್ಕಾರ್ರೆ. ಈಗ ಗಣೇಲಿ ಬಂದು ದುಡಿಯೋ ಹಾಗಿಲ್ಲ. ಅವಳು ಈಗ ಅನ್ನಕ್ಕೆ ಏನು ಮಾಡ್ಬೇಕು ?"

ಶಾಂತಪ್ಪ ಒಂದು ಕ್ಷಣ ಯೋಚಿಸಿದ. ಅವನಿಗೆ ಸ್ಪಷ್ಟವಾಗಿಯೂ ತಿಳಿದಿದ್ದಿತು, ಕಂಪೆನಿಯಿಂದ ಒಂದು ರೂಪಾಯಿ ಸಹಾ ದೊರೆಯದೆಂಬುದು. ಅವನೆಂದ, "ಐವತ್ತು ರೂಪಾಯಿ ಕೊಟ್ಬಿಡ್ತೀವಿ. ಎಲ್ಲರೂ ಸಂತೋಷವಾಗಿ ಹೋಗಿ." ತಕ್ಷಣ ಕೃಷ್ಣಯ್ಯ ಎದ್ದು ಒಳಕ್ಕೆ ಹೊರಟುಹೋದ!

ಕೂಲಿಗಾರರೆಲ್ಲರಲ್ಲಿಯೂ ಸಂತೋಷದ ಅಲೆಯೆದ್ದಿತು. ಆದರೆ ತಾನು ಮಾತ್ರ ಸಂತೋಷವನ್ನು ವ್ಯಕ್ತಪಡಿಸದೇ ಹೇಮ್ಲ್ಯ ಹೇಳಿದ, "ನೀವು ದುಡ್ಡು ಕೊಡಿಸದಿದ್ರೆ ಮುಷ್ಕರ ಹೂಡಿಸಿಬಿಡ್ತಿದ್ದೆ ಸಾರ್! ಮುಷ್ಕರ ಹೂಡಿದ್ರೆ ಆಗ ಸುಮ್ಮನೇ ದುಡ್ಡು ಕೊಡ್ತಿದ್ರಿ !"

ಆ ಮಾತು ಕೇಳಿದಾಕ್ಷಣ, ಸಂತಸದಿಂದಿದ್ದ ಶಾಂತಪ್ಪನಿಗೆ ಇದ್ದಕ್ಕಿದ್ದಂ

ಕೋಪ ಬಂದಿತು. ಅವನನ್ನೇ ಕೋಪದಿಂದ ನೋಡುತ್ತಾ ಹೇಳಿದ, "ನೀನು ಹಾಗಾದ್ರೆ ಮುಷ್ಕರ ಹೂಡಿಸೋಕೋಸ್ಕರಾನೇ ಬಂದಿದ್ದೀಯೇನು ? ನಿನಗೆ ಶಕ್ತಿಯಿದ್ದರೆ ಈಗಲೂ ಮುಷ್ಕರ ಹೂಡಿಸು ನೋಡೋಣ ! ನಿಮ್ಮ ತಾಂಡದ ಜನ ಕೆಲಸಕ್ಕೆ ಬರದಿದ್ರೆ ಬೇರೆಯವರನ್ನು ಕೆಲಸಕ್ಕೆ ತರುತ್ತೀವಿ....ನಮ್ಮನ್ನ ಹೆದರಿಸಬೇಡ....ನಿಮ್ಮಂಥ ಅಯೋಗ್ಯರು ಸೇರಿಕ್ಕೊಂಡೇ ಈ ಅಶಾಂತಿ ಹಬ್ಬಿ ಸುತ್ತಿರೋದು," ಅವನ ಕ್ರೂರ ನುಡಿಗಳನ್ನು ಕೇಳಿ ಹೇಮ್ಲ್ಯ ನಡುಗಿದ. ಆದರೆ ಶಾಂತಪ್ಪ ಪುನಃ ಹೇಳಿದ, "ನೀನು ಇದ್ದಕ್ಕಿದ್ದಂತೆ ಬೆಂಗಳೂರಿನ ಗಿರಣಿ ಯಿಂದ ಏಕೆ ಓಡಿ ಬಂದಿದ್ದೀ ಅನ್ನೋದು ನಮಗೆಲ್ಲಾರಿಗೂ ಗೊತ್ತು. ಎಚ್ಚರದಿಂದಿರು !"

ಶಾಂತಪ್ಪನ ಈ ಪ್ರಯೋಗ ಸಫಲವಾಯಿತು. ಹೇಮ್ಲ್ಯನನ್ನೇ ದೂಷಿ ಸುತ್ತಾ ಹೊರಟು ಹೋದರು. ಆ ಗುಂಪಿನಿಂದ ಯಾವಾಗಲೋ ಹೇಮ್ಲ್ಯನೂ ಹೊರಟು ಹೋಗಿದ್ದ.

ಆದರೆ ಶಾಂತಪ್ಪ ಒಳಬಂದಾಗ ರಾಮನ್, ಕೃಷ್ಣಯ್ಯ ಇಬ್ಬರೂ ಮುಖ ಕೆಂಪಗೆ ಮಾಡಿಕೊಂಡು ಕುಳಿತಿದ್ದರು. ರಾಮನ್ ಹೇಳಿದ, "ಮಿಸ್ಟರ್ ಶಾಂತಪ್ಪ ನೀವು ಇಂಥಾ ತಪ್ಪುಮಾಡ್ತೀರಿ ಅನ್ನೋದು ನಾನು ತಿಳಿದಿರಲಿಲ್ಲ. ವಿದ್ಯಾವಂತರು, ಅನುಭವಸ್ಥರೂ ಅಂತ ಹೇಳಿಕೊಳ್ಳುವವರು ಯಾರೂ ಹೀಗೆ ಮಾಡಬಾರದು."

"ಏನು ಸಾರ್ ಆ ತಪ್ಪು?" ಘಾಬರಿಗೊಂಡು ಶಾಂತಪ್ಪ ಕೇಳಿದ.

"ನಿಮ್ಮನ್ನ, ಐವತ್ತು ರೂಪಾಯಿ ಕೊಡೋಕೆ ಒಪ್ಪಿಕೊಳ್ಳೋದಿಕ್ಕೆ ಯಾರು ಹೇಳಿದರು ?"

"ಯಾರೂ ಹೇಳಿರಲಿಲ್ಲ. ಆದರೆ ನಾನೇ ಹೇಳಿದೆ !" ಶಾಂತಪ್ಪ ರಾಮನ್‌ಗೆ ತಕ್ಷಣ ಉತ್ತರನಿತ್ತ.

"ನೀವೇ ಹೇಳಿದಿರಾ ? ನೀವು ಒಪ್ಪಿಕೊಂಡರೆ ಯಾರು ಕೊಡ್ತಾರೆ ? ಕಂಪನಿಯವರು ಒಂದು ಕಾಸೂ ಕೊಡೋದಿಲ್ಲ. ನಿಮ್ಮ ಬೇಜವಾಬ್ದಾರಿ ಒಪ್ಪಿಗೆಗೆ ನಾವು ಹೊಣೆಯಲ್ಲ. ನೀವು ಹೀಗೆ ನಿಮ್ಮ ಜವಾಬ್ದಾರಿ ತಿಳಿ ಯದೆ...." ರಾಮನ್ ಕೋಪದಿಂದ ಹೇಳತೊಡಗಿದ ಮಾತಿನ ಸರಣಿಯನ್ನು ಶಾಂತಪ್ಪ ತಕ್ಷಣ ಕತ್ತರಿಸಿದ:

"ನಾನು ಕಂಪೆನಿಯವರನ್ನು ಕೊಡೋಕೆ ಕೇಳಲಿಲ್ಲವಲ್ಲ ಸಾರ್. ನಾನೇ ಒಪ್ಪಿಕೊಂಡೆ. ನಾನೇ ಕೊಡುತೀನಿ"

ಶಾಂತಪ್ಪನ ಮಾತು ಕೇಳಿ ರಾಮನ್ ಕೃಷ್ಣಯ್ಯರಿಬ್ಬರೂ ಸ್ತಬ್ಧರಾದರು. ಅವರಿಗೆ ಸವಾಲು ಹಾಕಿ ಹೇಳಿದಂತಿದ್ದಿತು ಈ ಮಾತುಗಳು. ಶಾಂತಪ್ಪನು ರಾಮನ್‌ನ ಕೈಕೆಳಗಿನ ಅಧಿಕಾರಿ. ಕಂಪೆನಿಯ ಬೆಂಗಳೂರು ಶಾಖೆಯ ವಿಸ್ತರಣದೊಳಗೆ ಇದ್ದಿತು ಈ ಗಣಿ. ಬೆಂಗಳೂರು ಶಾಖೆಯ ಮೇನೇಜರಾದ ರಾಮನ್‌ಗೆ ತನ್ನ ಕೈಕೆಳಗಿನವನ ಈ ಔದ್ಧತ್ಯ ಸಹನಾತೀತವಾಯಿತು. ಆದರೂ ಅವನು ಏನೂ ಹೇಳದವನಾಗಿದ್ದ. ಶಾಂತಪ್ಪ ಸ್ವಂತ ಜವಾಬ್ದಾರಿಯ ಮೇಲೆ ಆ ಐವತ್ತು ರೂಪಾಯಿಗಳನ್ನು ಕೊಡಲು ಒಪ್ಪಿರುವಾಗ ಅವನೇನು ಹೇಳಬಲ್ಲ?

ಆದರೆ ತಲೆ ತಗ್ಗಿಸಿಕೊಂಡು ಯೋಚಿಸುತ್ತಲಿದ್ದ ಕೃಷ್ಣಯ್ಯ ನೆಲವನ್ನೇ ನೋಡಿಕೊಂಡು ಹೇಳಿದ, "ನೀವು ಒಂದು ವೇಳೆ ಹಾಗೆ ಕೊಡುವುದಕ್ಕೆ ಒಪ್ಪಿದರೂ ಸಹ ಕಂಪೆನಿಯವರು ಇದಕ್ಕೆ ಒಪ್ಪೋಕಾಗೋಲ್ಲ ಶಾಂತಪ್ಪನೋರೆ!"

"ಹಾಗಾದರೆ?" ಶಾಂತಪ್ಪ ಕೃಷ್ಣಯ್ಯನ ನುಡಿ ಅರ್ಥವಾಗದೇ ಕೇಳಿದ.

"ನೀವು ಒಪ್ಪಿಕೊಂಡ ತಪ್ಪಿಗೆ ನೀವೇ ಈ ಸಲ ಹಣಕೊಟ್ಟರೂ, ಗಣಿಯಲ್ಲಿ ಕೂಲಿಯೋರು ಯಾರಾದರೂ ಇನ್ನೊಂದು ಸಲ ಸತ್ತಾಗ ಯಾರು ಕೊಡ್ತಾರೆ? ಈಗ ಅವರಿಗೆ ತೋರಿಸಿಕೊಟ್ಟರೆ, ಸಡಿಲ ಬಿಟ್ಟರೆ ಯಾವಾಗಲೂ ಅದೇ ಪಾಠಮಾಡಿಕೊಳ್ತಾರೆ....ಅಲ್ಲವೇ ಸಾರ್?" ಎಂದು ಹೇಳಿ ಕೃಷ್ಣಯ್ಯ ರಾಮನ್ ಕಡೆಗೆ ನೋಡಿದ.

ಕೃಷ್ಣಯ್ಯನ ಮಾತಿಗೆ ಮೆಚ್ಚಿಕೊಂಡ ರಾಮನ್ ಹೇಳಿದ, "ಹೌದು.... ಹೌದು....ಈಗ ಒಂದು ಸಲ ಸಡಿಲ ಬಿಟ್ಟರೆ ಯಾವಾಗಲೂ ಅದೇ ಪಾಠ ಮಾಡಿಕೊಳ್ತಾರೆ ಈ ಕೂಲಿಯೋರು....ಮಹಾ ಕೆಟ್ಟ ಜನ ಈ ಕೂಲಿಗಾರರು!" ಕೃಷ್ಣಯ್ಯನ ಮಾತಿನ ನೆರಳಿನಂತೆಯೇ ಇದ್ದಿತು ರಾಮನ್ ಹೇಳಿದ ಮಾತು.

"ಆದ್ದರಿಂದ ಶಾಂತಪ್ಪನವರು ಹೀಗೆಲ್ಲಾ ಕೂಲಿಯೋರಿಗೆ ಹಣ ಕೊಡೋದಕ್ಕೆ ಸಾಧ್ಯವಿಲ್ಲ. ಅಲ್ಲವೇ ಸಾರ್?" ನೀಚತನ ಕೃಷ್ಣಯ್ಯನ ಮುಖದ ಮೇಲೆ ತಾಂಡವವಾಡುತ್ತಿತ್ತು.

"ಹೌದು ಹೌದು.....ಮಿಸ್ಟರ್ ಶಾಂತಪ್ಪ ನೀವು ಹೀಗೆಲ್ಲಾ ಕೆಲಸಗಾರರಿಗೆ ಹಣ ಕೊಡಕೂಡದು. ನೀವು ಹಾಗೆ ಕೊಡುವುದನ್ನ ನಾವು, ಕಂಪೆನಿಯಿಂದ ನಿಷೇಧಿಸಿದ್ದೇವೆ!"

"ನನ್ನ ಕೈಯಿಂದ ನಾನು ಕೊಡುತೀನಿ ಸಾರ್. ಅದಕ್ಕೆ ಕಂಪೆನಿಯ

ವರ ನಿಷೇಧವೇಕೆ ?" ಮೇನೇಜರರ ನುಡಿ ಅರ್ಥವಾಗದೆ, ವಿಹ್ವಲಮನಸ್ಕ ನಾಗಿ ಶಾಂತಪ್ಪ ಕೇಳಿದ.

"ನೀವು ಕೊಡಕೂಡದು. ನಮ್ಮ ಮಾತು ಮೀರಿ ನೀವು ಹಾಗೆ ಕೂಲಿ ಗಾರರಿಗೆ ಹಣ ಕೊಟ್ಟರೆ ಅದನ್ನ ತುಂಬಾ 'ಸೀರಿಯಸ್ಸಾ'ಗಿ ಭಾವಿಸಬೇಕಾ ಗುತ್ತೆ." ಕಂಪೆನಿಯ ಮೇನೇಜರು ತಮ್ಮ ಆಣತಿಯನ್ನು ಸ್ಪಷ್ಟ ಶಬ್ದಗಳಲ್ಲಿ ಕಠೋರವಾಗಿ ಹೇಳಿದರು.

ಶಾಂತಪ್ಪ ನಿರಾಶನಾದುದನ್ನು ಕಂಡು ಕೃಷ್ಣಯ್ಯನಲ್ಲಿ ವಿಜಯೋನ್ಮಾದ ಉಕ್ಕಿತು.

* * *

ಗಣಿಯ ಪರೀಶೀಲನೆಗೆಂದು ಬಂದಿದ್ದ ಮುಂಬಯಿಯ ಭೂಗರ್ಭ ಶಾಸ್ತ್ರಜ್ಞರು ವಿಸ್ತಾರವಾದ ಪರಿಶೀಲನೆಯನ್ನೇ ಕೈಗೊಂಡಿದ್ದರು. ಅವರು ವಯಸ್ಕರಾದರೂ ತನಗಿಂತ ಹೆಚ್ಚಾಗಿ ಭೂಗರ್ಭ ಶಾಸ್ತ್ರದಲ್ಲಿ ಅನುಭವಿಯಾಗಿ ದ್ದರೂ ಸಹ ಅವರಿಗೆ ಮ್ಯಾಂಗನೀಸಿನ ವಿಷಯದಲ್ಲಿ ಹೆಚ್ಚು ತಿಳುವಳಿಕೆಯಿಲ್ಲ ವೆಂಬುದನ್ನು ಶಾಂತಪ್ಪ ಕಂಡುಕೊಂಡಿದ್ದ. ಒಂದು ದಿನ,

"ಈ ನೀಲಿ ಬಣ್ಣದ ಅದಿರು ಕಬ್ಬಿಣದ್ದು" ಎಂದ ಓಗಲೆ.

"ಅದು ಭೂಮಿಯಲ್ಲಿ ಹೇಗೆ ಆಗುತ್ತೆ ಸಾರ್ ?" ರಾಮನ್ ಕೇಳಿದ.

"ಅದು ಭೂಮಿಯಲ್ಲಿ ಈ ಕಲ್ಲುಗಳ ಜೊತೆಯಲ್ಲಿಯೆ ಸೃಷ್ಟಿಯಾಗಿರುತ್ತೆ"

ಓಗಲೆ ಹೇಳಿದ ಈ ಮಾತು ಕೇಳಿ ವಿಸ್ಮಿತವಾದ ಶಾಂತಪ್ಪನು ಕೇಳಿದ,

"ಮ್ಯಾಂಗನೀಸು ಹೇಗೆ ಉತ್ಪತ್ತಿಯಾಗುತ್ತೆ ಸಾರ್ ?"

"ಅದೂ ಸಹ ಈ ಕಲ್ಲುಗಳೊಡನೆಯೇ ಸೃಷ್ಟಿಯಾಗಿರುತ್ತೆ. ಈ ಶಿಲಾ ಸಮುದಾಯ ಉತ್ಪತ್ತಿಯಾದಾಗಲೇ ಈ ಮ್ಯಾಂಗನೀಸೂ ಆಯಿತು," ಓಗಲೆಯೆಂದ.

"ಅಂದರೆ, ಈ ಧಾರವಾಡ ಶಿಲಾಸ್ತೋಮವು ಮೊದಲು ಉತ್ಪತ್ತಿಯಾ ದಾಗಲೇ ಮ್ಯಾಂಗನೀಸೂ ಆಯಿತೆ ?"

"ಹೌದು !"

"ಹಾಗಾದರೆ ಭೂಮಿಯ ಅಂತರಾಳದಲ್ಲಿ ಹರಿದಾಡುವ ಬಿಸಿ ನೀರಿನ (Circulating Waters) ವಿಂಗಡಣಾ (Segregation) ಕಾರ್ಯ ದಿಂದ ಆಗಿಲ್ಲವೆ ?"

"ಇಲ್ಲ!"

"ಹಾಗಾದರೆ ಈ ಅದಿರು ಈ ಕಲ್ಲಿನಷ್ಟೇ ವಯಸ್ಸಿನದೆ?"

"ಹೌದು. ಆದರೆ ಮಧ್ಯೆ ಮಧ್ಯೆ ಹೊಸ ಹೊಸದಾಗಿ ಮ್ಯಾಂಗನೀಸು ಭೂಗರ್ಭದಲ್ಲಿ ಸೃಷ್ಟಿಯಾಗುತ್ತಿರುತ್ತೆ. ನೂರು-ನೂರೈವತ್ತು ವರ್ಷಗಳಿಗೆ ಒಂದೊಂದು ಸಲ ಹೊಸ ಮ್ಯಾಂಗನೀಸಿನ ಉತ್ಪತ್ತಿಯಾಗುತ್ತೆ." ಓಗಲೆಯಿಂದ ಈ ಮಾತು ಕೇಳಿ ಶಾಂತಪ್ಪನಿಗೆ ತಡೆಯಲಾಗದಂತಹ ನಗು ಬಂದಿತು. ಅವನು ಖೊಳ್ಳನೆ ನಕ್ಕುಬಿಟ್ಟ.

ಶಾಂತಪ್ಪನ ಆ ನಗುವನ್ನು ಕೇಳಿ ಓಗಲೆಯ ಮುಖ ಕೆಂಪಾಯಿತು. ಅವನಿಗೆ ಶಾಂತಪ್ಪನು ಮಾಡಿದ ಈ ಮುಖಭಂಗದಿಂದ ರಾಮನ್, ಕೃಷ್ಣಯ್ಯ ರಿಗೂ ಕೋಪ ಬಂದಿತು. ಓಗಲೆ ಶಾಂತಪ್ಪನನ್ನು ನುಂಗುವಂತೆ ನೋಡುತ್ತಾ ಕೇಳಿದ,

"ಯಾಕೆ ಹಾಗೆ ನಗುತೀರಿ?"

"ನಿಮ್ಮಂಥ ಭೂಗರ್ಭಶಾಸ್ತ್ರಜ್ಞರಿದ್ದರೆ ನಮ್ಮ ದೇಶದ ಗಣಿಗಳ ವಿಷಯ ತುಂಬಾ ಚೆನ್ನಾಗಿ ಸಂಶೋಧನೆಯಾಗುತ್ತೆ!" ಶಾಂತಪ್ಪ ತಾತ್ಸಾರ ದಿಂದ ಹೇಳಿದ.

ಶಾಂತಪ್ಪನ ಮಾತು ನಿಜವಾಗಿ ಸಹನಾತೀತವಾಗಿದ್ದಿತು. ಅವನ ಮಾತಿನ ವಿಡಂಬನೆ ಓಗಲೆ, ರಾಮನ್, ಕೃಷ್ಣಯ್ಯರಿಗೆ ತಲೆಕೆಡಿಸುವಂತಿದ್ದಿತು. ಆದರೆ, ಶಾಂತಪ್ಪನ ಸ್ವಭಾವಕ್ಕೆ ಅವರೇನೂ ಮಾಡಲಾರದವರಾಗಿದ್ದರು. ತನ್ನಲ್ಲಿ ಅನುಭವವಿದೆ, ತಿಳಿವಿದೆ, ಆದರೆ ತನ್ನ ಮಾತಿಗೆ ಬೆಲೆ ಸಿಗುತ್ತಿಲ್ಲ; ಮುಂಬಯಿಯಿಂದ ಸಹಸ್ರಾರು ರೂಪಾಯಿ ಶುಲ್ಕ ಪಡೆದುಕೊಂಡು ವಿಮಾನ ದಲ್ಲಿ ಬೆಂಗಳೂರಿಗೆ ಬಂದ, ಈ ದೊಡ್ಡ ಮನುಷ್ಯ ಓಗಲೆಗೆ ಎಷ್ಟೊಂದು ಬೆಲೆ! ತಾನು ಯುವಕ. ತನ್ನ ವಿದ್ಯೆ ಬುದ್ಧಿಗಳನ್ನು ತನ್ನಲ್ಲಿ ಕಾಣಿಸಿಕೊಳ್ಳುವ ಆ ಎಳೆತನವು ಮುಚ್ಚಿಬಿಡುತ್ತದೆ; ಆದರೆ ತನ್ನ ತಿಳಿವಿಗೆ ಬೆಲೆಯೆ ಇಲ್ಲವೇ? ಇದೇ ಗಣಿಯಲ್ಲಿ ಹಲವು ತಿಂಗಳಿಂದ ಜೀವಿಸಿ ಪರಿಸ್ಥಿತಿಯನ್ನು ಪರಿಶೀಲಿಸು ವವನನ್ನು ಕೇಳದೇ ತಾನೊಬ್ಬ ಭೂಗರ್ಭ ಶಾಸ್ತ್ರಜ್ಞನೆಂದು ಹೇಳಿಕೊಂಡು ಜಾಹಿರಾತು ಮಾಡಿಕೊಂಡವನ ಆಡಂಬರಕ್ಕೆ ಬೆಲೆ ಕೊಡುತ್ತಿರುವರಲ್ಲ ಕಂಪೆ ನಿಯವರು, ಎಂದು ಅವನಿಗೆ ಸಂಕಟವಾಗುತ್ತಿದ್ದಿತು. ಆ ಸಂಕಟ ಅವನಿಂದ ಈಮಾತುಗಳನ್ನಾಡಿಸಿದ್ದಿತು.

ಶಾಂತಪ್ಪನಾದರೂ ಬುದ್ಧಿವಂತ. ಶ್ರಮವಹಿಸಿ ದುಡಿವ ಯುವಕ. ಸಿರಿವಂತರ ಗೆಳೆತನವಿದ್ದು ತಾನೂ ಸಹ ಬಂಡವಾಳ ಹಾಕಿಕೊಂಡು ಒಂದು ವಿಜ್ಞಾನ ಮಂದಿರವನ್ನು ಸ್ಥಾಪಿಸಿಕೊಂಡಿದ್ದರೆ, ಜಾಹಿರಾತು ಪ್ರಕಟಿಸಿಕೊಂಡು ಮೆರೆಯುವಂತಿದ್ದರೆ, ತಾನು ದೊಡ್ಡ ಮನುಷ್ಯನಾಗುತ್ತಿದ್ದ. ತನಗೂ ಬೆಲೆ ಬರುತ್ತಿದ್ದಿತು. ಆದರೆ ತಾನು ಹಲವರ ಕೈಕೆಳಗೆ ನೌಕರಿಯಲ್ಲಿರುವವನು ಅವರು ಹೇಳಿದಷ್ಟನ್ನು ಮಾಡಿಕೊಂಡು ತನ್ನತನವನ್ನೂ ತನ್ನ ಬುದ್ಧಿವಂತಿಕೆಯನ್ನೂ ಅವರು ನೀಡುವ ವೇತನಕ್ಕಾಗಿ ಮಾರಿಕೊಂಡಿರುವವನು. ಇಲ್ಲಿ ತನ್ನ ಅಭಿಪ್ರಾಯಗಳಿಗೆ ಬೆಲೆ ಬರುವುದೆಂತು? ನಮ್ಮವರ ಬೆಲೆಯನ್ನು ನಮ್ಮವರು ಕಂಡುಕೊಳ್ಳುವ ಆ ಭಾಗ್ಯವು ನಮ್ಮ ಪಾಲಿಗಿಲ್ಲವಲ್ಲ. ಆದ್ದರಿಂದಲೇ ತಾನು ಮೊದಲೇ ಹೊನ್ನೂರಿನ ಗಣಿಯಲ್ಲಿ ಯಾವ ಪ್ರಯೋಜನವೂ ಇಲ್ಲವೆಂದು ತಿಳಿಸಿದ್ದರೂ ಸಹ ಅದಕ್ಕೆ ಮನ್ನಣೆ ದೊರೆಯಲಿಲ್ಲ. ಗಣಿಯ ಪರಿಶೀಲನೆಗಾಗಿ ಮುಂಬಯಿಯಿಂದ, ಏನೂ ತಿಳಿಯದ ಈ ವಿಜ್ಞಾನಿ ಬಂದಿದ್ದಾನೆ. ಅವನಿಗೆ ಸಹಸ್ರಾರು ರೂಪಾಯಿ ಶುಲ್ಕ ಕೊಡುತ್ತಾರೆ. ಅವನ ವೈಜ್ಞಾನಿಕವಲ್ಲದ ವೈಜ್ಞಾನಿಕ ಪರಿಶೀಲನೆಗಾಗಿ. ಇಂತಹವರಿಗೇ ಇಂದು ಬೆಲೆ, ಆಡಂಬರ ಪೂರ್ಣರಿಗೆ, ಜಾಹೀರಾತು ಹಾಕಿಸಿಕೊಂಡು ಡಂಗೂರ ಸಾರಿಸಿಕೊಳ್ಳುವವರಿಗೆ.

ಶಾಂತಪ್ಪ ಹೀಗೆ ಚಿಂತಿಸುತ್ತಿರುವಾಗಲೇ ಅಪಮಾನದಿಂದ ಬುಸುಗುಟ್ಟುತ್ತಿದ್ದ ಓಗಲೆ ಉಚ್ಚಸ್ವರದಿಂದ ಕೇಳಿದ.

"ಏನು ಮಿಸ್ಟರ್ ರಾಮನ್! ನನ್ನನ್ನ ಹೀಗೆಲ್ಲಾ ಅಪಮಾನ ಮಾಡೋದಿಕ್ಕೆ ಮುಂಬಯಿಯಿಂದ ಕರೆಸಿದೀರೇನು? ಮುಂಬಯಿಗೆ ಈಗಲೇ ಬರೆಯುತ್ತೇನೆ. ನಿಮ್ಮ ಕಂಪೆನಿಯ ಡೈರೆಕ್ಟರಿಗೆ ರಿಪೋರ್ಟು ಮಾಡ್ತೇನೆ!"

ಓಗಲೆಯ ಈ ಕೂಗಾಟದಿಂದ ರಾಮನ್‌ಗೆ ಸಹ ಭಯವಾಯ್ತು. ಆತ ಕಂಪೆನಿಯ ಕರ್ಣಾಟಕದ ಶಾಖೆಗೆ ಮೇನೇಜರಾಗಿದ್ದ; ಓಗಲೆ ತನ್ನ ಮೇಲೆ ರಿಪೋರ್ಟು ಮಾಡಿದರೆ ತನ್ನ ಸ್ಥಾನಕ್ಕೇ ಚ್ಯುತಿ ಬಂದರೆ ಏನು ಗತಿ?

"ಮಿಸ್ಟರ್ ಶಾಂತಪ್ಪ, ನೀವು ಹೀಗೆಲ್ಲಾ ತುಟಿ ಮೀರಿ ಮಾತಾಡಬಾರದು. ಓಗಲೆಯವರ ವಿಷಯದಲ್ಲಿ ನೀವು ಗೌರವಹೀನ ನಡವಳಿಕೆ ತೋರಿದ್ದೀರಿ. ನೀವು ಅವರ ಕ್ಷಮೆ ಕೇಳಬೇಕು!" ರಾಮನ್ ತಕ್ಷಣ ಹೇಳಿದ.

ಶಾಂತಪ್ಪ ಒಂದು ಕ್ಷಣ ರಾಮನ್‌ನ ಮುಖ ನೋಡಿದ. ನಂತರ ಓಗಲೆಯತ್ತ ತಿರುಗಿ, "ಸಾರ್, ನೀವು ಈ ದಿನ ಸುಳ್ಳು ಹೇಳಬಹುದು. ಈ ಗಣಿಯ ವಿಷಯದಲ್ಲಿ ಸುಳ್ಳು ವರದಿ ಬರೆದು ಕಂಪೆನಿಗೆ ಕಳಿಸಬಹುದು. ಆದರೆ ನಾನೂ ಸಹ ಭೂಗರ್ಭ ಶಾಸ್ತ್ರ ಓದಿದವನು. ನನಗೂ ಈ ವಿಜ್ಞಾನ ತಿಳಿದಿದೆ. ಏನೂ ತಿಳಿಯದವರ ಮುಂದೆ ಸುಳ್ಳು ಹೇಳಿದರೆ ನಡೆದೀತು, ನನ್ನ ಮುಂದೆ ಹಾಗಾಗಲಾರದು. ನಿಮ್ಮ ತಿಳಿವಳಿಕೆ ಎಷ್ಟರಮಟ್ಟಿಗಿದೆಯೆಂಬುದನ್ನು ನೀವೇ ತಿದ್ದಿಕೊಳ್ಳುವುದಕ್ಕೆ ನನ್ನ ಹತ್ತಿರ ಒಂದು ಪುಸ್ತಕವಿದೆ, ಕೊಡುತ್ತೀನಿ. ಓದಿ....ನಿಮ್ಮ ವಿಷಯದಲ್ಲಿ ನನಗೆ ಗೌರವವಿದೆ. ಆದರೆ ನಿಮ್ಮಂತಹವರ ಆಡಂಬರಕ್ಕೆ, ಕೇವಲ ತೋರಿಕೆಗೆ ನನ್ನ ಧಿಕ್ಕಾರವಿದೆ."

ಯಾವುದೋ ಒಂದು ವೇದಿಕೆಯ ಮೇಲಿನ ಭಾಷಣದಂತೆ ಭಾವೋದ್ರೇಕಿತನಾಗಿ ಹಾಗೆ ಹೇಳಿದ ಶಾಂತಪ್ಪ ಸರಸರನೆ ಹೊರಟುಹೋದ.

## ೪

## ಲಚ್ಚನ ಸಾವಿಗೆ ಪರಿಹಾರ?

ಆಕಾಶದಲ್ಲಿ ಮೋಡ ಗರ್ಭ ಕಟ್ಟಿದ್ದಿತು. ಕೂಲಿಗಾರರಲ್ಲಿ ಹಲವರು ರೈತರಿದ್ದುದರಿಂದ ಅವರು ಆಶಾಪೂರ್ಣ ಕಣ್ಣುಗಳಿಂದ ಒಮ್ಮೊಮ್ಮೆ ಗಗನದತ್ತ ನೋಡುತ್ತಿದ್ದರು.

"ಮೋಡ ನೇರಿಕೊಂತ್ತದೆ ಕಣೋ ರೇಯಪ್ಪ. ಈ ಸಲ ಮಳೆ ಬೀಳ್ತಿದ್ದ ಹಂಗೇ ಕಡಲೇಕಾಯಿ ಬಿತ್ತಬೇಕು."

"ನಾನು ಕಡಲೇಕಾಯಿ ಹಾಕೋಕೆ ಇಷ್ಟಪಡೋಕಿಲ್ಲ. ಹಾಳು ನಮ್ಮ ಗಂಪು ಮಿಕ (ಕಾಡು ಹಂದಿ) ಬಂದು ಎಲ್ಲಾ ಬಗೆದು ಹೋಗಿಬಿಡುತ್ತೆ."

"ಮಿಕಕ್ಕೆ ಹೆದರ್‍ಕೊಂಡು ಬಿತ್ತನೇನೆ ಬಿಡೋಕಾಗ್ತದ ?"

"ಹಂಗಾದರೆ ಮಾಡೋದೇನು ?'

"ಹೊಲ್ದಾಗೆ ಒಂದೆರಡು ನಾಯಿ ಕಟ್ಟಿದರಾಯ್ತು. ಮಿಕಾನೂ ಬರಾಕಿಲ್ಲ. ಯಾವುದೂ ಇಲ್ಲ."

"ಅಯ್ಯೋ ಬರ್ದೇ ಏನು? ಹೋದ ಸಲ ಆ ಲಚ್ಚನ ಹೊಲದಾಗೆ ಅವನು ಕಟ್ಟಿದ ನಾಯಿನ್ನೇ ಹೊಟ್ಟೆ ಬಗೆದು ಸೀಳಿಹಾಕಿರಲಿಲ್ವ ಆ ಮಿಕ? ಅದರ ಕೋರೆಯ ಗುರುತು ನಾಯಿ ಹೊಟ್ಟೆಯ ಮೇಲೆಲ್ಲಾ ಮೂಡಿರಲಿಲ್ವ?"

"ಅಂದಹಂಗೆ ಲಚ್ಚನ ಹೆಂಡ್ರಿಗೆ ಕೊಡೋ ದುಡ್ಡಿನ ವಿಷಯ ಏನಾಯ್ತು ?"

"ಇನ್ನೂ ಏನೂ ಕೊಟ್ಟಿಲ್ಲವಂತೆ", ರೇಖ್ಯಾ ಮೆಲ್ಲನೆ ಹೇಳಿದುದು ಮೇಲೆ ಬಂಡೆಯ ಮೇಲೆ ನಿಂತಿದ್ದ ಶಾಂತಪ್ಪನಿಗೆ ಕೇಳಿಸಿತು. ಅವನು ಬೇರೆ ಡೆಗೆ ನೋಡುತ್ತಾ ನಿಂತಿದ್ದು, ಅಸ್ಪಷ್ಟವಾಗಿ ಅವನಿಗೆ ಕೇಳಿಸುತ್ತಿದ್ದ ಮಾತು ಗಳ ಆ ಕೊನೆಯ ಶಬ್ದಗಳು ಬಾರಿಕಡ್ಡಣಿಗೆಯಿಂದ ಅವನನ್ನು ಛಳೀರನೆ ಹೊಡೆದಂತಾಯಿತು.

"ಈ ಕಂಪೆನಿಯೋರೆಲ್ಲ ಹಿಂಗೇ ಅಂತೆ ಕಣೋ. ನಮ್ಮ ಕೂಲಿಗಾರರಲ್ಲಿ ಐಕಮತ್ಯ ಒಡೆಯೋಕೋಸ್ಕರ ಏನಾದರೂ ಮಾತು ಕೊಡ್ತಾರಂತೆ. ಅದು ಕೊಡ್ತೀವಿ, ಇದು ಕೊಡ್ತೀವೀಂತ ಆಶೆ ತೋರಿಸಿ ನಾವೆಲ್ಲ ಮುಷ್ಕರ ಹಿಡಿಯ ದಂತೆ ಮಾಡ್ತಾರಂತೆ. ನಾವು ಅವರ ಮಾತನ್ನೇ ನಂಬಿ ಪುನಃ ಕೆಲಸ ಮಾಡೋ ಹಂಗೆ ಮಾಡ್ತಾರಂತೆ." ರೇಖ್ಯ ಭೂಮಿಯನ್ನು ಅಗೆಯುತ್ತ ಮೆಲ್ಲನೆ ಪಕ್ಕದವನೊಡನೆ ಪಿಸುಗುಟ್ಟಿದ.

"ಇದೆಲ್ಲಾ ನಿಜಾನೆ? ಯಾರು ಹೇಳಿದ್ರು ?"

"ನಮ್ಮ ಹೇಮ್ಲ್ಯ ಹೇಳ್ದ. ಅಲ್ಲಿ ಬೆಂಗಳೂರ್ನಲ್ಲೂ ಗಿರಣಿಯೋರು ಹೀಗೇ ಮಾಡ್ತಾರಂತೆ. ಅವನು ಇನ್ನೂ ಏನೇನೋ ಹೇಳಿದ!" ರೇಖ್ಯ ಕುತೂ ಹಲವನ್ನು ಕೆರಳಿಸುವಂತೆ ಹೇಳಿದ ಮಾತನ್ನು ಕೇಳಿ ಪಕ್ಕದ ಕೂಲಿಗಾರನೆಂದ

"ಇನ್ನೂ ಏನದು ?"

"ಈ ಗಣಿಯಲ್ಲಿ ನಾವು ಬೆವರು ಸುರಿಸಿ ದುಡಿದರೇ ಅಲ್ಲವೆ ಕಂಪೆನಿಯ ನಾವಕಾರ್ರಿಗೆ ಈ ಕಾರು, ಬಂಗಲೆ ಬರೋದು. ನಾವು ದುಡಿದು ಇಲ್ಲಿಂದ ಕಲ್ಲು ತೆಗೆದುಕೊಟ್ಟರೆ ತಾನೇ ಅದನ್ನ ಅವರು ನೂರಾರು ರೂಪಾಯಿಗೆ ಮಾರಿ ಲಾಭ ಸಂಪಾದ್ನೆ ಮಾಡೋದು. ಆದ್ದರಿಂದ ನಮ್ಮ ದುಡಿತದಿಂದ ತಾನೇ ಅವರು ಬೆಂಗಳೂರಿನಲ್ಲಿ ಅವರ ಮನೆಯಲ್ಲಿ ಹೊಟ್ಟೆ ಬೆಳೆಸಿಕೊಂಡು ಮಲಗಿ ದ್ದರೂ ಸಹ ಸಾವಿರಾರು ರೂಪಾಯಿ ಲಾಭ ಪಡೆಯೋದು ?"

"ಅಯ್ಯೊ! ಹೌದಲ್ಲೋ ರೇಖ್ಯಾ. ನಿಜಾ ಕಣೋ."

"ನಮ್ಮಿಂದ ಅವರು ಹೀಗೆ ಲಕ್ಷಾಂತರ ರೂಪಾಯಿ ಸಂಪಾದಿಸಿದ್ರೂ ಸಹ ನಮಗೆ ಕೊಡೋದು ಮಾತ್ರ ದಿನಕ್ಕೆ ಹನ್ನೆರಡಾಣೆ-ಒಂದು ರೂಪಾಯಿ ಅಷ್ಟೇ ಅಲ್ವೆ ?"

"ಹೌದು. ಏನು ಮಾಡೋದು. ಅವರು ಸಾವಕಾರ್ರು. ಅವರು ಕೂತ ಕಡೆ ಸಂಪಾದಿಸ್ತಾರೆ. ನಾವು ಬಡವರು ದುಡಿದೇ ಸಂಪಾದಿಸಬೇಕು."

"ಇದು ಯಾವ ನ್ಯಾಯಾನೋ? ದುಡಿಯೋನು ಬಡವನೇ ಆಗಿರೋದು. ದುಡಿಯದೇ ಮಲಗಿರೋನು ಲಕ್ಷಾಧೀಶನೇ ಆಗಿರೋದು!"

"ಏನು ಮಾಡೋದು. ನಮ್ಮ ಕರ್ಮ ನಮ್ಮದು. ಅವರ ಅದೃಷ್ಟ ಅವರದ್ದು."

"ಅದು ಹೆಂಗೋ ಅವರದ್ದು ಅದೃಷ್ಟ. ಈಗ ನೋಡು. ಲಚ್ಚನ ಹೆಂಡ್ತಿ ಇವತ್ತು ನಮ್ಮ ಮನೇಲಿ ತಂಗಳು ಈಸ್ಕೊಂಡು ಹೋದ್ಲು. ನಿನ್ನೆ ಗೌಡನ ಮನೇಲಿ ಭಿಕ್ಷ ಬೇಡಿದಳಂತೆ. ಮೊನ್ನೆ ಸಂತೇಲಿ ಭಿಕ್ಷಮಾಡಿದಳಂತೆ. ಕಂಪನಿಗೋಸ್ಕರ ದುಡಿದು ಪ್ರಾಣ ಬಿಟ್ಟದ್ದಕ್ಕೆ ಲಚ್ಚನ ಹೆಂಡ್ರಿಗೆ ಈ ಗತೀನ?"

ಅವರ ಆ ಮಾತಿನ ಮಧ್ಯೆಯೇ, ಹಾರೆಗಳ ಧನ್....ಧನ್....ಎಂಬ ಬಲಿಷ್ಟ ಆಘಾತ ಕಲ್ಲಿನ ಮೇಲೆ ಬೀಳುತ್ತಿದ್ದುದು ಕೇಳಿಸುತ್ತಿತ್ತು!

"ಏನು ಮಾಡೋದು. ಕಂಪೆನಿ ಸಾವಕಾರ್ರಿಗೆ ನಾವು ಜುಲುಮೆ ಮಾಡೋಕಾಗ್ತದ, ದುಡ್ಡು ಮಡಗಿ ಮುಂದೆ ಹೋಗೀಂತ?"

"ಜುಲುಮೆ ಮಾಡೋದಲ್ಲ. ಕೊಡದಿದ್ದರೆ ಮುಷ್ಕರ ಹೂಡೋದು. ಕೆಲಸಕ್ಕೆ ಬರೋದಿಲ್ಲ ಅನ್ನೋದು."

"ಕೆಲಸಕ್ಕೆ ಬರದಿದ್ದರೆ ಬಿಡು ಅಂತಾರೆ. ಕೂಲಿಗಾಗಿ ಬರೋರು ಎಷ್ಟು ಜನ ಇಲ್ಲ ಈ ಹೊನ್ನೂರಿನ ಸುತ್ತಮುತ್ತಿನ ಹಳ್ಳೀಲಿ."

"ಅದು ಹೆಂಗೆ ಬಿಡೂ ಅಂತಾರೆ. ಇಷ್ಟು ದಿನಾ ನಾವು ಈ ಗಣೀಲಿ ರಕ್ತ ನೀರು ಮಾಡಿಕೊಂಡಿಲ್ಲವ? ನಾವು ದುಡಿದ ಗಣೀಲಿ ಬೇರೆಯವರು ಬಂದು ಹೆಂಗೆ ಕೂಲಿ ಸಂಪಾದಿಸ್ತಾರೆ?"

"ಅಯ್ಯೋ ಹುಚ್ಚಪ್ಪ. ಹೆಂಗೆ ಸಂಪಾದಿಸ್ತಾರೆ ಅಂದ್ರೆ ಹಿಂಗೇ. ನಾವು ಮಾಡೋ ಹಂಗೇ. ಈಗೇನು ನಾವು ಬರೋಲ್ಲಾಂದ್ರೆ ಬೇರೆಯವರು ದುಡು ಕೊಂಡು ಹೋಗ್ತಾರೆ."

"ಬೇರೆಯವರುಬಂದು ಇಲ್ಲಿ ದುಡೀದ ಹಂಗೆ ನಾವು ತಡೆದರೆ ಅವರೇನು ದುಡೀತಾರೆ?"

ಪ್ರಳಯರೂಪದಲ್ಲಿ ಗಗನದಿಂದ ಬರುತ್ತಿದ್ದ ಆ ಪ್ರವಾಹವನ್ನುಯಾರೂ ತಡೆಗಟ್ಟಲಾಗುತ್ತಿರಲಿಲ್ಲ. ಮೇಲೆ ಗಗನದಲ್ಲಿ ಮೋಡಕ್ಕೆ ಮೋಡವು ಘರ್ಷಿಸಿ

ಸಿಡಿಲೆಬ್ಬಿಸಿದ್ದಿತು. ಆ ಸಿಡಿಲ ಶಬ್ದ ಕೇಳಿ ತಲೆಯೆತ್ತಿ ನೋಡಿದಾಗ, ಅಲ್ಲಿ ಸಿದ್ಧವಾಗಿ ನಿಂತಿದ್ದ ಆ ಪ್ರಚಂಡ ಮೇಘ ತಂಡವನ್ನು ನೋಡಿ ಕೂಲಿಗಾರರು ಸಂತೋಷಪಟ್ಟರು. ತಮ್ಮ ಮುಂದಿನ ದಿನಗಳಿಗೆ ಸಂತೋಷ ತರುವ ಆ ಮೇಘ, ಸಿಡಿಲುಗಳು ಅವರನ್ನು ಆಶಾವಾದಿಗಳನ್ನಾಗಿಸಿದ್ದುವು!

ಶಾಂತಪ್ಪ ನೋಡುನೋಡುತ್ತಿದ್ದಂತೆಯೇ ದೂರದಲ್ಲಿ ನಳಿಸೀಪುರ, ಕಾಗಿನೆಲೆ ಮೊದಲಾದ ಬೆಟ್ಟಸಾಲುಗಳ ಮುಂದೆ ಮುಗಿಲಿಳಿದು ತೆರೆ ಹಾಕಿದ್ದಿತು. ಸುತ್ತಲಿಂದ ತಣ್ಣನೆಯ ಗಾಳಿಯು ಬೀಸಿಬರುತ್ತಿದ್ದಿತು.

"ಮಳೆ ಬರ್ತದೆ ಸಾವ್ಕಾರ್ರೆ?" ಎಂದ ರೇಖ್ಯಾ.

"ಬರಲಿ ಬಿಡು. ಅಲ್ಲಿಯವರೆಗೂ ಹೀಗೇ ಕೆಲಸಾ ಮಾಡಿ. ಮಳೆ ಬಂದ ಮೇಲೆ ಈ ಕೆಲಸ ನಿಲ್ಲಿಸಲೇಬೇಕಲ್ಲ!" ಎಂದ ಶಾಂತಪ್ಪ. ಹಾಗೆಂದ ಒಂದ ಕ್ಷಣದಲ್ಲಿ ತನ್ನ ಮಾತಿನ ಅರ್ಥಪೂರ್ಣತೆಗೆ ತಾನೇ ಅಚ್ಚರಿಗೊಂಡ--

ಮಳೆ ಬರುವತನಕ ಹೀಗೇ ಕೆಲಸ ಮಾಡಬೇಕು!....ಪ್ರಳಯ ರೂಪದ ಆ ಮಳೆ!

ಮಳೆ ಬಂದ ಮೇಲೆ ಈ ಕೆಲಸ ನಿಲ್ಲಿಸಲೇಬೆಕು!....ಹೌದು ಯಾರೂ ತಡೆಯಲಾರರು ಅದನ್ನು!

ಅವನು ಹಾಗೆ ಯೋಚಿಸುತ್ತಿರುವಲ್ಲಿ ಗಾಳಿಯು ಮಳೆಯ ಮೋಡಗಳನ್ನು ತರುಮಿಕೊಂಡು ಬಂದಿತು. ಗಣಿಯನ್ನೇ ಕೊಚ್ಚಿಸಿಕೊಂಡು ಹೋಗುವಂತಹ ಆ ಮಳೆಯನ್ನು ನೋಡಿ, ಕೂಲಿಗಾರರು ತಮ್ಮ ತಮ್ಮ ಸಲಕರಣೆಗಳನ್ನು ತೆಗೆದುಕೊಂಡು ಹೆಣ್ಣಾಳುಗಳು ಕೆಲಸಗೈಯುತ್ತಿದ್ದ ಗುಡಿಸಲುಗಳತ್ತ ಓಡಿಹೋದರು. ಶಾಂತಪ್ಪನೂ ಆಸರೆಗಾಗಿ ಗುಡಿಸಲಿಗೇ ಹೋಗಬೇಕಾಯಿತು.

ಅವನು ಗುಡಿಸಲಿಗೆ ಹೋದಾಗ ಕೂಲಿಗಾರರೆಲ್ಲ ಗೌರವಪೂರ್ಣವಾಗಿ ಅವನಿಗೆ ದಾರಿ ಕೊಟ್ಟರು. ಒಬ್ಬನೆಂದ. "ಸಾವ್ಕಾರ್ರೆ ಈ ಚೀಲದ ಮೇಲೆ ಕೂತ್ಕೊಳ್ಳಿ. ಯಾಕೆ ನಿಂತ್ಕೋಬೇಕು."

"ಬೇಡಪ್ಪ. ಆ ಹುಡುಗ ನೋಡು ಛಳೀಲಿ ನಡುಗ್ತಿದಾನೆ. ಅವನಿಗೆ ಆ ಗೋಣೀಚೀಲ ಹೊದಿಸಿಬಿಡು," ಮಳೆಗಾಳಿಯಲ್ಲಿ ನಡುಗುತ್ತ ನಿಂತಿದ್ದ ಹರಕು ಬಟ್ಟೆಗಳ ಬಾಲಕನೊಬ್ಬನನ್ನು ನೋಡಿ ಹೇಳಿದ, ಶಾಂತಪ್ಪ.

"ಸಾವ್ಕಾರ್ರೆ. ನೀವು ದೇವರಂಥವರು," ಎಂದು ಕೂಲಿಗಾರ್ತಿ ಮುದುಕಿ

ಯೊಬ್ಬಳು ಎದ್ದು ನಿಂತು ಕೈಮುಗಿದುಕೊಂಡು ಹೇಳಿದಳು. ಅದನ್ನು ನೋಡಿ ಶಾಂತಪ್ಪನಿಗೆ ನಗೆ ಬಂದಿತು. ಅವನೆಂದ,

"ಹಾಗೆಲ್ಲ ಮನುಷ್ಯರಿಗೆ ಕೈಮುಗಿಬಾರದು ಮುದುಕಮ್ಮ. ನಿಮ್ಮ ದೇವರಿಗೆ ಕೈಮುಗಿ." ಅವನು ನಗುನಗುತ್ತಾ ಹೇಳಿದುದನ್ನು ಕೇಳಿ ಎಲ್ಲರೂ ನಕ್ಕರು. ಹೆಂಗಸರ ನಗುವಿನಲ್ಲಿ ಅವನಿಗೆ ಪರಿಚಯವಾದೊಂದು ಧ್ವನಿ ಕೇಳಿಬಂದು ಅತ್ತ ನೋಡಿದ.

ಬಾಯ್ನಿಯೂ ಮುದುಕಿಯತ್ತ ನೋಡಿ ನಗುತ್ತಿದ್ದಳು. ಅವಳು ಗುಣ ಹೊಂದಿ ಅಂದೇ ಗಣಿಗೆ ಬಂದಿದ್ದಳೆಂದು ತೋರಿತು ಅವನಿಗೆ. ಅವಳ ಕಾಲಿನ ಮೇಲ ಮಾಯ್ದ ಘಾಯದ ಗುರುತು ಉದ್ದಕ್ಕೆ ಕಾಣುತ್ತಿದ್ದಿತು. ಜಾಹಿಲಿಯಿಂದ ಆಗಿನ್ನೂ ಮೇಲೆದ್ದ ಆ ರಕ್ತಹೀನ ಮುಖವು ಇನ್ನೂ ಬಿಳುಪಾಗಿದ್ದಿತು. ಅವಳ ಹೃದಯದ ಆ ಬೇಗೆ, ಅವಳು ಇಷ್ಟು ದಿನ ಅನುಭವಿಸಿದ ಜಾಹಿಲಿ, ಜೀವಿಸಲು ಇಷ್ಟವಿಲ್ಲದೆ ಆತ್ಮಹತ್ಯೆ ಮಾಡಿಕೊಂಡರೂ ಉಳಿದುಕೊಂಡಿದ್ದ ಆ ಸಂಕಟ ಎಲ್ಲವೂ ಅವಳನ್ನು ಕೃಶಳನ್ನಾಗಿ ಮಾಡಿದ್ದುವು. ಆ ನಿರಾಶೆಯ ಬೆಂಕಿ ಅವಳನ್ನು ಕಾಂತಿಹೀನಳನ್ನಾಗಿ ಮಾಡಿದ್ದಿತು.

ಅವಳ ಬಗ್ಗೆ ಕರುಣೆಯುಕ್ಕಿ ಬಂದಿತು ಶಾಂತಪ್ಪನಿಗೆ. ಆ ತರುಣಿಯು ತಾನು ನೋಡಿ ಅಸಹ್ಯಪಡುವಂತಹವನೊಬ್ಬನು ತನ್ನ ಗಂಡನಾಗಿ ಮೇಲೆ ಬರುವುದನ್ನು ಸಹಿಸದೆ ಪ್ರಾಣ ನೀಗಿಕೊಳ್ಳಲು ನೀರಿಗೆ ಬಿದ್ದಳು. ಆದರೆ.... ಪುನಃ ಬದುಕಿದಳು. ಅವಳಿಗೆ ಸಾಯುವುದಕ್ಕೂ ಆಸ್ಪದವಿಲ್ಲ. ಈ ಹೂವಿನಂತಹ ಹುಡುಗಿ, ದೈತ್ಯನಂತಹ ರೇಖ್ಯಾನನ್ನು ವರಿಸಲೇಬೇಕು. ಅವನನ್ನು ತನ್ನ ಗಂಡನೆಂದು ಒಪ್ಪಲೇಬೇಕು. ಅವನಿಗೆ ಮಣಿದು ಅವನೊಡನೆ ಬಾಳ್ವೆ ಮಾಡಲೇಬೇಕು!

ಶಾಂತಪ್ಪ ಬಾಯ್ನಿಯತ್ತಲೇ ನೋಡುತ್ತ ಹಾಗೆ ಯೋಚಿಸುತ್ತಿದ್ದಾಗ ಯಾವಾಗಲೋ ಮಳೆಯಲ್ಲಿ ತೊಯ್ದಿದ್ದ ಓಗಲೆ, ರಾಮನ್, ಕೃಷ್ಣಯ್ಯ ಬಂದು ನಿಂತಿದ್ದರು. ರಾಮನ್, ಕೃಷ್ಣಯ್ಯರಿಬ್ಬರೂ ಹುಸಿ ನಗೆ ನಗುತ್ತ ಸೋಮ್ನಿಯತ್ತ ನೋಡುತ್ತಿದ್ದರು. ಅವಳ ಅರೆತೆರೆದ ಅಂಗಾಂಗಗಳ ಬಿಳುಪನ್ನು ನೋಡುತ್ತ ತಣಿಯುತ್ತಿದ್ದರು. ಆದರೆ ಓಗಲೆ, ಶಾಂತಪ್ಪ ಬಾಯ್ನಿಯರನ್ನು ದುರುಗುಟ್ಟಿಕೊಂಡು ನೋಡುತ್ತಿದ್ದ.

ಮಳೆ ನಿಂತು ಎಲ್ಲರೂ ಬಿಡಾರದತ್ತ ಹೊರಟಾಗ ಎಲ್ಲರ ಮನದಲ್ಲಿಯೂ

ದುಗುಡ ತುಂಬಿದ್ದಿತು. ಶಾಂತಪ್ಪನ ಬಗ್ಗೆ ಆ ಮೂವರೂ ಕಠಿಣವಾಗಿ ಚಿಂತಿಸುತ್ತಿದ್ದರು.

* * *

ಓಗಲೆ, ರಾಮುನ್‌ರು ಹಿಂದಿರುಗಿ ಒಂದು ತಿಂಗಳಾಗಿದ್ದಿತು. ಹಾಗೆ ಹಿಂದಿರುಗಿ ಹೋಗುವಾಗ ಅವರಿಬ್ಬರೂ ಶಾಂತಪ್ಪನಿಗೆ ಅವನ ಉದ್ಧಟ ನಡತೆಯ ಬಗ್ಗೆ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿ, ಅವನ ತಪ್ಪನ್ನವನು ತಿದ್ದಿಕೊಳ್ಳಬೇಕೆಂದಿದ್ದರು. ರಾಮುನ್, ಅವನಿಗೆ ಎಚ್ಚರಿಕೆಯಿತ್ತು ಇಂತಹ ತಪ್ಪುಗಳನ್ನು ಸಾಮಾನ್ಯವಾದುದೆಂದು ಭಾವಿಸಲಾಗುವುದಿಲ್ಲ, ಅವಿಧೇಯ ನಡತೆಗೆ ಒಂದೊಂದು ಬಾರಿ ನೌಕರಿಯನ್ನೇ ಕಳೆದುಕೊಳ್ಳಬೇಕಾಗುವುದೆನ್ನುವ ಅರ್ಥದಲ್ಲಿ ಹೇಳಿದ್ದ. ಆ ಮಾತುಗಳನ್ನು ಕೇಳಿ ಶಾಂತಪ್ಪನಿಗೂ ರೇಗಿತು.

"ಇದ್ದುದನ್ನು ಇದ್ದಂತೆ ಹೇಳಿದರೆ ಕೆಲಸದಿಂದ ತೆಗೆದುಹಾಕುವಂತಹ ಕಂಪೆನಿಯಲ್ಲಿ ನಾನು ದುಡಿದು ತಾನೇ ಪ್ರಯೋಜನವೇನು?"ಎಂದಿದ್ದನವನು.

"ನೀವು ನೌಕರಿಯನ್ನು ಕಳೆದುಕೊಳ್ಳುವ ಇಚ್ಛೆಯಿದ್ದರೆ ಈ ರೀತಿ ಮಾತನಾಡಿರಿ," ರಾಮುನ್ ಹೇಳಿದ್ದ.

"ನಾನು ಇದನ್ನು ಕಳೆದುಕೊಳ್ಳುವ ಸಲುವಾಗಿ ಈ ನೌಕರಿಗೆ ಸೇರಲಿಲ್ಲ ಸಾರ್. ಆದರೆ ಸ್ಪಷ್ಟವಾಗಿ ಮಾತನಾಡುವುದು ಸತ್ಯವಾದುದನ್ನು ಹೇಳುವುದು ಈ ಕಂಪೆನಿಯಲ್ಲಿ ಅಪರಾಧವಾದರೆ, ನಾನು ಸಂತೋಷವಾಗಿ ಆ ಅಪರಾಧ ಮಾಡುತ್ತೇನೆ."

"ನೀವು ಮೇರೆ ಮೀರಿ ಮಾತನಾಡುತ್ತಿರುವಿರಿ."

"ನಾನು ಸತ್ಯವನ್ನೇ ಹೇಳುತ್ತಿದ್ದೇನೆ. ಬಹುಶಃ ಓಗಲೆ, ಕೃಷ್ಣಯ್ಯ ಇವರೇ ನಿಮ್ಮ ಮನಸ್ಸಿನಲ್ಲಿ ಸತ್ಯವಂತರೆಂದಿದ್ದರೆ ನೀವು ಅವರನ್ನು ನಂಬಬಹುದು. ಆದರೆ ಆ ಸತ್ಯ ಎಷ್ಟರಮಟ್ಟಿನದು ಎಂಬುದು ನಿಮಗೇ ವೇದ್ಯವಾಗುತ್ತದೆ. ಆ ಕೃಷ್ಣಯ್ಯ ಶುದ್ಧ ನೀಚ ಮನುಷ್ಯ,ಅವನು ಶುದ್ಧ ಅಯೋಗ್ಯ, ಆ ಓಗಲೆಗೆ ಭೂಗರ್ಭ ಶಾಸ್ತ್ರವೇ ಗೊತ್ತಿಲ್ಲ."

"ಮಿಸ್ಟರ್ ಶಾಂತಪ್ಪ ! ಅವರಿಬ್ಬರೂ ಕಂಪೆನಿಯ ದೃಷ್ಟಿಯಲ್ಲಿ ಗಣ್ಯರು. ಅವರ ವಿಷಯದಲ್ಲಿ ನೀವು ತುಚ್ಛವಾಗಿ ಮಾತನಾಡಕೂಡದು. ನೀವು ಕಂಪೆನಿಯ ನೌಕರರು, ಅವರಿಗೆ ಮರ್ಯಾದೆ ಕೊಡಬೇಕು" ರಾಮುನ್ ಆಜ್ಞೆ ವಿಧಿಸುವವನಂತೆ ಹೇಳಿದ.

"ಕಂಪೆನಿಯ ನೌಕರನಾದ ಮಾತ್ರಕ್ಕೆ ಅಯೋಗ್ಯರನ್ನು ಅಯೋಗ್ಯರೆನ್ನುವ ಸ್ವಾತಂತ್ರ್ಯವೂ ನನಗಿಲ್ಲವೇನು ? ದುರ್ಜನರನ್ನು ಸಜ್ಜನರೆಂದು ಹೇಗೆ ಹೇಳಲಿ ? ಆ ಕೃಷ್ಣಯ್ಯ ವ್ಯಭಿ...."

"ಸಾಕು ನಿಲ್ಲಿಸಿ," ರಾಮನ್ ಅಬ್ಬರಿಸಿದ್ದ.

ಶಾಂತಪ್ಪ ಮರು ಮಾತನಾಡದೇ ಹೊರಟು ಹೋಗಿದ್ದ.

ಈ ದಿನಗಳಲ್ಲಿ ಶಾಂತಪ್ಪ, ಕೃಷ್ಣಯ್ಯರ ಭಿನ್ನಾಭಿಪ್ರಾಯಗಳು ನಿಧಾನವಾಗಿ ಬೆಳೆದು ಬಂದಿದ್ದುವು. ಒಂದು ದಿನ ಕೃಷ್ಣಯ್ಯ ಶಾಂತಪ್ಪನಿಗೆ ಹೇಳಿದ್ದ.

"ಮಿಸ್ಟರ್ ಶಾಂತಪ್ಪ, ನೀವು ಕೂಲಿಯೋರಿಗೆಲ್ಲ ಇಷ್ಟೊಂದು ಔಷಧಿ ದಂಡ ಮಾಡಿದರೆ ವಾರವಾರವೂ ಹತ್ತುಹದಿನೈದು ರೂಪಾಯಿ ಕಂಪೆನಿಗೆ ನಷ್ಟವಾಗುತ್ತೆ-"

"ಕಂಪೆನಿಗೆ ಹದಿನೈದು ರೂಪಾಯಿನ ಖರ್ಚು ನಷ್ಟವೇನಲ್ಲ. ನಮ್ಮ ಕೆಲಸಕ್ಕಾಗಿ ಅವರು ಮೈ ಕೈಗಳನ್ನು ಗಾಯಮಾಡಿಕೊಂಡರೆ ಅವರಿಗೆ ನಾವಲ್ಲದೆ ಬೇರೆ ಯಾರು ಔಷಧಿ ಕೊಡಬೇಕು ?" ಶಾಂತಪ್ಪ ಉತ್ತರಕೊಟ್ಟಿದ್ದ. ಆ ದಿನ ಕೂಲಿಗಾರನೊಬ್ಬ ಮಣ್ಣನ್ನು ಅಗೆಯುವಾಗ ಪಿಕಾಸಿಯನ್ನು ಕಾಲಿನ ಮೇಲೆ ಹೊಡೆದುಕೊಂಡಿದ್ದ. ಕಾಲಿನ ಮೇಲೆ ಅದೇ ಸ್ಥಳದಲ್ಲಿ ಮೊದಲೊಮ್ಮೆ ಅವನಿಗಾಗಿದ್ದ ಘಾಯದ ಮೇಲೆ ಪುನಃ ಪೆಟ್ಟುಬಿದ್ದು ಛಿಲ್ಲನೆ ರಕ್ತಹಾರಿದ್ದಿತು. ಅವನು ನೋವಿನಿಂದ ಸಂಕಟಪಡುತ್ತಾ ಕುಳಿತುಕೊಂಡಿದ್ದುದನ್ನು ನೋಡಿದ್ದ ಶಾಂತಪ್ಪ ಧಾವಿಸಿ ಬಂದು, ಘಾಯವನ್ನು ತೊಳೆದು, ಔಷಧಿ ಹಾಕಿ ಬಟ್ಟೆ ಕಟ್ಟಿದ್ದ. ಅದನ್ನು ಅಸಹನೆಯಿಂದ ನೋಡುತ್ತಿದ್ದ ಕೃಷ್ಣಯ್ಯ ಶಾಂತಪ್ಪನೊಬ್ಬನೇ ಕಂಡಾಗ,

"ಒಟ್ಟಿನಲ್ಲಿ ನಿಮಗೆ ಕಂಪೆನಿಯ ಹಿತದಮೇಲೆ ಗಮನವಿಲ್ಲ" ಎಂದಿದ್ದ.

"ನನ್ನ ದೃಷ್ಟಿಯಲ್ಲಿ ಕಂಪೆನಿ ಬೇರೆ, ಕಲಸಗಾರರು ಬೇರೆಯಲ್ಲ. ಈ ಕಂಪೆನಿಗಾಗಿ ದುಡಿಯುವವರು ಎಲ್ಲರೂ ಒಂದೇ," ಎಂದು ಹೇಳಿ ಶಾಂತಪ್ಪ ಬೇರೆಡೆಗೆ ಹೊರಟುಹೋಗಿದ್ದ.

ಮತ್ತೊಂದು ದಿನ ಕೃಷ್ಣಯ್ಯ ತಾನೇ ಮಾತು ತೆಗೆದಿದ್ದ:

"ನೀವು ಆ ದಿನ ಹೇಮ್ಲ್ಯನ ಮಾತಿಗೆ ಹೆದರಿಕೊಂಡು, ಲಚ್ಚನ ಹೆಂಡತಿಗೆ ಐವತ್ತು ರೂಪಾಯಿ ಕೊಡ್ತೀನೀಂತ ಒಪ್ಪಿಕೊಳ್ಳಬಾರದಾಗಿತ್ತು."

"ಹೇಮ್ಲ್ಯಾನ ಮಾತಿನಲ್ಲಿ ತಪ್ಪು ಏನೂ ಕಾಣಲಿಲ್ಲ ನನಗೆ. ಅವನು ಸ್ವಲ್ಪ ವಿನಯತಪ್ಪಿ ಮಾತನಾಡಿದ ಅಷ್ಟೆ. ಆದರೆ ಅವನ ಮಾತಿನಲ್ಲಿ ಸತ್ಯಾಂಶ ವಿದೆ. ಆ ಸತ್ಯಕ್ಕೆ ನಾನು ಒಪ್ಪಿದೆನೇ ಹೊರತು, ಹೇಮ್ಲ್ಯಾನಿಗೆ ಹೆದರಲಿಲ್ಲ."

"ಏನು, ಕೇಳಿದವರಿಗೆಲ್ಲ ದುಡ್ಡು ಕೊಡೋದು 'ಸತ್ಯ'ವೇ ?"

"ಕಂಪೆನಿಗಾಗಿ ದುಡಿದು ಸತ್ತವನ ಹೆಂಡತಿಗೆ ಪರಿಹಾರ ಕೊಡುವುದು ಕಂಪೆನಿಯ ಧರ್ಮ."

"ಸತ್ತ ಕೂಲಿಗಾರರಿಗೆಲ್ಲ ದುಡ್ಡು ಕೊಡೋದು ಧರ್ಮವೆ ?"

"ಧರ್ಮವೋ, ಸತ್ಯವೋ, ಅದೆಲ್ಲ ದೊಡ್ಡ ಮಾತುಗಳನ್ನು ಐವತ್ತು ರೂಪಾಯಿಗಳಿಗಾಗಿ ಏಕೆ ಬಳಸೋಣ. ಒಟ್ಟಿನಲ್ಲಿ ಅದು ಮನುಷ್ಯತ್ವ. ಮನುಷ್ಯರಲ್ಲದವರು, ಮೃಗಗಳಿಗೆ ಸಮಾನರಾದವರು, ಕೂಲಿಗಾರರನ್ನು ಅಮಾನುಷ ರೀತಿಯಲ್ಲಿ ಕಾಣುತ್ತಾರೆ."

"ಹಾಗಾದರೆ ನಾನು ರಾಮನ್ ಮನುಷ್ಯರಲ್ಲವೆ ? ನಾವು ಮೃಗಗಳೆ ?" ಕೃಷ್ಣಯ್ಯ ಕೋಪೋದ್ರೇಕಿತನಾಗಿ ಕೇಳಿದ.

"ಸೋಷಲಿಸಂ, ಸೋಷಲಿಸಂ ಎಂದು ಹೇಳುವ ಸೋಷಲಿಸ್ಟರಿಗೆ ಮನು ಷ್ಯತ್ವ ಮೊದಲಿರಬೇಕು ! ಅದಿಲ್ಲದಿದ್ದರೆ ಅವರು ಸೋಷಲಿಸ್ಟರು ಹೇಗೆ ಆದಾರು? ಇಲ್ಲಿ ಗಣಿಯಲ್ಲಿ ಕಂಟ್ರಾಕ್ಟುಗಳನ್ನು ತೆಗೆದುಕೊಂಡು, ಕೂಲಿಗಾರರ ದುಡಿಮೆಯ ಮೇಲೆ 'ಪ್ಯಾರಸೈಟು'ಗಳಾಗಿರುವವರಿಗೆ ಸೋಷಲಿಸಂ ಎಂದರೆ ಏನು ತಿಳಿದಿರುತ್ತದೆ ?"

"ನೀವು ಯಾವು ಯಾವುದೋ ರಾಜಕೀಯದ ಮಾತಾಡುತ್ತಿದೀರಿ. ಆದರೆ ಈ ರಾಜಕೀಯವೆಲ್ಲ ಈಗೇಕೆ?" ಕೃಷ್ಣಯ್ಯ ತನ್ನ ರಹಸ್ಯ ಬಯಲಾದು ದಕ್ಕೆ ಇನ್ನೂ ಕ್ರೋಧಗೊಂಡು ಕೇಳಿದ್ದ.

"ನೋಡಿ ಮಿಸ್ಟರ್ ಕೃಷ್ಣಯ್ಯ, ರಾಜಕೀಯವು ಪರಮ ನೀಚನು ಹಿಡಿ ಯುವ ಕೊನೆಯ ಉದ್ಯೋಗವೆಂದು ಕೇಳಿದ್ದೇನೆ. ಆದರೆ ರಾಜಕೀಯ ದಿಂದಲೂ ಓಡಿ ಬಂದು ಗಣಿಯ ಗುತ್ತಿಗೆ ಹಿಡಿಯುವವನನ್ನು ಏನೆನ್ನಬೇಕೋ ನನಗೆ ತಿಳಿಯದು. ಅದರಲ್ಲಿಯೂ ಸಹ ಸೋಷಲಿಸ್ಟನಾಗಿದ್ದವನು ಗಣಿಯ ಗುತ್ತಿಗೆದಾರನಾಗುವುದು ತುಂಬಾ ಹೇಯ ಕೆಲಸ!" ತನ್ನ ಕೋಪವನ್ನೆಲ್ಲ ಮಾತಿನಲ್ಲಿ ತುಂಬಿ ಹೇಳಿದ ಶಾಂತಪ್ಪ.

"ಶಾಂತಪ್ಪನೋರೆ, ನೀವು ಏನೇನೋ ಮಾತನಾಡುತ್ತಿದ್ದೀರಿ. ಇದೆಲ್ಲ

ನನಗೆ ಸಹಿಸಲು ಸಾಧ್ಯವಿಲ್ಲ. ನಿಮಗೆ ಈ ಗಣಿಯಲ್ಲಿ ಮ್ಯಾನೇಜರಾಗಿರುವ ಸಾಮರ್ಥ್ಯ ಇಲ್ಲದಿರುವುದರಿಂದ ನಿಮ್ಮ ತಪ್ಪುಗಳಿಗೆಲ್ಲ ಇನ್ನೊಬ್ಬರನ್ನು ಬಯ್ಯಬೇಡಿ."

"ನನಗೆ ಸಾಮರ್ಥ್ಯ ಇದೆಯೋ ಇಲ್ಲವೋ ಕಂಪೆನಿಯವರು ನಿರ್ಧರಿಸಲಿ."

"ರಾಮುನ್‌ಗೆ ಸಹಾ ನಿಮ್ಮ ಅಸಾಮರ್ಥ್ಯ ಗೊತ್ತಿದೆ."

"ಅವರಿಗೆ ಒಂದೆರಡು ಸೋಪ್ಲಿಯರನ್ನು ಯಾರು ತಂದುಕೊಟ್ಟರೆ ಅವರು ಹೇಳಿದಂತೆ ರಾಮುನ್ ಕೇಳುತ್ತಾರೆ!" ಶಾಂತಪ್ಪ ಸ್ವಿ ಮರೆತು ಹೇಳಿಬಿಟ್ಟಿದ್ದ ಈ ಮಾತನ್ನು.

"ಏನು! ರಾಮುನ್‌ರವರ ವಿಷಯದಲ್ಲಿ ಈ ಮಾತುಗಳನ್ನಾಡ್ತೀರ ನೀವು. ರಾಮುನ್‌ಗೆ ನಾನು ಸೋಪ್ಲಿಯನ್ನು ಕೊಡಿಸಿದೆನೆ? ಶಾಂತಪ್ಪನೋರೆ ನೀವು ಈ ಎಲ್ಲ ಮಾತುಗಳನ್ನು ಆಡಿದ್ದಕ್ಕೆ ತಕ್ಕುದನ್ನು ಅನುಭವಿಸಬೇಕಾದೀತು! ನಿಮ್ಮಂಥ ಅಯೋಗ್ಯರ ಮಧ್ಯೆ ನಾನು ರಾಮುನ್‌ರಂತಹ ಯೋಗ್ಯ ಜನ...." ಕೃಷ್ಣಯ್ಯ ಹೇಳಿದುದನ್ನು ಕೇಳಿದ ಶಾಂತಪ್ಪನಿಗೆ ಕೋಪದಿಂದ ಮುಖ ಕೆಂಪಾಯಿತು. ಅವನು ತನ್ನ ಕೈಗಳನ್ನು ತಾನೇ ಬಲವಂತವಾಗಿ ಹಿಡಿದುಕೊಂಡು ಹೇಳಿದ,

"ನಾಲಿಗೆ ಸಡಿಲಬಿಡಬೇಡಿ ಕೃಷ್ಣಯ್ಯ!"

"ನಿಮಗೆ ಈ ಕಂಪೆನಿಯಲ್ಲಿ ಕೆಲಸಮಾಡುವ ಯೋಗ್ಯತೆಯಿಲ್ಲ. ಕೂಲಿಗಾರ ಹೆಂಗಸರಿಗೆಲ್ಲ ಇಲ್ಲದ ಬಣ್ಣ ಕಟ್ಟುತ್ತೀರಿ. ನನಗೇನು ಗೊತ್ತಿಲ್ಲವೆ ಆ ಬಾಯ್ನಿ...."

"ಷಟ್ ಅಪ್!" ಶಾಂತಪ್ಪ ಅಬ್ಬರಿಸಿದ. ಕೃಷ್ಣಯ್ಯ ಮಂತ್ರಮುಗ್ಧನಂತೆ ಸುಮ್ಮನಾದ.

ಈ ರೀತಿ ಇಬ್ಬರ ನಡುವೆ ನಿಧಾನವಾಗಿ ಮನಸ್ತಾಪ ಹೆಚ್ಚುತ್ತಿದ್ದರೂ ಅಂದಿನ ಮಾತನ್ನು ಅಲ್ಲಿಯೇ ಮರೆತಂತೆ ತೋರ್ಪಡಿಸಿಕೊಂಡು ಸ್ನೇಹದಿಂದ ಮಾತನಾಡಿಸುವ ಕಲೆಯಲ್ಲಿ ಕೃಷ್ಣಯ್ಯ ತುಂಬಾ ಚತುರನಾಗಿದ್ದ. ಆ ದಿನ ಶಾಂತಪ್ಪ ಗಣಿಯಲ್ಲಿದ್ದಾಗ ಕೃಷ್ಣಯ್ಯ ನಗುನಗುತ್ತಾ ಬಂದು ಶಾಂತಪ್ಪನ ಬೆನ್ನಮೇಲೆ ಕೈಯಿಟ್ಟು ಹೇಳಿದ.

"ಏನು ಮಿಸ್ಟರ್ ಶಾಂತಪ್ಪನೋರೆ, ಈವತ್ತು ತುಂಬಾ ಬೆವತುಹೋಗಿದ್ದೀರಿ. ನೀವು ಪ್ರತಿಯೊಂದು ಕೆಲಸವನ್ನೂ ತುಂಬಾ ಮುತುವರ್ಜಿಯಿಂದ ಮಾಡುತೀರಿ."

ತನ್ನ ಬೆನ್ನಮೇಲಿದ್ದ ಆ ಕೈಗಳು, ಸೋಮ್ಲಿ ಮುಂತಾದ ಕೂಲಿಗಾರ್ತಿಯರ ಅಂಗಾಂಗಗಳನ್ನು ಮುಟ್ಟಿ ತಣಿದಿದ್ದುವು, ಅವು ಕೂಲಿಗಾರರ ರಕ್ತದ ರೂಪಾಯಿಗಳನ್ನು ತೆಗೆದುಕೊಂಡು ಜೇಬಿಗೆ ಸೇರಿಸಿ ಪಾಪಪೂರಿತವಾದುವು, ಎಂಬ ಕಲ್ಪನೆಗಳು ಬಂದು ಶಾಂತಪ್ಪನಿಗೆ, ಬೆನ್ನ ಮೇಲೆ ಹಾವು ಹರಿದಂತಾಗಿ ಬೆನ್ನು ಕೊಡವಿಕೊಂಡು ಹೇಳಿದ,

"ನಮ್ಮ ಕರ್ತವ್ಯ ನಾವು ಮಾಡಲೇಬೇಕು."

"ಅದಿರ್ಲಿ. ಇವತ್ತು ಸೋಮ್ಲಿ ಬೇಗ ಮನೆಗೆ ಹೋಗಬೇಕಂತೆ ಬಿಟ್ಟು ಬಿಡಿ," ಎಂದ ಕೃಷ್ಣಯ ನ ಮಾತು ಕೇಳಿದ ಶಾಂತಪ್ಪ ತಕ್ಷಣವೆಂದ,

"ಅವಳನ್ನ ಕಳಿಸುವ ಇಷ್ಟವಿದ್ದರೆ ನೀವೇ ಕಳಿಸಿ. ನಾನು ಮಾತ್ರ ಹಾಗೆಲ್ಲ ಮೊದಲೇ ಕಳಿಸೋದಿಲ್ಲ. ಅದೆಲ್ಲಾ ನನಗೆ ಹೇಳಬೇಡೀಂತ ಆ ದಿನವೇ ಹೇಳಿಲ್ಲವೇ ನಾನು ?"

"ನಾನೇ ಕಳಿಸೋಕೆ ನಾನೀಗ ಶಿವಮೊಗ್ಗಾಕ್ಕೆ ಹೋಗ್ತೀನಿ. ಆದ್ದರಿಂದ ಹೇಳ್ದೆ."

"ನೀವೇ ಜೊತೇಲಿ ಕರಕೊಂಡು ಹೋಗಿಬಿಡಿ ಈಗಲೇ!" ಎಂದು ಕಟುವಾಗಿ ಹೇಳಿದ ಶಾಂತಪ್ಪ ತನ್ನ ಕಾರ್ಯದಲ್ಲಿ ಮಗ್ನನಾದ. ಶಾಂತಪ್ಪನ ಮಾತಿನಲ್ಲಿನ ವ್ಯಂಗ್ಯವನ್ನು ಗುರುತಿಸಿದ ಕೃಷ್ಣಯ್ಯನಿಗೆ ನಾಚಿಕೆಯಾಗಿ ಅವನು ಸುಮ್ಮನಾದ. ಆದರೆ ಆ ವೇಳೆಗೆ ಮಧ್ಯವಯಸ್ಸಿನ ಕೂಲಿಗಾರ್ತಿಯೊಬ್ಬಳು ಬಂದು ಅವರಿಬ್ಬರಿಗೂ ಕೈಮುಗಿದು ವಿನಯದಿಂದ ಬಂದು ಕೇಳಿದಳು,

"ಸಾವ್ಕಾರ್ರೆ ನಂಗೆ ಈವತ್ತಿನಿಂದ ಸ್ವಲ್ಪ ಬೇಗ ಮನೆಗೆ ಹೋಗೋಕೆ ಬಿಡಿ."

"ಏಕೆ?" ಶಾಂತಪ್ಪ ಕೇಳಿದ.

"ಈಗ ಬೇಗ ಹೊತ್ತು ಮುಳುಗಿಬಿಡುತ್ತೆ ಸಾವ್ಕಾರ್ರೆ. ಮನೇಲಿ ಹಾಲು ಕುಡಿಯೋ ಕೂಸನ್ನ ಬಿಟ್ಟು ಬಂದಿದೀನಿ. ಸಂಜೆಗೆ ಮುಂಚೆ ಹೋಗಿ ಅದಕ್ಕೆ ಹಾಲು ಕೊಡಬೇಕು," ಕಾಡುಜನಾಂಗದವಳಾದ ಆ ತಾಯಿ ಲಜ್ಜೆಯಿಲ್ಲದೆ ಹಾಗೆ ಹೇಳಿದರೂ ಆ ಮಾತಿನಲ್ಲಿ ತನ್ನ ಮಗುವಿನ ಬಗ್ಗೆ ಕಳಕಳಿ ತುಂಬಿದ್ದುದನ್ನು ನೋಡಿದ ಶಾಂತಪ್ಪನಿಗೆ, ಅವಳ ಬೇಡಿಕೆಗೆ ಒಪ್ಪಿಗೆಕೊಡೋಣವೆನ್ನಿಸಿತು. ಆದರೆ ಅಷ್ಟರಲ್ಲಿ ಕೃಷ್ಣಯ್ಯನೆಂದ,

"ಹಾಗೆಲ್ಲ ಬೇಗ ಬೇಗ ಮನೆಗೆ ಹೋಗೋಕೆ ಬಿಡೋ ಹಾಗಿಲ್ಲ!" ಆ ಮಾತಿಗೆ ಏನೋ ಉತ್ತರ ಕೊಡಬೇಕೆಂದು ಅವಳಿಗೆ ತೋರಿತು, ಆದರೆ ಹೇಳಲಾರದೇ ಸುಮ್ಮನೇ ನಿಂತಿದ್ದಳು. ಅವಳ ನಿರಾಶೆಯ ಮುಖ ನೋಡಿ ಶಾಂತಪ್ಪನಿಗೆ ಮರುಕವೆನಿಸಿತು. ಅವನು ಇಂಗ್ಲೀಷಿನಲ್ಲಿ ಕೃಷ್ಣಯ್ಯನಿಗೆ ಹೇಳಿದ,

"ಇವಳನ್ನ ದಿನಾ ಸ್ವಲ್ಪ ಮುಂಚಿತವಾಗಿ ಬಿಟ್ಟುಬಿಡಬಹುದು. ಪಾಪ ಹಾಲು ಕುಡಿಯುವ ಮಗುವನ್ನು ಬಿಟ್ಟು ಬಂದಿರ್ತಾಳೆ."

ಕೃಷ್ಣಯ್ಯ ಅವಳನ್ನು ಕೇಳಿದ, "ಬೆಳಗ್ಗೆ ಮಗುವನ್ನು ಬಿಟ್ಟು ಬಂದವಳು ಸಂಜೆವರೆಗೆ ಅದನ್ನು ಹಾಗೇ ಬಿಟ್ಟಿರುತೀಯ ನೀನು?"

"ಇಲ್ಲ ಸಾವ್ಕಾರ್ರೆ ಮಧ್ಯಾನ ಊಟಕ್ಕೆ ಬಿಟ್ಟಾಗ ಗುಡಿಸಲಿಗೆ ಓಡಿ ಹೋಗಿ ಮಗುವಿಗೆ ಹಾಲು ಕೊಟ್ಟು ಬರ್ತೀನಿ."

"ಒಂದು ಒಂದೂವರೆ ಮೈಲಿ ದೂರ ಅಷ್ಟು ಬೇಗ ಹೋಗಿಬರ್ತೀಯ?"

"ಹೌದು ಸಾವ್ಕಾರ್ರೆ ಏನು ಮಾಡೋದು. ಎಳೆ ಮೊಗ ಅದು, ಅದಕ್ಕೋಸ್ಕರ ಓಡಿಹೋಗಿ ಬರ್ತೀನಿ."

"ಅದು ಯಾರ ಮಗು?"

"ನಂದೇನೇ ಸಾವ್ಕಾರ್ರೆ!"

"ನಿಂದೇನೆ ಸರಿ. ಆದ್ರೆ ಅದರ ತಂದೆ....?" ವ್ಯಂಗ್ಯ ತುಂಬಿದ ಧ್ವನಿಯಲ್ಲೆಂದ ಕೃಷ್ಣಯ್ಯ.

"ಇದೇನು ಸಾವ್ಕಾರ್ರೆ ಹೀಂಗೆ ಕೇಳ್ತೀರ!...." ಅಷ್ಟು ಹೇಳುವುದರಲ್ಲಿ ಅವಳಿಗೆ ನಾಚಿಕೆ ಅಪಮಾನಗಳಿಂದ ಅಳು ಬಂದಿತು. ಕಂಬನಿ ತುಂಬಿದ ಆ ಕಣ್ಣುಗಳನ್ನು ನೋಡಿ ಶಾಂತಪ್ಪನಿಗೆ ಅವಳ ಬಗ್ಗೆ ಗೌರವವುಂಟಾಗಿ ಅವನೆಂದ,

"ಹೋಗಲಿ ಹೋಗು. ನಾಳೆಯಿಂದ ಒಂದು ಅರ್ಧ ಗಂಟೆ ಮುಂಚೆ ಮನೆಗೆ ಹೋಗು."

ಶಾಂತಪ್ಪನ ಮಾತು ಕೇಳಿ ಅವಳು ನಗು ನಗುತ್ತಾ ಕಣ್ಣೊರೆಸಿಕೊಂಡು ಹೊರಟುಹೋದಳು.

"ಪಾಪ!" ಎಂದು ಮರುಕ ವ್ಯಕ್ತಪಡಿಸಿದ್ದ ಶಾಂತಪ್ಪನ ಬಗ್ಗೆ ಕೋಪಗೊಂಡ ಕೃಷ್ಣಯ್ಯನೆಂದ,

"ನಾನು ಸೋಮ್ಲಿಯನ್ನ ಕಳಿಸಿ ಎಂದರೆ ನಿಮಗೆ ಇಷ್ಟ ಬರಲಿಲ್ಲ. ಈಗ ಇವಳನ್ನ ಕಳಿಸೋಕೆ ನಿಮಗೆ ಹೇಗೆ ಇಷ್ಟ ಬಂತು? ಇದು ಪಕ್ಷಪಾತವಲ್ಲವೆ?"

"ಸೋಮ್ಲಿ ಯಾರಿಗೆ ಹಾಲು ಕೊಡೋಕೆ ಹೋಗಬೇಕು ?"

"ನೀವು ನನ್ನ ವಿಷಯದಲ್ಲಿ ಅನವಶ್ಯಕವಾಗಿ ದ್ವೇಷ ಸಾಧಿಸುತ್ತಿದ್ದೀರಿ"

"ನೀವು ನನ್ನನ್ನು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲ."

"ನಿಮ್ಮ ವಿಷಯ ನನಗೆ ಎಲ್ಲಾ ತಿಳಿದಿದೆ !"

"ನನ್ನ ವಿಷಯ ಅಂಥದೇನು ತಿಳಿದಿದೆ ? ಹೇಳಿಬಿಡಿ ನೋಡೋಣ."

"ಸಮಯ ಬಂದಾಗ ನಾನೇ ಹೇಳುತೀನಿ."

"ಆ ಸಮಯ ಯಾವಾಗ ಬರುತ್ತೆ ?"

"ಬೇಗಲೇ ಬರುತ್ತೆ."

"ಯಾರ ಮುಂದೆ ಹೇಳ್ತೀರಿ."

"ರಾಮನ್ ಮೊದಲಾದವರ ಮುಂದೆ!" ಎಂದು ಬಾಣವೆಸೆದಂತೆ ಹೇಳಿದ ಕೃಷ್ಣಯ್ಯನ ಮಾತು ಕೇಳಿ ಶಾಂತಪ್ಪನಿಗೆ ನೆತ್ತಿಯವರೆಗೆ ಕೋಪ ವೇರಿತು. ಕೃಷ್ಣಯ್ಯನನ್ನು ಹಿಡಿದು ನೆಲಕ್ಕೆ ಅಪ್ಪಳಿಸಿ ಬಿಡಲೇ ಎನಿಸಿತು ಅವನಿಗಾಗ. ಆದರೆ ಆ ಶೀಘ್ರ ಕೋಪವನ್ನು ತಡೆದುಕೊಂಡು ಹೇಳಿದ,

"ನೋಡಿ ಮಿಸ್ಟರ್ ಕೃಷ್ಣಯ್ಯ. ಈ ಗಣಿಗಳಲ್ಲೆಲ್ಲಾ ಹಾವಿನಂತಹ ಜನ ಸೇರಿಕೊಂಡು, ಒಳ್ಳೆಯವರನ್ನೆಲ್ಲಾ ಕಚ್ಚುತ್ತಿದ್ದಾರೆ ಹೀಗಾಗಿ ಗಣಿಗಳಲ್ಲಿ ಒಳ್ಳೆಯವರು ಬಾಳುವುದೇ ಕಷ್ಟವಾಗಿದೆ. ನಾನೂ ಸಹ ಲಂಚ, ವ್ಯಭಿಚಾರ ಮೊದಲಾದುವಕ್ಕೆ ಗುಲಾಮನಾಗಿದ್ದರೆ ನಾನೂ ನಿಮ್ಮೆಲ್ಲರ ದೃಷ್ಟಿಯಲ್ಲಿ ಒಳ್ಳೆಯವನಾಗಿರುತ್ತಿದ್ದೆ. ಆದರೆ ನಿಮ್ಮ ದೃಷ್ಟಿಯಲ್ಲಿ ನಾನು ಕೆಟ್ಟವನಾದರೆ ನನಗೇನೂ ಸಂಕಟವಿಲ್ಲ. ನೀವು ನನ್ನ ವಿಷಯದಲ್ಲಿ ಏನು ಅಪಪ್ರಚಾರ ಮಾಡಿದರೂ ನಾನು ಅವಕ್ಕೆ ಅಂಜುವುದಿಲ್ಲ. ನಿಮ್ಮಂತಹ ಜನರನ್ನು ನಾನು ಬಹಳ ನೋಡಿದ್ದೀನಿ !"

"ನನ್ನ ವಿಷಯದಲ್ಲಿ ಹೀಗೆ ವರ್ತಿಸಿದ್ದಕ್ಕೆ ನಿಮ್ಮ ವಿಷಯವನ್ನೆಲ್ಲ ರಾಮನ್‌ಗೆ ಹೇಳಿ ನಿಮ್ಮನ್ನ ಡಿಸ್‌ಮಿಸ್ ಮಾಡಿಸ್ತೇನೆ," ಎಂದು ಬುಸುಗುಟ್ಟುತ್ತಾ, ಕೃಷ್ಣಯ್ಯ ಕೂಗಿದುದನ್ನು ಕೇಳಿ ಮೇಲೆ ಕೆಲಸ ಮಾಡುತ್ತಿದ್ದ ಕೂಲಿಗಾರರೆಲ್ಲ ಇತ್ತಲೇ ನೋಡುತ್ತಿದ್ದರು.

"ನಮ್ಮ ಈ ಜಗಳ ಕೂಲಿಗಾರರ ಮುಂದೆ ಬೇಕಿಲ್ಲ ಮಿಸ್ಟರ್ ಕೃಷ್ಣಯ್ಯ.

ನಾನು ನಿಮ್ಮ ಕೋಪದ ಮಾತುಗಳಿಗೆ ಬೆದರುವವನಲ್ಲ. ನೀವು ನನಗೆ ಮೇಲಿನ ಅಧಿಕಾರಿಯೂ ಅಲ್ಲ. ನೀವು ನನ್ನನ್ನು ಹೀಗೆಲ್ಲ ಹೆದರಿಸ ಬೇಕಾಗಿಯೂ ಇಲ್ಲ. ಈ ಗಣಿಗೆ ನಾನು ಮೇನೇಜರು. ನಾನು ಹೇಳಿದಂತೆ ಇಲ್ಲಿ ಕೆಲಸ ನಡೆಯಬೇಕು! ನೀವು ಹೇಳಿದ ಹಾಗೆ ನಾನು ಕೇಳಬೇಕಾದರೆ ಕಂಪೆನಿಯಿಂದಲೇ ಹಾಗೆ ಬರೆದು ಬರಲಿ. ಅದುವರೆಗೆ, ಮೇನೇಜರಾದ ನಾನು ಒಬ್ಬ ಕಂಟ್ರಾಕ್ಟರಿಗೆ ವಿಧೇಯನಾಗಿ ನಡೆಯಲು ಸಾಧ್ಯವಿಲ್ಲ," ಎಂದು ಶಾಂತಪ್ಪನೆಂದು ಅಲ್ಲಿಂದ ಹೊರಟುಹೋದ.

* * * *

ಈ ಒಂದು ವಾರ ಗಣಿಯ ಸ್ಥಿತಿ ಶಾಂತವಾಗಿಯೇ ಇದ್ದಿತು. ಕಾಳ ಮೇಘಗಳು ನಿಧಾನವಾಗಿ ಕಲೆತು ಪ್ರಳಯ ರೂಪವಾದ ಮಳೆ ಹೊಯ್ಯುವ ಮುಂಚಿನ ಗಗನ ಗಾಂಭೀರ್ಯದಂತೆ, ಸ್ಫೋಟವಾಗುವ ಮುಂಚಿನ ಅಗ್ನಿ ಪರ್ವತದ ಶಾಂತತೆಯಂತೆ, ಇದ್ದಿತು ಆ ವಾತಾವರಣ. ಕೂಲಿಗಾರರೆಲ್ಲ ಆಗಾಗ್ಗೆ ಸೇರಿ ಏನನ್ನೋ ಮಾತನಾಡಿಕೊಳ್ಳುತ್ತಿದ್ದರು. ಸಮಯ ದೊರೆ ತಾಗಲೆಲ್ಲ ಏನನ್ನೋ ಚರ್ಚಿಸುತ್ತಿದ್ದರು. ಆ ಮಾತುಕತೆಗಳಲ್ಲಿ ರೇಖ್ಯಾನೇ ಮುಂದಾಳಾಗಿರುತ್ತಿದ್ದನು.

ಆ ದಿನ ಬೆಳಗ್ಗೆ ಎದ್ದು ಬಿಡಾರದ ಹೊರಗೆ ತಲೆಹಾಕಿದಾಗ ಎದುರಿಗೆ ಕಂಡ ಆ ದೃಶ್ಯವನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಅಲ್ಲಿ ಕೂಲಿ ಗಾರರೆಲ್ಲರೂ ಗುಂಪುಗೂಡಿ ಏನೇನೋ ಮಾತನಾಡುತ್ತಿದ್ದರು. ಅವನ ಮುಖ ಕಂಡು ಸುಮ್ಮನಾದರು. ಶಾಂತಪ್ಪ ಹಾಗೆಯೇ ಒಳಕ್ಕೆ ಹೊರಟು ಹೋದ, ಸ್ನಾನ ಮಾಡಿ ಬರಲು.

ಅವನು ಸ್ನಾನ ಮಾಡಿ ಹೊರಬರುವಷ್ಟರಲ್ಲಿ, ಬಾಗಿಲಿನಲ್ಲಿ ಕುರ್ಚಿಯ ಮೇಲೆ ಕೃಷ್ಣಯ್ಯ ಕುಳಿತಿದ್ದ; ಅವನೊಡನೆ ಕೂಲಿಗಾರರೆಲ್ಲರೂ ಚರ್ಚಿಸು ತ್ತಿದ್ದರು.

"ಅದೆಲ್ಲ ಸಾಧ್ಯವಿಲ್ಲ ಸಾರ್. ಕೊಡಲೇ ಬೇಕು."

"ನಾವು ಹಾಗೆಲ್ಲಾ ಹುಣಿಸೇ ಬೀಜದಂತೆ ಹಣವನ್ನು ಖರ್ಚು ಮಾಡಲಾಗುವುದಿಲ್ಲ."

"ಕೂಲಿಗಾರರು ನಿಮ್ಮ ಮಕ್ಕಳಿದ್ದಂತೆ ಸಾವ್ಕಾರ್ರೆ. ಅವರಲ್ಲಿ ಯಾರಾದರೂ ಒಬ್ಬರು ಸತ್ತುಹೋದರೆ ಅವರ ಹೆಂಡಿರನ್ನ ನೀವು ಕೈಬಿಟ್ಟು ಬಿಡೋಕಾಗ್ತದೆಯೆ?"

"ಏಯ್ ನಮ್ಮ ಮಕ್ಕಳ ವಿಷಯ ಮಾತನಾಡಬೇಡ. ಕೂಲಿಯವರಿಗೂ ನಮ್ಮ ಮಕ್ಕಳಿಗೂ ಸಂಬಂಧವಿಲ್ಲ," ಕೃಷ್ಣಯ್ಯ ರೇಗುತ್ತಿದ್ದ.

"ಅದೂ ಹೋಗಲಿ ಸಾವ್ಕಾರ್ರೆ. ಮ್ಯಾನೇಜರ್ ಸಾಹೇಬರು ಅವತ್ತು ಕೊಡ್ತೀವೀಂತ ಒಪ್ಪಿಕೊಂಡಿರಲಿಲ್ಲವೆ? ಅವರು ದೇವರಂಥ ಮನುಷರು. ಅವರು ಒಪ್ಪಿದರೂ ನೀವು ಒಪ್ಪೋಕಿಲ್ಲ."

"ಲೇಯ್, ತಲೆಯೆಲ್ಲ ಮಾತಾಡಬೇಡ. ಇಲ್ಲಿ ದುಡ್ಡು ಕೊಡೋನು ಬಿಡೋನು ನಾನು ಆ ಹೊಸಬರಲ್ಲ. ಇಲ್ಲಿ ಮೊದಲಿನಿಂದ ಇರೋನು ನಾನು, ಅವರಲ್ಲ!"

"ಆದ್ದರಿಂದಲೇ ಸಾವ್ಕಾರ್ರೆ ನಿಮ್ಮನ್ನ ಕೇಳ್ತಿರೋದು," ಎಂದು ಗುಂಪಿನ ಮಧ್ಯದಿಂದ ರೇಖ್ಯಾ ಕೂಗಿದ. ಕೃಷ್ಣಯ್ಯ ಅವನನ್ನು ಕ್ರುದ್ಧನಾಗಿ ನೋಡುತ್ತಾ ಎಂದ,

"ನಾನು ಕೊಡೋಕೆ ಸಾಧ್ಯವಿಲ್ಲ. ಲಚ್ಚ ಸತ್ತು ಒಂದು ತಿಂಗಳಾಯಿತು. ಕಂಪೆನಿಯ ಮ್ಯಾನೇಜರು ಬಂದು ಹೋಗಿ ಆಗಲೇ ಹದಿನೈದು ದಿನವಾಯಿತು. ಈಗ ನೀವು ದುಡ್ಡು ಕೇಳಿದರೆ ಎಲ್ಲಿಂದ ತರುವುದು? ಇಲ್ಲಿ ಗಲಾಟೆ ಮಾಡದೆ ಬಾಯಿ ಮುಚ್ಚಿಕೊಂಡು ಬೇಗ ಕೆಲಸಕ್ಕೆ ಹೋಗಿ."

"ನೀವು ಲಚ್ಚನ ಹೆಂಡ್ತಿಗೆ ಹಣ ಕೊಟ್ಟ ಹೊರತು ನಾವು ಈವತ್ತು ಕೆಲಸಕ್ಕೆ ಹೋಗಾಕಿಲ್ಲ."

"ನೀವು ಕೆಲಸಕ್ಕೆ ಬರದಿದ್ರೆ ಇನ್ನು ನಾಳೆಯಿಂದ ನಿಮ್ಮನ್ನ ಕೆಲಸಕ್ಕೆ ತೆಗೆದುಕೊಳ್ಳೋದಿಲ್ಲ. ನಳಿನೀಪುರದಿಂದ, ಕಾಗಿನೆಲೆಯಿಂದ ಕೂಲಿಯೋರನ್ನ ಕರೆದುಕೊಂಡು ಬರುತೀನಿ," ಕೃಷ್ಣಯ್ಯ ಕೋಪದಿಂದ ಕೂಗಿದ.

"ನಾವು ರಕ್ತ ನೀರು ಮಾಡಿಕೊಂಡು ಇದುವರೆಗೂ ದುಡಿದ ಗಣೀಲಿ ಬೇರೆ ಯಾವ ಮಗ ಬಂದು ಕೆಲಸ ಮಾಡ್ತಾನೆ ನೋಡಿಯೇ ಬಿಡ್ತೀವಿ ಸಾರ್. ಈ ಗಣಿ ನಮ್ಮದು ಇಲ್ಲಿ ಬೇರೆಯವನು ಕಾಲಿಟ್ಟರೆ ಅವನ ಕಾಲು ಕತ್ತರಿಸಿ ಭೂತಕ್ಕೆ ಹಾಕ್ತೀವಿ." ಕಣ್ಣು ಕೆಂಡ ಮಾಡಿಕೊಂಡು ರೇಖ್ಯ ನುಡಿದುದನ್ನು ಕೇಳಿ ಕೃಷ್ಣಯ್ಯ ಒಳಗೇ ನಡುಗಿದ.

ಶಾಂತಪ್ಪ ಬಂದು ಎಲ್ಲವನ್ನೂ ಆಲಿಸುತ್ತ ನಿಂತಿದ್ದುದನ್ನು ಅದುವರೆಗೂ ಯಾರೂ ನೋಡಿರಲಿಲ್ಲ. ಅವನ ಮುಖವನ್ನು ನೋಡಿದ ರೇಖ್ಯ ತನ್ನ ಮಾತನ್ನು ತಕ್ಷಣ ನಿಲ್ಲಿಸಿ ತಲೆ ತಗ್ಗಿಸಿಕೊಂಡು ನಿಂತ. ಇತರ ಕೂಲಿಗಾರ

ರೆಲ್ಲರೂ ಮುಂದೇನಾಗುವುದೋ ಎಂದು ಕುತೂಹಲಿಗಳಾಗಿ ನೋಡುತ್ತಿದ್ದರು. ಶಾಂತಪ್ಪ ಒಮ್ಮೆ ಸುತ್ತಲೂ ನೋಡಿದ. ಎದುರಿನಲ್ಲಿ ನಿಂತಿದ್ದ ಸುಮಾರು ಏಳುನೂರು ಎಂಟುನೂರು ಜನ ಕೂಲಿಗಾರರ ಆ ತಂಡವನ್ನು ಒಂದು ಮೂಲೆಯಿಂದ ಮತ್ತೊಂದು ಮೂಲೆಯವರೆಗೂ ಶಾಂತಪ್ಪ ವೀಕ್ಷಿಸಿದ. ಬಿಡಾರದ ಎದುರಿನಲ್ಲಿದ್ದ ರಸ್ತೆಯನ್ನು ತುಂಬಿಕೊಂಡು ನಿಂತಿದ್ದ ಆ ತಂಡದ ಒಂದೆಡೆ ಅವನಿಗೆ ಪರಿಚಿತರಾಗಿದ್ದ, ಲಕ್ಷ್ಮಣ, ರಾಮ್ಯ, ಬಾತಾ, ಬದ್ಯ, ಹುಸೇನಿ, ಸಕ್ರಿಯ, ಸೇವ್ಯ, ರೇಖ್ಯ ಮೊದಲಾದವರಿದ್ದರು; ಮತ್ತೊಂದೆಡೆಯಲ್ಲಿ ಲಚ್ಚಿ, ಗಂಗು, ಕಾಳಿ, ಹಾಲಿ, ಖಸನಿ, ಸೀತ್ಯ, ನಾಗ್ಯ, ಬಾಯ್ನಿ ಮೊದಲಾದ ಕೂಲಿಗಾರ್ತಿಯರಿದ್ದರು, ಅಲ್ಲಿ ಸೋಮ್ಲಿ ಇರಲಿಲ್ಲ! ಎಲ್ಲರ ಮುಖಗಳಲ್ಲಿಯೂ ದುಗುಡ ತುಂಬಿದ್ದಿತು.

"ಏನ್ರಪ್ಪಾ ಎಲ್ಲಾ ಬೆಳಗ್ಗೇನೆ ಸೇರಿಬಿಟ್ಟಿದ್ದೀರಿ ಇಲ್ಲಿ?" ಶಾಂತಪ್ಪ ಕೇಳಿದ. ಅವನ ಮನಸ್ಸಿನಲ್ಲಿ ಸಂಭಾಷಣೆಯನ್ನು ಹೇಗೆ ಪ್ರಾರಂಭಿಸಬೇಕೆಂಬುದೇ ಹೊಳೆಯಲಿಲ್ಲ. ತಾನು ಪ್ರತಿದಿನವೂ ಬಡ ಕೂಲಿಗಾರರಿಗೆ ಮೋಸ ಮಾಡುತ್ತಿದ್ದೇನೆಂಬ ಅರಿವು ಅವನಿಗಿದ್ದಿತು. ಆದರೆ ತನಗೆ ವೇತನವೀಯುವ ಧಣಿಯಾದ ಕಂಪೆನಿಗೆ ಧಕ್ಕೆ ಬರದಂತೆ ನಡೆದುಕೊಳ್ಳಬೇಕಾದ ಆ ಒಂದು ಕರ್ತವ್ಯಕ್ಕೆ ಬಲಿ ಬಿದ್ದು ಅವನು ಕೂಲಿಗಾರರಿಗೆ ಏನೂ ಸಹಾಯ ಮಾಡಲಾರದವನಾಗಿದ್ದನು. ಲಚ್ಚನ ಅನಾಥ ಸಂಸಾರಕ್ಕೆ ತನ್ನ ಕೈಯಿಂದ ಹಣ ಕೊಡಲೂ ಸಹ ಕಂಪೆನಿಯ ಮೇನೇಜರು ಅವನನ್ನು ನಿರ್ಬಂಧಿಸಿದ್ದರು; ಈ ಬಂಧನವನ್ನು ಮೀರಿದರೆ ಅದು ಒಂದು ದೊಡ್ಡ ಪ್ರಮಾದವೆಂದು ಎಚ್ಚರಿಸಿದ್ದರು, ಬೆಂಗಳೂರಿಗೆ ಹೊರಟು ಹೋಗುವ ಮುನ್ನ.

ಹೀಗಾಗಿ, ದೀನರಲ್ಲಿ ಒಂದೆಡೆ ಮರುಕವಿದ್ದರೆ ಮತ್ತೊಂದೆಡೆ ಧಣಿಯರಲ್ಲಿ ಅವನಿಗೆ ಹಿತಚಿಂತನವಿರಬೇಕಿದ್ದಿತು. ಈ ಎರಡು ಕರ್ತವ್ಯಗಳ ನಡುವೆಯಿದ್ದ ಅವನ ಮನಸ್ಸೊಂದು ಸೊಡರಿನಂತಾಗಿ ಎರಡೂ ದಿಕ್ಕಿನ ಬಿರಗಾಳಿಯ ಮಧ್ಯೆ ಹೊಯ್ದಾಡುತ್ತಿದ್ದಿತು.

"ಬಡವರ ಗೋಳು ಇದ್ದೇ ಇದೆ ಸಾವ್ಕಾರ್ರೆ!" ರೇಖ್ಯ ಉತ್ತರವಿತ್ತ.

"ಬಡವರಾದವರು ಇಷ್ಟೊಂದು ಗಲಾಟೆ ಮಾಡ್ತಾರೇನೋ ರೇಖ್ಯ. ಬಡವರಾದೋರು ಹಣ ಬೇಡವೆಂದು ಬಂದ ಲಕ್ಷ್ಮಿಯನ್ನು ನಿರಾಕರಿಸ್ತಾರಾ?"

"ಹಣ ಬೇಡವೆಂದು ಯಾರು ಹೇಳಿದರು ಸಾವ್ಕಾರ್ರೆ?"

"ಮತ್ತಿನ್ನೇನು. ಬೆಳಗ್ಗೆ ಒಂಭತ್ತೂವರೆ ಗಂಟೆಯಾಗಿದೆ. ಗಣಿಗೆ ಹೋಗೋದಿಲ್ಲ, ನಮಗೆ ಕೂಲಿ ಬೇಡ, ಎಂದರೆ ಬಂದ ಲಕ್ಷ್ಮಿಯನ್ನ ಹೋಗೆಂದ ಹಾಗೆ ತಾನೆ?"

"ನೀವು ಬುದ್ಧಿವಂತರು ಸಾವ್ಕಾರ್ರೆ ನಿಮ್ಮನ್ನ ಮಾತಿನಲ್ಲಿ ನಾವು ಗೆಲ್ಲೋಕಾಗ್ತದ?"

"ಮಾತಿನಲ್ಲಿ ಗೆಲ್ಲುವುದಕ್ಕೆ ಪ್ರಯತ್ನ ಮಾಡಬಾರದು ಕಣೋ ರೇಖ್ಯ. ಒಳ್ಳೆ ಕೆಲಸದಿಂದ ಜನಗಳನ್ನ ಗೆಲ್ಲಬೇಕು. ಏನ್ರಪ್ಪಾ ಏನಂತೀರ?" ಎಂದು ಇತರ ಕೆಲಸಗಾರರನ್ನು ಪ್ರಶ್ನಿಸಿದ ಶಾಂತಪ್ಪ.

"ಹೌದು ಸಾವ್ಕಾರ್ರೆ," ಹಲವರೆಂದರು.

"ಹಾಗಾದ್ರೆ ನಾವು ಕೆಟ್ಟ ಕೆಲಸ ಮಾಡಿರೋದೇನು ಈಗ?" ರೇಖ್ಯ ಕೇಳಿದ.

"ನೀವು ಕೆಟ್ಟ ಕೆಲಸ ಮಾಡಿದ್ದೀರಿ ಅಂತ ನಾನು ಹೇಳಲಿಲ್ಲ. ಆದರೆ ಹೆದರಿಕೆಯ ಮಾತಿನಲ್ಲಿ ಗೆಲ್ಲುವ ಪ್ರಯತ್ನಬಿಟ್ಟು ಜನರನ್ನ ಒಳ್ಳೆಯ ಮಾತಿನಲ್ಲಿ ಗೆಲ್ಲಬೇಕು ಈಗ ಅಷ್ಟೆ!" ಎಂದ ಶಾಂತಪ್ಪನ ಮಾತಿನ ಅರ್ಥ ಹಲವರಿಗಾಯಿತು.

"ಹಾಗಾದರೆ ನಾವು ಏನೂ ಕೇಳಬಾರದೆ ಸಾವ್ಕಾರ್ರೆ? ಗಣಿಗಾಗಿ ಸತ್ತುಹೋದ ಆ ಬಡಮುಂಡೇದು ಲಚ್ಚನ ಹೆಂಡಿರು ಮಕ್ಕಳು ಉಪವಾಸ ಸಾಯುತ್ತಿದ್ದರೆ ಅವರನ್ನು ಯಾರು ಕೇಳೋರು?"

"ಅವರು ಉಪವಾಸ ಸಾಯ್ತಿದಾರೇಂತ ನೀನು ಇತರರನ್ನೂ ಕೆಲಸಕ್ಕೆ ಹೋಗದಂತೆ ಮಾಡಿದರೆ ಇತರರೂ ಅವರ ಜೊತೆಗೇ ಉಪವಾಸವಿರೋದಿಲ್ಲವೆ? ನೀನು ಮಾಡುವ ಉಪಕಾರ ಇದೆಯೇನು ಇವರಿಗೆ?" ಶಾಂತಪ್ಪ ಕೇಳಿದ ಪ್ರಶ್ನೆ ರೇಖ್ಯನಿಗೆ ಸವಾಲಿನಂತಿದ್ದಿತು. ಅವನು ಈ ಪ್ರಶ್ನೆಯ ಉತ್ತರಕ್ಕೆ ಸಿದ್ಧನಾಗಿರಲಿಲ್ಲ. ಅವನ ಅಣ್ಣ ಹೇಮ್ಲ್ಯ ಇಂತಹ ಪ್ರಶ್ನೆಯು ಉದ್ಭವಿಸೀತೆಂದು ಮನಗಂಡು ಇದಕ್ಕೆ ಉತ್ತರವನ್ನು ಮೊದಲೇ ತನ್ನ ತಮ್ಮನಿಗೆ ಹೇಳಿಕೊಟ್ಟಿರಲಿಲ್ಲ! ಹೇಮ್ಲ್ಯ ಎದುರಿಗಿದ್ದಿದ್ದರೆ ಏನು ಉತ್ತರ ಹೇಳುತ್ತಿದ್ದನೋ, ಆದರೆ ಅವನಿಗೆ ಶಾಂತಪ್ಪನೆದುರು ಬಂದು ಮಾತನಾಡುವ ಧೈರ್ಯವಿರಲಿಲ್ಲ. ಆದ್ದರಿಂದ ತೆರೆಯ ಅವನು ಮರೆಯಲ್ಲಿಯೇ ಇದ್ದುಕೊಂಡು ಕೆಲಸಗಾರರನ್ನು ಸೂತ್ರದ ಗೊಂಬೆಗಳಂತೆ ಆಡಿಸುತ್ತಿದ್ದ.

ಈ ಪ್ರಶ್ನೋತ್ತರಗಳನ್ನೇ ಕೇಳುತ್ತ ಕುಳಿತಿದ್ದ ಕೃಷ್ಣಯ್ಯ ಶಾಂತಪ್ಪನ ಕೈ ಮೇಲಾಗುತ್ತಿದ್ದುದನ್ನು ಗಮನಿಸಿ, ಕೂಲಿಗಾರರಿಗೆ ಸೋಲಾಗುತ್ತಿದ್ದುದಕ್ಕೆ ಸಂತೋಷಪಟ್ಟ. ಅವರು ಇನ್ನೇನು ಕೆಲಸಕ್ಕೆ ಹಿಂದಿರುಗಬಹುದೆಂಬ ಆಶಾಂಕುರವಾಯಿತು ಅವನಲ್ಲಿ. ಆದರೆ ಈ ಮುಷ್ಕರವನ್ನು ನಿಲ್ಲಿಸಿದ ಕೀರ್ತಿ ಶಾಂತಪ್ಪನಿಗೆ ಲಭಿಸುವುದೆಂದು ಅವನಿಗೆ ಶಾಂತಪ್ಪನಲ್ಲಿನ ಮತ್ಸರ ಇನ್ನೂ ವೃದ್ಧಿಯಾಯಿತು. ದಿನದಿನಕ್ಕೂ ಶಾಂತಪ್ಪನಿಗಾಗುತ್ತಿದ್ದ ಇಂತಹ ಉತ್ಕರ್ಷವನ್ನು ಕಂಡು ಅವನಿಂದ ಸಹಿಸದಾಯಿತು. ಆದರೆ ಈಗ ಹೇಗಾದರೂ ಸಹಿಸಲೇಬೇಕಿದ್ದಿತು. ಕೂಲಿಗಾರರ ಮೌನವನ್ನು ಕಂಡು ಶಾಂತಪ್ಪನೆಂದ,

"ಹೋಗಲಿ ಈಗ ಕೆಲಸಕ್ಕೆ ಹೋಗಿ. ನೋಡಿ ಆಗಲೇ ಬಿಸಿಲು ಏರತೊಡಗಿದೆ."

"ಹೌದು, ಹೌದು. ಮಳೆಗಾಲ ಪ್ರಾರಂಭವಾಗಿಬಿಟ್ಟರೆ ಆಮೇಲೆ ಒಂದು ಕಲ್ಲು ಕೂಡ ತೆಗೆಯೋಕಾಗೋದಿಲ್ಲ. ಬಿಸಿಲಿರುವಾಗಲೇ ದುಡಿಯಬೇಕು," ಎಂದು ಕೃಷ್ಣಯ್ಯನೂ ಹೇಳಿದ.

ಎಲ್ಲರೂ ಕೆಲಸಕ್ಕೆ ಹೊರಡಲುದ್ಯುಕ್ತರಾದರು; ತಮ್ಮ ತಮ್ಮ ಹಾರೆ, ಗುದ್ದಲಿ, ಪಿಕಾಸಿಗಳನ್ನು ತೆಗೆದುಕೊಂಡು ಹೊರಟುನಿಂತರು; ಹೆಂಗಸರು ಬಾಣಲೆ, ಸುತ್ತಿಗೆಗಳನ್ನು ಹೊತ್ತು ನಿಂತರು, ರಾಮೇಗೌಡ ತೈಲನಿಟ್ಟಿಟು ಮತ್ತು ಮದ್ದು, ಬತ್ತಿಗಳನ್ನು ರೂಟ್ಸಿನ ಪೆಟ್ಟಿಗೆಯಲ್ಲಿ ತುಂಬಿಕೊಂಡು ನಿಂತ. ಗಣಿಗೆ ಹೊರಡುವ ಆ ಸಂಭ್ರಮವು ಹಾಗೆಯೇ ಕ್ಷಣಕಾಲ ನಿಲ್ಲಬೇಕಾಯಿತು:

ಇದ್ದಕ್ಕಿದ್ದಂತೆ ಲಚ್ಚನ ಹೆಂಡತಿ ಅಲ್ಲಿಗೆ ಓಡಿಬಂದಳು. ಅವಳು, ಲಚ್ಚ ಸಾಯುವಾಗ ತುಂಬು ಬಸುರಿಯಾಗಿದ್ದವಳು ಈಗ ಕೂಸೊಂದರ ತಾಯಿಯಾಗಿದ್ದಳು. ಬಾಣಂತಿಯಾದವಳಿಗೆ ಸಾಕಷ್ಟು ಉಪಚಾರವಿಲ್ಲದೆ ಮುಖವೆಲ್ಲವೂ ಬಿಳಿಚಿಕೊಂಡು, ರೋಗಗ್ರಸ್ತೆಯಂತೆ ಕಾಣುತ್ತಿದ್ದಳವಳು. ಅವಳ ಕೈನಲ್ಲಿ ಅವಳು ಕೆಲವಾರು ದಿನಗಳ ಆ ಶಿಶುವನ್ನು ಹೊತ್ತುಕೊಂಡು ಬಂದಿದ್ದಳು. ಅದು ಶಿಶುವೆನ್ನುವುದರ ಬದಲು ಶವವೆನ್ನುವಂತೆಯೇ ಇದ್ದಿತು, ಕೃಶವಾಗಿ ನಿಶ್ಚೇಷ್ಟಿತವಾಗಿ ಅವಳ ಮಡಿಲಲ್ಲಿ ಮಲಗಿದ್ದಿತದು. ಅವಳು ತನ್ನ ಕಣ್ಣಲ್ಲಿ ಕಂಬನಿ ಸುರಿಸುತ್ತ ಗೋಳಿಟ್ಟಳು,

"ಸಾವ್ಕಾರ್ರೆ ನಾನು ನನ್ನ ಮಗು ಉಪವಾಸ ಸಾಯ್ತಿದೀವಿ. ಏನಾರ ಕೊಟ್ಟು ಈ ಮಗೂನ ಜೀವ ಉಳಿಸಿ!"

ಆ ದಾರುಣ ದೃಶ್ಯವನ್ನು ನೋಡಿ ಶಾಂತಪ್ಪನಿಗೆ ಸಹಿಸದಾಯಿತು. ಅವನು ಏನೋ ಹೇಳಬೇಕೆಂದುಕೊಂಡು ಬಾಯ್ದೆರೆಯುವಷ್ಟರಲ್ಲಿ ಕೃಷ್ಣಯ್ಯ ರೇಗಿ ಕೂಗಿಕೊಂಡ,

"ಏಯ್! ಮೊದಲು ಇಲ್ಲಿಂದ ಹೊರಟುಹೋಗು. ಹಾಗೆಲ್ಲ ಇಲ್ಲಿಗೆ ಬರಬಾರದು. ನಿಂಗೆ ಏನಾದರೂ ಹಣಾನ ಆಮೇಲೆ ಕಳಿಸಿಕೊಡ್ತೀನಿ."

ಕೃಷ್ಣಯ್ಯನ ಮಾತು ಕೇಳಿ, ಅವನಿಂದ ಹಣ ಪಡೆಯುವ ಆಶ್ವಾಸನೆ ಪಡೆದುಕೊಂಡು ಅವಳು ನಗೆ ಮುಖದಿಂದ ಹೊರಟಳು. ಸಧ್ಯ ಬಂದ ಪೀಡೆ ತೊಲಗಿತು ಎಂಬ ಸಂತೋಷದಿಂದ ಕೃಷ್ಣಯ್ಯ ಮೇಲೆದ್ದ. ಕೂಲಿಗಾರರೆಲ್ಲ ನಿಧಾನವಾಗಿ ಹೊರಟುಹೋದರು. ಶಾಂತಪ್ಪನ ಹೃದಯ ಮಾತ್ರ ಭಾರವಾಗಿದ್ದಿತು. ಅವನು ಒಳಗೆ ಬಂದನಂತರ ಕೇಳಿದ,

"ಏನು ಮಿಸ್ಟರ್ ಕೃಷ್ಣಯ್ಯ, ಅವಳಿಗೆ ದುಡ್ಡು ಕಳಿಸಿಕೊಡ್ತೀರಾ, ಯಾವಾಗ ?"

"ನಿಮಗೆ ಅನುಭವ ಸಾಲದೂ ಶಾಂತಪ್ಪನೋರೆ! ಅವಳಿಗೆ ಈಗ ದುಡ್ಡು ಕೊಡೋಕೆ ಯಾರು ಹೋಗ್ತಾರೆ? ಅವಳನ್ನು ಇಲ್ಲಿಂದ ತೊಲಗಿಸೋಕೆ ಏನಾದರೂ ಉಪಾಯ ಮಾಡಬೇಕಾಗಿದ್ದಿತು. ಈ ಉಪಾಯ ಹೂಡಿದೆ. ಅವಳು ಇಲ್ಲಿಂದ ಹಾಳಾಗಿ ಹೋಗದಿದ್ರೆ ಕೂಲಿಯೋರು ಇವತ್ತು ಗಣಿಗೆ ಹೋಗ್ತಲೇ ಇರಲಿಲ್ಲ," ಎಂದು ತನ್ನ ಬುದ್ಧಿವಂತಿಕೆಗೆ ತಾನೇ ಗಹಗಹಿಸಿ ನಗತೊಡಗಿದ.

"ಹೌದು. ಆದರೆ ನೀವು ಅವಳಿಗೆ ಎಲ್ಲರೆದುರಿಗೆ ಹಾಗೆ ಮಾತುಕೊಟ್ಟು ಬಿಟ್ಟಿದೀರಿ. ಅವಳು ಪುನಃ ಬಂದು ಕೇಳೋದಿಲ್ಲವೆ ?"

"ಅವಳು ಕೇಳದ ಹಾಗೆ ನಾನು ನೋಡಿಕೊಳ್ತೀನೆ" ಎಂದು ಕೃಷ್ಣಯ್ಯ ನಕ್ಕ. ಅವನ ಆ ನಗೆಯಲ್ಲಿ ಭಯಂಕರ ತಂತ್ರವೊಂದರ ಛಾಯೆ ಅಡಗಿದ್ದಿತು.

"ಹಾಗೆಂದರೆ ?" ಘಾಬರಿಯಿಂದ ಶಾಂತಪ್ಪ ಕೇಳಿದ.

"ಅವಳು ಪುನಃ ನಾಳೆ ಹಣ ಕೇಳಲು ಬರುವಹಾಗಿದ್ದರೆ ತಾನೇ ?" ಎಂದು ಕೃಷ್ಣಯ್ಯ ಉಡುಪು ಧರಿಸಿಕೊಂಡು ಹೊರಡಲನುವಾದ.

"ನೀವು ಹೋಗಿ. ನಾನು ಅರ್ಧ ಗಂಟೆ ತಡವಾಗಿ ಬರ್ತೀನಿ," ಶಾಂತಪ್ಪನೆಂದ.

"ಬೇಗ ಬಂದುಬಿಡಿ. ತಡ ಮಾಡಬೇಡಿ" ಎಂದವನೇ ಕೃಷ್ಣಯ್ಯ ಹೊರಟುಹೋದ.

....ಶಾಂತಪ್ಪ ಹತ್ತಿರದಲ್ಲಿದ್ದ ಕುರ್ಚಿಯಲ್ಲಿ ಕುಕ್ಕರಿಸಿದ. ಕೃಷ್ಣಯ್ಯನ ಭಯಂಕರ ತಂತ್ರದ ಬಗ್ಗೆ ಅವನಿಗೆ ಭಯವಾಗಿತ್ತು. ಅವನಿಗೆ ಎದುರಿನ ಪ್ರಪಂಚವೇ ಕತ್ತಲುಕತ್ತಲಾದಂತಾಯಿತು. ಎದುರಿನ ಮೂಲೆಯಲ್ಲಿ ಶೇಖರಿಸಲಾಗಿದ್ದ ಗಣಿಯ ಸಲಕರಣೆಗಳು ಹಾರೆ, ಗುದ್ದಲಿ, ಪಿಕಾಸಿ, ಬಾಣಲೆ, ಸುತ್ತಿಗೆ ಚಕ್ರದ ಗಾಡಿಗಳು ಎಲ್ಲವೂ ರಕ್ತಮಯವಾದಂತೆ ಕಾಣಿಸಿದುವು. ಅವನು ನೋಡುತ್ತಿದ್ದಂತೆಯೇ ಅಲ್ಲಿಂದ ಛಿಲ್ಲನೆ ರಕ್ತ ಸುತ್ತಲೂ ಹಾರಿದಂತಾಯಿತು. ಚಕ್ರದ ಗಾಡಿಗಳಲ್ಲಿ ತುಂಬಿದ ರಕ್ತ, ಗಾಡಿ ಮಗುಚಿಕೊಂಡು ಚೆಲ್ಲಿಕೊಂಡಿತು. ಮನೆಯೇ ರಕ್ತದ ಕೆರೆಯಾಯಿತು. ಅವನ ಕಾಲುಗಳೆಲ್ಲಾ ಅದರಲ್ಲಿ ತೊಯ್ದುವು. ಹಾರಿದ ರಕ್ತ ಅವನ ಮೈಕೈಗಳಿಗೆಲ್ಲ ಲೇಪವಾದಂತಾಗಿದ್ದಿತು. ಆ ರಕ್ತದ ಕೆರೆಯಿಂದ ವೆಂಕಟಪ್ಪ ಎದ್ದು ಎದುರುಬಂದು ನಿಂತ.

"ನೀವೂ ಸಹ ಈ ರಕ್ತ ಸರೋವರ ಸೃಷ್ಟಿಸಲು ಇಟ್ಟಿಗೆ ಸುಡುತ್ತಿದ್ದೀರಿ" ಎಂದು ಕೇಳಿದ ವೆಂಕಟಪ್ಪ. ಅವನ ಮುಖದಲ್ಲಿ ಮೊದಲಿನ ಆ ವಿನಯವಿರಲಿಲ್ಲ; ಹುಲಿಯನ್ನೇ ತಿವಿದು ಕೊಲ್ಲುವಂತೆ ಕ್ರೋಧಗೊಂಡ ಹಸುವಿನಂತಿದ್ದಿತದು!

ಅದೇ ಕೆರೆಯಿಂದ ಲಚ್ಚ ತಲೆಯೆತ್ತಿದ. ಅವನ ತಲೆಯಿಂದ ಕೆನ್ನೀರು ಧಾರೆಧಾರೆಯಾಗಿಳಿಯುತ್ತಿದ್ದಿತು. ಅವನೂ ಹೇಳಿದ,

"ನಿಮಗೂ ಬಡವರ ರಕ್ತವೆಂದರೆ ಸಕ್ಕರೆಯ ಸಮಾನವಾಗಿದೆ!"

"ಹ್ಹ....ಹ್ಹ....ಹ್ಹ....ನೋಡಿ....ಈ ಸಂಕಟವನ್ನು ನೋಡಿ" ಎಂದು ಅವರಿಬ್ಬರೂ ಕೂಗಿಕೊಂಡರು. ಶಾಂತಪ್ಪ ಸುತ್ತಲೂ ನೋಡಿದ. ಅಲ್ಲಿ ಅವನಿಗೆ ಕಂಡುದು—

ಬರಿ ಘಾಯಗಳು, ರಕ್ತ ಸುರಿವ ಕೂಲಿಗಾರರ ಹುಣ್ಣುಗಳು,

ಬಿಸಿಲಿನಲ್ಲಿ, ಹೊರಲಾರದೇ ತತ್ತರಿಸುತ್ತಾ, ಅದಿರು ತುಂಬಿದ ಬಾಣಲೆಗಳನ್ನು ಹೊತ್ತ ಬಾಲಕರು,

ತಾಯಿಯರು ತೊರೆದುಹೋದ, ಹಸಿದ ಹೊಟ್ಟೆಯಲ್ಲಿ ಪ್ರಲಾಪಿಸುತ್ತಿರುವ ಕೂಲಿಗಾರ್ತಿಯರ ಕೂಸುಗಳು,

ವಾರವೆಲ್ಲವೂ ದುಡಿದರೂ ಅರ್ಧ ಹೊಟ್ಟೆ ತಿಂದು ಗಣಿಗೆ ಕೆಲಸಕ್ಕೆ ಹೊರಡುತ್ತಿದ್ದ ಕೂಲಿಗಾರರು,

ಆಪಘಾತಗಳಿಗೆ ಸಿಲುಕಿ ಸತ್ತುಹೋದ ಕೂಲಿಗಾರರ ಹೆಂಡಿರು ಮಕ್ಕಳ

ಆರ್ತನಾದ. ಅದೇ ರಕ್ತದಲ್ಲಿ ತೇಲುತ್ತಿದ್ದ ಲಚ್ಚನ ಮಗುವಿನ ಶವ, ಅವನ ಹೆಂಡತಿಯು ಚೂರಿಯೇಟು ತಿಂದು ಸಾಯಲು ವಿಲಿವಿಲಿ ಒದ್ದಾಡುತ್ತಿರುವುದು!........

"ನೋಡಿದಿರಾ ಸಾಹುಕಾರ್ರೆ ?....ಸಾಕೆ ಇನ್ನೂ ನರಕವನ್ನು ನೋಡುತ್ತೀರಾ? ಇವೆಲ್ಲ ನೀವೇ ಸೃಷ್ಟಿಸಿರುವ ನರಕ....ಇಲ್ಲಿ ನೋಡಿ ಬಿಸಿಲಿನ ಬೆಂಕಿಯಲ್ಲಿ ಬೇಯಿಸುತ್ತಿದ್ದೀರಿ, ಕಾದ ನೆಲದ ಮೇಲೆ ನಡೆಸುತ್ತಿದ್ದೀರಿ, ಹಸಿದ ಹೊಟ್ಟೆಯಲ್ಲಿ ದುಡಿಸುತ್ತಿದ್ದೀರಿ ಕಾದ ಕಬ್ಬಿಣವನ್ನು ಕೈನಲ್ಲಿ ಹಿಡಿಸುತ್ತಿದ್ದೀರಿ........!"

"ಸಾಕು!....ನೋಡಲಾರೆ....ಸಾಕು....!' ಶಾಂತಪ್ಪ ಕೂಗಿಕೊಂಡ.... ಅವನು ಕಣ್ಣುಜ್ಜಿಕೊಂಡು ಪುನಃ ನೋಡಿದಾಗ ಅಲ್ಲಿ ಕತ್ತಲೆಯಿರಲಿಲ್ಲ, ಕೆಂಪಿರಲಿಲ್ಲ. ಎದುರಿಗೆ ಬಾಗಿಲಿನಾಚೆ ಬಿಸಿಲು ಬೆಳ್ಳಗೆ ಬೆಳಗುತ್ತಿದ್ದಿತು. ಪಕ್ಕದಲ್ಲಿ ನಿಂತಿದ್ದ ಅಡಿಗೆಯವನು ಕೇಳುತ್ತಿದ್ದ,

"ಸಾರ್, ಇದೇನು ಸಾರ್ ಇಷ್ಟೊಂದು ಬೆವತಿದ್ದೀರಿ. ಜ್ವರ ಬಂದಿರೋ ಹಾಗಿದೆ. ಹಾಸಿಗೆ ಹಾಸಿದೀನಿ ಮಲಗಿಕೊಂಡುಬಿಡಿ."

ಆದರೆ ಶಾಂತಪ್ಪ ತಕ್ಷಣ ತನ್ನ ಪೆಟ್ಟಿಗೆಯಿಂದ ಐವತ್ತು ರೂಪಾಯಿಗಳನ್ನು ತೆಗೆದು ಅಡಿಗೆಯವನ ಕೈಗೆ ಕೊಟ್ಟು ಹೇಳಿದ, "ಈ ಐವತ್ತು ರೂಪಾಯಿಗಳನ್ನ ಲಚ್ಚನ ಹೆಂಡ್ತೀಗೆ ಕೊಟ್ಟು ಬನ್ನಿ ಮೊದಲು. ಕಂಪೆನಿಯ ಮೇನೇಜರಲ್ಲ, ಡೈರೆಕ್ಟರೇ ಬಂದು ಕೇಳಿದರೂ ಸರಿಯಾಗಿ ಹೇಳ್ತೀನಿ. ಇದು ನನ್ನ ದುಡ್ಡು....ನನಗೆ ಇಷ್ಟಬಂದ ಹಾಗೆ ಖರ್ಚು ಮಾಡ್ತೀನಿ."

ಅವನು ಕಂಡ ಆ ಕಲ್ಪನಾಚಿತ್ರಗಳ ಆಘಾತದಿಂದ ಅವನು ಚೇತರಿಸಿಕೊಳ್ಳಲಾಗಲೇ ಇಲ್ಲ.

## ೫೫

# ಕೃಷ್ಣಯ್ಯನ ಕೃತ್ರಿಮ

ಲಚ್ಚನ ಹೆಂಡತಿಗೆ ಪರಿಹಾರ ಹಣವಾಗಿ ಐವತ್ತು ರೂಪಾಯಿಗಳನ್ನು ಕೊಟ್ಟುದು ಅವನ ಅಪರಾಧವಾಗಿದ್ದಿತು. ಸತ್ತುಹೋದ ಕೂಲಿಗಾರರ ಹೆಂಡಿರು ಮಕ್ಕಳಿಗೆ ಪರಿಹಾರ ನೀಡುವುದು ಗಣಿ ಮಾಲಿಕರ ಪದ್ಧತಿಯಾಗಿರ

ಲಿಲ್ಲ: ಯಾವನಾದರೂ ಸತ್ತುಹೋದಾಗ ಒಂದು ಬಾರಿ ಕರುಣೆಯಿಂದ ಅವನ ಹೆಂಡತಿಗೆ ಸ್ವಲ್ಪ ಪರಿಹಾರದ್ರವ್ಯವನ್ನು ಕೊಟ್ಟರೆ ಪ್ರತಿಯೊಬ್ಬ ಕೂಲಿಗಾರ ಸತ್ತಾಗಲೂ ಅವನ ಹೆಂಡಿರು ಮಕ್ಕಳು ತಮಗೂ ಆ ಸೌಲಭ್ಯವನ್ನು ಕೇಳುವ ದುರಭ್ಯಾಸ ಬಂದೀತೆಂದು ಶಂಕಿಸಿದ್ದರು ಮಾಲೀಕರು. ಆದ್ದರಿಂದ ತನ್ನ ಸ್ವಂತ ಹಣವನ್ನೇ ಕೊಟ್ಟರೂ ಸಹ, ಕಂಪೆನಿಯ ಪದ್ಧತಿಯನ್ನು ಉಲ್ಲಂಘಿಸಿದುದು ಶಾಂತಪ್ಪನ ದೊಡ್ಡ ಅಪರಾಧ. ತನ್ನ ಹಣವನ್ನೇ ಅವನು ಕೊಟ್ಟುದರಿಂದ, ಅವನು ಕೂಲಿಗಾರರ ಪಕ್ಷಪಾತಿಯೆಂದೂ, ಅವರೆದುರಿಗೆ ಕಂಪೆನಿಗೆ ಅಪಮಾನ ಮಾಡಲು ಹೀಗೆ ಅವನು ಔದಾರ್ಯ ತೋರಿದನೆಂಬ ಭಾವನೆಯೂ ಉದಯವಾಗಿದ್ದಿತು.

ಇವೆಲ್ಲ ಭಾವನೆಗಳು ಉದಯವಾಗಲು ಕಾರಣ ಕೃಷ್ಣಯ್ಯ. ಅತಿ ಕಾಮಿಯಾದವನು ತನ್ನ ಕಣ್ಣೆದುರು ಕಾಣುವ ಸುಂದರ ತರುಣಿಯರೆಲ್ಲರೂ ತನ್ನವರೇ ಆಗಬೇಕೆಂದು ಆಶೆಪಡುತ್ತಾನೆ; ತಾನು ಕಂಡ ಸುಂದರಿಯು ತನ್ನ ಆಲಿಂಗನಕ್ಕೊಳಪಡಬೇಕೆಂದು ಅದನ್ನು ಸಾಧಿಸಲು ಸದಾ ತಂತ್ರಗಳನು ಹೂಡುತ್ತಿರುತ್ತಾನೆ. ಆದರೆ ತಾನು ಬಯಸಿದ ತರುಣಿಯು ಬೇರೆಯವನತ್ತ ಕಣ್ಣು ತಿರುಗಿಸಿದರೆ ಅವನ ಮೇಲೆ ಕ್ರೋಧಗೊಳ್ಳುವನು ಈ ಅತಿ ಕಾಮಿ. ಗಣಿಯಲ್ಲಿ ಹಲವು ಸುಂದರಿಯರು, ಕೂಲಿಗಾರ್ತಿಯರು, ಶಾಂತಪ್ಪನನ್ನು ಹಲವಾರು ಬಾರಿ ಓರೆಗಣ್ಣಿನಿಂದ ನೋಡುತ್ತಿದ್ದರು. ಹೇಗಾದರೂ, ಯಾವುದಾದರೂ ನೆಪದಿಂದ ತಮ್ಮ ಮೈಯನ್ನವನಿಗೆ ಸೋಂಕಿಸಲು ಹಾತೊರೆಯುತ್ತಿದ್ದರು. ಅವನು ಅವರತ್ತ ಸುಳಿದಾಗ ಮೈಯೆಲ್ಲ ಕಣ್ಣಾಗಿ ಅವನನ್ನೇ ನೋಡುತ್ತಿದ್ದರು. ಅವನನ್ನು ಏನಾದರೂ ಕಾರಣದಿಂದ ಮಾತನಾಡಿಸುತ್ತಿದ್ದರು.

"ಸಾವ್ಕಾರ್ರೆ ಈ ಕಲ್ಲು ಚೆನ್ನಾಗೈತಾ?"

"ಇದು ಮ್ಯಾಂಗನೀಸೇ ಹೌದಾ?"

"ಇದು ಕಬ್ಬಿಣಾ ಅಲ್ವ?"

"ಇದು ಗೋರಿ ಕಲ್ಲ?"

"ಈ ಕಲ್ಲು ಇಷ್ಟು ದಪ್ಪ ಒಡೀಬೌದಾ?"

ಅವರು ಅವನನ್ನು ಕೇಳುತ್ತಿದ್ದ ಆ ಪ್ರಶ್ನೆಮಾಲಿಕೆಗಳು, ಹಾಗೆ ಕೇಳುವಾಗ ಅವರ ಮುಖದಲ್ಲಿ ಹೆಚ್ಚುತ್ತಿದ್ದ ಸೌಂದರ್ಯ, ಅವನು ಎದುರು ನಿಂತಾಗ ಅವರು ಬೇಕೆಂದೇ ಪ್ರದರ್ಶಿಸುತ್ತಿದ್ದ ಅಂಗರಾಗ, ಇವನ್ನು ಕೃಷ್ಣಯ್ಯನೂ

ಕಂಡಿದ್ದ ಹಲವಾರು ವೇಳೆ; ಅಂತಹ ವೇಳೆಯಲ್ಲಿ ತಾಳ್ಮೆ ತಾಳುವುದೇ ಅವನಿಗೊಂದು ಪ್ರಯಾಸವಾಗುತ್ತಿದ್ದಿತು!

ಅವನನ್ನು ಕಂಡಾಗ ಸೋಮ್ಲಿ ಹುಚ್ಚಾಗುತ್ತಿದ್ದಳು. ಅವನು ಅದಿರಿನ ರಾಶಿಯ ಬಳಿ ನಿಂತಿದ್ದರೆ ಅದಿರನ್ನು ಬೇಗ ಬೇಗ ಒಡೆದು ಬಾಣಲೆಯಲ್ಲಿ ತುಂಬಿ ಅನೇಕ ಬಾರಿ ರಾಶಿಯತ್ತ ಹೋಗಿ ಅದಿರನ್ನು ಚೆಲ್ಲಿ ಬರುತ್ತಿದ್ದಳು. ಹಾಗೆ ಚೆಲ್ಲುವಾಗ ಬೇಕೆಂದೇ ತನ್ನ ದುಪ್ಪಟ್ಟವನ್ನು ಜಾರಿಸಿಕೊಂಡು ತನ್ನ ವಕ್ಷಸ್ಥಲವನ್ನು ಕಾಣಿಸಿಕೊಳ್ಳುತ್ತಿದ್ದಳು. ಹಲವಾರು ಅನವಶ್ಯಕ ಪ್ರಶ್ನೆಗಳನ್ನು ಕೇಳುತ್ತಿದ್ದಳು. ಅವನು ಬೇಸರಪಟ್ಟುಕೊಳ್ಳದಿದ್ದರೂ ಒಂದೆರಡು ಮಾತಿನ ಉತ್ತರ ಕೊಡುತ್ತಿದ್ದ. ಕೃಷ್ಣಯ್ಯ ಅವಳ ಮನೆಗೆ ಹೋದಾಗ ಹಲವಾರು ಬಾರಿ ಹೇಳಿದ್ದಳಂತೆ,

"ಸಾವ್ಕಾರ್ರೆ, ಆ ಹೊಸ ಸಾವ್ಕಾರು ನಮ್ಮ ಮನೆಗೆ ಒಂದಿನಾನೂ ಬಂದಿಲ್ಲ. ಈವತ್ತು ಸಾಯಂಕಾಲ ಬರೋಕೆ ಹೇಳಿ ಸಾವ್ಕಾರ್ರೆ!"

"ಅವನನ್ನ ನಿನ್ನ ಮನೆಗೆ ಬರೋಕೆ ನಾನು ಯಾಕೆ ಹೇಳಬೇಕು ?" ಸೋಮ್ಲಿಯ ಮಾತನ್ನು ಸಹಿಸಲಾರದೇ ಕೃಷ್ಣಯ್ಯ ಹೇಳುತ್ತಿದ್ದ.

"ಯಾಕೆ ಹೇಳಬಾರದು. ನಿಮಗೆ ಅವರನ್ನು ಕಂಡರೆ ಆಗೋಕಿಲ್ಲವ ?"

"ಹಾಗಂದರೇನು ?.....ಆಗದೇ ಏನು.....ಎಷ್ಟೇ ಆದರೂ ಅವನು ನನ್ನ ಕೈಕೆಳಗಿನವನು."

"ಎಲ್ಲಾ ಸುಳ್ಳು ಹೇಳ್ತೀರಿ. ಅವರೇ ಮ್ಯಾನೇಜರಂತೆ...."

"ತಲೆಯೆಲ್ಲಾ ಮಾತಾಡಬೇಡ. ನಿಂಗೆ ಗೊತ್ತಾಗೋಲ್ಲ!...." ಎಂದು ಕೃಷ್ಣಯ್ಯ ಮುಂದುವರೆದಿದ್ದನಂತೆ.

ಈ ಹಲವಾರು ಕಾರಣಗಳು ಸೇರಿ, ಶಾಂತಪ್ಪನ ತಪ್ಪುಗಳನ್ನು ಹಿರಿದುಗೊಳಿಸುವುದು ಕೃಷ್ಣಯ್ಯನಿಗೆ ಪ್ರಿಯವಾಗಿದ್ದ ವಿಷಯಗಳಾಗಿದ್ದುವು.

ಅವನು ಮಾರನೆಯ ದಿನವೇ ಬೆಂಗಳೂರಿಗೆ ಹೊರಟುಹೋದ.

* * * *

ಮ್ಯಾಂಗನೀಸಿನ ಪೇಟೆಯಲ್ಲಿ ಏರುಪೇರುಗಳಾಗಿದ್ದುವು. ಭಾರತದ ಈ ಅದಿರಿಗೆ ಪ್ರಮುಖ ಗಿರಾಕಿಯಾಗಿದ್ದ ಅಮೆರಿಕಾ, ಜಪಾನ್ ರಾಷ್ಟ್ರಗಳು ಇದ್ದಕ್ಕಿದ್ದಂತೆ ಕೊಳ್ಳುವುದನ್ನು ನಿಲ್ಲಿಸಿದ್ದರಿಂದ, ಭಾರತದಲ್ಲಿ ಲಕ್ಷಾಂತರ ಟನ್ ಅದಿರು ರಾಶಿ ಬಿದ್ದಿತು. ಆರಕ್ಕೆ ಮೂರೆಂದರೂ ಕೇಳುವವರಿಲ್ಲದೆ ಕೋಟ

ಕೋಟಿ ರೂಪಾಯಿಗಳ ಅದಿರು, ಗಣಿಗಳಲ್ಲಿ, ರೈಲ್ವೆ ನಿಲ್ದಾಣಗಳಲ್ಲಿ, ಬಂದರ ಗಳಲ್ಲಿ ಬೆಟ್ಟದಂತೆ ಬಿದ್ದಿತ್ತು.

ಇದಕ್ಕೆ ಕಾರಣವಾದರೂ ಸುಸ್ಪಷ್ಟವಿತ್ತು. ಹೆಚ್ಚು ಹೆಚ್ಚು ಹಣ ಕೊಟ್ಟು ಕೊಂಡುಕೊಳ್ಳುತ್ತಿರುವರೆಂದು, ಅಮೆರಿಕ, ಜರ್ಮನ ಗಿರಾಕಿಗಳಿಗೆ ಲಕ್ಷಾಂತರ ಟನ್ನುಗಳ ಮಾಲನ್ನು ಗಣಿ ಮಾಲೀಕರು ಮಾರಿದ್ದರು. ತಮಗೆ ಬೇಕಾದುದ ಕ್ಕಿಂತಲೂ ಹೆಚ್ಚಾಗಿ ಕೊಂಡು ಈ ರಾಷ್ಟ್ರೀಯರು, ಇನ್ನೂ ಒಂದೆರಡು ವರ್ಷ ಗಳವರೆಗೆ ಉಳಿಯುವಷ್ಟನ್ನು ಕೂಡಿಟ್ಟಿದ್ದರು. ಮೇಲೆ ಬಿದ್ದು ಮ್ಯಾಂಗ ನೀಸ್ ಮಾರಾಟಗಾರರು ಅದಿರನ್ನು ಮಾರಿದಾಗ ಅವರು ಹೇಗೆ ಬೇಡ ವೆಂದಾರು ?

ಕೇಳುವವರಿಲ್ಲದೇ ಬಿದ್ದ ಅದಿರಿನ ರಾಶಿಯನ್ನು ಕಂಡು ರೋಗಗ್ರಸ್ಥರಾ ದರುಕೆಲವುಗಣಿಯ ಮಾಲೀಕರು. ಹಲವರು ಭೂಗರ್ಭ ಶಾಖೆಯಲ್ಲಿನ ಅಧಿ ಕಾರಿಗಳನ್ನು ಹೇಗೋ ಬುಟ್ಟಿಗೆ ಹಾಕಿಕೊಂಡು ಗಣಿಗಳನ್ನು ಪಡೆದು, ಅದಿರು ತೆಗೆದು ಮಾರಿ ನಾಯಿ ಕೊಡೆಗಳಂತೆ ಸಿರಿವಂತರಾಗಿದ್ದ ಹಲವು ಗಣಿ ಮಾಲೀ ಕರು, ಹೆಚ್ಚು ಹೆಚ್ಚು ಹಣದಾಸೆಯಿಂದ ಇದ್ದ ಹಣವನ್ನೆಲ್ಲ ಹೊಸ ಹೊಸ ಗಣಿಗಳಲ್ಲಿ ವಿನಿಯೋಗಿಸಿದ್ದರು. ಹೊಸ ಅದಿರು ಹಳೆಯ ಬೆಲೆಗೇ ಮಾರಾಟ ವಾಗಿದ್ದಿದ್ದರೆ ಕೋಟ್ಯಧೀಶರಾಗುತ್ತಿದ್ದವರು ಹಲವರಿದ್ದರು. ಆದರೆ ಬೆಲೆಗಳು ಇದ್ದಕ್ಕಿದ್ದಂತೆ ಬಿದ್ದುಹೋಗುವುದಿರಲಿ, ಕೊಳ್ಳುವವರೇ ಇರದಾದುದರಿಂದ, ಆ ನಾಯಿ ಕೊಡೆ ಶ್ರೀಮಂತರು ಹಲವರು ತಮ್ಮ ಬಂಗಲೆ, ಕಾರುಗಳನ್ನು ಉಳಿಸಿಕೊಂಡು ಅಂತಸ್ಥನ್ನು ಕಾಪಾಡಿಕೊಳ್ಳುವುದೇ ಕಷ್ಟಕರವಾಗಿದ್ದಿತು. ಇನ್ನು ಅವರು ಕೂಲಿಗಾರರಿಗೆ ಕೂಲಿಗಳನ್ನೇನು ಕೊಟ್ಟಾರು ? ಕೂಲಿಗಾರರಿಗೆ ಹಣವನ್ನು ಕೊಡುವ ಬದಲು ಕಾರ್ಮಿಕರ ಹಿತಗಳನ್ನು ಕಾಪಾಡುವ ಅಧಿಕಾ ರಿಗಳಾದ'ಮೈನಿಂಗ್ ಇನಸ್ಪೆಕ್ಟರ್' 'ಲೇಬರ್ ಕಮೀಷನರ್' ಮೊದಲಾದವರಿಗೆ ಲಂಚ ಕೊಟ್ಟು ಕೂಲಿಗಾರರ ಬಗ್ಗೆ ಅವರು ಚಕಾರವೆತ್ತದಂತೆ ಮಾಡಿದ್ದರು.

ಇಂತಹ ಸ್ಥಿತಿ ರಾಮನಾಯ್ಕನ ಹಳ್ಳಿಯ ಗಣಿಯ ಸಾಹುಕಾರರಿಗೂ ಒದಗಿದ್ದಿತು. ತಮ್ಮ ಗಣಿಯಲ್ಲಿ ಶ್ರೇಷ್ಠ ದರ್ಜೆಯ ಅದಿರು ತೆಗೆದುಕೊಡುತ್ತೇ ವೆಂದು ಆಶ್ವಾಸನೆಯಿತ್ತ ಸುಬ್ಬಣ್ಣ, ಮಾಣಿಕ್ಯಂ, ಚನ್ನಯ್ಯರ ಮಾತು ನಂಬಿ ಭಾರಿ ಕಂಪೆನಿಯೊಂದರಲ್ಲಿ ಒಪ್ಪಂದ ಮಾಡಿಕೊಂಡು ಹತ್ತಾರು ಸಾವಿರ

ರೂಪಾಯಿ ಮುಂಗಡ ತೆಗೆದುಕೊಂಡಿದ್ದರಂತೆ. ಆದರೆ ತೆಗೆದ ಅದಿರು ಶ್ರೇಷ್ಠ ದರ್ಜೆಯದಾಗಿರದೇ ಮಧ್ಯಮ ದರ್ಜೆಯದಾಗಿದ್ದಿತು. ಅದನ್ನೇ ಮಾರಾಟ ಮಾಡಿ ಬಂದಷ್ಟು ಲಾಭಪಡೆಯೋಣವೆಂದು ಅವರು ಮುಂಬಯಿ ಮದ್ರಾಸು ಗಳಿಗೆ ಅಲೆಯುತ್ತಿರುವಷ್ಟರಲ್ಲಿ ಅದಿರು ಕೊಳ್ಳುವವರೇ ಮಾಯವಾಗಿದ್ದರು.

ಸಾಹುಕಾರರು ಮುಂಗಡ ಪಡೆದ ಹಣ ಹಿಂದಿರುಗಿಸಲು ಅವರ 'ಬ್ಯೂಕು' 'ಕ್ರಿಸ್ಲರು' ಕಾರುಗಳನ್ನೂ ಲಾರಿಗಳನ್ನೂ ಮಾರಬೇಕಾಯಿತು. ಈ ಸಮಯದಲ್ಲಿ ಲಾರಿ, ಕಾರುಗಳ ಪೇಟೆಯಲ್ಲಿ ಎಲ್ಲೆಲ್ಲಿಯೂ ಹೊಸಹೊಸ ಲಾರಿ ಗಳು, ಹೊಸಹೊಸ 'ಬ್ಯೂಕು' 'ಕ್ರಿಸ್ಲರು' 'ಕ್ಯಾಡಿಲಾಕ್'ಗಳು ಗಿರಾಕಿಗಳನ್ನು ಹುಡುಕಿಕೊಂಡು ತಿರುಗುತ್ತಿದ್ದುವು. ಸಾಹುಕಾರರು ಮಠದ ದೇವಾಲಯಕ್ಕೆ ಸ್ವಾಮಿಗಳಿಗೆ ಕೊಡುತ್ತಿದ್ದ ಕಾಣಿಕೆಯನ್ನು ನಿಲ್ಲಿಸಿದರು; ಕೂಲಿಗಾರರಿಗೆ ಮುಖ ತೋರಿಸಲಾರದೇ ರಾಮನಾಯ್ಕನಹಳ್ಳಿಗೇ ಬರುವುದನ್ನು ಬಿಟ್ಟು ಬಿಟ್ಟರು. ಅರ್ಧಕ್ಕರ್ಧ ಕೂಲಿಗಾರರನ್ನು ಕೆಲಸಕ್ಕೆ ಬರಬೇಡಿರೆಂದು ಜೇರೆ ಹೇಳಿದ್ದರು. ಸುಬ್ಬಣ್ಣ, ಮಾಣಿಕ್ಯಂರ ಸಂಬಳವನ್ನು ಅರ್ಧಕ್ಕರ್ಧ ಕಡಿಮೆ ಮಾಡಿದರು; ಗೋಪಾಲಯ್ಯನಿಗೆ ಬರಬೇಡವೆಂದರು. ಘೂರ್ಖಾ ಮತ್ತು ಪಠಾಣ ಕಾವಲುಗಾರನನ್ನು ಮನೆಗೆ ಕಳಿಸಿದರು.

ಈ ಎಲ್ಲ ವಿವರಗಳೂ ಶಾಂತಪ್ಪನಿಗೆ ತಿಳಿದುವು. ಅದರೊಡನೆಯೇ ಅವನಿಗೆ ಕಂಪೆನಿಯ ಬೆಂಗಳೂರು ಕಚೇರಿಯಿಂದ ಪತ್ರವೊಂದು ಬಂದಿದ್ದಿತು:

ಅದಿರಿನ ದರಗಳೆಲ್ಲಾ ಕಡಿಮೆಯಾಗಿಬಿಟ್ಟಿರುವುದರಿಂದ, ಕಡಿಮೆ ದರ್ಜೆಯ ಅದಿರಿಗೆ ಬೆಲೆಯೇ ಇಲ್ಲದಿರುವುದರಿಂದ, ಕಡಿಮೆ ಅದಿರು ದೊರೆ ಯುವ ಹೊನ್ನೂರಿನ ಗಣಿಯಲ್ಲಿ ಕೆಲಸ ಕಡಿಮೆ ಮಾಡಬೇಕು. ಭೂಗರ್ಭ ಶಾಸ್ತ್ರಜ್ಞ ಓಗಲೆಯವರ ಅಭಿಪ್ರಾಯದಂತೆ ಅದು ಶ್ರೇಷ್ಠ ದರ್ಜೆಯ ಅದಿರು ದೊರೆಯುವ ಸ್ಥಳವಾದರೂ, ಹೊಸಹೊಸ ಗಣಿಗಳನ್ನು ಹುಡುಕಿ ತೋಡುವುದು ಸಧ್ಯಕ್ಕೆ ವೆಚ್ಚದ ಬಾಬು! ಆದ್ದರಿಂದ ಹೊನ್ನೂರಿನ ಗಣಿಗಳ ಕೆಲಸವನ್ನು ಬಹಳ ಕಡಿಮೆ ಮಾಡಿ, ಅರ್ಧಕ್ಕಿಂತಲೂ ಹೆಚ್ಚು ಕೂಲಿಗಾರರನ್ನು ಮನೆಗೆ ಕಳುಹಿಸಿ. ವಹಿವಾಟನ್ನು ಕೃಷ್ಣಯ್ಯನಿಗೆ ವಹಿಸಬೇಕು—ಇದು ಪತ್ರದ **ಸಾರಾಂಶ.**

ಇದು ಬಂದನಂತರ ಮೂರನೆಯ ದಿನವೇ ಕೃಷ್ಣಯ್ಯ ಬೆಂಗಳೂರಿನಿಂದ ರಾಮನ್ ಬರೆದುಕೊಟ್ಟಿದ್ದ ಪತ್ರವೊಂದನ್ನು ತಂದುಕೊಟ್ಟ. ಆ ಪತ್ರವನ್ನು

ನೋಡಿ ಶಾಂತಪ್ಪನಿಗೆ ಉಂಗುಷ್ಟದಿಂದಲೇ ಕೋಪದ ಉರಿ ಏರಿತು. ಆ ಪತ್ರವನ್ನು ಪುನಃ ಪುನಃ ಓದಿದ. ಆ ಕೋಪದುರಿಗೆ ತುಪ್ಪ ಸುರಿದಂತೆ ಕೃಷ್ಣಯ್ಯನೂ ಕೇಳಿದ,

"ಏನು ಬರೆದಿದ್ದಾರೆ ಶಾಂತಪ್ಪನೋರೆ ?"

"ಏಕೆ! ಹೇಳಿ ಬರೆಸಿದವರೇ ನೀವಾಗಿರುವಾಗ ಏನು ಬರೆದಿದ್ದಾರೇಂತ ನಿಮಗೆ ಗೊತ್ತಿಲ್ಲವೆ ?"

"ನೀವು ಇನ್ನೂ ನನ್ನನ್ನು ದೂಷಿಸುವುದು ಬಿಟ್ಟಿಲ್ಲ! ಹೋಗಲಿ ಏನಿದೆ ಹೇಳಿ ?"

"ನೀವೇ ನೋಡಿ" ಎಂದು ಶಾಂತಪ್ಪ ಆ ಪತ್ರವನ್ನು ಕೃಷ್ಣಯ್ಯನೆದುರಿಗೆ ಬಿಸುಟ.

ಶಾಂತಪ್ಪನು ಲಚ್ಚನ ಹೆಂಡತಿಗೆ ಪರಿಹಾರ ದ್ರವ್ಯವನ್ನು ಕೊಟ್ಟುದು, ಮಹಾಪರಾಧವಾಗಿದ್ದಿತು. ಆದ್ದರಿಂದ, ಅವನು ಹೊನ್ನೂರಿನ ಗಣಿಯ ಮೇನೇಜರಾಗಿರಲು ಅಸಮರ್ಥನಾಗಿದ್ದ. ಈ ತಪ್ಪಿಗಾಗಿ ಅವನನ್ನು, ಕಂಪೆನಿಯವರು ಹೊಸದಾಗಿ ಕೊಂಡಿರುವ ಕೋಣಸಂದ್ರದ ಬಳಿಯ ಗಣಿಗೆ ವರ್ಗಾಯಿಸಿದ್ದರು. ಅಲ್ಲಿಯ ಕಂಟ್ರಾಕ್ಟರು ಕೃಷ್ಣಶೆಟ್ಟಿಯ ಕೈಕೆಳಗೆ, ಅವನು ದುಡಿಯಬೇಕು—ಇದು ಪತ್ರದ ಅರ್ಥ.

"ಈ ಕೃಷ್ಣಶೆಟ್ಟಿ ಯಾರು ?" ಶಾಂತಪ್ಪ ಅಸಹನೆಯಿಂದ ಕೇಳಿದ.

"ಹ್ಹ....ಹ್ಹ....ಹ್ಹ........ನಿಮಗೆ ಗೊತ್ತಿಲ್ಲವೆ? ನಾನೇ ಕೃಷ್ಣಶೆಟ್ಟಿ, ಕೃಷ್ಣಯ್ಯ ಅಂತ ರಾಮುನ್ ನನ್ನನ್ನ ವಿಶ್ವಾಸಕ್ಕೆ ಕರೀತಾರೆ ಅಷ್ಟೆ."

"ಓಹೋ, ನೀವು ಶೆಟ್ಟರೋ. ರಾಜಕೀಯವನ್ನೇ ವ್ಯಾಪಾರವಾಗಿ ಮಾಡಿಕೊಂಡಿದ್ದ ಶೆಟ್ಟರು."

"ನೋಡಿ ಶಾಂತಪ್ಪನೋರೆ. ಈ ವಿಷಯ ಬಿಟ್ಟುಬಿಡಿ. ಬೇರೆ ಮಾತಾಡೋಣ. ನಾನು ಈಗ ಕೋಣಸಂದ್ರದ ಗಣಿಯಲ್ಲಿ ಕಂಪೆನಿಯಿಂದ ಕಂಟ್ರಾಕ್ಟು ತೆಗೆದಿದ್ದೀನಿ. ನಾನು ಈ ವಾರವೇ ಕೆಲಸ ಪ್ರಾರಂಭಿಸಬೇಕು. ನೀವು ಯಾವಾಗ ಹೊರಡುವಿರಿ ಹೇಳಿ. ಇನ್ನುಮೇಲೆ ನೀವು ಕಂಪೆನಿಯ ನೌಕರರಲ್ಲ ನನ್ನ ನೌಕರರು. ನನ್ನ ಕೈಕೆಳಗೆ....!"

ಕೃಷ್ಣಯ್ಯನ ಒಂದೊಂದೂ ಮಾತು ಶಲ್ಯದಂತೆ ಶಾಂತಪ್ಪನನ್ನಿರಿದುವು. ರಾಮುನ್, ತನಗೆ ಅಪಮಾನ ಮಾಡಲೆಂದೇ ಕೃಷ್ಣಯ್ಯನ ಕೈಕೆಳಗೆ ಕೆಲಸ

ಮಾಡಬೇಕೆಂದು ಬರೆದಿದ್ದಾನೆ. ಆದರೆ ಇದೆಂತಹ ಕ್ಷುದ್ರ ಕಂಪೆನಿ ? ಕಂಪೆನಿಯ ನೌಕರರು ಕೇವಲ ಕಂಟ್ರಾಕ್ಟರೊಬ್ಬನ ಕೈಕೆಳಗೆ ಹೋಗಿ ದುಡಿಯಬೇಕೆಂಬುವ ನೀತಿಯೆಂತಹುದಿದು ? ರಾಮುನ್ ಇಂತಹ ನಡತೆಹೀನನೆ, ಕೃಷ್ಣಯ್ಯನ ಸ್ನೇಹ ಅವನನ್ನು ಇಂತಹ ಹೀನಕೃತ್ಯಕ್ಕಿಳಿಸಿತೆ ?

"ನೀವು ಇನ್ನು ಮೇಲೆ ನಾನು ಹೇಳಿದಂತೆ ಕೇಳಿಕೊಂಡು...." ಕೃಷ್ಣಯ್ಯನ ಮಾತುಗಳು ಶಾಂತಪ್ಪನ ವಿಚಾರಸರಣಿಯನ್ನು ಕಡಿದುವು.

"ನನ್ನಂತಹವನನ್ನು ನೌಕರಿಗೆ ತೆಗೆದುಕೊಳ್ಳುವುದಕ್ಕೂ ಯೋಗ್ಯತೆ ಬೇಕು !" ಶಾಂತಪ್ಪ ತಾತ್ಸಾರದಿಂದ ಹೇಳಿದ.

"ಏನು ನೀವು ಹೇಳುತ್ತಿರುವುದು. ಕಂಪೆನಿಯ ಆಜ್ಞೆ ಅದು !"

"ತಮ್ಮ ಎಲ್ಲೆ ಮೀರಿ ಆಜ್ಞೆಮಾಡುವ ಕಂಪೆನಿಗೆ ಬೆಲೆಯಿಲ್ಲ."

"ಹಾಗೆಂದರೆ ?"

"ರಾಮುನ್ ಈ ಆಜ್ಞೆ ಬರೆಯುವ ಮುಂಚೆ ಯೋಚಿಸಬೇಕಾಗಿತ್ತು. ನಾನು ಸೇರಿದ್ದು ಕಂಪೆನಿಯ ನೌಕರನಾಗಿ. ನನ್ನನ್ನು ಬೇರೊಬ್ಬನ ನೌಕರನಾಗಿ ಹೋಗಬೇಕೆಂದು ಬರೆಯಲು ಅವರಿಗೆ ಯಾವ ಅಧಿಕಾರವಿದೆ ? ನನಗೆ ವೇತನಕೊಡುವ ಯೋಗ್ಯತೆಯಿಲ್ಲದಿದ್ದರೆ ಬೇಡವೆನ್ನಬೇಕಿದ್ದಿತು. ಈ ಸಲ್ಲದ ವ್ಯವಹಾರವೇಕೆ ? ರಾಮುನ್‌ಗೆ ಇಂತಹ ದೊಡ್ಡ ಕಂಪೆನಿಯ ಮೇನೇಜರಾಗಿರುವ ಯೋಗ್ಯತೆಯೇ ಇಲ್ಲ !" ಶಾಂತಪ್ಪ ಕಣ್ಣುಗಳನ್ನು ಕೆಂಡಮಾಡಿಕೊಂಡು ಹೇಳಿದ.

"ನೀವು ರಾಮುನ್ ಅವರನ್ನು ಬಯ್ಯುತ್ತಿದ್ದೀರಿ ! ಅವರ ಅಪ್ಪಣೆಯನ್ನು ತುಚ್ಛವಾಗಿ ಕಾಣ್ತಿದೀರಿ !...."

"ನಿಮ್ಮ ರಾಮುನ್‌ರ ಆಜ್ಞಾಪತ್ರಕ್ಕೆ ಇದೇ ಬೆಲೆ" ಎಂದು ಆ ಪತ್ರವನ್ನು ಪರಪರನೆ ಹರಿದು ಗಾಳಿಗೆ ತೂರಿಬಿಟ್ಟ.

ಕಾಗದದ ಚೂರುಗಳು ಪಾರಿವಾಳದ ಪುಕ್ಕಗಳಂತೆ ಗಾಳಿಯಲ್ಲಿ ಹರಡಿಕೊಂಡು ಹಾರಿಹೋದುವು. ಶಾಂತಪ್ಪ ಅವುಗಳನ್ನೇ ನೋಡುತ್ತಾ ಹೇಳಿದ,

"ನಾನು ನಿಮ್ಮಂಥವರ ಕೈಕೆಳಗೆ ಕೆಲಸ ಮಾಡುತೇನೆಂತ ಕನಸು ಕಾಣೋಕೆ ನಿಮಗೆ ನಾಚಿಕೆಯೂ ಆಗಲಿಲ್ಲವೆ ?"

"ಏನ್ರಿ ತಲೆಯೆಲ್ಲಾ ಮಾತಾಡ್ತೀರಿ ?" ರೈಲ್ವೆ ಯಂತ್ರದ 'ಬಾಯ್ಲರು' ಸ್ಫೋಟನವಾದಂತೆ ಕೃಷ್ಣಯ್ಯ ಅಬ್ಬರಿಸಿಕೊಂಡು ಎದ್ದು ನಿಂತ. ಅದುವರೆಗೆ

ತಡೆಹಿಡಿದಿದ್ದ ಅವನ ಕೋಪ ಒಮ್ಮೆಯೇ ಉಕ್ಕಿ ಬಂದಿತ್ತು. ಶಾಂತಪ್ಪನನ್ನು ಹಿಡಿದು ನೆಲಕ್ಕೆ ಅಪ್ಪಳಿಸಿ ಬಿಡೋಣವೆಂಬಂತೆಯೇ ಎದ್ದು ನಿಂತ.

"ಮಿಸ್ಟರ್ ಕೃಷ್ಣಯ್ಯ! ಮರ್ಯಾದೆಯಿಂದ ವರ್ತಿಸಿ. ನೀವು ಸುಸಂಸ್ಕೃತರೆಂದು ನನ್ನ ನಂಬಿಕೆ. ನೀವು ಅದನ್ನು ಬಿಟ್ಟರೆ ನಾನೂ ಬಿಡಬೇಕಾದೀತು!" ಎಂದು ಶಾಂತಪ್ಪ ಎಚ್ಚರಿಕೆ ಕೊಟ್ಟ ನಂತರ ಕೃಷ್ಣಯ್ಯ ಸುಮ್ಮನೆ ಕುಳಿತುಕೊಂಡ.

ಆದರೆ ಪ್ರತೀಕಾರದ ತೃಷೆ ಅವನ ಮುಖದಲ್ಲಿ ಒಡಮೂಡಿತ್ತು.

## ೬

## ಬಾಯ್ನಿಯ ಮದುವೆ!

ಕೃಷ್ಣಯ್ಯ, ಶಾಂತಪ್ಪನ ವಿಷಯವಾಗಿ ನಡೆದುದಕ್ಕೆ ಬಣ್ಣ ಕಟ್ಟಿ ರಾಮನ್‌ಗೆ ಪತ್ರ ಬರೆದ. ಕೂಲಿಗಾರರ ಪಕ್ಷಪಾತಿಯಾಗಿದ್ದಾನೆ ಶಾಂತಪ್ಪ, ಅವನನ್ನು ಶೀಘ್ರವಾಗಿ ಕೋಣಸಂದ್ರದ ಗಣಿಗೆ ವರ್ಗಾಯಿಸಿ ತನ್ನ ಕೈಕೆಳಗೆ ಹಾಕಿದರೆ ಅವನಿಗೆ ಚೆನ್ನಾಗಿ ಬುದ್ಧಿ ಕಲಿಸುವೆನೆಂದೂ ತಿಳಿಸಿದ. ಅತ್ತ ಬೆಂಗಳೂರಿಗೆ ಪತ್ರಹಾಕಿ ಇತ್ತ ಹೊಸ್ಲೂರಿನಲ್ಲಿ ತನ್ನ ಕಾರ್ಯಕ್ರಮ ಪ್ರಾರಂಭಿಸಿದ.

ರೇಖ್ಯ-ಬಾಯ್ನಿಯರ ವಿವಾಹ ಕಾರ್ಯ ನಿಂತುಹೋದುದು ಅವನಿಗೆ ತಿಳಿದಿದ್ದಿತು. ಶಾಂತಪ್ಪನ ಬಗ್ಗೆ ಬಾಯ್ನಿ ಕಳಕಳಿಯಿಂದಿರುವುದೂ ಅವನಿಗೆ ಅರಿವಿದ್ದಿತು. ಆದರೆ ಕೀಳು ಜಾತಿಯವಳಾದ, ಅಷ್ಟೇಕೆ ಜಾತಿಯೇ ಇಲ್ಲದ, ಬಾಯ್ನಿಯನ್ನು ಶಾಂತಪ್ಪನು ಲಗ್ನವಾಗುವ ವಿಷಯ ಅಸಾಧ್ಯವಾಗಿದ್ದಿತು, ಆದ್ದರಿಂದ ಕೇವಲ ಬಾಯ್ನಿಯ ಸಖ್ಯಕ್ಕೆ ಅವನು ಆಶೆಪಡುತ್ತಿರುವುದರಿಂದ ರೇಖ್ಯ-ಬಾಯ್ನಿಯರ ಮದುವೆಮಾಡಿಸಿ ಬಿಟ್ಟರೆ, ರೇಖ್ಯನನ್ನು ಶಾಂತಪ್ಪನ ಎದುರು ಎತ್ತಿಕಟ್ಟಬಹುದೆಂದು ಅದರಿಂದ ಕೂಲಿಗಾರರು ಅವನಲ್ಲಿಟ್ಟಿರುವ ಪ್ರೀತಿಯನ್ನು ಒಡೆಯಬಹುದೆಂದು ಕೃಷ್ಣಯ್ಯ ಯೋಚಿಸಿದ. 'ಗಣಿಯ ಸಾಹುಕಾರರು' ತಮ್ಮ ಮನೆಗೆ ಬಂದರೆ ಅದು ತಮ್ಮ ಘನತೆಯ ಹೆಚ್ಚಳವೆಂದು ಭಾವಿಸುತ್ತಿದ್ದ ಲಂಬಾಣಿಗರ ಸ್ವಭಾವವರಿತಿದ್ದ ಅವನು ರೇಖ್ಯ-ಬಾಯ್ನಿಯರ ಮನೆಯಲ್ಲಿ ತನ್ನ ಪ್ರವೇಶವೂ ಸುಗಮವಾದೀತೆಂದು ಭಾವಿಸಿದ್ದ!

ಬಾಯ್ನಿಯ ಅನುಪಮ ಸೌಂದರ್ಯವನ್ನು ಕಂಡಾಗಲೆಲ್ಲ ಅವನು ಹುಚ್ಚಾಗುತ್ತಿದ್ದನಾದರೂ ಸುಮ್ಮನಿರಬೇಕಿದ್ದಿತು. ಆದರೆ ಈ ಹೊಸ ಉಪಾಯದಿಂದ ತನ್ನ ಹಾದಿ ಸಲೀಸಾದೀತೆಂದವನು ನಂಬಿದ.

* * *

ಕಾರ ಹುಣ್ಣಿಮೆಯೊಂದು ಲಂಬಾಣಿಗರಿಗೆ ಸಂಭ್ರಮದ ಹಬ್ಬ. ಅದಕ್ಕಾಗಿ ಹದಿನೈದು ದಿನಗಳ ಮುಂಚಿನಿಂದಲೂ ಸಿದ್ಧತೆ ನಡೆಯುತ್ತಿದ್ದಿತು. ತುಂತುರು ಮಳೆಯಲ್ಲಿಯೇ ಅವರು ಆ ಸಿದ್ಧತೆಗಳನ್ನು ಮಾಡುತ್ತಿದ್ದರು. ತಮ್ಮ ತಮ್ಮ ಮನೆಗಳ ಕುರಿ, ಕೋಳಿ, ಟಗರುಗಳಿಗೆ ಪುಷ್ಕಳವಾಗಿ ತಿನ್ನಿಸಿ ಅವನ್ನು ಕೊಬ್ಬಿಸುತ್ತಿದ್ದರು. ಸುತ್ತಲಿನ ಊರುಗಳಲ್ಲಿ ಕಳ್ಳಭಟ್ಟಿ ದೊರೆಯುವೆಡೆಗಳಲ್ಲೆಲ್ಲಾ ಮುಂಗಡ ಹಣಕೊಟ್ಟು ಒಂದೆರಡು ಪೀಪಾಯಿಗಳಿಗಾಗುವಷ್ಟು ಕಳ್ಳು ತರಲು ಏರ್ಪಾಟು ಮಾಡಿದ್ದರು. ಇಂತಹ ಸಿದ್ಧತೆಯ ನಡುವೆ ಒಂದು ದಿನ ಸಂಜೆ ಗಣಿಯಿಂದ ಹಿಂದಿರುಗಿ ಬರುತ್ತಿದ್ದ ರೇಖ್ಯ ತನ್ನ ಸಂಗಡಿಗರಿಗೆ ಹೇಳುತ್ತಿದ್ದ,

"ಈ ಸಲ ಕಾರ ಹುಣ್ಣಿಮೆಗೆ ಚನ್ನಾಗಿ ಎಲ್ಲರೂ ಪದ ಹೇಳಬೇಕು ಕಣ್ರೋ."

"ಹೇಳಿಕೊಡೋನು ನೀನೆ ಇದೀಯಲ್ಲ."

"ಭರ್ಜರಿ ಕಳ್ಳು ಕುಡ್ದು ಊರೇ ನಡುಗಿಬಿಡೋ ಹಂಗೆ ಹಾಡಬೇಕು!"

"ಸೂಳೆ ಮಗ್ನೆ ಜೋರಾಗಿ ಹೇಳಬೇಡ. ಯಾರಿಗಾದರೂ ಗೊತ್ತಾದರೆ ಪೋಲೀಸು ಗೀಲೀಸರಿಗೆ ತಿಳಿದ್ರೆ ಒದ್ದು ಎಳಕೊಂಡು ಹೋದಾರು!"

"ಹೌದು ಕಣೋ ರೇಖ್ಯ. ಹುಷಾರಾಗಿರು."

"ಅವನಿಗೆ ಒಂದು ಮದುವೆ ಮಾಡಿಬಿಟ್ರೆ ಹುಷಾರಾಗಿರ್‍ತಾನೆ," ಎಂದು ಹಿಂದಿನಿಂದ ಒಂದು ಶಬ್ದ ಕೇಳಿ ಬಂತು. ಎಲ್ಲರೂ ಹಿಂದಿರುಗಿ ನೋಡಿದರು. ಕೃಷ್ಣಯ್ಯ ನಗುನಗುತ್ತಾ ಬರುತ್ತಿದ್ದ. ಅವನ ಹಿಂದೆ ಒಂದೆರಡು ಫರ್ಲಾಂಗು ದೂರದಲ್ಲಿ ಕೂಲಿಗಾರ್ತಿಯರು ಸಾಲುಗಟ್ಟಿ ಬರುತ್ತಿದ್ದರು.

"ಏನೋ ರೇಖ್ಯ ಎಲ್ಲಾದರೂ ಹೆಣ್ಣುಗಿಣ್ಣು ನೋಡಿದೀಯೇನೋ? ನೋಡಿದ್ರೆ ಹೇಳು ಮದುವೆಮಾಡಿಸಿಬಿಡ್ತೀನಿ."ಎಂದು ಕೃಷ್ಣಯ್ಯನೆಂದ ಪುನಃ.

"ಬಾಯ್ನಿ ಇದಾಳಲ್ಲ ಸಾವ್ಕಾರ್‍ರೆ!" ಎಂದ ಪಕ್ಕದವನೊಬ್ಬ.

"ಹೌದೇನೋ ರೇಖ್ಯ?" ಕೃಷ್ಣಯ್ಯ ಆಶ್ಚರ್ಯ ಸೂಚಿಸುತ್ತಾ ಕೇಳಿದ.

"ಅದೇನೋ ಗೊತ್ತಾಗಿತ್ತು ಸಾವ್ಕಾರ್‍ರೆ. ಆದ್ರೆ ಆ ಹುಡುಗಿ ಇನ್ನೂ

ದಾರೀಗೆ ಬಂದಿಲ್ಲ. ಮದ್ವೆ ಮಾಡ್ತೀನೆಂದರೆ ಪ್ರಾಣಾ ಕಳ್ಕೊಂತಿನೀಂತ ಹೆದರಿಸ್ತದೆ. ಹೋದ ಸಲ ಇವಂಗೆ ಕೊಟ್ಟು ಮಾಡಿಬಿಡಬೇಕೂಂತ ಲಗ್ನ ಗೊತ್ತಾಗಿದ್ದಾಗ ಹಿಂದಿನ ದಿನ ನೀರಿಗೆ ಬಿದ್ದುಕೊಂಡು ರಂಪಮಾಡಿದ್ದು ನಿಮಗೆ ಗೊತ್ತೇ ಐತೆ," ಎಂದ ಬೇರೊಬ್ಬ.

"ಓ! ಹಾಗಾದರೆ ಈ ವಿಷಯಕ್ಕೇನಾ ಅವಳು ನೀರಿಗೆ ಬಿದ್ದದ್ದು ?"

"ಹೌದು."

"ಹೇಗಾದರೂ ಮಾಡಿ ಮದುವೆ ಮಾಡಿಬಿಟ್ಟರೆ ಎಲ್ಲಾ ಸರಿಹೋಗುತ್ತೆ. ನೀನು ಲಗ್ನ ಗೊತ್ತುಮಾಡಿಬಿಡೋ ರೇಖ್ಯ ನಾನು ದುಡ್ಡು ಕೊಡ್ತೀನಿ," ಎಂದ ಕೃಷ್ಣಯ್ಯ, ಬಾಯ್ನಿಯ ಲಾವಣ್ಯವನ್ನು ಮನಸ್ಸಿನಲ್ಲಿಯೇ ನೆನೆಯುತ್ತ.

ಕೃಷ್ಣಯ್ಯನ ಬೆಂಬಲ ಸಿಕ್ಕಿದ್ದರಿಂದ ರೇಖ್ಯನಿಗೆ ಭುಜಬಲ ಬಂದಂತಾಯಿತು. ಅವನಿಗೆ ಮದುವೆಯಾಗುವ ಹಂಬಲ ಪುನಃ ಉದ್ದೀಪನವಾಯ್ತು, ಆಶೆ ಗರಿಗೆದರಿಕೊಂಡಿತು.

"ಗೊತ್ತುಮಾಡಿಬಿಡೋಣ ಸಾವ್ಕಾರ್ರೆ. ಈ ಕಾರಹುಣ್ಣಿಮೆ ದಿನ ನಮ್ಮ ಗುರುಗಳು ಬರ್ತಾರೆ. ಅವರಿಗೆ ಹೇಳಿಬಿಡೋಣ," ಎಂದ ಒಬ್ಬ.

"ಏನೋ ರೇಖ್ಯ ಆಗಬಹುದೇನೋ?" ಕೃಷ್ಣಯ್ಯ ಪ್ರಶ್ನಿಸಿದ.

"ಆಗಲಿ ಸಾವ್ಕಾರ್ರೆ" ಎಂದು ರೇಖ್ಯ ಒಪ್ಪಿಕೊಂಡು ಕೃಷ್ಣಯ್ಯನಿಗೆ ಕೈ ಮುಗಿದ.

ಬಾಯ್ನಿ ತನ್ನ ತೋಳತೆಕ್ಕೆಯಲ್ಲಿಯೇ ಬಂದಳೆನ್ನುವಷ್ಟು ಸಂತೋಷದಿಂದ ಕೃಷ್ಣಯ್ಯನೆಂದ, "ಹಾಗಾದರೆ ಗೊತ್ತುಮಾಡಿಬಿಡಿ. ನಾನೂ ಐವತ್ತು ರೂಪಾಯಿ ಕೊಡ್ತೀನಿ."

* * *

ಕಾರೆ ಹುಣ್ಣಿಮೆಯ ದಿನ ಗಣಿಯ ಕಲಸ ನಿಲ್ಲಿಸಿದ್ದರು. ಆ ದಿನ ತಾಂಡದಲ್ಲಿ ಎಲ್ಲರ ಮುಖದಲ್ಲಿಯೂ ಸಂಭ್ರಮದ ರೇಖೆಗಳಿದ್ದಿದ್ದುವು. ಹೆಂಗಸರು ತಾವು ಹೊಸದಾಗಿ ಕೊಂಡು ಕಸೂತಿ ಕೆಲಸಮಾಡಿದ ದುಪ್ಪಟ್ಟಗಳನ್ನು ಹೊದ್ದುಕೊಂಡು, ಹೊಸ ಹೊಸ ಲಂಗ ರವಿಕೆಗಳನ್ನು ಧರಿಸಿದ್ದರು. ಕೆಲವರು ಹೊಸದಾಗಿ ದಂತದ ಬಳೆಗಳನ್ನು ತೊಟ್ಟು, ಕವಡೆಗಳ ಸರವನ್ನು ಧರಿಸಿಕೊಂಡು ಮುಖ ಕೈಗಳ ಮೇಲೆ ಚಿತ್ತಾರ ಬರೆಸಿಕೊಂಡಿದ್ದರು; ಇದು ಹೊಸದಾಗಿ ಆಬಾರಿ ಮದುವೆಯಾದ ತರುಣಿಯರ ಅಲಂಕಾರ, ಇನ್ನು ಕೆಲವರು ಹೊಸದಾಗಿ

ಮಾಡಿಸಿದ್ದ ಬೆಳ್ಳಿಯ ನಾಲ್ಕಾಣೆಯಿದ್ದ ಉಂಗುರಗಳನ್ನು ಧರಿಸಿಕೊಂಡಿದ್ದರು. ಆ ರಾತ್ರಿ ಇವರೆಲ್ಲರ ನೃತ್ಯವಿದ್ದಿತು. ನೃತ್ಯಕ್ಕೆ ಕಂಪೆನಿಯವರನ್ನು ಬರ ಬೇಕೆಂದು ಬೇಡಿಕೊಂಡಿದ್ದರು. ಆ ದಿನ ಸಂಜೆ ಮಳೆ ನಿಂತು, ಆಕಾಶದಲ್ಲಿ ಚಂದ್ರಕಿರಣಗಳು ಮೋಡಗಳಸಂದಿನಿಂದ ಇಣುಕಿನೋಡುತ್ತಿದ್ದಾಗ ಕುಡಿದು ಕಣ್ಣು ಕೆಂಪುಮಾಡಿಕೊಂಡಿದ್ದ ಕೂಲಿಗಾರರು ಬಿಡಾರಕ್ಕೆ ಬಂದು ಹೇಳಿದರು,

"ಸಾವ್ಕಾರ್ರೆ ಈಗ ನಮ್ಮ ಹೆಣ್ಣುಗಳು ಕುಣೀತಾವೆ. ಬನ್ನಿ."

"ಬರ್ತೀನಿ ಹೋಗಿ" ಎಂದು ಹೇಳಿದ ಕೃಷ್ಣಯ್ಯ, ಶಾಂತಪ್ಪನನ್ನು ಆಹ್ವಾನಿಸಿದ. ಆದರೆ ಶಾಂತಪ್ಪನಿಗೆ ಹೋಗಲು ಇಷ್ಟವಿರಲಿಲ್ಲ. ಕೃಷ್ಣಯ್ಯ ನೊಬ್ಬನೇ ಉತ್ಸಾಹದಿಂದ ಹೊರಟ.

ದೇವಾಲಯದ ಮುಂದೆ, ದೊಡ್ಡ ಪೀಪಾಯಿಗಳೆರಡನ್ನು ಇಟ್ಟು ಅದರಲ್ಲಿ ಕಳ್ಳನ್ನು ತುಂಬಿದ್ದರು, ಲಂಬಾಣಿಗರೆಲ್ಲರೂ, ಅವರ ಗುರುವೂ ಸೇರಿಕೊಂಡು ಅದನ್ನು ಲೋಟಗಳಲ್ಲಿ ಸ್ವೇಚ್ಛೆಯಾಗಿ ತುಂಬಿಕೊಂಡು ಕುಡಿಯುತ್ತಿದ್ದರು. ಹತ್ತಿರದಲ್ಲೇ ಎಪ್ಪತ್ತು ಎಂಬತ್ತು ಕುರಿ, ಟಗರುಗಳನ್ನು ಕಡಿದು ರಾಶಿ ಹಾಕಿ ದ್ದರು. ಕೆಲವರು ಬಾಣಲೆಗಳಲ್ಲಿ ಹಿಡಿದಿಟ್ಟಿದ್ದ ರಕ್ತವನ್ನು ಡಬ್ಬಗಳಿಗೆ ಸುರಿ ಯುತ್ತಿದ್ದರು. ಕೆಲವರು ಕತ್ತರಿಸಲ್ಪಟ್ಟ ಆ ಪ್ರಾಣಿಗಳ ಮಾಂಸವನ್ನು ಕೊಯ್ದು ಚಕ್ಕಳದಿಂದ ಬೇರ್ಪಡಿಸುತ್ತಿದ್ದರು, ಕುಡಿದು ಮದೋನ್ಮತ್ತರಾದ ಕೆಲವರು ತಮ್ಮ ಹೆಂಡತಿಯರನ್ನು ಕೈಹಿಡಿದೆಳೆಯುತ್ತಿದ್ದರು. ಕೃಷ್ಣಯ್ಯ ಬಂದುದನ್ನು ನೋಡಿ ಅಲ್ಲಿನ ಕೋಲಾಹಲವು ಕಡಿಮೆಯಾಯಿತು.

"ಸಾವ್ಕಾರ್ರು ಬಂದರು," ಎಂದು ತೊದಲುತ್ತಾ ಹಲವರೆಂದರು.

ಎಲ್ಲರೂ ಸಾಲಾಗಿ, ತೂರಾಡುತ್ತಾ ಕುಳಿತುಕೊಂಡರು. ಲಂಬಾಣಿ ಹೆಂಗಸರು ಕೋಲುಗಳನ್ನು ತೆಗೆದುಕೊಂಡು ಬಂದು ಅವನ್ನು ಹುಯ್ಯುತ್ತಾ, ಹಾಡುತ್ತಾ ಕುಣಿಯತೊಡಗಿದರು. ಕುಣಿ ಕುಣಿಯುತ್ತಾ ಅವರು, ಏನೋ ಪಿಸಪಿಸನೆ ಮಾತನಾಡಿಕೊಂಡು ಹೊಸ ಹಾಡೊಂದನ್ನು ಹೇಳಲು ಪ್ರಾರಂಭಿಸಿದರು:

"ಆಯಾರೇ....ಆಯಾರೇ....
ಏಕ ನವಾ ಸಾವಕಾರ ಆಯಾರೇ....ಅಚ್ಛಾ ಸಾವಕಾರ ಆಯಾರೇ....
ಒ ಛೋಟಾ ಸಾವಕಾರ ಆಯಾರೇ....ಒ ಅಚ್ಛಾರೇ....
ಮೋಟಾ ಸಾವಕಾರ, ಉಸ್‌ಸೆ ಲಡಾಯಿ ಕಿಯಾರೇ !....ಕಿಯಾರೇ"

ಛೋಟಾ ಸಾವಕಾರ ಮೋಟ ಹುಯಾರೇ
ಮೋಟ ಔರ್ ಲಡಾಯಿ ಕಿಯಾರೇ
ಔರ್ ಒ ಛೋಟಾ ಹುಯಾರೇ.... ಛೋಟಾ ಹುಯಾರೇ"

ಒಬ್ಬೊಬ್ಬಳ ಅಂಗ ಸೌಂದರ್ಯವನ್ನೂ ನೋಡುತ್ತಾ ನಗುತ್ತಾ ಕುಳಿತಿದ್ದ ಕೃಷ್ಣಯ್ಯ ನಿಧಾನವಾಗಿ ಹಾಡು ಕೇಳುತ್ತಾ ಇಲ್ಲಿ ಅರ್ಥ ಮಾಡಿಕೊಳ್ಳುತ್ತಿರುವಾಗಿ ಅಲ್ಲಿ—

ಬಿಡಾರದಲ್ಲಿ ಮಲಗಿದ್ದ ಶಾಂತಪ್ಪನಿಗೆ ದೂರದ ದೇವಾಲಯದಲ್ಲಿನ ಕುಣಿತ, ಗೀತ, ಗಲಾಟೆ, ತಮಟೆ ಶಬ್ದಗಳು ಕೇಳಿಬರುತ್ತಿದ್ದುವು. ಆ ಅಸ್ಪಷ್ಟ ಶಬ್ದವನ್ನು ಆಲಿಸುತ್ತಾ ಮಲಗಿದ್ದವನಿಗೆ ಬೇರೊಂದೆಡೆಯಲ್ಲಿ ದೂರದಲ್ಲಿ ಯಾರೋ ಚಿಟ್ಟನೆ ಚೀರಿದಂತೆ ಕೇಳಿಸಿತು. ಹೆಣ್ಣು ದನಿಯ ಆ ಚೀರಾಟ ಎರಡನೆಯ ಬಾರಿ ಕೇಳಿಬಂದಾಗ ಶಾಂತಪ್ಪ ಧಿಗ್ಗನೆದ್ದು ಅತ್ತ ಹೊರಟ.

ದೂರದಲ್ಲಿ ಹೋಗಿ ಅವನು ನೋಡಿದಾಗ, ಗಗನದಲ್ಲಿ ಓಡುತ್ತಿದ್ದ ಮೋಡಗಳು, ಕತ್ತಲು ಬೆಳಕಿನ ಚೆಲ್ಲಾಟವಾಡುತ್ತಿರುವುದರ ಮಧ್ಯೆ ಕಾಣಿಸಿದ ಆ ದೃಶ್ಯ ಅಸಹ್ಯವೆನಿಸಿತು ಅವನಿಗೆ. ಕುಡಿದು ಮದೋನ್ಮತ್ತನಾದ ರೇಖ್ಯಾ ದೈತ್ಯನಂತೆ ನಿಂತು ಬಾಯ್ನಿಯ ಕೈ ಹಿಡಿದಿದ್ದ- ಅತ್ತ ಇತ್ತ ತೂರಾಡುತ್ತಾ ಅವಳನ್ನು ಹಿಂಸಿಸುತಿದ್ದ !

"ನೋಡು ಬಾಯ್ನಿ ನೀನು ನನ್ನವೊದ್ನಿ ಆಗಾಕಿಲ್ಲ ಅಂತ ಹೇಳಬ್ಯಾಡ!"

"ನಾನು ನಿನ್ನ ಆಗೋದಿಲ್ಲ. ಹೊಂಟೋಗು ಮುಂಗ್ಯನ ಮಗನೆ !"

"ಯಾಕೆ ಆಗೋದಿಲ್ಲ. ನಿಂಗೆ ಎಂಟೆಂಟಾಣೆಗಳ ಐದು ಉಂಗುರ ಹಾಕಿಸ್ತೀನಿ. ರೇಷ್ಮೆ ಬಟ್ಟೆ ದುಪ್ಪಟ್ಟ ತರ್ತೀನಿ. ಒಂದು ಹಿತ್ತಾಳೆ ಸರ ತರ್ತೀನಿ...." ತೊದಲುತ್ತಾ ಹೇಳುತ್ತಾ ಬಾಯ್ನಿಯ ರಟ್ಟೆ ಹಿಡಿದು ಅಮುಕಿದ.

"ಥೂ ನಿನ್ನ ಮೂತಿ ಸುಡ. ನನ್ನ ಕೈಬಿಟ್ಬಿಡು. ನಾನು ಹೋಗ್ತೀನಿ. ಹೀಂಗೆ ನನ್ನ ಸತಾಯಿಸಿದ್ರೆ ಪುನಃ ಕೂಗಿಕೊಳ್ತೀನಿ,"

"ಓ! ನೀನು ನನ್ನ ಹೆಂಡತೀಂತ ಎಲ್ಲರೂ ಗೊತ್ತುಮಾಡಿಬಿಟ್ಟಿದಾರೆ. ನಾಳೆ ಗುರುಗಳು ಲಗ್ನ ಗೊತ್ತುಮಾಡ್ತಾರೆ. ನೀನು ಯಾಕೆ ಕೂಗಿಕೋಬೇಕು ?"

"ನಿನ್ನ ಜೊತೆ ಮದ್ವೆ ಆದ್ರೆ ನಂಗೆ, ನಾನು ಹೋದ ಸಲದ ಹಂಗೇ ಹಳ್ಳಕ್ಕೆ ಹಾರಿಕೋತೀನಿ. ನನ್ನ ಬಿಟ್ಬುಬಿಡು...."

"ನೀನು ಹಳ್ಳಕ್ಕೆ ಹಾರಿಕೊಳ್ಳದ ಹಂಗೆ ನಾನು ನಿನ್ನ ಮನೇಲೇ ಕೂಡಿ ಬೀಗ ಹಾಕಿಸ್ತೀನಿ....ಈ ಸಲ....ಹ....ಹ....!" ಅವನು ಒರಟೊರಟಾಗಿ ನಕ್ಕ.

"ನಿನ್ನ ನಾನು ಮಾಡ್ಕೊಳ್ಳೋದಿಲ್ಲ....ಅಯ್ಯೋ ನನ್ನ ಕೈಬಿಡು ಮಂಗ್ಯ"

"ಹಂಗಾದರೆ ಯಾರನ್ನ ಆಗ್ತೀ?"

"ಯಾರನ್ನೂ ಆಗೋಗಿಲ್ಲ !"

"ಯಾರನ್ನ ಆಗದೇ ಹಂಗೇನೇ ಇರೋಕೆ ನಿನ್ನ ಯಾವ ಸಾವಕಾರ ಇಟ್ಟುಕೊಂಡಿದಾನೆ ?"

"ಯಾರೂ ಇಲ್ಲ !"

"ಹಂಗಾದರೆ ನಿನ್ನ ಬಿಡೋಕಿಲ್ಲ ನಾನು. ಗುರುಗಳಿಗೆ ಹೇಳಿಬಿಡ್ತೀನಿ, ಲಗ್ನ ಕಟ್ಟಿ ಕೊಡೋದಕ್ಕೆ....ಹೋ....ನನ್ನ ಹೆಂಡತಿ....!" ಎಂದು ಅವಳನ್ನು ಬಾಗಿ ಚುಂಬಿಸಲೆತ್ನಿಸಿದ.

ಬಾಯ್ನಿ ಕಿಟ್ಟನೆ ಕಿರುಚಿಕೊಂಡು ಅವನ ಮುಖದ ಮೇಲೆ ಅಪ್ಪಳಿಸಿದಳು. ಶಾಂತಪ್ಪ ತಕ್ಷಣ ಧಾವಿಸಿ ಅತ್ತ ನಡೆದ. ಅವನು ಬಂದುದನ್ನು ನೋಡಿದ ರೇಖ್ಯಾನಿಗೆ ಆಶ್ಚರ್ಯವಾಯಿತು. ಅದರ ಹಿಂದೆಯೇ ಭಯವೂ ಆಯಿತು. ತಕ್ಷಣವೇ ಅವಳ ಕೈಬಿಟ್ಟು ಸರ ಸರನೆ ದೂರ ಹೊರಟು ಹೋದಳು. ಅವನು ತೂರಾಡುತ್ತಾ ದೂರ ದೂರ ಹೋಗಿ ಉತ್ಸವ ನಡೆಯುತ್ತಿದ್ದ ದೇವಾಲಯದತ್ತ ಸರಿದ.

ಅಲ್ಲಿಯ ತನಕ ಸುಮ್ಮನಿದ್ದ ಬಾಯ್ನಿ ಇದ್ದಕಿದ್ದಂತೆ ಶಾಂತಪ್ಪನ ಕಾಲು ಹಿಡಿದುಕೊಂಡು ಗಳಗಳನೆ ಅತ್ತುಬಿಟ್ಟಳು. ಶಾಂತಪ್ಪ ಕಲ್ಲಿನಂತೆ ನಿಂತಿದ್ದ, ಚಿಂತಿಸುತ್ತಾ. ಅವನ ತಲೆಯಲ್ಲಿ ಭರ್ರನೆ ಬಿರುಗಾಳಿಯೆದ್ದಿತ್ತು, ಅವನ ಒಳ ತೋಟಿಯಲ್ಲಿ ಆ ತರಂಗಗಳೆದ್ದು ಅತ್ತ ಇತ್ತ ಸರಿದಾಡಿದುವು.

"ಸಾವ್ಕಾರ್ರೆ ನೀವು ನನ್ನ ಬೇಡವೆಂತೀರಾ ?" ಬಾಯ್ನಿ ಕೇಳಿದುದರಿಂದ ಎಚ್ಚರಗೊಂಡ ಶಾಂತಪ್ಪ ಅವಳ ಮುಖ ನೋಡಿದ. ಆ ಮುಖ ದೀನತೆಯ ನೆಲೆಯಾಗಿದ್ದಿತು.

"ಏಳುವಳು....ಹಾಗೆಲ್ಲ ಕಾಲು ಮುಟ್ಟ ಬಾರದು." ಎಂದು ಅವಳನ್ನು ಹಿಡಿದೆತ್ತಿದ್ದ ಆ ಕ್ಷಣದಲ್ಲಿ ಚಂದ್ರ ಮೋಡಗಳಿಂದ ಹೊರಬಂದು, ಚಲನಚಿತ್ರ ಮಂದಿರದಲ್ಲಿ ಇದ್ದಕಿದ್ದಂತೆ ದೀಪಗಳು ಬೆಳಗಿದಂತೆ, ಬೆಳಗಿ ಅಲ್ಲೆಲ್ಲಾ ಬೆಳಕು ಚೆಲ್ಲಿದ. ಚಂದ್ರಹಾಸದಲ್ಲಿ ಬಾಯ್ನಿಯ ಆ ಸುಂದರ ಮುಖ ಕೆಂದುಟಿಗಳನ್ನು

ನೋಡಿದ ಶಾಂತಪ್ಪನಿಗೆ ಯಾವುದೋಶಕ್ತಿ ಮೈಯಲ್ಲೆಲ್ಲಹರಿದಾಡಿದಂತಾಯ್ತು. ಇದ್ದಕ್ಕಿದ್ದಂತೆ ಅವಳನ್ನು ಭದ್ರವಾಗಿ ಆಲಿಂಗಿಸಿಕೊಂಡು ಆ ತುಟಿಗಳನ್ನು ಚುಂಬಿಸಿಬಿಟ್ಟ. ಒಂದೆರಡು ಕ್ಷಣ ಹಾಗೆಯೇ ಆಲಿಂಗಿನದಲ್ಲಿದ್ದ ಅವರಿಗೆ ಪ್ರಪಂಚದ ಅರಿವೇ ಇಲ್ಲದಂತಾಗಿದ್ದಿತು.

ಅದೇ ಆಲಿಂಗನದಲ್ಲಿದ್ದ ಬಾಯ್ನಿ ಮಾತ್ರ ತನ್ನ ಭವಿಷ್ಯವನ್ನು ಚಿಂತಿಸಿ ರೇಖ್ಯನ ದೈತ್ಯ ಮೂರ್ತಿಯ ನೆನಪಾಗಿ ಕೇಳಿದಳು," ಸಾವ್ಕಾರ್ರೆ ನನ್ನ ಬಿಡ ಬೇಡಿ."

"ಏನು ಮಾಡಲಿ ನಾನು ?"

"ನನ್ನ ಇಟ್ಟುಕೊಂಡುಬಿಡಿ!"

ಝುರಿಯೊಂದು ಕಾಲಿನಿಂದ ತನ್ನ ದೇಹವನ್ನು ಒಳಹೊಕ್ಕವನಂತೆ ಅವನು ಸರಿದುನಿಂತು ಹೇಳಿದ,

"ಎಂಥ ಕಾಡು ಜನ ನೀವು, ಇಟ್ಟುಕೊಳ್ಳುವುದು, ಅನ್ನೋ ಮಾತನ್ನ ನಾಚಿಕೆಯಿಲ್ಲದೆ ಹೇಗೆ ಹೇಳ್ತೀರಿ....ಥು !"

"ನಾವು ಕಡಿಮೆಯವರು. ನೀವು ಉತ್ತಮರು, ನೀವು ನಮ್ಮನ್ನ ಇಟ್ಟು ಕೊಳ್ಳದೇ ಇನ್ನೇನು ಆಗ್ತದೆ ? ನೀವು ನನ್ನ ಬಿಟ್ಟರೆ ರೇಖ್ಯಾನಿಗೆ ಕೊಟ್ಟು ಲಗ್ನ ಮಾಡಿಬಿಡ್ತಾರೆ....ನಾನು ಪ್ರಾಣ ಕಳ್ಕೊಂತೀನಿ...." ಎಂದು ಅವಳು ಕಂಬನಿದುಂಬಿದಳು.

"ನಾನು ಉತ್ತಮ ಕುಲದವನಲ್ಲ ಬಾಯ್ನಿ !"

"ಹಂಗಂದ್ರೆ ?"

"ನನಗಿಂತ ಇನ್ನೂ ಉತ್ತಮ ಕುಲದವರಿದ್ದಾರೆ !"

"ಅದೇನೋ ನಂಗೊತ್ತಿಲ್ಲ. ನೀವೂ ಉತ್ತಮರು...."

"ಅದು ಹೋಗಲಿ ನಾನು ನಿಮ್ಮ ತಾಂಡದವನಾಗಿದ್ದರೆ ಲಗ್ನವಾಗ್ತಿದ್ದೆಯಾ ನನ್ನ ?'

"ಯಾಡೀ....ನೀವು ನಮ್ಮ ತಾಂಡದವರಾಗಿದ್ದರೆ ? ಹೆಂಗೆ ಆಗ್ತಿತ್ತು ಅದು ಸಾವ್ಕಾರ್ರೆ"

"ಆಗಿದ್ದರೆ ಹೇಳು."

"ಆಗಿದ್ದರೆ ನಿಮ್ಮ ಕಾಲಿಗೆ ಬಿದ್ದು ಆಗ್ತಿದ್ದೆ. ದೇವರಂಥವರು ನೀವು," ಎಂದು ಬಾಯ್ನಿ ಅವನ ಪಾದ ಮುಟ್ಟಲು ಹೋದಳು.

ಥು ಇದೇನು ದುರಭ್ಯಾಸ? ಮಾತು ಮಾತಿಗೆ ಕಾಲು ಮುಟ್ಟುತೀಯೆ." ಎಂದು ಶಾಂತಪ್ಪ ಕಾಲು ಹಿಂದೆಗೆದುಕೊಂಡು ಹೇಳಿದ,

"ಈಗ ನೀನು ಹೋಗು. ಯಾರಾದರೂ ನಮ್ಮನ್ನ ನೋಡಿಯಾರು."

"ನೀವು ನನ್ನ ಬಿಟ್ಟುಬಿಟ್ಟರೆ....ಸಾವ್ಕಾರೆ....", ಬಾಯ್ನಿ ಬಿಕ್ಕಳಿಸಿ ಅತ್ತುಬಿಟ್ಟಳು. ಆ ಕಂಬನಿಯನ್ನು ನೋಡಿ ಶಾಂತಪ್ಪನಿಗೆ ಅಂತಃಕರಣ ಉಕ್ಕಿ ಬಂದಿತು.

"ಇರಲಿ ನೀನು ಹೋಗು...." ಎಂದು ಹೇಳಿ ಅವನು ನಿಧಾನವಾಗಿ ಬಿಡಾರದತ್ತ ಹೆಜ್ಜೆಯಿಟ್ಟ.

* * * *

ರಾತ್ರಿ ಮಲಗಿದ್ದ ಶಾಂತಪ್ಪನಿಗೆ ನಿದ್ರೆ ಬರಲಿಲ್ಲ. ಅತ್ತ ದೇವಾಲಯ ದಲ್ಲಿ ಕುಡಿದು ಮತ್ತರಾದ ಕೂಲಿಗಾರರ ಹೊಡೆದಾಟ ಬೈದಾಟಗಳ ಶಬ್ದ ಕೇಳಿಬರುತ್ತಿದ್ದಿತು. ಕೃಷ್ಣಯ್ಯ ಬಂದಿರಲಿಲ್ಲ, ಆ ರಾತ್ರಿ ಅವನು ಬರುವ ನಂಬಿಕೆಯೂ ಇರಲಿಲ್ಲ.

ಒಳಗೆ ಅಡಿಗೆಯವನ ಗೊರಕೆ ಶಬ್ದ ಕೇಳಿಸುತಿತ್ತು. ಶಾಂತಪ್ಪನ ತಲೆ ಯಲ್ಲಿ ವಿರುದ್ಧ ಭಾವನೆಗಳ ತುಮುಲ ನಡೆದಿದ್ದಿತು.

"ಈಗ ಕೋಣ ಸಂದ್ರದ ಗಣಿಗೆ ವರ್ಗವಾಗಿದೆ."

"ಅಲ್ಲಿ ಹೋಗಿ ಕೃಷ್ಣಯ್ಯನ ಕೈಕೆಳಗೆ ಕೆಲಸ ಮಾಡಬೇಕು."

"ಆ ಅಯೋಗ್ಯನ ಕೈಕೆಳಗೆ ಕೆಲಸ ಮಾಡುವುದೇ?"

"ಸಂಬಳ ಕೊಡುವ ಕಂಪೆನಿಯವರು ಹೇಳಿದಂತೆ ಕೇಳಬೇಕು."

"ಅವರು ಕೊಡುವ ಸಂಬಳಕ್ಕಾಗಿ ಆತ್ಮಗೌರವನ್ನೇ ಮಾರಿಕೊಳ್ಳು ವುದೆ ?"

"ಆತ್ಮಗೌರವ ಎಣಿಸುವವರು ನೌಕರಿಗೆ ಬರಬಾರದು."

"ನೌಕರಿಗೆ ಸೇರಿದ ಮಾತ್ರಕ್ಕೇ ಆತ್ಮ ಗೌರವನನ್ನು ಕಳೆದುಕೊಳ್ಳ ಬೇಕೆ ?"

"ಹೌದು ! ನೌಕರಿ, ಆತ್ಮ ಗೌರವ ಇವೆರಡೂ ಶತ್ರುಗಳು !"

"ಹಾಗಾದರೆ ಆತ್ಮಗೌರವವುಳ್ಳವನಿಗೆ ಉಪವಾಸವೇ ಗತಿಯೆ ?"

"................"

"ಆತ್ಮ ಗೌರವವುಳ್ಳವನು ಈ ದೇಶದಲ್ಲಿ ಉಪವಾಸ ಸಾಯಬೇಕೆ?"

"........................"

"ಬುದ್ಧಿಯಿದ್ದು, ಆತ್ಮ ಗೌರವಕ್ಕೆ ಬೆಲೆಯಿದ್ದವನ ಗತಿ ಸಾವೇನೇ ಹಾಗಾದರೆ ?"

"ಹೌದು ಅದನ್ನು ಯೋಚಿಸಿ ಫಲವೇನು."

"ಹಾಗಾದರೆ ಆ ಕೃಷ್ಣಯ್ಯನ ದಾಸನಾಗಿ ಹೋಗಬೇಕು !"

"ಆ ನೀಚನ ಕೈಕೆಳಗೆ ಕಾರಕೂನನಾಗುವುದು ಘನತೆಯಲ್ಲ. ಆ ಅಯೋಗ್ಯನ....ವ್ಯಭಿಚಾರಿಯ ದಾಸನಾಗಿ...."

"ಅವನು ನೀಚನಿರಬಹುದು, ವ್ಯಭಿಚಾರಿಯಿರಬಹುದು. ಆದರೆ ತನಗೆ ಬಾಯ್ನಿಯ ಬಗ್ಗೆ ಇರುವ ಭಾವನೆಯೇನು ?

"ಹಾ ! ಅದೂ ವ್ಯಭಿಚಾರವೇ ?"

"ಮತ್ತೇನು....ಅವಳನ್ನು ಆಲಿಂಗಿಸಿದುದೇಕೆ ? ಅವಳನ್ನು ಕೈಬಿಡುವುದೂ ಸಹ ನೀಚತನ"

"ಹಾಗಾದರೆ ಅವಳನ್ನು 'ಇಟ್ಟು'ಕೊಳ್ಳುವುದೂ ನೀಚತನವೇ ?"

"ಇಟ್ಟುಕೊಳ್ಳದಿದ್ದರೆ ವಿವಾಹವಾಗಬೇಕು !"

"ವಿವಾಹ ! ಉತ್ತಮ ವೀರಶೈವ ಕುಲದಲ್ಲಿ ಜನಿಸಿ ಲಂಬಾಣಿಯನ್ನು, ಅದೂ ಸಹ ಕೂಲಿಗಾತಿಯನ್ನು ಮದುವೆಯಾಗುವುದೇ ? ಬೆಂಗಳೂರಿನಲ್ಲಿ ತಾಯಿತಂದೆಯರಿಗೆ ಹೇಳುವುದು ಹೇಗೆ ನೆಂಟರಿಷ್ಟರಿಗೆ ಮುಖ ತೋರಿಸುವುದು ಹೇಗೆ....ಮೊನ್ನೆಯಿನ್ನು ಪತ್ರ ಬರೆದಿದ್ದಾರೆ ತಂದೆ, ಯಾರೋ ಸ್ವಜಾತಿಯ ಶ್ರೀಮಂತರು ಹೆಣ್ಣು ಕೊಡಲು ಬಂದಿದ್ದರಂತೆ."

"ಧ್ಯೇಯವಾದಿಯಾದವನು ನೆಂಟರಿಷ್ಟರಿಗೆ, ಕುಲಾಚಾರಗಳಿಗೆ ಹೆದರಬಾರದು !"

"ಧ್ಯೇಯವೆಂಬುದು ಹೇಳಿಕೆಗೆ ಬಹು ಸುಲಭ. ಆದರೆ ಅನುಸರಿಸುವುದು ಕಷ್ಟಕರ. ಅದು ಹೇಗೆ ಸಾಧ್ಯ ? ಊರೂರಿನಲ್ಲಿಯೂ ತನ್ನದೇ ಮಾತಾಗುವುದು. ತನ್ನ ಜಾತೀಯರ ಮನೆಗಳಲ್ಲಿ ಮನೆ ಮಾತಾಗುವುದಿದು. ವೀರಶೈವ ನೋರ್ವನು ಲಂಬಾಣಿಯನ್ನು ವಿವಾಹವಾದನೆಂದು ಥೂಕರಿಸುವರು. ಕುಲದಲ್ಲಿ ಕನಿಷ್ಠವಾಗಬೇಕಾಗುವುದು !"

"ಮನುಷ್ಯ ಮನುಷ್ಯರಲ್ಲಿ ಈ ಜಾತೀಯ ಗೋಡೆಗಳನ್ನು ಕಟ್ಟುವುದು ತುಚ್ಛತನ."

"ಆದರೆ ರಕ್ತಗತವಾಗಿ ಬಂದುದನ್ನು ಬೇಗ ಬಿಡಲಾಗುವುದಿಲ್ಲ."

"ಬಿಡಬೇಕು! ಧ್ಯೇಯವಾದಿಯಾದವನು ಎಲ್ಲವನ್ನೂ ಎದುರಿಸಬೇಕು. ಧ್ಯೇಯವಾದಿಗೆ ಎಲ್ಲವೂ ವಿರುದ್ಧವೆ. ವಿರುದ್ಧವಾದುದನ್ನು ಎದುರಿಸಿ ಗೆದ್ದರೆ ಆಗವನು ಮಹಾಪುರುಷನಾಗುತ್ತಾನೆ. ವಿರುದ್ಧವಾದುದಕ್ಕೆ ಹೆದರಿ ಮಣಿದರೆ ಅವನು ಹುಲು ಮನುಜನಾದಾನು. ಈ ಭಾಗ್ಯಕ್ಕೆ ಇಷ್ಟೆಲ್ಲ ಏಕೆ ಕೂಗೆಬ್ಬಿಸ ಬೇಕಿದ್ದಿತು? ರಾಮನಾಯ್ಕನ ಹಳ್ಳಿಯ ಗಣಿಯಲ್ಲಿ ಏನೆಲ್ಲ ನಡೆಯಿತು, ಅದನ್ನು ಬಿಟ್ಟು ಬಂದುದೇಕೆ ಆಗ?...."

"ಹಾಗೆಂದರೆ?"

"ಒಟ್ಟಿನಲ್ಲಿ ಮದುವೆಯಾಗಬೇಕು."

"ನಮ್ಮಿಬ್ಬರ ಮದುವೆ!....ಇದರ ಫಲಗಳಾಗಿ ಹುಟ್ಟಿದ ಮಕ್ಕಳು ಯಾವ ಜಾತಿಯವಾದಾವು? ಅವಕ್ಕೆ ಯಾವ ಜಾತಿಯ ಹೆಸರಿಡಬೇಕು, ಅವಕ್ಕೆ ಯಾವ ಕುಲದಿಂದ ಲಗ್ನವಾಗಬೇಕು? ನಮ್ಮ ಮಕ್ಕಳ ಭವಿಷ್ಯತ್ತೇನು—ನಮ್ಮ ಪಾಪವನ್ನು ಅವು ಅನುಭವಿಸಬೇಕೆ?"

"ಸುಮ್ಮನೆ ಪ್ರಶ್ನಿಸಿಕೊಂಡು ಪ್ರಯೋಜನವಿಲ್ಲ. ಎಲ್ಲವನ್ನೂ ಭವಿಷ್ಯತ್ತಿಗೆ ಬಿಡಬೇಕು. ಸಮಾಜ ಸುಧಾರಣೆಯಲ್ಲಿ ನಂಬುಗೆಯಿಡಬೇಕು."

"ಭವಿಷ್ಯತ್ತನ್ನು ಚಿಂತಿಸುವುದೇ ಬೇಡವೆ? ಬಾಯ್ನಿಯನ್ನು ಮದುವೆಯಾಗಿ ಎಲ್ಲಿಗೆ ಹೋಗುವುದು?"

"ಕೋಣಸಂದ್ರದ ಗಣಿಗೆ!"

"ಅಯೋಗ್ಯನಾದ ಕೃಷ್ಣಶೆಟ್ಟಿಯ ಕೈಕೆಳಗೆ ಅವನ ದಾಸನಾಗಿ ಅಲ್ಲಿ ಬಾಯ್ನಿಯೊಡನೆ ಸಂಸಾರವೇ....ಹ್ಹ....ಹ್ಹ....ಹ್ಹ....ಎಂತಹ ಹುಚ್ಚು ಎಷ್ಟು ದಿನ ಈ ನರಕವಾಸ?"

"ಹಾಗಾದರೆ ಆ ಕೆಲಸವೇ ಬೇಡ! ಕೆಲಸಕ್ಕೆ ರಾಜೀನಾಮೆ ಕೊಡುವುದು."

"ಕೆಲಸ ಕಳೆದುಕೊಂಡು ಮುಂದೇನು ಗತಿ?"

"ಬಾಯ್ನಿಯೊಡನೆ ಲಗ್ನ."

"ಅನಂತರದ ಜೀವನೋಪಾಯ? ಅವಳನ್ನು ಪೋಷಿಸುವುದೆಂತು?"

"ಪ್ರಪಂಚ ವಿಸ್ತಾರವಿದೆ. ವಿದ್ಯೆಯಿದೆ, ಬುದ್ಧಿಯಿದೆ. ಬೇಕಿನ್ನೇನು?"

"ಬಾಯ್ನಿಯ ಮದುವೆಯಾಗಿ ಹೆತ್ತವರ, ಬಂಧುಗಳ ಸನಿಹದಿಂದ

ದೂರವಿರಬೇಕಾಗುವುದು........ಜಾತಿಹೀನನಾಗಿ, ಚರಿತ್ರಹೀನನಾಗಿ, ನಿರುದ್ಯೋಗಿಯಾಗಿ ಬಾಳುವುದೆಂತು ?"

"ಇವೆಲ್ಲವೂ ಆಪರ್ಣಿಯ ಸಮಾಜ ಸೃಷ್ಟಿಸಿರುವ ಶಬ್ದಗಳು. ಧ್ಯೇಯಪ್ರಿಯನಾದವನು ಇಂತಹ ಹೀನ ಸಮಾಜವನ್ನು ತೃಣೀಕರಿಸಲೇಬೇಕು....."

"ಅಲ್ಲದೇ ಈ ಕೂಲಿಗಾರರ ರಕ್ತ ಹೀರಿ ಗಳಿಸಿದ ಹಣವನ್ನೇ ತಾನೇ ಕಂಪೆನಿಯವರು ನೀಡುವ ಸಂಬಳ. ಕೂಲಿಯವರನ್ನು ಹಿಂಡಿ ತೆಗೆದ ಆ ರಕ್ತದ ರೂಪಾಯಿಗಳ ವೇತನವನ್ನು ಪಡೆಯಬೇಕೆ ? ಈ ನರಕದಲ್ಲಿನ ಮೇನೇಜರಿಕೆ ಮನುಷ್ಯರು ಮಾಡುವ ಉದ್ಯೋಗವೇನು ? ಎಷ್ಟು ದಿನ ಈ ರಕ್ತಾನ್ನ ಭೋಜನ ? ದೀನ ಕಾರ್ಮಿಕರಿಗೆ ಮೋಸ ಮಾಡುವುದಿನ್ನೆಷ್ಟು ದಿನ ? ಧ್ಯೇಯಲಗ್ನನೆಂದು ಹೇಳಿಕೊಳ್ಳುವವನು ಈ ಪಾಪಾನ್ನಭಕ್ಷಣೆ ಮಾಡಬಾರದು ! ನೀಚರ ಕಾರಕೂನನಾಗಿರಬಾರದು !"

"ಅದೂ ಅಲ್ಲದೆ ನಿರಪರಾಧಿನಿ ಹೆಣ್ಣು ಆತ್ಮಹತ್ಯೆ ಮಾಡಿಕೊಳ್ಳುವುದನ್ನು ನೋಡಿಕೊಂಡು ಸುಮ್ಮನಿರಬಾರದು. ಆ ಕಾಡುಹೆಣ್ಣಿನ ಪ್ರೇಮ ಎಷ್ಟು ಶುದ್ಧವಾಗಿದೆ? ಅದನ್ನು ನಿರಾಕರಿಸಿ ಅವಳ ಸಾವಿಗೆ ಕಾರಣನಾಗಕೂಡದು !...."

ಒಂದೊಂದು ಮಾತೂ ಅದಿರ ಮೇಲೆ ಬೀಳುವ ಚಮ್ಮಟಿಗೆಯ ಆಘಾತದಂತೆ ಬೀಳುತ್ತಿದ್ದುವು, ಮಲಗಿದ್ದ ಶಾಂತಪ್ಪನ ಹೃದಯದ ಮೇಲೆ !

"ಹೌದು ! ನಾನು ಧ್ಯೇಯಪ್ರಿಯನೇ....ನನಗೆ ಈ ಸಮಾಜ, ಸಂಸ್ಥೆಗಳ ಬಂಧನ ತೃಣಸಮಾನ" ಎಂದು ಅವನ ಹೃದಯ ಕೂಗಿಕೊಂಡಿತು.

ಮಾರನೆಯ ದಿನ ಶಾಂತಪ್ಪ ನಿರ್ಧಾರಮುಖನಾಗಿ ಮೇಲೆದ್ದ.



# ಹಿನ್ನುಡಿ

ವಿಶ್ವಾಸಿ ನಿರಂಜನರು ಈ ಕಾದಂಬರಿಗೆ ಮುನ್ನುಡಿಯನ್ನು ಬರೆದು ನನಗೆ ಉಪಕರಿಸಿದ್ದಾರೆ. ಶ್ರೀ ಎಲ್. ಶೇಷಾದ್ರಿಯವರು ಪ್ರಕಾಶನದ ಕಾರ್ಯದಲ್ಲಿ ಸಹಕರಿಸಿದ್ದಾರೆ. ಇವರಿಬ್ಬರಿಗೂ ನಾನು ಕೃತಜ್ಞ.

ಈತನಕ ನನ್ನ ವಿವಿಧ ಲೇಖನಗಳನ್ನು ಪ್ರಕಟಿಸಿದ ಕರ್ಣಾಟಕದ ಪ್ರಮುಖ ಪತ್ರಿಕೆಗಳ ಸಂಪಾದಕವರ್ಗದವರ ಸ್ನೇಹ-ಉತ್ತೇಜನಗಳೇ ನನ್ನ ಸಾಹಿತ್ಯರಚನಾಪ್ರವೃತ್ತಿಗೆ ಬೆಂಬಲ. ಇವರೆಲ್ಲರಿಗೂ ನಾನು ಚಿರಋಣಿ.

ಈ ಪುಸ್ತಕದಲ್ಲಿ ಸಂಭವಿಸಿರುವ ಕೆಲವು ಮುದ್ರಣ ಪ್ರಮಾದಗಳನ್ನು ಓದುಗರೇ ತಿದ್ದಿಕೊಳ್ಳಬೇಕಾಗಿ ಕೇಳಿಕೊಂಡು, ಈ ಕಾದಂಬರಿಯ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ನನಗೆ ಬರೆದು ತಿಳಿಸಬೇಕಾಗಿ ಪ್ರಾರ್ಥಿಸುತ್ತೇನೆ.

ಬಿ. ಎಚ್. ರಸ್ತೆ,
ಅರಸೀಕೆರೆ.
ತಾ|| ೨೩-೬-೫೫

—ಕೊ. ಸು. ಸೀ.